

ಬಾದಾಮಿಯ ಪಶ್ಚಿಮ ಚಾಲುಕ್ಯರ ಕುಲದೇವರಾದ
ವಾತಾಪಿಗಣಪತಿ

# ದಕ್ಷಿಣ ಕನ್ನಡ ಜಿಲ್ಲೆಯ
# ಪ್ರಾಚೀನ ಇತಿಹಾಸ

ಗ್ರಂಥಕರ್ತ

**ಎಮ್. ಗಣಪತಿ ರಾವ್,**

ಸಹಾಯಕ ಉಪಾಧ್ಯಾಯ, ಟೆಂಪಲ್ ಸೆಕೆಂಡರಿ ಶಾಲೆ,

ಬಂಟವಾಳ, ದ. ಕನ್ನಡ

ಮೊದಲನೆಯ ಆವೃತ್ತಿ

1923



Price Rs 2-8-0.]

# ಪ್ರಸ್ತಾವನೆ.

ಕನ್ನಡ ಭಾಷೆಯಲ್ಲಿ ಚರಿತ್ರೆಗ್ರಂಥಗಳು ತೀರ ವಿರಳ. ಉಳಿದ ಎಷ್ಟೋ ವಿಷಯಗಳ ಮೇಲೆ ಈ ಭಾಷೆಯಲ್ಲಿ ಉದ್ದಾಮ ಗ್ರಂಥಗಳಿದ್ದರೂ, ಪೂರ್ವದಿಂದ ಇದಕ್ಕೆ ರಾಜರ ಪ್ರೋತ್ಸಾಹವಿದ್ದರೂ ಮೇಲೆ ಹೇಳಿದ ಚರಿತ್ರೆಗ್ರಂಥಗಳು ಇಲ್ಲದಿರುವುದು ಕನ್ನಡಿಗರ ದುರ್ಭಾಗ್ಯವೇ ಸರಿ. ರಾಜರು, ಮಂತ್ರಿಗಳು, ಸೇನಾಧಿಪತಿಗಳು ಸಹ ಕಾವ್ಯಗಳನ್ನೂ ಇತರ ಉತ್ತಮವಾದ ಗ್ರಂಥಗಳನ್ನೂ ರಚಿಸಿದ್ದಾರೆ. ಆದರೆ ಚರಿತ್ರೆಗಳನ್ನು ಯಾರೂ ಬರೆದಿರುವುದಿಲ್ಲ ಈ ವಿಷಯದಲ್ಲಿ ಪಾಶ್ಚಾತ್ಯರ ಪೂರ್ವಿಕರು ನಮ್ಮ ಪೂರ್ವ ಜನರಿಗಿಂತ ಮಿಗಿಲಾಗಿರುವರು. ಅವರಲ್ಲಿ ಎಷ್ಟೋ ರಾಜರೂ ಸೇನಾಧಿಪತಿಗಳೂ ತಮ್ಮ ಸ್ವಂತ ಚರಿತ್ರೆಗಳನ್ನೂ ತಾವು ಮಾಡಿದ ಯುದ್ಧಗಳ ವರ್ಣನೆಯನ್ನೂ ವಿಶದವಾಗಿ ಬರೆದಿರುವರು. ಹೀಗಿರುವದರಿಂದ ಪಾಶ್ಚಾತ್ಯ ದೇಶಗಳ ಚರಿತ್ರೆಗಳನ್ನು ಬರೆಯುವದು ಬಹು ಸುಲಭವಾಗಿದೆ. ನಮ್ಮ ದೇಶದ ರಾಜ್ಯಗಳ ಚರಿತ್ರೆಯನ್ನು ಬರೆಯುವದು ಎಷ್ಟು ಕಷ್ಟವಿದೆ ಎಂಬುದು ಈ ಗ್ರಂಥವನ್ನು ಅವಲೋಕಿಸಿದರೆ ತಾನೇ ಕಂಡು ಬರುವದು

ಚರಿತ್ರೆಗ್ರಂಥಗಳು ಮನುಷ್ಯನ ಮನಸ್ಸನ್ನು ಸುಧಾರಿಸುವ ಮುಖ್ಯ ಸಾಧನವೆಂಬುದು ಸಹಜವಾದ ಸಂಗತಿಯಾಗಿದೆ. ಹೀಗಿರುವಾಗ ನಾವು ದಕ್ಷಿಣ ಕನ್ನಡಿಗರು ಸ್ವದೇಶದ ಚರಿತ್ರೆಯನ್ನು ಮರೆತಿರುವದಿಷ್ಟೇ ಅಲ್ಲ, ಅದರ ರಾಜಧಾನಿಯಾದ ಬಾರಕೂರಿನ ಹೆಸರನ್ನು ಸಹ ಮರೆಯುತ್ತ ಬಂದರೂ ಸ್ವಸ್ಥವಾಗಿ ಕುಳಿತುಕೊಳ್ಳುವದು ಮನುಷ್ಯಸ್ವಭಾವಕ್ಕೆ ಪೂರ್ಣ ವಿಪರೀತವಾದ ಸಂಗತಿಯಾಗಿದೆ. ಇಂಥಾ ಸಂದರ್ಭದಲ್ಲಿ ಎಂಥ ಕನ್ನಡ ಚರಿತ್ರೆಯ ಗ್ರಂಥವಾದರೂ ಉಪಯೋಗವಾದೀತೆಂದು 4–5 ವರುಷಗಳಿಂದ ಜಿಲ್ಲೆಯಲ್ಲಿ ಸಂಚರಿಸಿ ಸಿಕ್ಕಿದ ಅನುಭವದ ಆಧಾರದಿಂದಲೂ, ಅನೇಕ ಗ್ರಂಥಗಳ ಆಧಾರದಿಂದಲೂ ಈ ಗ್ರಂಥವನ್ನು ಬರೆದಿರುತ್ತೇನೆ.

ಈ ಗ್ರಂಥವನ್ನು ಬರೆಯುವಾಗ ಈ ಕೆಳಗಿನ ಪುಸ್ತಕಗಳನ್ನು ಆಧಾರವಾಗಿ ಟ್ಟುಕೊಂಡಿರುವೆನು (1) ಬಾರಕೂರು ಮಹಾತ್ಮೆ, (2) ಗ್ರಾಮ

ಪದ್ಧತಿ, (3) ಮಯೂರವರ್ಮ ಚರಿತ್ರೆ, (4) ಜೈನ ಗ್ರಾಮ ಪದ್ಧತಿ, (5) ಕೇರಳೋತ್ಪತಿ, (6) ಭೂತಾಳಪಾಂಡ್ಯ ಚರಿತ್ರೆ, (7) ವೇಲಾಪುರ ಮಹಾತ್ಮೆ, (8) ಮಹಾಶರಭೇಶ್ವರ ಮಹಾತ್ಮೆ, (9) ಕಡೇಶ್ವಾಲ್ಯ ಮಹಾತ್ಮೆ, (10) ಮಧ್ವ ವಿಜಯ, (11) ಶಂಕರ ವಿಜಯ, (12) ರೈಸದೊರೆ ಬರೆದ ಮೈಸೂರು ಗಜೇಟಿಯರ್, (13) ಫ್ಲೀಟ್ ದೊರೆ ಬರೆದ ಕೆನರಿಸ್ ಡ್ಯಾನೆಸ್ಟೀಸ್ ಎಂಬ ಪುಸ್ತಕ, (14) ಫ್ರಾನ್ಸಿಸ್ ಬುಚೆನನ್ ದೊರೆ ಬರೆದ ಎ ಜರ್ನಿ ಥ್ರೂ ದಿ ಪ್ರೋವಿನ್ಸಸ್ ಒಫ್ ಮೈಸೂರು, ಮಲಬಾರು, ಕೊಯಮುತ್ತೂರು, ಕೆನರಾ ಎಂಬ ಪುಸ್ತಕ. (15) ಇಂಪೀರಿಯಲ್ ಗಜೇಟಿಯರ್ (16) ದಕ್ಷಿಣ ಕನ್ನಡ ಜಿಲ್ಲಾ ಗಜೇಟಿಯರ್ (17) ದಕ್ಷಿಣ ಕನ್ನಡ ಜಿಲ್ಲೆಯ ಮೆನ್ಯೂವೆಲ್, (18) ಸೂವೆಲ್ ದೊರೆ ಬರೆದ "ಮರೆತು ಹೋದ ಸಾಮ್ರಾಜ್ಯ" (19) ದಕ್ಷಣದ ಚರಿತ್ರೆ (20) ಟೀಪು ಸುಲ್ತಾನನ ಮಗ ಬರೆದ ಹೈದರಾಲಿ ಮತ್ತು ಟೀಪು ಸುಲ್ತಾನನ ಚರಿತ್ರೆ (21) ಮಂಗಳೂರು ಡಾಯೊಸಿಸಿನ ಚರಿತ್ರೆ (22) ಇಂಡಿಯದಲ್ಲಿಯ ಪೋರ್ತುಗೀಸರ ಚರಿತ್ರೆ, (23) ದಕ್ಷಿಣ ಹಿಂದೂದೇಶದ ಜಾತಿಗಳೂ, ಕುಟುಂಬಗಳೂ, ಎಂಬ ಪುಸ್ತಕ, (24) ಮದರಾಸು ಸಂಸ್ಥಾನದ ಶಾಸನಗಳು ಎಂಬ ಪುಸ್ತಕ, (25) 1901ನೇ ಇಸವಿಯಿಂದ 21ನೇ ಇಸವಿಯ ವರೆಗಿನ ಎಪಿಗ್ರಾಫಿಸ್ಟನ ರಿಪೋರ್ಟುಗಳು. (26) ಮಲಬಾರ ಮ್ಯೆನುವೆಲ್, (27) ಕೊಚ್ಚಿ ಚರಿತ್ರೆ, (28) ತಿರುವಾಂಕೂರು ಚರಿತ್ರೆ, (29) ರಾಮಸ್ವಾಮಿ ಅಯ್ಯಂಗಾರರು ಕೊಟ್ಟ ಜೈನರ ವಿಷಯ ಭಾಷಣ (30) ಕೃಷ್ಣಸ್ವಾಮಿ ಅಯ್ಯಂಗಾರರು ಬರೆದ ವಿಜಯ ನಗರದ ಸ್ವಲ್ಪ ಮಟ್ಟಿಗೆ ತಿಳಿದ ಅಧ್ಯಾಯ (Little known chapter of Vijayanagar History) (31) ಇನ್ನೂ ನೆನಪಿನಲ್ಲಿ ಉಳಿದಿರುವ ವಿಜಯ ನಗರದ ಅರಸನಾದ ಕೃಷ್ಣದೇವರಾಯ, (32) ಉತ್ತರ ಕನ್ನಡ ಜಿಲ್ಲೆಯ ಗಜೇಟಿಯರ್. (33) ಚೌಟರ ರಾಜವಂಶಾವಳಿ, (34) ಬಂಗರ ರಾಜನ ವಂಶಾವಳಿ, (35) ಅಜಿಲರ ವಂಶಾವಳಿ, (36) ಹಳೆ ಈಜಿಪ್ಟ್ ದೇಶದ ಚರಿತ್ರೆ, (37) ನಾಥಲೀಲಾಮೃತ.

ಮೇಲೆ ಬರೆದ ಪುಸ್ತಕಗಳಲ್ಲದೆ ಈಗ ಕನ್ನಡ ಜಿಲ್ಲೆಯಲ್ಲಿ ಪುರಾತನಕಾಲದಲ್ಲಿ ಆಳಿದ ರಾಜಕುಟುಂಬದವರಾದ ಕುಂಬಳೆ–ವಿಟ್ಲ–ಅರಸರೂ, ಮೂಡಬಿದ್ರೆ ಚೌಟರೂ, ಬಂಗಾಡಿಯಲ್ಲಿರುವ ಪದ್ಮರಾಜ ಬಂಗರಾಜರೂ, ಸುರಾಲ ತೋಳಾರರೂ, ಬೈಲಂಗಡಿ ಮೂಳರೂ, ಅಳದಂಗಡಿ ಅಜಿಲರೂ, ಹೊಸಂಗಡಿ ಬಿನ್ನಾಣರೂ,

ಪಡುಬಿದ್ರೆ ಕಿನ್ಯಕ್ಕ ಬಲ್ಲಾಳರೂ, ಮೂಲಿಕೆ ಸಾವಂತರೂ, ಕಾಡುಮಠದ ರಾಮಯ್ಯ ಸೆಟ್ರೊ, ಸಿಡ್ಲೆ ಮನೆಯವರೂ, ಚಿಟ್ಟಿಪಾಡಿ ಬಲ್ಲಾಳರೂ, ಕೊಟ್ಟ ಅನುಭವಗಳ ಆಧಾರದಿಂದಲೂ ಈ ಗ್ರಂಥದ ಕೆಲವು ಅಂಶಗಳನ್ನು ಬರೆದಿರುತ್ತೇನೆ.

ಇನ್ನೂ ಹಲವು ಪುಸ್ತಕಗಳನ್ನು ನನಗೆ ಓದಲು ಕೊಟ್ಟು ಸಹಾಯಮಾಡಿದ ಮ ರಾ ರಾ। ಮಂಜೇಶ್ವರ ವೈಕುಂಠ ಭಕ್ತರಿಗೂ, ಅನುಭವಗಳನ್ನು ಕೊಟ್ಟ ನೆಲ್ಲಿ ಕಾರು ಎನ್. ಎಸ್. ಜೈನಿಯವರಿಗೂ, ಮೂಡುಬಿದ್ರೆ ಸಂಸ್ಕೃತ ವಿದ್ಯಾ ಶಾಲೆಯ ಅಧ್ಯಾಪಕರಾದ ಲೋಕನಾಥ ಶಾಸ್ತ್ರಿಗಳಿಗೂ, ಇನ್ನೂ ಅನೇಕ ಮಹಸೀಯರಿಗೂ, ಮೇಲಿನ ಎಲ್ಲಾ ರಾಜಕುಟುಂಬದವರಿಗೂ, ನನಗೆ ಎಲ್ಲಾ ತರದ ಉತ್ತೇಜನವನ್ನು ಕೊಟ್ಟು ಸಹಾಯಮಾಡಿದ ನನ್ನ ಸ್ನೇಹಿತರಾದ ಬಿ. ಪಕೀರ ಮಾಸ್ಟರರಿಗೂ, ಸತ್ಯ ಮಿತ್ರ ಬಂಗೇರರಿಗೂ ನಾನು ತುಂಬಾ ಕೃತಜ್ಞನಾಗಿರುವೆನು.

ಈ ಗ್ರಂಥವು ನನ್ನ ಮೊದಲನೇ ಪ್ರಯತ್ನದ ಫಲವೆಂಬದನ್ನರಿತು ವಾಚಕ ಮಹಾಶಯರು ಇದರಲ್ಲಿಯ ಗುಣದೋಷಗಳನ್ನು ವಿಮರ್ಶಿಸಿ ನನ್ನನ್ನು ಪ್ರೋತ್ಸಾ ಹಿಸುವರೆಂದು ನಂಬುತ್ತೇನೆ

ಬಂಟವಾಳ
ಮಧ್ವನವಮಿ
6 – 2 – '22.

**ಎಮ್. ಗಣಪತಿ ರಾವ್ ಐಗಳ್.**
ಸಹಾಯಕ ಉಪಾಧ್ಯಾಯ
ಎಸ್. ವಿ. ಎಸ್. ಟೆಂಪಲ್ ಸೆಕೆಂಡರಿ ಸ್ಕೂಲ್

# ವಿಷಯಾನುಕ್ರಮಣಿಕೆ.


| ಅಧ್ಯಾಯ. | | ಪುಟ |
|---|---|---|
| 1. | ದಕ್ಷಿಣ ಕನ್ನಡ ಜಿಲ್ಲೆಯ ಪರ್ವತಗಳೂ, ನದಿಗಳೂ | 1 — 2 |
| 2. | ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವಸ್ಥಿತಿ | 2 — 6 |
| 3. | ಕೇರಳೋತ್ಪತ್ತಿ — ಪರಶುರಾಮ — ಕಾರ್ತವೀರ್ಯಾರ್ಜುನ | 6 — 15 |
| 4. | ಬನವಾಸಿಯ ಕದಂಬರು — ಹಂಗಳದ ಕದಂಬರು | 16 — 29 |
| 5. | ಜೈನರೂ ಜಿನಮತವೂ | 30 — 41 |
| 6 | ಭೂತಾಳಪಾಂಡ್ಯ ಅರಸರು | 41 — 50 |
| 7. | ನಾಡವರು ಅಥವಾ ಬಂಟರು | 50 — 52 |
| 8. | ಪ್ರಾಚೀನಕಾಲದ ಸಾಮಾಜಿಕ ಪದ್ಧತಿಗಳು | 52 — 56 |
| 9. | ಬಾದಾಮಿಯ ಪಶ್ಚಿಮ ಚಾಲುಕ್ಯರು .. | 57 — 65 |
| 10. | ಅಲೂಪ ಅರಸರು | 66 — 72 |
| 11. | ನಾಥಸಂಪ್ರದಾಯವೂ ಜೋಗಿಯವರೂ . | 72 — 84 |
| 12. | ಶಂಕರಾಚಾರ್ಯರು | 85 — 92 |
| 13. | ರಾಷ್ಟ್ರಕೂಟರು | 92 — 100 |
| 14. | ದ್ವಾರಸಮುದ್ರದ ಯಾದವ ಹೊಯ್ಸಳ ಬಲ್ಲಾಳ ಅರಸರು | 101 — 114 |
| 15. | ಮಧ್ವಾಚಾರ್ಯರು | 115 — 123 |
| 16. | ವಿಜಯನಗರದ ಅರಸರು | 123 — 162 |
| 17. | ಮುಹಮ್ಮದೀಯರು .. . | 163 — 173 |
| 18. | ಪೋರ್ತುಗೀಸರು . .. | 174 — 187 |
| 19. | ಇಕ್ಕೇರಿ ಅರಸರು | 187 — 205 |
| 20 | ಕ್ರೈಸ್ತರು .. | 206 — 219 |
| 21. | ಹೈದರಾಲಿ — ಟೀಪುಸುಲ್ತಾನ . .. . | 220 — 249 |
| 22. | ಇಂಗ್ಲೀಷರು . | 249 256 |
| 23. | ಕೊಡಗರು . . | 257 — 263 |
| 24. | ಬಂಗರ ಅರಸರು | 263 — 286 |
| 25 | ಚೌಟ ಅರಸರು .. . . | 286 — 312 |

| ಅಧ್ಯಾಯ | | ಪುಟ |
|---|---|---|
| 26 | ಅಜಿಲರು | 313 – 325 |
| 27 | ಕಾರ್ಕಳ ಭೈರರಸ ಒಡೆಯರು | 325 – 341 |
| 28 | ಮೂಲಿಕೆ ಸಾವಂತರು | 342 – 346 |
| 29 | ಬೈಲಂಗಡಿ ಮೂಲರು | 347 – 350 |
| 30 | ಸುರಾಲ ತೋಳಹಾರ ಅರಸರು | 350 – 357 |
| 31 | ಹೊನ್ನಯ ಕಂಬಳಿ, ಬಿನ್ನಾಣ, ಕೊನ್ನಾರ ಅರಸರು | 357 – 361 |
| 32 | ವಿಟ್ಲದ ಅರಸರು | 361 – 367 |
| 33 | ಕುಂಬಳೆ ಅರಸರು | 367 – 374 |
| 34 | ಕೋಲತ್ತರಸರು – ನೀಲೇಶ್ವರ ಅರಸರು | 374 – 381 |
| 35. | ಜೈನ ಬಲ್ಲಾಳರೂ – ಹೆಗ್ಗಡೆಯರೂ ನಗರಾಧೀಶ್ವರರೂ | 382 – 423 |
| ಪುರವಣಿ (1) | ಪ್ರಸಿದ್ಧಪಟ್ಟ ಕರಾರುಗಳು | 425 – 442 |
| ,, (II) | ಶಾಸನಗಳ ಅಭಿಪ್ರಾಯ | 442 – 444 |

# ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ.

## 1 ನೇ ಅಧ್ಯಾಯ.

### ದಕ್ಷಿಣ ಕನ್ನಡ ಜಿಲ್ಲೆಯ ಪರ್ವತಗಳೂ ನದಿಗಳೂ.

ದಕ್ಷಿಣ ಕನ್ನಡ ಜಿಲ್ಲೆಯು ಇಂಡಿಯದ ಪಶ್ಚಿಮ ಕರಾವಳಿಯ ಮೈದಾನಿನ ಮೇಲೆ ಇದೆ. ಇದು ಮದರಾಸು ಸಂಸ್ಥಾನದ ಜಿಲ್ಲೆಗಳಲ್ಲಿ ಒಂದಾಗಿದೆ. ಇದರ ಪೂರ್ವ ದಿಕ್ಕಿಗೆ ಸಹ್ಯಾದ್ರಿ ಪರ್ವತವೂ (ಪಶ್ಚಿಮ ಗಟ್ಟಗಳು) ಇದೆ. ಅದು ದಕ್ಕಣದ ಪೀಠಭೂಮಿಗೂ ಕರಾವಳಿಯ ಮೈದಾನಿಗೂ ನಡುವೆ ದೊಡ್ಡದಾಗಿ ಗೋಡೆ ಹಾಕಿದಂತೆ ಇದೆ. ಉತ್ತರ ಭಾಗದಲ್ಲಿ ಕಾಡುಗಳಿಂದ ತುಂಬಿದ ಈ ಸಹ್ಯಾದ್ರಿ ಪರ್ವತವು ಸಮುದ್ರಕ್ಕೆ ಹತ್ತಿರವಾಗಿ ಅಂದಗೊಳಿಸುತ್ತದೆ. ಮಧ್ಯಭಾಗಕ್ಕೆ ಬರುವಾಗ ಈ ಪರ್ವತವು ಸಮುದ್ರದಿಂದ ಸುಮಾರು 50 ಮೈಲು ದೂರವಿದ್ದು ಬಹಳ ಎತ್ತರವಾಗಿದೆ. ದಕ್ಷಿಣದಲ್ಲಿ ತಿರಿಗಿ ಈ ಪರ್ವತವು ಸಮುದ್ರಕ್ಕೆ ಹತ್ತಿರವಾಗಿ ಬರುತ್ತದೆ. ಈ ಪರ್ವತದಿಂದ ಶಾಖೆಗಳು ಜಿಲ್ಲೆಯ ಎಲ್ಲಾ ಭಾಗಗಳಲ್ಲಿಯೂ ಚಾಚಿಕೊಂಡಿವೆ. ಇವುಗಳಲ್ಲಿ ಅತೀ ಉದ್ದವಾದ ಚಿಬಿದ್ರೆ ಗಟ್ಟಗಳ ಸಾಲು ಬಲ್ಲಾಳರಾಯ ದುರ್ಗದಿಂದ ಸುಮಾರು 15 ಮೈಲು ದೂರಕ್ಕೆ ಧರ್ಮಸ್ಥಳದ ವರೆಗೂ ಚಾಚಿಕೊಂಡಿದೆ. ಇನ್ನೊಂದು ಶಾಖೆಯು ಕುದುರೆಮುಖದಿಂದ ತಗ್ಗಾಗಿ ಹೊರಟು ಜಮಾಲಗಡದಲ್ಲಿ ಫಕ್ಕನೇ ಮೇಲಕ್ಕೆ ಎದ್ದದೆ. ಇನ್ನೊಂದು ಮೂಡಬಿದರೆಯ ಹತ್ತಿರವಿರುವ ಕೊಣಜಿ ಕಲ್ಲಿನ ಹತ್ತಿರ ಮೇಲಕ್ಕೆ ಬಂದದೆ. ಬೈಂದೂರಿನಿಂದ 7 ಮೈಲು ಪೂರ್ವಕ್ಕಿರುವ ಎಳಜಿತು ಗುಡ್ಡವೂ ಕೊಲ್ಲೂರು ಅಥವಾ ಕುಟಶಾದ್ರಿ ಪರ್ವತವೂ (ಬಾರ್ಸಿಲೋರ ಗುಡ್ಡ) ಶಾಪು ಬತ್ತೇರಿಯಿಂದ 4 ಮೈಲು

ಈಶಾನ್ಯಕ್ಕಿರುವ ಕುಂಜೂರು ಗುಡ್ಡವೂ ಕಾರಂಜಿ ಗುಡ್ಡವೂ ನರಹರಿ ಪರ್ವತವೂ ಪೊಸಡಿಗುಂಪೆಯೂ ಅಲ್ಲಲ್ಲಿ ಎದ್ದ ಶಿಖರಗಳಾಗಿವೆ.

ಈ ಸಹ್ಯಾದ್ರಿ ಪರ್ವತವು ಉತ್ತರದಿಂದ ದಕ್ಷಿಣದ ವರೆಗೂ ಒಂದೇ ಮಟ್ಟವಾಗಿ ನೀಡಿಕೊಂಡಿದ್ದರೆ ದಕ್ಕಣದ ಪೀಠಭೂಮಿಯಿಂದ ಈ ಜಿಲ್ಲೆಗೆ ಬರಲು ಬಹಳ ಕಷ್ಟವಾಗುತ್ತಿದ್ದಿತು. ಇದು ಹಾಗೆ ಮಟ್ಟವಾಗಿರದೆ ಅಲ್ಲಲ್ಲಿ ತಗ್ಗಾಗಿ ಕಣಿವೆಗಳಿಂದ ಕೂಡಿದೆ. ಕೊಲ್ಲೂರು ಕಣಿವೆ, ಹೊಸಂಗಡಿ ಕಣಿವೆ, ಆಗುಂಬೆ ಕಣಿವೆ, ಕಡದಕಲ್ಲು ಕಣಿವೆ, ಚಾರ್ಮಾಡಿ ಕಣಿವೆ, ಶಿಶಿಲ ಕಣಿವೆ, ಬಸಲಿ ಕಣಿವೆ, ಸಂಪಾಜೆ ಕಣಿವೆ. ಈ ಕಣಿವೆಗಳ ಮಾರ್ಗವಾಗಿ ಈ ಜಿಲ್ಲೆಗೆ ಬರಬಹುದು. ಪುರಾತನ ಕಾಲದಿಂದ ಈ ಜಿಲ್ಲೆಯನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ಬಂದ ದಾರಿಯು ಹೊಸಂಗಡಿ ಕಣಿವೆ, ಕಡದಕಲ್ಲು ಗಾಟಿ, ಶಿಶಿಲಗಾಟಿ, ಸಂಪಾಜೆಗಾಟಿ.

ಸಹ್ಯಾದ್ರಿ ಪರ್ವತಕ್ಕೆ ಪಶ್ಚಿಮದಲ್ಲಿ ಕನ್ನಡ ಜಿಲ್ಲೆಯ ಮೈದಾನು ಇದೆ. ಈ ಪರ್ವತದಲ್ಲಿ ಹುಟ್ಟಿದ ಶುಕ್ತಿಮತಿ (ಗಂಗೊಳಿ ಹೊಳೆ) ಸೀತಾ ನದಿ, ಭದ್ರಗಿರಿ, ಕಲ್ಯಾಣಪುರ, ಉದಿಯಾವರ, ಶಂಭಾವತಿ, ಪಾವಂಜೆ, ಫಲ್ಗುನಿ (ಗುರ್ಪುರ), ನೇತ್ರಾವತಿ, ಕುಮಾರಧಾರಿ, ಮಂಜೇಶ್ವರ, ಶೀರೆ, ಕುಂಬಳೆ, ಮೊಗ್ರಾಲ್, ಪಯಸ್ವಾನಿ (ಚಂದ್ರಗಿರಿ), ಬೇಕಲ, ಚರ್ವತ್ತೂರು, ನಿಲೇಶ್ವರ ಹೊಳೆಗಳು ಬಯಲು ಸೀಮೆಯಿಂದ ಹರಿದು ಸಮುದ್ರಕ್ಕೆ ಕೂಡುತ್ತವೆ.

# 2 ನೇ ಅಧ್ಯಾಯ.

## ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವಸ್ಥಿತಿ.

ಪುರಾತನ ಕಾಲದಲ್ಲಿ ಈ ಜಿಲ್ಲೆಯು ವಿಸ್ತಾರವಾದ ಕಾಡು ಗಳಿಂದಲೂ ಬಯಲುಗಳಿಂದಲೂ ತುಂಬಿ ಹೋಗಿದ್ದಿತು. ಆ ಕಾಲದಲ್ಲಿ ಊರುಗಳೂ ಹಳ್ಳಿಗಳೂ ಯಾವವೂ ಇರಲಿಲ್ಲ.

ಆ ಕಾಡುಗಳ ನಡುವೆ ಅಲ್ಲಲ್ಲಿ ಕಾಡು ಜನರು ವಾಸಮಾಡಿ ಕೊಂಡಿದ್ದರು. ಈ ವಂಶದಲ್ಲಿ ಮಲೆಕುಡಿಯರೆಂಬ ಒಂದು ವಂಶವು ಈಗಲೂ ಸ್ವಲ್ಪ ಉಳಿದಿದೆ. ಇವರು ಕುಳ್ಳರು; ಕಪ್ಪಗೆ ವಿಕಾರವಾಗಿರು ತ್ತಾರೆ; ಬಟ್ಟೆಗಳಿಲ್ಲದೆ ಸ್ವಲ್ಪ ವರುಷಗಳ ಹಿಂದಿನ ವರೆಗೆ ಎಲೆಗಳನ್ನು ಮುಳ್ಳುಗಳಿಂದ ಹೆಣೆದು ಉಟ್ಟುಕೊಳ್ಳುತ್ತಿದ್ದರು; ಹಣ್ಣುಕಾಯಿಗಳನ್ನೂ ಗಡ್ಡೆಗೆಣಸುಗಳನ್ನೂ ತಿಂದು ಜೀವಿಸುತ್ತಿದ್ದರು; ಒಂದೊಂದು ಸಾರಿ ಬೇಟೆಯಾಡಿ ಮೃಗಗಳನ್ನು ಕೊಂದು ಅವುಗಳ ಮಾಂಸವನ್ನು ತಿನ್ನುವುದೂ ಉಂಟು. ಅವರು ಅದೇ ಸ್ಥಿತಿಯಲ್ಲಿದ್ದು ಮೆಲ್ಲಗೆ ಉತ್ತಮ ಸ್ಥಿತಿಗೆ ಬಂದು ವಾಸಕ್ಕಾಗಿ ಸಣ್ಣಸಣ್ಣ ಗುಡಿಸಲುಗಳನ್ನು ಕಟ್ಟಲಾರಂಭಿಸಿದರು; ಬಿಲ್ಲು ಬಾಣಗಳನ್ನು ಉಪಯೋಗಿಸಲಾರಂಭಿಸಿದರು.

ಕೊರಗರು ಮಲೆಕುಡಿಯರ ಹಾಗೆಯೇ ಪುರಾತನ ಕಾಲದ ಒಂದು ಜನಾಂಗದ ಭಾಗವಾಗಿದೆ. ಇವರು ಮಲೆಕುಡಿಯರ ಹಾಗೆ ಕಾಡುಗಳಲ್ಲಿ ವಾಸಮಾಡದೆ ಗುಡ್ಡಗಳ ಬದಿಗಳಲ್ಲಿ ವಾಸಮಾಡುತ್ತಿದ್ದರು. ಇವರ ತಲೆಯ ಕೂದಲು ಉಂಗುರ ಉಂಗುರದ ಹಾಗಿದೆ; ಮೂಗು ಚಪ್ಪಟೆ ಯಾಗಿದೆ; ಗಲ್ಲದ ಎಲುಬುಗಳು ಎತ್ತರವಾಗಿವೆ; ಮುಖದಲ್ಲಿ ಗಡ್ಡ ಮೀಸೆಗಳು ಕಡಿಮೆ; ಈಗಲೂ ಕಾಡು ಸ್ಥಿತಿಯಲ್ಲಿಯೇ ಇರುತ್ತಾರೆ. ಕೊರಗರು ಒಂದು ಕಾಲದಲ್ಲಿ ಸೈನಿಕರಾಗಿದ್ದರೆಂದು ಕೆಲವು ಗ್ರಂಥಕರ್ತರ ಅಭಿಪ್ರಾಯವಿದ್ದರೂ, ತುಳುರಾಜ್ಯದ 24 ಅರಸುಗಳೊಡನೆ ವಿಚಾರಿ ಸಿದ್ದಲ್ಲಿ ಕೊರಗರು ಸೈನಿಕರಾಗಲೀ ಸೇನಾಧಿಪತಿಗಳಾಗಲೀ ಇದ್ದ ಸಂಗತಿ ತಿಳಿದುಬರುವುದಿಲ್ಲ. ಮಯೂರವರ್ಮ ಚರಿತ್ರೆಯಲ್ಲಿ ಹೇಳಿದ ಹೊಬಕೂಸ ಚಂದ್ರಸಾಯಣ ಮೊದಲಾದವರು ಕೊರಗರಲ್ಲ; ಮುಂಡಾಲ ಹೊಲೆಯರಾಗಿರುತ್ತಾರೆ. ಈ ಕೊರಗರಲ್ಲಿ ಅನೇಕರು ಈಗ ಕ್ರೈಸ್ತರಾಗಿ ಕಾಫಿ ತೋಟಗಳಿಗೆ ಆಳಾದರು. ಇನ್ನು ಕೆಲವು ವರುಷಗಳಲ್ಲಿ ಕ್ರೈಸ್ತ ನಾಗರೀಕತೆಯ ಮುಂದೆ ಕೊರಗರ ವಂಶವೇ ನಾಶವಾಗಿ ಕೊರಗ ಎಂಬ ಹೆಸರು ಸಹ ಅಳಿದು ಹೋಗುವುದರಲ್ಲಿ ಸಂದೇಹವಿಲ್ಲ.

ಮುಂಡಾಲ, ಬಾಕುಡ, ಮೇರ ಈ ಮೂರು ವಂಶದವರು ಕೊರಗರ ವಂಶಗಳಿಗಿಂತಲೂ ಸ್ವಲ್ಪ ನಾಗರೀಕತೆಯಲ್ಲಿ ಮುಂದಕ್ಕೆ ಬಂದಿರುತ್ತಾರೆ. ಇವರು ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ವಾಸಮಾಡುತ್ತಾರೆ; ಬೇಸಾಯ ಅಥವಾ ಬೇರೆ ಕೂಲಿಕೆಲಸವನ್ನು ಮಾಡುತ್ತಾರೆ. ಮುಂಡಾಲ ಮತ್ತು ಬಾಕುಡ ಇವರು ತುಳು ಜೈನ ಅರಸರ ಸೈನ್ಯದಲ್ಲಿ ಸೇನಾಧಿಪತಿಗಳೂ ಸೈನಿಕರೂ ಆಗಿದ್ದರು. ಮಯೂರ ವರ್ಮನ ಸಂಗಡ ಯುದ್ಧಮಾಡಿದವರು ಮುಂಡಾಲ ಹೊಲೆಯರು. ಮಂಜೇಶ್ವರದ ಹತ್ತಿರ ಪಟ್ಟದಮೊಗರಿನಲ್ಲಿ ಆಳುತ್ತಿದ್ದ ಮೊಗರಾಖ್ಯನೂ ಒಡಾಜೆಯಲ್ಲಿದ್ದ ಬಡಜನೂ ಬಾಕುಡ ಹೊಲೆಯರಾಗಿದ್ದರು. ಮೂಲಿಕೆ, ಪಡುಬಿದರೆ, ಎರ್ಮಾಳ, ಕಾಪು, ಕಟ್ಟಪಾಡಿ ಮುಂತಾದ ಜೈನ ಅರಸರ ಸೈನ್ಯದಲ್ಲಿ ಬಾಕುಡರ ಸೇನಾಧಿಪತಿಗಳ ಕೈಕೆಳಗೆ ಮುಂಡಾಲರ ಸೈನ್ಯವೂ ಇತ್ತೆಂದು ತಿಳಿದುಬರುತ್ತದೆ. ಈಗಲೂ ಆ ಮುಖಾರಿಗಳನ್ನು ನೇಮಿಸುವ ಕೆಲಸವು ಅರಮನೆಯ ಮುಂದೆ ಇರುವ ಬಾಕಿಮಾರು ಗದ್ದೆಯಲ್ಲಿಯೇ ಆಗುತ್ತದೆ. ಅವನಿಗೆ ಹೆಸರನ್ನು ಆಯಾ ಅರಸರೇ ಇಡಬೇಕು. ಇವರಲ್ಲಿ ಸಾಮಾಜಿಕ ಪದ್ಧತಿಗಳು ಬಹಳ ಒಳ್ಳೇ ರೀತಿಯಲ್ಲಿವೆ. ಮಾರಿ ಹೊಲೆಯರು ಸಹ ಮೂಲನಿವಾಸಿಗಳಿಗೆ ಸೇರಿದವರು. ಇವರು ಹಳ್ಳಿಗಳಲ್ಲಿಯೂ ಪೇಟೆಗಳಲ್ಲಿಯೂ ವಾಸಿಸುತ್ತಾರೆ. ಇವರು ಸೈನಿಕರಾಗಲೀ ಸೇನಾಧಿಪತಿಗಳಾಗಲೀ ಆಗಿರಲಿಲ್ಲ, ಬರೇ ಕೂಲಿಯವರಾಗಿದ್ದರು. ಇವರ ಸಾಮಾಜಿಕ ಪದ್ಧತಿಗಳು ಒಳ್ಳೇ ರೀತಿಯಲ್ಲಿವೆ.

ರಾಣ್ಯುವೆಯರು ಅಥವಾ ಭೈರರು ಮೈಸೂರು ದೇಶದಿಂದ ಇಲ್ಲಿ ಬಂದವರೆಂದು ಕಾಣುತ್ತದೆ. ಇವರ ಸಾಮಾಜಿಕ ಪದ್ಧತಿಗಳು ಮೇಲು ಸ್ಥಿತಿಯಲ್ಲಿರುತ್ತವೆ.

**ದ್ರಾವಿಡರು**—ಬಂಟರೂ ನಾಡವರೂ ಕುಂಬಾರರೂ ಗಾಣಿಗರೂ ಅಗಸರೂ ಕ್ಷೌರಿಕರೂ ಬಿಲ್ಲವರೂ ಮರದ ಕೆಲಸದವರೂ ಕಬ್ಬಿಣ ಕೆಲಸದವರೂ ಅಕ್ಕಸಾಲೆಯರೂ ಈ ವಂಶಕ್ಕೆ ಸೇರಿದವರು.

ಇವರು ಈ ತುಳು ರಾಜ್ಯಕ್ಕೆ ಬೇರೆ ಜಿಲ್ಲೆಗಳಿಂದ ಬಂದು ನಿಂತ ವಂಶದವರಾಗಿರಬೇಕು. ಇವರು ಸಾಹಸಿಗಳೂ ಕಷ್ಟಸಹಿಷ್ಣುತೆಯುಳ್ಳವರೂ ದೃಢಕಾಯರೂ ಆಗಿರುತ್ತಾರೆ. ಯುದ್ಧದಲ್ಲಿ ಪ್ರೀತಿಯುಳ್ಳವರಲ್ಲ; ಆದರೆ ಸ್ವಾಭಿಮಾನಕ್ಕಾಗಿ ಹೋರಾಡುವರು. ಇವರು ಬಯಲು ಸೀಮೆಗಳಲ್ಲಿ ವಾಸಮಾಡಿ ಮೂಲನಿವಾಸಿಗಳಿಗಿಂತಲೂ ಬಹಳ ಉನ್ನತಸ್ಥಿತಿಗೆ ಬಂದಿರುತ್ತಾರೆ. ಇವರು ಈ ಜಿಲ್ಲೆಯನ್ನು ಶೀಮೆಗಳಾಗಿ ಮಾಡಿಕೊಂಡು ಆಳುತ್ತಿದ್ದರು. ಒಂದೊಂದು ಶೀಮೆಗೆ ಒಬ್ಬೊಬ್ಬ ಅರಸನಾಗಲೀ, ಹೆಗ್ಗಡೆಯಾಗಲೀ, ಬಲ್ಲಾಳನಾಗಲೀ ಇದ್ದನು. ಪ್ರತಿ ಒಂದು ಹಳ್ಳಿಯ ಒಂದೊಂದು ಜಾತಿಗೆ ಒಬ್ಬೊಬ್ಬ ಗುರಿಕಾರನಿದ್ದನು. ಆಳುವುದಕ್ಕಾಗಿ ಅನೇಕ ಕಟ್ಟಳೆಗಳನ್ನು ಮಾಡಿಕೊಂಡಿದ್ದರು. ಹಳ್ಳಿಯ ಆಡಳಿತೆಯ ವಿಷಯ ಈಗಲೂ ರೂಢಿಯಲ್ಲಿರುವ ಅನೇಕ ಕಾಯಿದೆಗಳು ಅವರು ಮಾಡಿದ ಕಟ್ಟು ಕಟ್ಟಳೆಗಳಿಂದಲೇ ಬಂದವುಗಳು. ಇವರಲ್ಲಿ ಅನೇಕರು ವರ್ತಕರಾಗಿದ್ದು ಆಫ್ರಿಕದ ಪೂರ್ವ ಕರಾವಳಿ, ರೆಡ್‌ಸೀಯ ಪ್ರದೇಶ ಇವುಗಳ ಸಂಗಡ ವ್ಯಾಪಾರ ನಡಿಸುತ್ತಿದ್ದರು. ಮನುಷ್ಯನಿಗೆ ಬೇಕಾದ ಎಲ್ಲಾ ವಸ್ತುಗಳನ್ನು ಒದಗಿಸಿಕೊಡುತ್ತಿದ್ದ ಭೂಮಿಯನ್ನು ತಾಯಿಯೆಂದು ಪೂಜಿಸುತ್ತಿದ್ದರು. ಈಗಲೂ ಕೆಡ್ಡಸದ ಸಮಯವೂ ಬಲಿಪಾಡ್ಯದ ದಿವಸವೂ ಭೂಮಿದೇವಿಯನ್ನು ಪೂಜಿಸುವ ವಾಡಿಕೆಯಿದೆ. ಅಶ್ವತ್ಥಮರ, ತುಳಸಿಗಿಡ ಇವುಗಳನ್ನು ಪೂಜಿಸುತ್ತಿರುತ್ತಾರೆ.

ಈ ದ್ರಾವಿಡರು ಸುಮಾರು 5000 ವರುಷಗಳಿಂದಲೂ ನಾಗರೀಕತೆಯಿಂದಿರುವ ಜನರೆಂಬುದರಲ್ಲಿ ಏನೊಂದು ಸಂಶಯವಿಲ್ಲ. ಇವರು ತಮ್ಮ ನಾಗರೀಕತೆಯನ್ನೂ ಪದ್ಧತಿಗಳನ್ನೂ ಬಿಡದೆ ಇದ್ದರೂ ನಂತರ ಬಂದ ಆರ್ಯ ವಂಶದ ಬ್ರಾಹ್ಮಣರ ಪದ್ಧತಿಗಳಲ್ಲಿ ಕೆಲವನ್ನು ತಮ್ಮ ಪದ್ಧತಿಗಳಿಗೆ ಕೂಡಿಸಿಕೊಂಡಿದ್ದಾರೆ. ಆರ್ಯರ ದೇವರುಗಳನ್ನು ನಂಬಲಾರಂಭಿಸಿದರು. ತಮ್ಮ ಭಾಷೆಯಲ್ಲಿ ಆರ್ಯ ಭಾಷೆಯ ಶಬ್ದಗಳನ್ನು ಕೂಡಿಸಿಕೊಂಡರು. ವಾರಗಳ ಹೆಸರುಗಳು ತುಳು ಭಾಷೆಯಲ್ಲಿರಲಿಲ್ಲ. ಅವುಗಳೆಲ್ಲಾ

ಸಂಸ್ಕೃತ ಶಬ್ದಗಳು. ಆರ್ಯರ ಪದ್ಧತಿಗಳನ್ನು ಅನುಸರಿಸಿದರೂ ಅವರೊಡನೆ ಬೆರೆತು ಹೋಗಲಿಲ್ಲ.

## 3 ನೇ ಅಧ್ಯಾಯ.

### (1) ಕೇರಳೋತ್ಪತ್ತಿ.

ತ್ರೇತಾಯುಗದಲ್ಲಿ ವಿಷ್ಣುವಿನ ಆರನೇ ಅವತಾರವಾದ ಪರಶುರಾಮನು ಗೋಕರ್ಣದಿಂದ ಕನ್ಯಾಕುಮಾರಿಯ ವರೆಗಿನ ಪ್ರದೇಶವನ್ನು ವರುಣನಿಂದ ಪಡಕೊಂಡನೆಂದು ಪುರಾಣಗಳಲ್ಲಿ ಹೇಳಿಯದೆ. ಈ ಕಥೆಯನ್ನು ಒಂದೊಂದು ಪುರಾಣದಲ್ಲಿ ಒಂದೊಂದು ವಿಧವಾಗಿ ವಿವರಿಸಿಯದೆ. ಒಂದರಲ್ಲಿ ಹೇಳುವ ಪ್ರಕಾರ ಪರಶುರಾಮನು ಸಮುದ್ರರಾಜನಾದ ವರುಣನ ಅಪ್ಪಣೆ ಪ್ರಕಾರ ಕನ್ಯಾಕುಮಾರಿಯ ಹತ್ತಿರ ನಿಂತು ತನ್ನ ಕೊಡಲಿಯನ್ನು ಬಿಸಾಡಿದನೆಂದೂ, ಅದು ಗೋಕರ್ಣದ ಹತ್ತಿರ ಬಿತ್ತೆಂದೂ, ಅಷ್ಟು ಸ್ಥಳದ ಒಳಗಡೆ ಇರುವ ಸ್ಥಳದಿಂದ ಸಮುದ್ರವು ದೂರ ಹೋಯಿತೆಂದೂ, ಪರಶುರಾಮನು ಆ ಭಾಗಕ್ಕೆ ಕೇರಳವೆಂದು ಹೆಸರಿಟ್ಟನೆಂದೂ ಹೇಳಿಯದೆ. ಇನ್ನೊಂದರಲ್ಲಿ ಪರಶುರಾಮನು ತನ್ನ ಕೊಡಲಿಯನ್ನು ಗೋಕರ್ಣದಿಂದ ಕನ್ಯಾಕುಮಾರಿಗೆ ಬಿಸಾಡಿದನೆಂದೂ, ಮೇಲಕ್ಕೆ ಬಂದ ಸ್ಥಳದಲ್ಲಿ ಪರಶುರಾಮನು ನಗರಗಳನ್ನೂ ಪಟ್ಟಣಗಳನ್ನೂ ಹಳ್ಳಿಗಳನ್ನೂ ಉಂಟುಮಾಡಿ ಬೇರೆ ಬೇರೆ ದೇಶಗಳಿಂದ ಜನರನ್ನು ತಂದು ನಿಲ್ಲಿಸಿದನೆಂದೂ ಹೇಳಿಯದೆ. ಮತ್ತೊಂದರಲ್ಲಿ ಕೃತಾಯುಗದಲ್ಲಿ ಗೋಕರ್ಣ ದೇವಸ್ಥಾನವು ಸಮುದ್ರಪಾಲಾಯಿತೆಂದೂ, ತ್ರೇತಾಯುಗದಲ್ಲಿ ಪರಶುರಾಮನು ಜನರ ಅಪೇಕ್ಷೆಪ್ರಕಾರ ಸಮುದ್ರ ರಾಜನನ್ನು ಕೇಳಿಕೊಂಡು ಯಜ್ಞದ ಸಮಯ ಪೂರ್ಣಾಹುತಿಕೊಡುವ ಸೌಟನ್ನು ಬಿಸಾಡಿದನೆಂದೂ, ಅದು ಕನ್ಯಾಕುಮಾರಿಯ ಹತ್ತಿರ ಬಿತ್ತೆಂದೂ, ಅಷ್ಟು ಭಾಗವನ್ನು ಸಮುದ್ರ ರಾಜನಾದ ವರುಣನು ಬಿಟ್ಟುಕೊಟ್ಟನೆಂದೂ

ಹೇಳಿಯದೆ. ಈ ಪುರಾಣ ಕಥೆಗಳಿಂದ ಕೆಲವು ಸಂಗತಿಗಳನ್ನು ತಿಳಕೊಳ್ಳಬಹುದು.

ಪಶ್ಚಿಮ ಗಟ್ಟಗಳ (ಸಹ್ಯಾದ್ರಿ ಪರ್ವತ) ಪಶ್ಚಿಮ ಭಾಗಕ್ಕಿರುವ ಪ್ರದೇಶವು, ಭೂಮಿಯು ಸೃಷ್ಟಿಯಾಗುವಾಗಲೇ ಇತ್ತೆಂದೂ ನಂತರ ಈ ಕರಾವಳಿಯ ಪ್ರದೇಶವು ಸಮುದ್ರಪಾಲಾಯಿತೆಂದೂ ತಿಳುಕೊಳ್ಳಬಹುದು. ಅನಂತರ ಈ ಪ್ರದೇಶವು, ಸಮುದ್ರವು ಕ್ರಮೇಣ ದೂರಹೋದ್ದರಿಂದ, ಮೇಲಕ್ಕೆ ಬಂತೆಂದೂ ಪರಶುರಾಮನೆಂಬ ಆರ್ಯಕುಲದ ವೀರನು ಬಂದು ಈ ಪ್ರದೇಶಕ್ಕೆ ಬೇರೆ ಬೇರೆ ದೇಶಗಳಿಂದ ಜನರನ್ನು ತಂದು ನಿಲ್ಲಿಸಿ ರಾಜ್ಯವನ್ನು ಸ್ಥಾಪಿಸಿ ಸ್ವಲ್ಪ ಸಮಯ ಇಲ್ಲಿಯೇ ಇದ್ದನೆಂದೂ ತಿಳಕೊಳ್ಳಬಹುದು.

1866ನೇ ಇಸವಿಯ ಜುಲ್ಯಾ ತಿಂಗಳ ಕೊಟೆಯಂ ಕೊಲೇಜಿನ ತ್ರೈಮಾಸಿಕ ಪತ್ರದಲ್ಲಿ ಕೇರಳದ ಉತ್ಪತ್ತಿಯ ವಿಷಯ ಹೀಗೆ ಹೇಳಿಯದೆ. ಕೆಲವು ಶತಮಾನಗಳ ಹಿಂದೆ ಜ್ವಾಲಾಮುಖಿಯ ಕೆಲಸದಿಂದ ಈ ಅವಸ್ಥೆಯು ಆಯಿತೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ. ಇದನ್ನು ಕವಿಗಳು ಅನೇಕ ವಿಧವಾಗಿ ವರ್ಣಿಸಿರುವರು. ಮೊದಲು ಗೋಕರ್ಣದ ಹತ್ತಿರ ನೆಲವು ಫಕ್ಕನೆ ಸಮುದ್ರ ಮಟ್ಟಕ್ಕಿಂತ ಕೆಳಗೆ ಹೋಯಿತೆಂದೂ ನಂತರ ಮೆಲ್ಲಗೆ ಸ್ವಲ್ಪ ಭಾಗವು ಮೇಲಕ್ಕೆ ಬಂತೆಂದೂ ಹೇಳಬಹುದು.

ಗೋಕರ್ಣದಿಂದ ಕನ್ಯಾಕುಮಾರಿಯ ವರೆಗಿನ ಪ್ರದೇಶವಾದ ಕೇರಳವನ್ನು ಈಗ ನೋಡಿದರೂ ಕರಾವಳಿಯಲ್ಲಿ ಜವುಗು ಪ್ರದೇಶಗಳನ್ನೂ ಖಾರಿಗಳನ್ನೂ ನೋಡಬಹುದು. ಕುಂದಾಪುರ, ಬಾರಕೂರು, ಕಲ್ಯಾಣಪುರ, ಉದಿಯಾವರ, ಮೂಲ್ಕಿ, ಪಣಂಬೂರು, ಚರ್ವತ್ತೂರು, ಬಲಿಯಾಪಟ್ಟ, ಬಡಗಂರಾ, ಕೊರಪ್ಪೊಯ, ತ್ರಿಶ್ಶೂರು, ಕೊಚ್ಚಿ, ಅಲ್ಲಪ್ಪಿ ಮುಂತಾದ ಕಡೆಗಳಲ್ಲಿರುವ ಖಾರಿಗಳಲ್ಲಿ ಈಗಲೂ ದೋಣಿಗಳಲ್ಲಿ ವ್ಯಾಪಾರ ನಡುಯುತ್ತದೆ. ಕೆಲವು ಅರ್ಧ ಮುಚ್ಚಿಹೋಗಿವೆ. ಈಗಲೂ ಕರಾವಳಿಯ ಹತ್ತಿರ

ಸಮುದ್ರವು ಮುಂದಕ್ಕೆ ಬಂದಸಂಗತಿಯು ನಡದದೆ. ಗಂಗೊಳ್ಳಿ, ಉಳ್ಳಾಲ, ಅಲ್ಲಪಿ ಕರಾವಳಿಯು ಹೆಚ್ಚಾಗಿ ಕೊರೆದು ಹೋಗಿಯದೆ. ಆಗಾಗ್ಯೆ ಈ ಕರಾವಳಿಯಲ್ಲಿ ಭೂಕಂಪಗಳು ಆಗುತ್ತಾ ಇವೆ. 1823, 1841, 1845 ರಲ್ಲಿ ಭೂಕಂಪಗಳು ಆಗಿವೆ. ಈ ನಡುಗುವಿಕೆಯು ಹೆಚ್ಚಾಗಿ ವಾಯುವ್ಯ ದಿಕ್ಕಿನಿಂದ ಆರಂಭವಾಗುತ್ತದೆ. 1856ನೇ ಇಸವಿಯಲ್ಲಿ ಅನೇಕ ಸಾರಿ ಭೂಕಂಪವಾಗಿಯದೆ. ಇದರಿಂದ ತಗ್ಗಾದ ಈ ಕೇರಳ ಪ್ರದೇಶವು ಜ್ವಾಲಾ ಮುಖಿಯ ಶಕ್ತಿಯಿಂದಲೇ ಉಂಟಾಯಿತೆಂದು ಹೇಳಬಹುದು.

ಗೋಕರ್ಣದಿಂದ ಕನ್ಯಾಕುಮಾರಿಯ ವರೆಗಿರುವ ಪ್ರದೇಶವು ಒಂದು ಕಾಲದಲ್ಲಿ ಸಮುದ್ರಪಾಲಾಯಿತೆಂದೂ, ಗೋಕರ್ಣ ದೇವಸ್ಥಾನವು ಅನೇಕ ವರುಷಗಳ ವರೆಗೆ ಸಮುದ್ರದಲ್ಲಿ ಮುಳುಗಿಹೋಯಿತೆಂದೂ, ಕೆಲವು ಋಷಿ ಗಳು ಪರಶುರಾಮನನ್ನು ಬೇಡಿಕೊಳ್ಳಲು ಅವನು ಬಂದು ವರುಣನೊಡನೆ ಕೇಳಿ ಈ ಪ್ರದೇಶವನ್ನು ಹಿಂದಕ್ಕೆ ಪಡದನೆಂದೂ ಬ್ರಹ್ಮಾಂಡ ಪುರಾಣದಲ್ಲಿ ಹೇಳಿಯದೆ. ಪರಶುರಾಮನೇ ಈ ಕೇರಳ ಪ್ರದೇಶವನ್ನು ಊರ್ಜಿತಸ್ಥಿತಿಗೆ ತಂದನೆಂದು ಹೇಳಿರುವುದರಿಂದ ಅವನ ಚರಿತ್ರೆಯನ್ನು ತಿಳುಕೊಳ್ಳುವದು ಅಗತ್ಯವಿದೆ.

## (ii) ಪರಶುರಾಮನು.

ಬ್ರಹ್ಮಾಂಡ ಪುರಾಣದಲ್ಲಿ ಹೇಳಿರುವ ಪ್ರಕಾರ ಪ್ರಖ್ಯಾತಿಪಟ್ಟ ಈ ಬ್ರಾಹ್ಮಣನು ಭೃಗುಋಷಿಯ ವಂಶದವನು. ಇವನು ವಿಷ್ಣುವಿನ ಆರನೇ ಅವತಾರವೆಂದೂ ಹಿಂದುಗಳು ನಂಬುತ್ತಾರೆ. ಇವನು ತ್ರೇತಾಯುಗ ದಲ್ಲಿ ನರ್ಮದಾ ನದಿಯ ತೀರದಲ್ಲಿ ಒಂದು ಋಷಿಯ ಆಶ್ರಮದಲ್ಲಿ ಹುಟ್ಟಿದನು. ಇವನ ತಂದೆಯು ಪ್ರಸಿದ್ಧಿಪಡೆದ ಜಮದಗ್ನಿಋಷಿಯು. ತಾಯಿಯು ರೇಣುಕಾದೇವಿಯು. ಜಮದಗ್ನಿಋಷಿಗೆ ಐದು ಮಂದಿ ಗಂಡು ಮಕ್ಕಳಿದ್ದರು. ಪರಶುರಾಮನು ಕಿರೇ ಮಗನು. ಇವನು ಸಣ್ಣವನಾಗಿರುವಾಗ ಇವನ ತಂದೆತಾಯಿಗಳು ಸುಖದಿಂದ ನರ್ಮದಾನದೀ ತೀರದಲ್ಲಿ ವಾಸವಾಗಿರುವಾಗ ಅವರಿಗೆ ಒಂದು ಆಪತ್ತು ಸಂಭವಿಸಿತು.

ಒಂದಾನೊಂದು ದಿವಸ ಜಮದಗ್ನಿಯು ದೇವರ ಪೂಜೆಗಾಗಿ ಹೂಗಳನ್ನೂ ಸಮಿದುಗಳನ್ನೂ ತರಲಿಕ್ಕೆ ಹೋದಾಗ, ರೇಣುಕಾದೇವಿಯು ನೀರು ತರುವುದಕ್ಕೆ ನರ್ಮದಾನದೀ ತೀರಕ್ಕೆ ಹೋದಳು. ಜಮದಗ್ನಿಯು ಹಿಂತಿರುಗಿ ಬಂದಾಗ್ಯೂ ರೇಣುಕೆಯು ಬಾರದಿರುವುದನ್ನು ನೋಡಿ, ಸಿಟ್ಟುಗೊಂಡು, ಅವಳು ಹಿಂತಿರುಗಿ ಬರಲು ತಡವಾಗಲು ಕಾರಣ ವೇನೆಂದು ಕೇಳಿದನು. ಆಗ ಅವಳು ಹೀಗೆ ಹೇಳಿದಳು, "ನಾನು ನೀರಿಗೆ ಹೋದಾಗ ಮೇಲಿನಿಂದ ಚಿತ್ರಾಂಗದನೆಂಬ ಗಂಧರ್ವನು ವಿಮಾನ ದಲ್ಲಿ ಕುಳಿತುಕೊಂಡು ಹೋಗುತ್ತಿದ್ದನು. ಅವನ ನೆರಳು ನೀರಿನಲ್ಲಿ ಬೀಳಲು, ಅದನ್ನು ನಾನು ನೋಡುತ್ತಾ ನಿಂತೆನು.'' ಜಮದಗ್ನಿಋಷಿಯು, ಪತಿವ್ರತಾ ಧರ್ಮಕ್ಕೆ ಕುಂದು ಬಂದದರಿಂದ, ಅವಳನ್ನು ಕೊಲ್ಲ ಬೇಕೆಂದು ಆಲೋಚಿಸಿದನು. ನಾಲ್ಕು ಮಂದಿ ಮಕ್ಕಳೂ ಸ್ತ್ರೀಹತ್ಯಾ ದೋಷವು ಮಹಾ ಪಾತಕವೆಂದೂ, ಅಲ್ಲದೆ, ತಾಯಿಯನ್ನು ಕೊಲ್ಲುವದು ಅದಕ್ಕಿಂತಲೂ ದೊಡ್ಡ ಪಾಪವೆಂದೂ ಹೇಳಿದರು. ಪರಶುರಾಮನೊಡನೆ ಕೇಳಲು, ಅವನು ತನ್ನ ತಂದೆಯ ಆಜ್ಞೆಯೇ ದೊಡ್ಡದೆಂದು ಹೇಳಿ, ತಾಯಿಯ ತಲೆಯನ್ನು ಕಡಿದುಹಾಕಿದನು. ಇದಕ್ಕೆ ತಂದೆಯು ಮೆಚ್ಚಿ, 'ಬೇಕಾದ ವರವನ್ನು ಬೇಡಿಕೋ' ಎಂದು ಮಗನಿಗೆ ಹೇಳಲು, ಅವನು ತನ್ನ ತಾಯಿ ಯನ್ನು ಜೀವಿಸಿಕೊಡಬೇಕೆಂದು ಹೇಳಿದನು. ಜಮದಗ್ನಿಯು ಹಾಗೆಯೇ ಮಾಡಿದನು.

ತರುವಾಯ ಜಮದಗ್ನಿಋಷಿಯು ಪರಶುರಾಮನನ್ನು ವೇದಶಾಸ್ತ್ರ ಗಳನ್ನು ಕಲಿಯುವುದಕ್ಕಾಗಿ ಮುತ್ತಜ್ಜನಾದ ಭೃಗುಋಷಿಯ ಆಶ್ರಮಕ್ಕೆ ಕಳುಹಿಸಿದನು. ಇಲ್ಲಿ ಪರಶುರಾಮನು ಕಲಿಯಬೇಕಾದ ವಿದ್ಯೆಯನ್ನೆಲ್ಲಾ ಪೂರ್ಣ ಕಲಿತು, ಮುತ್ತಜ್ಜನ ಅಪೇಕ್ಷೆ ಪ್ರಕಾರ ಈಶ್ವರನ ತಪಸ್ಸುಮಾಡಲಿಕ್ಕೆ ಹಿಮಾಲಯ ಪರ್ವತಕ್ಕೆ ಹೋದನು. ಅನೇಕ ವರ್ಷಗಳ ವರೆಗೆ ತಪಸ್ಸನ್ನು ಮಾಡುತ್ತಾ ಇದ್ದು, ತರುವಾಯ ಹಿಂದೂದೇಶದಲ್ಲಿರುವ ಎಲ್ಲಾ ತೀರ್ಥಸ್ಥಳ

ಗಳಿಗೆ ಹೋಗಿ, ತಿರಿಗಿ ತಪಸ್ಸಿಗೆ ಕೂತುಕೊಂಡನು. ಆ ಮೇಲೆ ಮುತ್ತಜ್ಜನ ಆಶ್ರಮಕ್ಕೆ ಹೋಗಿ, ಅಲ್ಲಿಂದ ತಂದೆತಾಯಿಗಳಿರುವಲ್ಲಿಗೆ ಬಂದನು.

ಈ ಸಮಯದಲ್ಲಿ ನರ್ಮದಾ ನದಿಯ ತೀರದಲ್ಲಿ ಆಳುತ್ತಿದ್ದ ಹೆಹಯಕುಲದ ಕಾರ್ತವೀರ್ಯಾರ್ಜುನನು ಒಂದು ದಿವಸ ಮೃಗ ಬೇಟೆಯಾಡಲಿಕ್ಕೆ ಬಂದವನು, ಮೃಗಬೇಟೆಯು ಮುಗಿದ ಕೂಡಲೇ ಆಯಾಸಪಟ್ಟು, ಅದೇ ಕಾಡಿನ ಹತ್ತಿರವಿರುವ ಜಮದಗ್ನಿಋಷಿಯ ಆಶ್ರಮಕ್ಕೆ ಬಂದನು. ಜಮದಗ್ನಿಯು ಇವರಿಗೆ ಸತ್ಕಾರವನ್ನು ಮಾಡಿದನು. ಈ ಋಷಿಯ ಹತ್ತಿರ ಒಂದು ಕಾಮಧೇನುವು ಇತ್ತು. ಅರಸನು ಆಶ್ರಮದಿಂದ ಹೊರಡುವಾಗ ಕಾಮಧೇನುವನ್ನು ತನಗೆ ಕೊಡಬೇಕೆಂದು ಹೇಳಿದನು. ಋಷಿಯು ಇದಕ್ಕೆ ಒಪ್ಪಲಿಲ್ಲ. ಅರಸನು ಅದನ್ನು ತರಲಿಕ್ಕೆ ಮಂತ್ರಿಯನ್ನು ಸೈನ್ಯದೊಡನೆ ಕಳುಹಿಸಿದನು. ಅವರು ಋಷಿಯನ್ನು ಮೂರ್ಛಿತನಾಗಿ ಮಾಡಿ, ಧೇನುವನ್ನು ತೆಗೆದುಕೊಂಡು ಬಂದರು. ಪರಶುರಾಮನು ತಿರುಗಾಡಲಿಕ್ಕೆ ಹೋದವನು ಹಿಂತಿರುಗಿ ಬಂದು ನೋಡುವಾಗ ತಂದೆಯ ಶವವನ್ನು ನೋಡಿ, ಸಿಟ್ಟುಗೊಂಡು, ತನ್ನ ತಂದೆಯನ್ನು ಕೊಂದವನನ್ನು ಹತಮಾಡದೆ ನಿಲ್ಲಲಿಕ್ಕಿಲ್ಲವೆಂದು ಶಪಥ ಹಾಕಿಕೊಂಡನು. ಅಷ್ಟರಲ್ಲಿ ಇವರಿಗೆ ಬಂದ ಕಷ್ಟವನ್ನು ತಿಳಿದು, ಭೃಗುಋಷಿಯು ಬಂದು ನೋಡಿ, ಜಮದಗ್ನಿಯ ಪ್ರಾಣ ಹೋಗಲಿಲ್ಲ ವೆಂದು ತಿಳಿದು, ಶೈತ್ಯೋಪಚಾರಮಾಡಲು ಜಮದಗ್ನಿಯು ಎದ್ದು ಕೂತುಕೊಂಡನು. ಪರಶುರಾಮನು ಕಾರ್ತವೀರ್ಯಾರ್ಜುನನ ಮನೆಗೆ ಹೋಗಿ, ಹೆಬ್ಬಾಗಲಿನ ಹತ್ತಿರ ನಿಂತು,—ಬ್ರಾಹ್ಮಣರ ಆಸ್ತಿಯನ್ನು ಸುಲಿಗೆ ಮಾಡಿಕೊಂಡು ಹೋಗಲು ಕಾರಣವೇನೆಂದೂ, ಧೇನುವನ್ನು ಬಿಟ್ಟು ಕೊಡಬೇಕೆಂದೂ, ಕೊಡಲು ಒಪ್ಪಿಗೆ ಇಲ್ಲದಿದ್ದರೆ ತನ್ನೊಡನೆ ಮಲ್ಲ ಯುದ್ಧಕ್ಕೆ ನಿಲ್ಲಬೇಕೆಂದೂ ಹೇಳಿಕಳುಹಿಸಿದನು.

ಅರಸನು ಇದನ್ನು ಕೇಳಿ ಪರಶುರಾಮನನ್ನು ಓಡಿಸಬೇಕೆಂದು ದೂತರನ್ನು ಕಳುಹಿಸಿದನು. ಪರಶುರಾಮನು ಅವರನ್ನು ಕೊಂದು

ಹಾಕಲು, ಅರಸನು ತಾನೇ ಯುದ್ಧಕ್ಕೆ ಬಂದನು. ರಾಮನು ಅವನನ್ನು ಸೋಲಿಸಿ, ಕೊಂದು ಹಾಕಿದನು. ಅವನ 5 ಮಂದಿ ಮಕ್ಕಳು ಬಂದು ಪರಶುರಾಮನಿಗೆ ಶರಣಾಗತರಾಗಿ ಕಾಮಧೇನುವನ್ನು ಬಿಟ್ಟುಕೊಟ್ಟರು. ಪರಶುರಾಮನು ಧೇನುವನ್ನು ತಂದೆತಾಯಿಗಳಿಗೆ ಒಪ್ಪಿಸಿ, ತಾನು ಹಿಮಾಲಯಕ್ಕೆ ತಪಸ್ಸಿಗೆ ಹೋದನು. ಆ ಸಮಯದಲ್ಲಿ ಕಾರ್ತವೀರ್ಯಾರ್ಜುನನ ಮಗನು ಆಶ್ರಮಕ್ಕೆ ಬಂದು ಜಮದಗ್ನಿಯನ್ನು ಕೊಂದು, ಆಶ್ರಮವನ್ನು ಹಾಳುಮಾಡಿದನು. ರೇಣುಕಾದೇವಿಯು ಗಂಡನ ಚಿತೆಯಲ್ಲಿಯೇ ಬಿದ್ದು ಪ್ರಾಣವನ್ನು ಬಿಟ್ಟಳು.

ಇದನ್ನು ಕೇಳಿ ಪರಶುರಾಮನು ಬಂದು ಹೆಹಯರನ್ನೆಲ್ಲಾ ನಾಶ ಮಾಡಿದನು. ಅನಂತರ ತಪಸ್ಸುಮಾಡಲಿಕ್ಕೆ ಮಹೇಂದ್ರ ಪರ್ವತಕ್ಕೆ ಹೋದನು. ಆ ಸಮಯದಲ್ಲಿ ಸಹ್ಯಾದ್ರಿ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದ ಋಷಿಗಳು ಹೋಗಿ, ಮುಳುಗಿಹೋದ ತಮ್ಮ ತಪಸ್ಸಿನ ಸ್ಥಳಗಳನ್ನು ಸಮುದ್ರರಾಜನಿಂದ ಬಿಡಿಸಿಕೊಡಬೇಕೆಂದು ಕೇಳಿಕೊಂಡರು. ರಾಮನು ಬಂದು ವರುಣನಿಂದ ಕೇರಳವನ್ನು ಪಡಕೊಂಡನು.

ಋಷಿಗಳು ತಮ್ಮ ತಮ್ಮ ಆಶ್ರಮಗಳಿಗೆ ಹೋಗಿ ತಪಸ್ಸಿಗೆ ಕೂತುಕೊಂಡರು. ಗುಡ್ಡ ಪ್ರದೇಶಗಳಿಗೆ ಓಡಿಹೋದ ಜನರು ತಿರಿಗಿ ಬಯಲು ಸೀಮೆಗೆ ಬಂದು ನಿಲ್ಲಲಾರಂಭಿಸಿದರು. ಈ ಜನರಲ್ಲಿ ಬುದ್ಧಿವಂತರಾದ ಬ್ರಾಹ್ಮಣರು ಇಲ್ಲದಿರುವುದನ್ನು ನೋಡಿ, ಪರಶುರಾಮನು ಆರ್ಯಭೂಮಿಯಿಂದ 64 ಗ್ರಾಮಗಳಲ್ಲಿರುವ ಆರ್ಯಬ್ರಾಹ್ಮಣರ (ನಂಬೂದರಿ) ಕುಟುಂಬಗಳನ್ನು ಕರಕೊಂಡು ಬಂದು, ಗೋಕರ್ಣದಿಂದ ಕನ್ಯಾಕುಮಾರಿಯ ವರೆಗೆ 64 ಗ್ರಾಮಗಳಲ್ಲಿ ಅವರನ್ನು ನಿಲ್ಲಿಸಿದನು.

ಕೇರಳ ರಾಜ್ಯವನ್ನು ನಾಲ್ಕು ವಿಭಾಗಗಳಾಗಿ ಮಾಡಿದನು. (1) ಗೋಕರ್ಣದಿಂದ ಸೀತಾನದಿಯ ವರೆಗಿನ ಹೈಗ ಮತ್ತು ಸೀತಾನದಿಯಿಂದ ಪಯಸ್ವಾನಿ ನದಿಯ ವರೆಗಿರುವ ತುಳುರಾಜ್ಯ.

(2) ಪಯಸ್ವಾನಿನದಿಯಿಂದ ಪುದುಪಟ್ಟಣದ ವರೆಗಿರುವ ಕೂಪರಾಜ್ಯ. (3) ಪುದುಪಟ್ಟಣದಿಂದ ಕನ್ನೇಟಿ ವರೆಗಿರುವ ಕೇರಳರಾಜ್ಯ. (4) ಕನ್ನೇಟಿಯಿಂದ ಕನ್ಯಾಕುಮಾರಿ ವರೆಗಿರುವ ಮೂಶಿಕರಾಜ್ಯ. ಹೈಗ ದೇಶದಲ್ಲಿ ಈ ಕೆಳಗಿನ 10 ಗ್ರಾಮಗಳಲ್ಲಿ ಅವರನ್ನು ನಿಲ್ಲಿಸಿದನು. (1) ಗೋಕರ್ಣ, (2) ಗೋಮುಕೂಟ, (3) ಕಾರವಳ್ಳಿ, (4) ಮುಲ್ಲೂರು. (5) ಎಪ್ಪನೂರು, (6) ಚಪ್ಪನ್ನೂರು, (7) ಕಾಡಲೂರು, (8) ಕಲ್ಲಿನೂರು, (9) ಕಾರ್ಯಚಿರ, (10) ಪೈಯಂಚಿರ.

ತುಳು ರಾಜ್ಯದಲ್ಲಿ (1) ಕೊಲ್ಲೂರು, (2) ಕೋಮಲ, (3) ಬೆಳ್ಳಾರ, (4) ವೆಂಗಾಡು, (5) ಶಂಕರನಾರಾಯಣ, (6) ಕೋಟ, (7) ಮೈರ, (8) ಕೊಟೇಶ್ವರ, (9) ವೆಂಕಟ, (10) ಶಿವಳ್ಳಿ, (11) ಉಡುಪು, (12) ವಿಟ್ಲ, (13) ಪಂಜ, (14) ಮಂಜೇಶ್ವರ, (15) ಕುಮಾರಮಂಗಲ, (16) ಅನಂತಪುರ ಎಂಬ ಈ 16 ಗ್ರಾಮಗಳಲ್ಲಿ ನಿಲ್ಲಿಸಿದನು.

ಕೂಪರಾಜ್ಯ (ಮಲೆಯಾಳ) ದಲ್ಲಿ 7 ಗ್ರಾಮಗಳಲ್ಲಿ ನಿಲ್ಲಿಸಿದನು. (1) ಪಯ್ಯನ್ನೂರು, (2) ಕಣ್ಣಪುರಂ, (3) ಪೆರಿಂಜಲ್ಲೂರು, (4) ಕರಿಕಾಡ, (5) ಈಶಾನಮಂಗಲಂ, (6) ಆಲತ್ತೂರು, (7) ಕರಿತ್ತೊಳ.

ಕೇರಳ ರಾಜ್ಯ (ಕೊಚ್ಚಿ) ದಲ್ಲಿ (1) ತ್ರಿಶ್ಶೀವ ಪೆರೂರು, (2) ಪನ್ನಿಯೂರು, (3) ಚೊವ್ವರ, (4) ಪರಪೂರ, (5) ಐರಾಣಿಕುಳಂ, (6) ಮೂಶಿಕಕುಳಂ, (7) ಚಂಗನೋಡು, (8) ಉಳಿಯನ್ನೂರು, (9) ಕಯುಂತನಾಡು, (10) ಕಯುಚ್ಚೂರ, (11) ಇಳಿಬ್ಯಂ, (12) ಚಮುಂಡ, (13) ಆವಟಿಪುತ್ತೂರು, (14) ಚಂಗನೋಡು, (15) ತ್ರಿಕಣಿ, (16) ತ್ರಿಕಟ, (17) ತ್ರಿಕಣ್ಣಾಲ, (18) ತ್ರಿಚೋಲ ಎಂಬೀ 18 ಗ್ರಾಮ ಗಳಲ್ಲಿ ನಿಲ್ಲಿಸಿದನು.

ಮೂಶಿಕ ರಾಜ್ಯ (ತಿರುವಾಂಕೂರು) ದಲ್ಲಿ 13 ಗ್ರಾಮಗಳಲ್ಲಿ ನಿಲ್ಲಿಸಿದನು. (1) ಇರಿಂಗಾಡಿಕೊಡ, (2) ಆಡಪ್ಪೂರ, (3) ಕಾಡ ಕರುಗ, (4) ಕಿಡಂಗೂರು, (5) ಕಾರನಲ್ಲ್ಯೂರು, (6) ಕವಿಯೂರು (7) ಎಟ್ಟುಳನಿಯೂರು, (8) ನೀಮ್ಮಾರ್ಣ, (9) ಆಣ್ಮಣಿ, (10) ಆಣ್ಮಳ, (11) ತಿರುವಲ್ಲಾಯಿ, (12) ಚಂಗನೀಯೂರು, (13) ಚೆಂಗಾಡು.

ಹೀಗೆ ತೆಗೆದುಕೊಂಡು ಬಂದ ಬ್ರಾಹ್ಮಣರನ್ನೆಲ್ಲಾ ಮೊದಲು ಗೋಕರ್ಣಕ್ಕೆ ಕರಕೊಂಡು ಹೋಗಿ, ಅವರು ತಿರಿಗಿ ತಮ್ಮ ಊರಿಗೆ ಹೋಗದಹಾಗೆ ತಲೆಯ ಎದುರುಗಡೆ ಜುಟ್ಟನ್ನು (ಪೂರ್ವಶಿಖಾ) ಇಡಿಸಿ, ಅವರನ್ನು ಮೇಲೆ ಹೇಳಿದ 64 ಗ್ರಾಮಗಳಲ್ಲಿ ನಿಲ್ಲಿಸಿದನು. ಅನಂತರ ಅವರಿಗೆ ಆಯುಧಗಳನ್ನು ಕೊಟ್ಟು ಅವರ ಒಂದು ಸರಕಾರವನ್ನು ಸ್ಥಾಪಿಸಿದನು. ಆ ಮೇಲೆ ಅವರಿಗೆ ಗ್ರಾಮದೇವತೆಯಾಗಿ ಸರ್ಪಗಳನ್ನು ದೇವತೆಗಳೆಂದು ನಿಶ್ಚೈಸಿ, ಆ ದೇವತೆಗಳಿಗೆ (ನಾಷ್ಟಾವು) ಸುಬ್ರಹ್ಮಣ್ಯನನ್ನು ದೇವರಾಗಿ ನಿಯಮಿಸಿ ದೇವಸ್ಥಾನಗಳನ್ನು ಕಟ್ಟಿಸಿದನು. ದಕ್ಷಿಣ ಕನ್ನಡ ಜಿಲ್ಲೆ ಯಲ್ಲಿ ಅನಂತರ ಅನೇಕ ಹೊಸ ದೇವರುಗಳನ್ನು ಪ್ರತಿಷ್ಠಿಸಿದರೂ ಗೌಡ ಸಾರಸ್ವತ, ಸಾರಸ್ವತ, ವೈಷ್ಣವ ದೇವಸ್ಥಾನಗಳನ್ನು ಬಿಟ್ಟು ಉಳಿದ ಎಲ್ಲಾ ದೇವಸ್ಥಾನಗಳಲ್ಲಿಯೂ ಬಸದಿಗಳಲ್ಲಿಯೂ ಭೂತಸ್ಥಾನಗಳಲ್ಲಿಯೂ ಗರ್ಭ ಗೃಹದಲ್ಲಿ ಇಲ್ಲದಿದ್ದರೂ ಹೊರಸುತ್ತಿನಲ್ಲಿ ನಾಷ್ಟಾವಿನ ಕಲ್ಲುಗಳು ಇರು ವುದನ್ನು ಈಗಲೂ ನೋಡಬಹುದು. ಪ್ರತಿ ಒಂದು ಗ್ರಾಮದಲ್ಲಿಯೂ ಒಂದೊಂದು ನಾಗರಬನವು ಇದೆ. ಅಲ್ಲಲ್ಲಿ ಸುಬ್ರಹ್ಮಣ್ಯ ದೇವಸ್ಥಾನ ಗಳೂ ಇವೆ. ಜನರಲ್ಲಿ ಹೆಚ್ಚಿನವರಿಗೆ ಈ ದೇವರ ಮೇಲೆ ಈಗಲೂ ಹೆಚ್ಚು ಭಕ್ತಿ ಇದೆ. ಕುಡುಪು ಸುಬ್ರಹ್ಮಣ್ಯ, ಮಂಜೇಶ್ವರ ಬಳ್ಳಮಂಜ ದೇವಸ್ಥಾನಗಳಲ್ಲಿ ಬರುವ ಹರಿಕೆಗಳಿಂದಲೂ ಪಂಚಮಿ, ಷಷ್ಠಿಯ ದಿವಸ ಮಾಡುವ ಉಪವಾಸದಿಂದಲೂ ಈ ಸಂಗತಿಯು ಮುಂದಟ್ಟಾಗುತ್ತದೆ.

ಅನಂತರ ಪರಶುರಾಮನು ಬೇರೆ ದೇಶದಿಂದ ಸೋಮವಂಶದ ಭಾನುವಿಕ್ರಮನೆಂಬ ಅರಸುಕುಮಾರನನ್ನು, ಅವನ ಮೂವರು ತಮ್ಮಂದಿಯರನ್ನು ಕೇರಳ ದೇಶಕ್ಕೆ ಕರತಂದು, 64 ಗ್ರಾಮಗಳ ಬ್ರಾಹ್ಮಣರನ್ನೂ ಕರಿಸಿ, ಗೋಕರ್ಣದಿಂದ ಕನ್ಯಾಕುಮಾರಿಯ ವರೆಗಿರುವ ಕೇರಳರಾಜ್ಯಕ್ಕೆ ತಿರುವಾಂಕೋಡಿನ ಹತ್ತಿರವಿರುವ ಶ್ರೀ ವರ್ಧಮಾನಪುರ (ಪದ್ಮನಾಭಪುರ) ವನ್ನು ರಾಜಧಾನಿಯಾಗಿ ಮಾಡಿ, ಭಾನುವಿಕ್ರಮನಿಗೆ ಬಂಗಾರದ ಸಿಂಹಾಸನದ ಮೇಲೆ ಕುಳ್ಳಿರಿಸಿ, ಪಟ್ಟಾಭಿಷೇಕ ಮಾಡಿ, ತನ್ನ ಕತ್ತಿಯನ್ನು ಅವನಿಗೆ ಪಟ್ಟದ ಕತ್ತಿಯಾಗಿ ಕೊಟ್ಟನು; 'ರಾಶಿ' ಎಂಬ ಬಂಗಾರದ ನಾಣ್ಯವನ್ನು ಮಾಡಿಸಿದನು.

ಭಾನುವಿಕ್ರಮನ ಒಬ್ಬ ತಮ್ಮನನ್ನು ಗೋಕರ್ಣದಿಂದ ಪಯಸ್ವಾನಿ ನದಿಯ ವರೆಗಿರುವ ರಾಜ್ಯಕ್ಕೆ ಅರಸನನ್ನಾಗಿ ಮಾಡಿದನು. ಈ ಅರಸನಿಗೆ ಕೊಲತ್ತನಾಡಿನ ಅರಸನೆಂದೂ, ಕೊಲತ್ತಿರಿ ಅರಸನೆಂದೂ ಹೆಸರು. ಇವನ ಪಟ್ಟದ ಹೆಸರು 'ಉದಯವರ್ಮ'.

ಆ ಮೇಲೆ ಪರಶುರಾಮನು ಬ್ರಾಹ್ಮಣರನ್ನು ಕೂಡಿಸಿ, ನಿಮಗೆ ಕಷ್ಟ ಬಂದ ಕಾಲದಲ್ಲಿ ನೀವೆಲ್ಲರೂ ತ್ರಿಚ್ಚೂರಲ್ಲಿ ಕೂಡಿ ಪ್ರಾರ್ಥಿಸಿದರೆ ತಾನು ಬಂದು ನಿಮ್ಮ ಕಷ್ಟಗಳನ್ನು ನಿವಾರಣೆ ಮಾಡುತ್ತೇನೆಂದು ಹೇಳಿ ಹೋದನು. ಸ್ವಲ್ಪ ಸಮಯದ ನಂತರ ಈ ಬ್ರಾಹ್ಮಣರು ಪರಶುರಾಮನನ್ನು ಪರೀಕ್ಷಿಸುವುದಕ್ಕಾಗಿ ಪ್ರಾರ್ಥಿಸಲು, ಪರಶುರಾಮನು ಬಂದು, ಅವರು ತನ್ನನ್ನು ಪರೀಕ್ಷಿಸುವುದಕ್ಕಾಗಿ ಕರೆದರೆಂದು ಸಿಟ್ಟುಗೊಂಡು, ಇನ್ನುಮುಂದೆ ನಿಮಗೆ ಒಟ್ಟುಗೂಡಲು ಸಾಧ್ಯವೇ ಆಗಕೂಡದೆಂದು ಹೇಳಿ ಹೋದನು.

## (iii)

ರಾಮಾಯಣಕಾಲದಲ್ಲಿ ಕನ್ಯಾಕುಮಾರಿಯಿಂದ ಗೋವೆಯ ವರೆಗಿನ ರಾಜ್ಯವು ಲಂಕಾದ್ವೀಪದ ಅರಸನಾದ ರಾವಣನ ಕೈಕೆಳಗೆ ಇತ್ತೆಂದೂ, ಮಹಾಭಾರತದ ಕಾಲದಲ್ಲಿ ದಕ್ಷಿಣ ಹಿಂದೂದೇಶಕ್ಕೆ ಸಹದೇವನು

ಅಧಿಕಾರಿಯಾಗಿದ್ದನೆಂದೂ ಕಾಣುತ್ತದೆ. ಬುಚನನ ದೊರೆಗೆ ಬನವಾಸಿಯ ಮಧುಕೇಶ್ವರ ದೇವಸ್ಥಾನದಲ್ಲಿ ಸಿಕ್ಕಿದ ತಾಮ್ರ ಶಾಸನದ ಪ್ರಕಾರ ರಾವಣನು ಕ್ರಿ. ಪೂ. 3100ರಲ್ಲಿ ಕನ್ನಡಜಿಲ್ಲೆಯನ್ನು ಮೇಲಾಧಿಕಾರಿಯಾಗಿ ಆಳುತ್ತಿದ್ದನೆಂದೂ, ರ್‍ಯಾಸದೊರೆಗೆ ಅಲ್ಲಿಯೇ ಸಿಕ್ಕಿದ ತಾಮ್ರ ಶಾಸನದ ಪ್ರಕಾರ ಕ್ರಿ. ಪೂ. 2935ರಲ್ಲಿ ಸಹದೇವನು ಆಳುತ್ತಿದ್ದನೆಂದೂ ತೋರುತ್ತದೆ. ಪಾಂಡವರು ಕಾಡಿನಲ್ಲಿರುವಾಗ ಬನವಾಸಿಯಲ್ಲಿ ಇದ್ದರೆಂದೂ ಬನವಾಸಿಯ 18 ಮೈಲು ಈಶಾನ್ಯಕ್ಕಿರುವ ಬೆಳಗಾವೆಯಲ್ಲಿ ಸಿಕ್ಕಿದ ಕ್ರಿ. ಪೂ. 1035ರ ಶಾಸನದಿಂದ ಪಾಂಡವರು ರಾಜಸೂಯಯಾಗವನ್ನು ಮಾಡಿದ ಮೇಲೆ ಬೆಳಗಾವೆಗೆ ಬಂದು 5 ಲಿಂಗಗಳನ್ನು ಪ್ರತಿಷ್ಠಿಸಿದರೆಂದೂ ತಿಳಿಯುತ್ತದೆ. ಪಾಂಡವರು ವನವಾಸದಲ್ಲಿರುವಾಗ, ಪಶ್ಚಿಮ ಕರಾವಳಿಗೆ ಬಂದು, ತುಳುರಾಜ್ಯದಲ್ಲಿರುವ ಈಗಿನ ಮಂಗಳೂರು ತಾಲೂಕಿನ ಸರ್ಪಾಡಿ ಗ್ರಾಮದ ಕುಟಕುಂಜೆಯಲ್ಲಿ ಪಾಂಡವರ ಕಲ್ಲು ಎಂಬ ಸ್ಥಳದಲ್ಲಿ ಇದ್ದರೆಂದೂ, ಕಾರಂಜೆಗೆ ಬಂದು ಅಲ್ಲಿಯ ಗಧಾತೀರ್ಥವನ್ನು ದೊಡ್ಡದಾಗಿ ಮಾಡಿಸಿದರೆಂದೂ ಕಾರಂಜೆ ಮಹಾತ್ಮೆಯಲ್ಲಿದೆ. ಮಹಾಭಾರತ ಯುದ್ಧಕಾಲದಲ್ಲಿ ತುಳು ಅರಸನು ಪಾಂಡವರ ಕಡೆಗೆ ಸೇರಿ ಯುದ್ಧಮಾಡಿದನೆಂದೂ ಮಹಾಭಾರತದಲ್ಲಿ ಹೇಳಿಯದೆ.

ಮಹಾಭಾರತ ಕಾಲದ ನಂತರ ಈ ಜಿಲ್ಲೆಯನ್ನು ಯಾರು ಆಳಿದರೆಂದೂ ಯಾವ ಆಧಾರಗಳಿಂದಾದರೂ ತಿಳಿದುಬರುವದಿಲ್ಲ. ತುಳು ರಾಜ್ಯವು ಕೇರಳ ರಾಜ್ಯದಿಂದ ಯಾವಾಗ ಬೇರೆಯಾಯಿತೆಂದು ತಿಳಿಯುವದಿಲ್ಲ. ಕ್ರಿ. ಪೂ. 263ನೆಯ ಸಿದ್ಧಾಪುರದಲ್ಲಿ ಸಿಕ್ಕಿದ ಅಶೋಕನ ಕಾಲದ ಶಾಸನ ಪ್ರಕಾರ ತುಳು ರಾಜ್ಯವನ್ನು ಸತ್ಯಪುತ್ರರೂ ಮಲೆಯಾಳ ರಾಜ್ಯವನ್ನು ಕೇರಳ ಪುತ್ರರೂ ಸ್ವತಂತ್ರವಾಗಿ ಆಳುತ್ತಿದ್ದರೆಂದು ತಿಳಿದುಬರುತ್ತದೆ. ಇದರಿಂದ ಕ್ರಿ. ಪೂ. 263ರ ಮೊದಲೇ ತುಳು ರಾಜ್ಯವು ಕೇರಳದಿಂದ ಬೇರೆಯಾಗಿದೆ ಎನ್ನಬಹುದು. ಇದರ ತರುವಾಯ ಕದಂಬ ವಂಶದವರು ಮೇಲಾಧಿಕಾರಿಗಳಾಗಿ ಆಳುತ್ತಿದ್ದರೆಂದು ಕಾಣುತ್ತದೆ.

# 4 ನೇ ಅಧ್ಯಾಯ.

## (i) ಬನವಾಸಿಯ ಕದಂಬರು.

ಕದಂಬರು ದಕ್ಕಣದ ದಕ್ಷಿಣ ಭಾಗದಲ್ಲಿ ಬಹಳ ಪ್ರಾಚೀನ ಕಾಲದಿಂದ ಆಳುತ್ತಿದ್ದ ವಂಶದವರು. ಇವರು ಮೈಸೂರಿನ ಪಶ್ಚಿಮ ಭಾಗವನ್ನೂ, ಹೈಗ ಅಥವಾ ಉತ್ತರ ಕನ್ನಡ ಜಿಲ್ಲೆಯನ್ನೂ, ತುಳುವ ಅಥವಾ ದಕ್ಷಿಣ ಕನ್ನಡ ಜಿಲ್ಲೆಯನ್ನೂ ಆಳುತ್ತಿದ್ದರು. ಕ್ರಿ. ಪೂ. 1500ರಲ್ಲಿ, ಎಂದರೆ, ರಾಮಾಯಣ ಕಾಲದಲ್ಲಿ ಉತ್ತರ ಹಿಂದೂದೇಶ ದಿಂದ, ದಕ್ಷಿಣಕ್ಕೆ ಪಶ್ಚಿಮಕರಾವಳಿಯ ಮೈದಾನಿನಿಂದ ಕೆಳಗೆ ಇಳಿದು ಬಂದ ಆರ್ಯರ ಒಂದು ಶಾಖೆಯಾಗಿದೆ ಎಂದು ಹೇಳಬಹುದು. ಆದರೆ ಇವರು ಇಲ್ಲಿಯೇ ನೆಲೆನಿಂತು ಇಲ್ಲಿಯ ದ್ರಾವಿಡರೊಡನೆ ಕಲೆತುಹೋದ ರೆಂದೂ ತಿಳಿದುಬರುತ್ತದೆ. ಒಂದು ಕುಟುಂಬವು ಕೊಡಗು ದೇಶದಲ್ಲಿ ನೆಲೆನಿಂತು ಕೊಡಗರ ವಂಶವಾಯಿತು. ಇವರ ರಾಜ್ಯದಲ್ಲಿ ಕನ್ನಡ, ತುಳು, ಕೊಡಗು ಈ ಭಾಷೆಗಳನ್ನು ಮಾತನಾಡುತ್ತಿದ್ದರು. ಇವರು ಕದಂಬ ವೃಕ್ಷವನ್ನು ಪೂಜಿಸುತ್ತಿದ್ದರು. ಈಗ ಪ್ರತಿ ಒಂದು ಹಿಂದೂ ಮನೆಯ ಬಾಗಲಲ್ಲಿ ತುಳಸಿಗಿಡ ಇರುವ ಹಾಗೆಯೇ ಇವರ ಮನೆಯ ಬಾಗಲಲ್ಲಿ ಒಂದು ಕದಂಬ ವೃಕ್ಷವಿತ್ತು.

ಈ ವಂಶದವರು ಕ್ರಿ. ಪೂ. 200ರಿಂದ ಕ್ರಿ. ಶ. 600ರ ವರೆಗೆ ಆಳುತ್ತಿದ್ದರು. ಕಡೆಗೆ ಚಾಲುಕ್ಯರ ಅರಸನಾದ ಕೀರ್ತಿವರ್ಮನು ಇವರನ್ನು ಕ್ರಿ. ಶ. 567ರಲ್ಲಿ ಜಯಿಸಿದನೆಂದು ಶಾಸನಗಳಿಂದ ತೋರುತ್ತದೆ. ಆ ಮೇಲೆ ಈ ವಂಶದವರು ಸಂಸ್ಥಾನಾಧಿಪತಿಗಳಾಗಿ ಚಾಲುಕ್ಯರ ಕೈಕೆಳಗೂ ತರುವಾಯ ಬಂದ ರಾಷ್ಟ್ರಕೂಟರ ಕೈಕೆಳಗೂ ಕಡೆಗೆ 1336ರಲ್ಲಿ ವಿಜಯನಗರ ರಾಜರ ಕೈಕೆಳಗೂ ಇದ್ದರು. ಅನಂತರ ಇವರ ಹೆಸರೇ ಕಾಣುವದಿಲ್ಲ. ಇವರ ಧ್ವಜದಲ್ಲಿ ಹನುಮಂತನೂ

ಮಕುಟದಲ್ಲಿ ಸಿಂಹಲಾಂಛನವೂ ಇತ್ತು. ಇವರು ಅನೇಕ ಅಶ್ವಮೇಧ ಯಾಗಗಳನ್ನು ಮಾಡಿರುತ್ತಾರೆ. ಪಲ್ಲವ ರಾಜರು ಇವರಿಗೆ ಬಹಳ ಉಪದ್ರಕೊಡುತ್ತಿದ್ದರು. ಸಹ್ಯಾದ್ರಿಯ ಮೇಲಣ ಕೋಟೆಗಳೇ ಭದ್ರವಾದ ಆಶ್ರಯವಾಗಿದ್ದುದರಿಂದ ಈ ರಾಜರನ್ನು ಪಲ್ಲವರೂ ಗಂಗರಾಜರೂ ಮುರಿದುಬಿಡುವುದಕ್ಕೆ ಆಗಾಗ್ಯೆ ಪ್ರಯತ್ನಿಸಿದರೂ ಸಾರ್ಥಕವಾಗದೆ ಕದಂಬ ರಾಜ್ಯವು 800 ವರುಷಗಳ ವರೆಗೆ ಯಾರಿಗೂ ಕೈಮುಗಿಯದೆ ಸ್ವತಂತ್ರವಾಗಿ ನಿಂತಿತು. ಇವರಿಗೆ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರಾಜಧಾನಿಗಳಿದ್ದವು. (1) ಬನವಾಸಿ ಅಥವಾ ವೈಜಯಂತಿ. (2) ಪಲಾಶಿಕ ಅಥವಾ ಹಳಶಿ. (3) ಚಿತ್ತಲದುರ್ಗ ಜಿಲ್ಲೆಯ ದೊಡ್ಡೇರಿ ತಾಲೂಕಿನ ಮೊಳಕಾಲುಮೂರಿನಿಂದ 3 ಮೈಲು ಈಶಾನ್ಯಕ್ಕಿರುವ ಉಚಶ್ರಿಂಗಿ. (4) ತ್ರಿಪರ್ವತ ಅಥವಾ ತ್ರಿಕುಟಾಚಲ (ಕಾರ್ಕಳ ತಾಲೂಕಿನ ಉತ್ತರಭಾಗದಲ್ಲಿ). ಈ ಸಂಗತಿಯು ಹಳಶಿಯಲ್ಲಿ ಸಿಕ್ಕಿದ 7 ತಾಮ್ರಶಾಸನಗಳಿಂದಲೂ ಧಾರವಾಡ ಜಿಲ್ಲೆಯ ದೇವಗಿರಿಯಲ್ಲಿ ಸಿಕ್ಕಿದ 3 ಶಾಸನಗಳಿಂದಲೂ ನಿಜವೆಂದು ಕಂಡುಬರುತ್ತದೆ.

ಈ ವಂಶದಲ್ಲಿ ಮಯೂರವರ್ಮ, ಕಂಗುವರ್ಮ, ಭಗೀರಥ, ರಘು, ಭಾಗೀರಥಿ, ಕಕುತ್ಸವರ್ಮ, ಶಾಂತಿವರ್ಮ, ಮೃಗೇಶವರ್ಮ, ರವಿವರ್ಮ, ಹರಿವರ್ಮ ಎಂಬ ಅರಸರು ಆಳಿದರು. ರ್‍ಯಾಸ ದೊರೆಗೆ ಮೈಸೂರಿನ ಕಲಗುಂದದಲ್ಲಿ ಸಿಕ್ಕಿದ, ಶಾಂತಿವರ್ಮನ ಕಾಲದ ಒಂದು ಶಾಸನದಲ್ಲಿ ಈ ವಂಶದ ವಿಷಯ ಈ ಕೆಳಗೆ ಬರೆದ ರೀತಿಯಲ್ಲಿದೆ:— "ಮಾನವ್ಯ ಗೋತ್ರದ ಹರಿತಿಪುತ್ರರೆಂಬ ಒಂದು ಬ್ರಾಹ್ಮಣರ ಕುಟುಂಬವಿತ್ತು. ಈ ಕುಟುಂಬದವರು ತಮ್ಮ ಮನೆಯ ಬಾಗಲಲ್ಲಿ ಕದಂಬ ಮರವನ್ನು ನೆಡುತ್ತಿದ್ದರು. ಇದರಿಂದ ಆ ಕುಟುಂಬಕ್ಕೆ ಕದಂಬರೆಂದು ಹೆಸರು ಬಂತು. ಈ ಕುಟುಂಬದಲ್ಲಿ ಮಯೂರಶರ್ಮನೆಂಬವನು ಹುಟ್ಟಿದನು. ಇವನು ತನ್ನ ಗುರುವಾದ ವೀರಶರ್ಮನೊಡನೆ ಪಲ್ಲವರ ರಾಜಧಾನಿಗೆ ಶಾಸ್ತ್ರವನ್ನು ಕಲಿಯುವುದಕ್ಕೆ ಹೋದನು. ತನ್ನ ಸುತ್ತಮುತ್ತಲೂ

ಇರುವ ರಾಜ್ಯಗಳನ್ನೆಲ್ಲಾ ಜಯಿಸಬೇಕೆಂಬ ಒಂದು ಆಸೆಯು ಪಲ್ಲವ ರಾಜನಿಗೆ ಹುಟ್ಟಿತು. ಆಗ ಮಯೂರಶರ್ಮನು ಇದನ್ನು ಸಹಿಸಲಾರದೆ, ಕ್ಷತ್ರಿಯರಷ್ಟೇ ಶಕ್ತಿಯು ಬ್ರಾಹ್ಮಣರಿಗೂ ಇದೆ ಎಂದು ತೋರಿಸ ಬೇಕೆಂದು ಹಟ ಉಂಟಾಗಿ, ತನ್ನ ಬುದ್ಧಿಶಕ್ತಿಯ ಬಲದಿಂದ ಸೈನ್ಯ ವನ್ನು ಕೂಡಿಸಿ, ಪಲ್ಲವರ ಗಡಿಗಳಲ್ಲಿರುವ ಸೈನ್ಯವನ್ನು ಜಯಿಸಿ, ತ್ರಿಪರ್ವತ ಅಥವಾ ತ್ರಿಕುಟಾಚಲದ ಹತ್ತಿರವಿರುವ ಒಂದು ಕಾಡಿನಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿ, ಕಂದಾಯವನ್ನು ಕೂಡಿಸಲಾರಂಭಿಸಿದನು. ಕಂಚಿಯ ಪಲ್ಲವ ಅರಸನು ಅನೇಕಾವರ್ತಿ ಇವನನ್ನು ಜಯಿಸಲಿಕ್ಕೆ ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಕಡೆಗೆ ಪಲ್ಲವರಾಜನು ಇವನ ಧೈರ್ಯಕ್ಕೆ ಮೆಚ್ಚಿ ಪಶ್ಚಿಮಕರಾವಳಿಯ ರಾಜ್ಯವನ್ನು ಇವನಿಗೆ ಬಿಟ್ಟುಕೊಟ್ಟು ಪಟ್ಟಕಟ್ಟಿದನು*.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ತುಳು ಬ್ರಾಹ್ಮಣರ ಹತ್ತಿರ ವಿರುವ ಮಯೂರವರ್ಮ ಚರಿತ್ರೆ ಎಂಬ ಪುಸ್ತಕದಲ್ಲಿ ಮಯೂರ ವರ್ಮನ ಕಥೆ ಈ ಕೆಳಗೆ ಹೇಳಿದ ರೀತಿಯಲ್ಲಿದೆ:—

ಈಶ್ವರನೂ ಪಾರ್ವತಿಯೂ ಒಂದಾನೊಂದು ದಿವಸ ವಿಮಾನದಲ್ಲಿ ಕೂತು ಸಹ್ಯಾದ್ರಿಯನ್ನು (ಪಶ್ಚಿಮ ಘಟ್ಟ) ನೋಡುವದಕ್ಕೆ ಬಂದರು. ಅವರು ಈ ಪರ್ವತದ ಒದಿಗಳಲ್ಲಿರುವ ಕಾಡುಗಳನ್ನೂ ಮೃಗಪಕ್ಷಿ ಗಳನ್ನೂ ನೋಡುತ್ತಾ ಬಹಳ ಸಂತೋಷದಿಂದ ಇದ್ದರು. ಆಗ ಪಾರ್ವತಿಗೆ ಕದಂಬ ವೃಕ್ಷದ ಬುಡದಲ್ಲಿ ಕುಳಿತಿರುವಾಗ ಒಂದು ಮಗುವು ಹುಟ್ಟಿತು. ಈಶ್ವರನು ಆ ಮಗುವಿಗೆ ಕದಂಬನೆಂಬ ಹೆಸರನ್ನಿಟ್ಟನು. ಈಶ್ವರನು ಆ ಮಗುವಿಗೆ ಪಶ್ಚಿಮಕರಾವಳಿಯ ರಾಜ್ಯ ವನ್ನು ಕೊಟ್ಟನು. ಈ ಕದಂಬನಿಗೆ ವಸು ಎಂಬ ಮಗನು ಹುಟ್ಟಿ ದನು. ಅವನಿಗೆ ಸುಶೀಲೆ ಎಂಬ ಮಗಳು ಹುಟ್ಟಿದಳು. ಅವಳನ್ನು ಸೂರ್ಯವಂಶದ ಹೇಮಾಂಗದನೆಂಬ ಅರಸನಿಗೆ ಮದುವೆಮಾಡಿ

ಕೊಟ್ಟನು. ಅವಳಿಗೆ ಒಂದು ಗಂಡು ಮಗುವು ಹುಟ್ಟಿ ದೊಡ್ಡದಾಗು ವಷ್ಟರಲ್ಲಿ ಹೇಮಾಂಗದನ ರಾಜ್ಯವು ಪರಾಧೀನವಾಯಿತು. ಹೇಮಾಂಗ ದನು ಯುದ್ಧದಲ್ಲಿ ಮಡಿದುಹೋದನು. ಸುಶೀಲೆಯು ಕೂಡಲೇ ಕೆಲವು ಮಂದಿ ಸೇವಕರೊಡನೆ ಹೊರಟು ಸಹ್ಯಪರ್ವತದ ಪಶ್ಚಿಮಕ್ಕೆ ಹರಿಯುವ ಶುಕ್ತಿಮತಿ ನದಿಯ ತೀರಕ್ಕೆ ಬಂದಳು. ಅಲ್ಲಿ ಅವಳು ಈಶ್ವರನ ಧ್ಯಾನಮಾಡುತ್ತಾ ಇದ್ದಳು. ಒಂದಾನೊಂದು ದಿವಸ ವಸಿಷ್ಠ ನೆಂಬ ಒಬ್ಬ ಋಷಿಯು ಕೋಟಿಲಿಂಗೇಶ್ವರನ ಪೂಜೆಮಾಡಿ ಹಿಂತಿರುಗಿ ಹೋಗುವಾಗ, ಸುಶೀಲೆಯನ್ನು ನೋಡಲು, ಅವಳು ವಸಿಷ್ಠನಿಗೆ ನಮಸ್ಕಾರವನ್ನು ಮಾಡಿದಳು. ಋಷಿಯು ಅವಳನ್ನು ಎಬ್ಬಿಸಿ, ಅವಳ ಸಮಾಚಾರವನ್ನೆಲ್ಲಾ ಕೇಳಿದನು. ಇವಳು ತನ್ನ ಸಂಗತಿಯನ್ನು ಇದ್ದಂತೆಯೇ ಹೇಳಿದಳು. ಆಗ ವಸಿಷ್ಠನು ಹೀಗೆ ಹೇಳಿದನು:—"ನಿನ್ನ ಮಗನು ಪ್ರಾಯಭರಿತನಾದ ಮೇಲೆ ನೀನು ಸುಖವನ್ನು ಅನು ಭವಿಸುವಿ. ಆದ್ದರಿಂದ, ನೀನು ಆ ಮಗುವಿನ ಒಳ್ಳಿತಕ್ಕಾಗಿ ಶುಕ್ತಿ ಮತಿ ನದಿಯಲ್ಲಿ ಮಿಂದು, ಮಡಿವಸ್ತ್ರವನ್ನು ಉಟ್ಟು, ಕೋಟಿಲಿಂಗೇ ಶ್ವರನ ಧ್ಯಾನವನ್ನು ಮಾಡುತ್ತಾ ಇದ್ದರೆ, ನಿನ್ನ ಮಗನಿಗೆ ರಾಜ್ಯವು ಪ್ರಾಪ್ತಿಯಾಗುವದು. ಅವನು ಮಯೂರವರ್ಮನೆಂಬ ಹೆಸರಿನಿಂದ ರಾಜ್ಯಭಾರಮಾಡುವನು". ಆಗ ಸುಶೀಲೆಯು ಋಷಿಗೆ ಪೂಜೆಯನ್ನು ಮಾಡಿ ಕಳುಹಿಸಿಕೊಟ್ಟಳು. ಅನಂತರ ಮಯೂರವರ್ಮನು ದೊಡ್ಡವ ನಾಗಿ, ಬನವಾಸಿಯನ್ನು ರಾಜಧಾನಿಯಾಗಿ ಮಾಡಿ, ಪಶ್ಚಿಮಕರಾವಳಿ ಯನ್ನು ಆಳಿಕೊಂಡಿದ್ದನು. ಆಗ ಒಂದು ದಿವಸ ಕಶ್ಯಪನೆಂಬ ಋಷಿಯು ಬನವಾಸಿಗೆ ಬರಲು, ಮಯೂರವರ್ಮನು ಆ ಋಷಿಗೆ ಪೂಜೆಯನ್ನು ಮಾಡಿ, ಸತ್ಕರಿಸಲು, ಅವನು ರಾಜ್ಯದ ಸಮಾಚಾರವನ್ನು ಕೇಳಿ ತಿಳಕೊಂಡು ಹೀಗೆ ಹೇಳಿದನು:—"ವಿದ್ಯಾವಂತರಾದ ಬ್ರಾಹ್ಮಣ ರಿಲ್ಲದ ದೇಶವು ಶೋಭಿಸುವದಿಲ್ಲ. ನಿನ್ನ ರಾಜ್ಯದಲ್ಲಿ ಯಜ್ಞಗಳಿಲ್ಲದೆ ಸರಿ ಕಾಣುವದಿಲ್ಲ". ಆಗ ಮಯೂರವರ್ಮನು ವಿದ್ಯಾವಂತರಾದ

ಬ್ರಾಹ್ಮಣರನ್ನು ಎಲ್ಲಿಂದ ತರಲಿ, ಎಂದು ಕೇಳಲು, ಋಷಿಯು, "ನೀನು ಮೇರುಪರ್ವತದ ದಕ್ಷಿಣದಲ್ಲಿರುವ ಅಹಿಕ್ಷೇತ್ರಕ್ಕೆ ಹೋಗಿ, ಅಲ್ಲಿಂದ ಶಟ್ಕರ್ಮಿಗಳಾದ ಬ್ರಾಹ್ಮಣರನ್ನು ಕರೆದು ತಾ'' ಎಂದು ಹೇಳಿ, ಗೋದಾವರಿ ತೀರಕ್ಕೆ ಹೊರಟುಹೋದನು.

ಮಯೂರವರ್ಮನು ಕೂಡಲೇ ಅಹಿಕ್ಷೇತ್ರಕ್ಕೆ ಹೋಗಿ, ಅಲ್ಲಿ ಸುಮೇಧ ಎಂಬ ಬ್ರಾಹ್ಮಣನನ್ನು ಕಂಡು, ತನ್ನ ಸಂಗತಿಯನ್ನು ಅವನಿಗೆ ತಿಳಿಸಿದನು:— "ನಾನು ಘೋರರಾಷ್ಟ್ರದೇಶದ ಅರಸನು. ಗೋಕರ್ಣದಿಂದ ಪಯಸ್ವಾನಿ ನದಿಯ ವರೆಗಿರುವ ನನ್ನ ರಾಜ್ಯದಲ್ಲಿರುವ ಪರಶುರಾಮನ ಕಾಲದ ಬ್ರಾಹ್ಮಣರು ವಿದ್ಯಾಹೀನರಾಗಿ ಯಜ್ಞಯಾಗಾದಿಗಳನ್ನು ಮಾಡಲು ಅಯೋಗ್ಯರಾಗಿದ್ದಾರೆ. ಯಜ್ಞಯಾಗಾದಿಗಳು ಇಲ್ಲದಿದ್ದರೆ ದೇಶವು ಹಾಳಾಗುತ್ತದೆ''. ಆಗ ಸುಮೇಧನು ತನ್ನ ಊರಿನಿಂದ 32 ಬ್ರಾಹ್ಮಣರ ಕುಟುಂಬಗಳನ್ನು ಹೆಂಡಿರುಮಕ್ಕಳ ಸಹಿತ ಮಯೂರವರ್ಮನೊಡನೆ ಕಳುಹಿಸಿದನು. ಮಯೂರವರ್ಮನು ಅವರನ್ನು ಕರತಂದು, ತನ್ನ ರಾಜ್ಯದ ಈ ಕೆಳಗಿನ ಗ್ರಾಮಗಳಲ್ಲಿ ನಿಲ್ಲಿಸಿದನು. (1) ಕಂದತ್ಪಾಕಾನನದಲ್ಲಿ ಮೂರು ಕುಟುಂಬಗಳು. (2) ಗೋಕರ್ಣದಲ್ಲಿ ನಾಲ್ಕು ಕುಟುಂಬಗಳು. ಶುಕ್ತಿಮತಿ ನದಿ ತೀರದಲ್ಲಿ ಎರಡು ಕುಟುಂಬಗಳು. (4) ಸೀತಾನದಿ ತೀರದಲ್ಲಿ ಗಜಪುರಿಯಲ್ಲಿ ಎರಡು, ಅಜಪುರಿಯಲ್ಲಿ ಎರಡು ಕುಟುಂಬಗಳು. (5) ಉಡುಪಿ (ರಜತಪೀಠದಲ್ಲಿ) ಯಿಂದ ಸ್ವಲ್ಪ ದೂರ ಹತ್ತು ಕುಟುಂಬಗಳು. (6) ನೇತ್ರಾವತಿಯ ಉತ್ತರ ತೀರದಲ್ಲಿ ಒಂಬತ್ತು ಕುಟುಂಬಗಳು.

ಕೆಲವು ಕಾಲದ ನಂತರ ಕಲಿಕಾಲ ಬಂತೆಂದು ರಾಜ್ಯಭಾರವನ್ನು ಮಂತ್ರಿಗೆ ವಹಿಸಿಕೊಟ್ಟು, ಮಯೂರವರ್ಮನು ತಪಸ್ಸಿಗೆ ಹೋದನು. ಮಯೂರವರ್ಮನು ತಂದು ನಿಲ್ಲಿಸಿದ ಒಂದೊಂದೇ ಬ್ರಾಹ್ಮಣ ಕುಟುಂಬವು ಅವರವರ ದೇಶಕ್ಕೆ ಹೊರಟುಹೋಯಿತು. ಮಯೂರವರ್ಮನ ಮಗನಾದ ಚಂದ್ರಾಂಗದನು ದೊಡ್ಡವನಾಗಿ ರಾಜ್ಯಭಾರವನ್ನು ವಹಿಸಿಕೊಳ್ಳುವಷ್ಟರಲ್ಲಿ

ಎಲ್ಲಾ ಕುಟುಂಬಗಳು ಹೊರಟುಹೋಗಿದ್ದವು. ಚಂದ್ರಾಂಗದನು ರಾಜ್ಯ ಭಾರವನ್ನು ವಹಿಸಿಕೊಂಡಾಗ ಬ್ರಾಹ್ಮಣರನ್ನು ತಿರಿಗಿ ಕರತರಿಸಿ, ಅವರಿಗೆ ಭೂಮಿ ಉಂಬಳಿ ಬಿಟ್ಟು, ಬೇಸಾಯ ಮಾಡುವದಕ್ಕೆ ಜನರನ್ನು ಕೊಟ್ಟು, ಈ ಕೆಳಗಿನ ಗ್ರಾಮಗಳಲ್ಲಿ ಅವರನ್ನು ನಿಲ್ಲಿಸಿದನು. **ಪೂರ್ವದಿಕ್ಕಿನ 16 ಗ್ರಾಮಗಳಲ್ಲಿ**—(1) ಶ್ರೀಪಾಡಿಯಲ್ಲಿ ಐದು ಮನೆಗಳು. (2) ಬಡಿಲು ಗ್ರಾಮದಲ್ಲಿ ಎರಡು ಮನೆಗಳು. (3) ಕರಂಬಾರಿನಲ್ಲಿ ಎರಡು ಮನೆಗಳು. (4) ನಾಳದಲ್ಲಿ ಎರಡು ಮನೆಗಳು: (5) ಉಜರೆಯಲ್ಲಿ ಎಂಟು ಮನೆಗಳು. (6) ಕುಂಞಿಮಾರ್ಗದಲ್ಲಿ ಎಂಟು ಮನೆಗಳು. (7) ಕೊಕ್ಕಡದಲ್ಲಿ ನಾಲ್ಕು ಮನೆಗಳು. (8) ರಾಮಕುಂಜದಲ್ಲಿ ಏಳು ಮನೆಗಳು. (9) ಪುದುಗ್ರಾಮದಲ್ಲಿ ನಾಲ್ಕು ಮನೆಗಳು. (10) ಬಳಂಜದಲ್ಲಿ ಮೂರು ಮನೆಗಳು. ಐವನಾಡಿನಲ್ಲಿ ನಾಲ್ಕು ಮನೆಗಳು. (12) ಇಡಿಕಿದು ಗ್ರಾಮದಲ್ಲಿ ಆರು ಮನೆಗಳು. (13) ಕೆಮ್ಮಿಂಜೆಯಲ್ಲಿ ಒಂದು ಮನೆ. (14) ಪಾವಂಜೆಯಲ್ಲಿ ಎರಡು ಮನೆಗಳು. (15) ಸಿರಿಯಾಡಿಯಲ್ಲಿ ಐದು ಮನೆಗಳು. (16) ಕೊಡಿಪಾಡಿಯಲ್ಲಿ ಐದು ಮನೆಗಳು. **ಪಶ್ಚಿಮದ 16 ಗ್ರಾಮಗಳಲ್ಲಿ**: (1) ಕರವೂರಿನಲ್ಲಿ ಎಂಟು ಮನೆಗಳು. (2) ವರ್ಕಾಡಿಯಲ್ಲಿ ಎಂಟು ಮನೆಗಳು. (3) ಮರಣೆಯಲ್ಲಿ ಎರಡು ಮನೆಗಳು. (4) ಕೊಳವಿನಾಡಿನಲ್ಲಿ ಎರಡು ಮನೆಗಳು. (5) ಪಾಡಿಯಲ್ಲಿ ನಾಲ್ಕು ಮನೆಗಳು. (6) ಕೂಡಲಿನಲ್ಲಿ ನಾಲ್ಕು ಮನೆಗಳು. (7) ಮೊಗೆಬೈಲಿನಲ್ಲಿ ನಾಲ್ಕು ಮನೆಗಳು. (8) ನೀರುಮಾರ್ಗದಲ್ಲಿ ಎಂಟು ಮನೆಗಳು. (9) ಮಿತ್ತನಾಡಿನಲ್ಲಿ ನಾಲ್ಕು ಮನೆಗಳು. (10) ಶೀಮಂತೂರಿನಲ್ಲಿ ಎಂಟು ಮನೆಗಳು. (11) ತೆನಕಳದಲ್ಲಿ ಎಂಟು ಮನೆಗಳು. (12) ಶಿವಳ್ಳಿಯಲ್ಲಿ ಆರು ಮನೆಗಳು. (13) ಬ್ರಹ್ಮಾವರದಲ್ಲಿ ನಾಲ್ಕು ಮನೆಗಳು. (14) ನೀಲಾವರದಲ್ಲಿ ನಾಲ್ಕು ಮನೆಗಳು. (15) ಕೋಟದಲ್ಲಿ ಎಂಟು ಮನೆಗಳು. (16) ಕಂದಾವರದಲ್ಲಿ ಎರಡು ಮನೆಗಳು. ಈ 84 ಕುಟುಂಬಗಳನ್ನು ಮೇಲಿನ ಗ್ರಾಮಗಳಲ್ಲಿ ನಿಲ್ಲಿಸಿ, ತುಳುಜನರು ಈ ಬ್ರಾಹ್ಮಣರಿಗೆ

ಮಾನಮರ್ಯಾದೆ ಕೊಟ್ಟು ನಡಿಸಬೇಕೆಂದು ಕಾಯಿದೆಮಾಡಿದನು. ಈಗಲೂ ಹಳ್ಳಿಗಳಲ್ಲಿ ಒಂದನೇ ಮರ್ಯಾದೆಯು ಬ್ರಾಹ್ಮಣರಿಗೆ ಸಲ್ಲುತ್ತದೆ. ಬೇರೆ ಬೇರೆ ಗ್ರಾಮಪದ್ಧತಿಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಈ ಮಯೂರವರ್ಮ ಚರಿತ್ರೆ ಬರೆಯಲ್ಪಟ್ಟಿದೆ. ಫ್ಲೀಟ ಎಂಬ ಇತಿಹಾಸಕಾರನು ಹೇಳುವ ರೀತಿಯಲ್ಲಿ ಈ ಕೆಳಗೆ ಬರೆದಿದೆ.:—

ಮಯೂರವರ್ಮನಿಗೆ ಕಂಗುವರ್ಮನೆಂಬ ಮಗನೂ ಕಂಗುವರ್ಮನಿಗೆ ಭಗೀರಥನೆಂಬ ಮಗನೂ ಭಗೀರಥನಿಗೆ ರಘು ಎಂಬ ಮಗನೂ ಇದ್ದನು. ಈ ರಘುವು ಕದಂಬ ರಾಜ್ಯವನ್ನು ಉನ್ನತ ಸ್ಥಿತಿಗೆ ತಂದನು. ರಘುವಿನ ತಮ್ಮನಾದ ಭಗೀರಥಿ ಎಂಬವನು ಕಾತುತ್ಸನೆಂಬ ಹೆಸರಿನಿಂದ ಪ್ರಸಿದ್ಧಿಪಡೆದನು. ಕಾರ್ತಿಕೇಯ ಅಥವಾ ಮಹಾಸೇನನು ಇವರ ಆರಾಧ್ಯ ದೇವತೆ. ಇವರು ಸಪ್ತಮಾತ್ರಿಕೆಯರನ್ನು ಪೂಜಿಸುತ್ತಿದ್ದರು. ಉಳ್ಳಾಲದ ಹತ್ತಿರ ಸೋಮೇಶ್ವರದಲ್ಲಿ ಕೋಟೆಯ ಮೇಲಿರುವ ಸೋಮೆಶ್ವರ ದೇವಸ್ಥಾನದ ಒಳಸುತ್ತಿನ ದಕ್ಷಿಣ ಜಗಲಿಯಲ್ಲಿ ಸಪ್ತಮಾತ್ರಿಕೆಯರನ್ನು ಪ್ರತಿಷ್ಠಿಸಿದ್ದಾರೆ. ಈ ದೇವಸ್ಥಾನವನ್ನು ಈ ಅರಸನ ಕಾಲದಲ್ಲಿ ಕಟ್ಟಿಸಿರಬಹುದೆಂದು ಊಹಿಸಬಹುದು. ಈ ಕಾಕುತ್ಸನ ಕಾಲದಲ್ಲಿ ಹಳಶಿಯು ರಾಜಧಾನಿಯಾಗಿತ್ತೆಂದು ಹಳಶಿಯ ಶಾಸನದಿಂದ ತಿಳಿದುಬರುತ್ತದೆ.

ಕಾಕುತ್ಸವರ್ಮನ ಮಗನು ಶಾಂತಿವರ್ಮನು. ಇವನ ಮಗನಾದ ಮೃಗೇಶವರ್ಮನ ಕಾಲದಲ್ಲಿ ವೈಜಯಂತಿಯು ರಾಜಧಾನಿಯಾಗಿತ್ತು. ಇವನು ತಲಕಾಡಿನ ಗಂಗಾರಾಜರನ್ನೂ ಪಲ್ಲವರನ್ನೂ ಗೆದ್ದು, ಮಹಾರಾಜ, ವಿಜಯ, ಶಿವಕುಮಾರನೆಂಬ ಬಿರುದುಗಳನ್ನು ಇಟ್ಟುಕೊಂಡನೆಂದೂ ಹಳಶಿಯಲ್ಲಿ ಬಸದಿಗಳನ್ನು ಕಟ್ಟಿಸಿ ಜೈನ ಯತಿಗಳಿಗೆ ಉಂಬಳಿ ಬಿಟ್ಟನೆಂದೂ ಹಳಶಿ ಮತ್ತು ದೇವಗೆರೆಯಲ್ಲಿ ಸಿಕ್ಕಿದ ಇದೇ ಅರಸನ ಕಾಲದ ಶಾಸನದಿಂದ ತಿಳಿಯಬಹುದು. ಈ

ಶಾಸನಕ್ಕೆ ಯಾವ ಶಕದ ವರ್ಷವೂ ಇಲ್ಲ. ಅವನ ಆಳಿಕೆಯ 3ನೇ 8ನೇ ವರ್ಷವೆಂದು ಬರೆದಿದೆ.

ಮೃಗೇಶವರ್ಮನ ಮಗನು ರವಿವರ್ಮನು. ಇವನು ತನ್ನ ರಾಜಧಾನಿಯಾದ ಹಳಶಿಯಲ್ಲಿರುವ ಜೈನರು ನಡಿಯುತಕ್ಕ ಕ್ರಮಗಳನ್ನೂ ಕಾರ್ತಿಕ ಪುಣ್ಣಿಮೆಯ 8 ದಿವಸಗಳಲ್ಲಿ ಜಿನೇಂದ್ರನಿಗೆ ಆಗತಕ್ಕ ಉತ್ಸವಾದಿಗಳ ವಿಷಯಗಳನ್ನೂ ಹಳಶಿಯ ಶಾಸನದಲ್ಲಿ ಬರೆದಿರುವನು. ಇನ್ನೊಂದು ಶಾಸನದಲ್ಲಿ ಇವನು ವಿಷ್ಣುವರ್ಮನನ್ನೂ ಕಂಚಿಯ ಅರಸನಾದ ಚಂಡದಂಡನನ್ನು ಜಯಿಸಿ, ಹಳಶಿಯಲ್ಲಿಯೇ ಸ್ಥಿರವಾಗ ಆಳುತ್ತಿದ್ದನೆಂದು ಬರೆದಿದೆ. ಇವನ ತಮ್ಮನಾದ ಭಾನುವರ್ಮನು ಇವನ ಆಳಿಕೆಯ 11ನೆಯ ವರುಷದಲ್ಲಿ ಹಳಶಿಯ ಜೈನರಿಗೆ ಒಂದು ಉಂಬಳಿ ಬಿಟ್ಟಿದ್ದಾನೆಂದು ಇನ್ನೊಂದು ಶಾಸನದಲ್ಲಿದೆ. ಇವನ ಪೂರ್ವಜರ ಹಾಗೆಯೇ ಇವನೂ ಮಹಾರಾಜನೆಂಬ ಬಿರಿದಿನಿಂದಲೇ ಆಳುತ್ತಿದ್ದನು.

ರವಿವರ್ಮನ ಮಗ ಹರಿವರ್ಮನು ಮಹಾರಾಜನೆಂಬ ಬಿರಿದಿನಿಂದಲೇ ಆಳಿ, ಹಳಶಿಯ 2 ಜೈನ ಬಸದಿಗಳಿಗೆ ಉಂಬಳಿ ಬಿಟ್ಟನೆಂದೂ ಇವನ ಆಳಿಕೆಯ 4ನೇ ಮತ್ತು 5ನೇ ವರ್ಷದ ಶಾಸನದಿಂದ ತಿಳಿಯಬಹುದು.

ಕ್ರಿ. ಶ. 567-598 ವರೆಗೆ ಆಳಿದ ಪಶ್ಚಿಮ ಚಾಲುಕ್ಯರಾಜನಾದ 1ನೇ ಪುಲಿಕೇಶಿಯು ಕದಂಬ ರಾಜನನ್ನು ಸೋಲಿಸಿ, ಬನವಾಸಿಯನ್ನು ಸ್ವಾಧೀನಪಡಿಸಿಕೊಂಡನು. ಆ ಕಾಲವಲ್ಲಿ ಕನ್ನಡ ಜಿಲ್ಲೆಯು ಕದಂಬರ ಅಧಿಕಾರದಿಂದ ತಪ್ಪಿ ಚಾಲುಕ್ಯರ ವಶವಾಯಿತು. ಆದರೆ ಕದಂಬರು ಚಾಲುಕ್ಯರ ಕೈಕೆಳಗೆ ಮಹಾಮಂಡಲೇಶ್ವರರಾಗಿ ಆಳುತ್ತಿದ್ದರು.

## ಕದಂಬರ ವಂಶಾವಳಿ.




## (ii) ಹಂಗಳದ ಕದಂಬರು.

ಬನವಾಸಿಯಲ್ಲಿ ಆಳಿದ ಕದಂಬರ ವಂಶವಲ್ಲದೆ, ಒಂದು ವಂಶವು ಗೋವೆಯಲ್ಲಿಯೂ ಇನ್ನೊಂದು ವಂಶವು ಧಾರವಾಡ ಜಿಲ್ಲೆಯ ಹಂಗಳ ತಾಲೂಕಿನ ಹನುಮುಗಳ ಅಥವಾ ಪನುಮುಗಳದಲ್ಲಿಯೂ ಆಳಿ ಕೊಂಡಿದ್ದವು. ಹಂಗಳದಲ್ಲಿ ಆಳಿದ ಕದಂಬರಿಗೆ ಹಂಗಳದ ಕದಂಬರೆಂದು ಹೆಸರು. ಈ ಹಂಗಳ ರಾಜ್ಯಕ್ಕೆ 500 ಗ್ರಾಮಗಳಿದ್ದವು. ಇವರ ರಾಜಧಾನಿಯಾದ ಹಂಗಳಕ್ಕೆ ಪಂತಿಪುರ, ವಿರಾಟಪುರ, ವಿರಾಟನ ಕೋಟೆ, ವಿರಾಟನಗರ ಎಂಬ ಹೆಸರುಗಳೂ ಇದ್ದವು. ಇವರು

ಕೆಲವು ಕಾಲದ ವರೆಗೆ ಬನವಾಸಿಯ 12 ಸಾವಿರ ಸೀಮೆಯನ್ನು ಆಳುತ್ತಿದ್ದರು. ಇವರಿಗೆ ಬನವಾಸಿಪುರಾಧೀಶ್ವರರು ಎಂಬ ಹೆಸರೂ ಇತ್ತು. ಇವರ ಧ್ವಜದಲ್ಲಿ ಹನುಮಂತನೂ ಕಿರೀಟದಲ್ಲಿ ಸಿಂಹ ಲಾಂಛನವೂ ಇತ್ತು. ಬನವಾಸಿಯ ಅಥವಾ ಜಯಂತೀಪುರದ ಮಧುಕೇಶ್ವರನೇ ಇವರ ಕುಲದೇವರು. ಇವರ ವಿಷಯದ ಶಾಸನ ಗಳು ಹಂಗಳ ತಾಲೂಕಿನಲ್ಲಿ ಮಾತ್ರವೇ ಸಿಕ್ಕಿವೆ.



ಬನವಾಸಿಯ ಮಧುಕೇಶ್ವರನ ದೇವಸ್ಥಾನ.

ಈ ವಂಶದ ವಿಷಯ ಹಂಗಳ ತಾಲೂಕಿನ ಕಗುರ್ದಾರಿ ಎಂಬ ಊರಿನಲ್ಲಿ ಸಿಕ್ಕಿದ ಒಂದು ಶಿಲಾಶಾಸನದಲ್ಲಿ ವಿವರವಾಗಿ ಬರೆದಿದೆ. ಈ ಶಾಸನದ ಆಧಾರದಿಂದಲೂ ಇನ್ನೂ ಕೆಲವು ಶಾಸನಗಳ ಆಧಾರ ದಿಂದಲೂ ಈ ವಂಶದಲ್ಲಿ ಆಳಿದ ಅರಸರ ವಿಷಯ ತಿಳಕೊಳ್ಳ ಬಹುದು. ಅರಸರ ಹೆಸರುಗಳು ಯಾವವೆಂದರೆ:—1. 1ನೇ ಮಯೂರ ವರ್ಮ. 2. ಕೃಷ್ಣವರ್ಮ. 3. 1ನೇ ನಾಗವರ್ಮ. 4. ವಿಷ್ಣು ವರ್ಮ. 5. ಮೃಗವರ್ಮ. 6. ಸತ್ಯವರ್ಮ. 7. ವಿಜಯವರ್ಮ.

8. 1ನೇ ಜಯವರ್ಮ. 9. 2ನೇ ನಾಗವರ್ಮ. 10. 1ನೇ ಶಾಂತಿವರ್ಮ. 11. 1ನೇ ಕೀರ್ತಿವರ್ಮ. 12. ಆದಿತ್ಯವರ್ಮ. 13. ಚಟ್ಟ, ಚಟ್ಟಯ ಅಥವಾ ಚಟ್ಟುಗ. 14. 2ನೇ ಜಯವರ್ಮ. 15. 2ನೇ ಶಾಂತಿವರ್ಮ. 16. 2ನೇ ಕೀರ್ತಿವರ್ಮ. 17. 2ನೇ ತೈಲಪ. 18. 2ನೇ ಮಯೂರವರ್ಮ. 19. ಮಲ್ಲಿಕಾರ್ಜುನ. 20. ತೈಲಮ. 21. ಕಾಮದೇವ. ಈ 21 ಅರಸರಲ್ಲಿ ಆದಿತ್ಯವರ್ಮನ ವರೆಗಿನ ಅರಸರ ವಿಷಯ ಏನೊಂದು ಸಂಗತಿಯು ತಿಳಿಯುವದಿಲ್ಲ. ಚಟ್ಟ, ಅಥವಾ ಚಟ್ಟುಗನ ತರುವಾಯ ಆಳಿದ ಅರಸರ ವಿಷಯ ಅಲ್ಪಸ್ವಲ್ಪ ಸಂಗತಿಗಳು ತಿಳಿದುಬಂದಿವೆ.

2ನೇ ಕೀರ್ತಿವರ್ಮನು ಕ್ರಿ. ಶ. 1068ರಿಂದ 1077ರ ವರೆಗೆ ಪಶ್ಚಿಮ ಚಾಲುಕ್ಯರ ಅರಸರಾದ 1ನೇ ಸೋಮೇಶ್ವರನ ಮತ್ತು 6ನೇ ವಿಕ್ರಮಾದಿತ್ಯನ ಮಹಾಮಂಡಲೇಶ್ವರನಾಗಿ ಬನವಾಸಿಯಲ್ಲಿ ಆಳುತ್ತಿದ್ದನು. ಎರಡನೇ ಶಾಂತಿವರ್ಮನು ಕ್ರಿ. ಶ. 1077ರಿಂದ 1089ರ ವರೆಗೆ ಚಾಲುಕ್ಯರ 6ನೇ ವಿಕ್ರಮಾದಿತ್ಯನ ಮಹಾಮಂಡಲೇಶ್ವರನಾಗಿ ಬನವಾಸಿಯ 12 ಸಾವಿರ ಸೀಮೆಯನ್ನೂ ಹನುಮಗಳ 5 ಸಾವಿರ ಸೀಮೆಯನ್ನೂ ಆಳುತ್ತಿದ್ದನು. ಪಾಂಡ್ಯವಂಶದ ಶಿರಿಯಾದೇವಿಯು ಇವನ ರಾಣಿಯಾಗಿದ್ದಳು.

ಮಹಾಮಂಡಲೇಶ್ವರ 2ನೇ ತೈಲಪನು ಕ್ರಿ ಶ. 1099ರಿಂದ 1135ರ ವರೆಗೆ ಮೊದಲು ಚಾಲುಕ್ಯರ 6ನೇ ವಿಕ್ರಮಾದಿತ್ಯನ ಕೈಕೆಳಗೂ ಬಳಿಕ 3ನೇ ಸೋಮೇಶ್ವರನ ಕೈಕೆಳಗೂ ಬನವಾಸಿಯಲ್ಲಿಯೂ ಪಂತಿಪುರದಲ್ಲಿಯೂ ಆಳುತ್ತಿದ್ದನು. ಕ್ರಿ. ಶ. 1135ರಲ್ಲಿ ಹೊಯ್ಸಳ ರಾಜನಾದ ವಿಷ್ಣುವರ್ಧನನು ಹಂಗಳಕ್ಕೆ ಮುತ್ತಿಗೆ ಹಾಕಿ ಅದನ್ನು ಹಿಡಿಯುವಾಗ ಯುದ್ಧದಲ್ಲಿ ತೈಲಪನು ಮಡಿದುಹೋದನು.

2ನೇ ಮಯೂರವರ್ಮನು ಕ್ರಿ. ಶ. 1131ರಲ್ಲಿ ಪಶ್ಚಿಮ ಚಾಲುಕ್ಯರ 3ನೇ ಸೋಮೇಶ್ವರನ ಕೈಕೆಳಗೆ ಮಹಾಮಂಡಲೇಶ್ವರನಾಗಿ

ಬನವಾಸಿಯ 12 ಸಾವಿರ ಸೀಮೆಯನ್ನೂ, ಹನುಮುಗಳ 500 ಸೀಮೆಯನ್ನೂ, ಸಾಂತಳಿಗೆ ಸಾವಿರ ಸೀಮೆಯನ್ನೂ ಆಳುತ್ತಿದ್ದನು.

ಮಲ್ಲಿಕಾರ್ಜುನನು ಕ್ರಿ. ಶ. 1132ರಲ್ಲಿಯೂ ಕ್ರಿ. ಶ. 1138 ರಲ್ಲಿಯೂ ಚಾಲುಕ್ಯರ ಅರಸನಾದ 3ನೇ ಸೋಮೇಶ್ವರನ ಕೈಕೆಳಗೆ ಮಂಡಲೇಶ್ವರನಾಗಿಯೂ, ಕ್ರಿ. ಶ. 1145ರಲ್ಲಿ 2ನೇ ಪ್ರೇಮಜಗ ದೇಕಮಲ್ಲನ ಕೈಕೆಳಗೂ ಬನವಾಸಿ ಮತ್ತು ಹನುಮುಗಳ ರಾಜ್ಯ ವನ್ನು ಆಳುತ್ತಿದ್ದನು.

ತೈಲಮನು ಕ್ರಿ. ಶ. 1147ರಲ್ಲಿ 2ನೇ ಪ್ರೇಮಜಗದೇಕಮಲ್ಲನ ಕೈಕೆಳಗೆ ಹನುಮುಗಳ 500 ಸೀಮೆಯನ್ನು ಆಳುತ್ತಿದ್ದನು.

ಕಾಮದೇವ, ಕಾವದೇವ ಅಥವಾ ತೈಲಮ ಅಂಕಕಾರ ಎಂಬ ಅರಸನು ಕ್ರಿ. ಶ. 1181ರಲ್ಲಿ ಆಳಲಾರಂಭಿಸಿದನೆಂದು ಹೇಳಬಹುದು. ಇವನು ಪಶ್ಚಿಮ ಚಾಲುಕ್ಯರ 4ನೇ ಸೋಮೇಶ್ವರನ ಕೈಕೆಳಗೆ ಮಹಾ ಮಂಡಲೇಶ್ವರನಾಗಿ ಬನವಾಸಿಯ 12 ಸಾವಿರ ಸೀಮೆಯನ್ನೂ, ಹನುಮ ಗಳ 500 ಸೀಮೆಯನ್ನೂ, ಲಕ್ಷ್ಮೀಶ್ವರ 300 ಸೀಮೆಯನ್ನೂ ಆಳಿಕೊಂಡಿದ್ದನು. ಇವನ ರಾಣಿಯು ಕೇತಲಾದೇವಿ. ಕ್ರಿ. ಶ. 1189 ರಲ್ಲಿ ಇವನು ಪಶ್ಚಿಮ ಘಟ್ಟಗಳ ಬುಡದಲ್ಲಿರುವ ಸೀಮೆಯನ್ನೂ ಮಲೆನಾಡುಗಳನ್ನೂ ಕೊಂಕಣವನ್ನೂ ಜಯಿಸಿದನು. ಆಗ ತುಳು ರಾಜ್ಯದಲ್ಲಿ ನಾಡವರು ಅಥವಾ ಬಂಟರು ದಂಗೆ ಎಬ್ಬಿಸಿ, ಜೈನ ರಾಜ್ಯಗಳನ್ನು ತಮ್ಮ ಸ್ವಾಧೀನ ಮಾಡಿಕೊಳ್ಳಲು ಪ್ರಾರಂಭಿಸಿದರು. ಬದ್ಧದಾಸ ಪಾಂಡ್ಯನೆಂಬವನು ತನ್ನ ಜಾತಿಯ ನಾಡವರನ್ನು ಕೂಡಿಸಿ, ಬಾರ್ಕೂರು ಪಟ್ಟಣವನ್ನು ಹಿಡಿದು, ಕ್ರಿ. ಶ. 1178ರಲ್ಲಿ ತನ್ನ ಸ್ವಾಧೀನ ಮಾಡಿಕೊಂಡು, ಚಂದ್ರಗಿರಿ (ಪಯಸ್ವಾನಿನದಿ) ನದಿ ಯಿಂದ ಶುಕ್ತಿಮತಿನದಿಯ ವರೆಗಿನ ರಾಜ್ಯವನ್ನು ಹಿಡಿದು ಕೊಂಡನು; ಮತ್ತು ಬೈಂದೂರು ಪರಿಯಂತರ ರಾಜ್ಯವಾಳತೊಡಗಿದನು.

ವೇಣೂರು ರಾಜ್ಯದಲ್ಲಿರುವ ಜೈನ ರಾಣಿಯನ್ನು ಓಡಿಸಿ, ಬಂಟರು ಆಳತೊಡಗಿದರು. ಈ ದಂಗೆ ಎಬ್ಬಿಸಿದ ಸಂಗತಿಯು ಕಾಮದೇವನಿಗೆ ಗೂಢಚಾರರ ಮುಖಾಂತರ ತಿಳಿಯಿತು. ಕಾಮದೇವನು ಕೂಡಲೇ ಸೈನ್ಯವನ್ನು ತೆಗೆದುಕೊಂಡು ಹೊರಟು ತುಳುರಾಜ್ಯಕ್ಕೆ ಬಂದು, ಕ್ರಿ. ಶ. 1189ರಲ್ಲಿ ಬಂಟರ ದಂಗೆಯನ್ನು ನಿಲ್ಲಿಸಿ, ಜೈನ ರಾಜ್ಯವನ್ನು ಮುಂಚಿನ ಅರಸರಿಗೆ ಬಿಡಿಸಿಕೊಟ್ಟು, ಕುಂಬಳೆಯಲ್ಲಿ ತನ್ನ ಮಗಳಾದ ಸುಶೀಲೆಗೆ ಪಯಸ್ವಿನಿನದಿಯ ಉತ್ತರ ದಿಕ್ಕಿನ ರಾಜ್ಯವನ್ನು ಬಿಟ್ಟುಕೊಟ್ಟು, ತಿರಿಗಿ ಬನವಾಸಿಗೆ ಹೋದನು.

ಕ್ರಿ. ಶ 1196ರಲ್ಲಿ ಹೊಯ್ಸಳ ರಾಜನಾದ 2ನೇ ವೀರಬಲ್ಲಾಳನು ಹಂಗಳದ ಹತ್ತಿರವಿರುವ ಆನೆಕೆರೆಯ ಹತ್ತಿರ ಸೈನ್ಯವನ್ನು ಇಳಿಸಿ, ಹಂಗಳ ಪಟ್ಟಣವನ್ನು ಮುತ್ತಿಗೆಹಾಕಿ, ಹಿಡಿಯಲು ಸಾಧಿಸಿದನು. ಆದರೆ ಕಾಮದೇವನ ಸೇನಾಧಿಪತಿಯಾದ ಸೊಹಾನಿಯು ವೀರಬಲ್ಲಾಳನನ್ನು ಸೋಲಿಸಿದನು. ಆದರೆ ವೀರಬಲ್ಲಾಳನು ತಿರಿಗಿ ದೊಡ್ಡ ಸೈನ್ಯವನ್ನು ತಂದು, ಈ ಅರಸನನ್ನು ಪೂರ್ಣವಾಗಿ ಸೋಲಿಸಿ, ಈ ರಾಜ್ಯವನ್ನು ತನ್ನ ರಾಜ್ಯಕ್ಕೆ ಕೂಡಿಸಿದನು. ಕಾಮದೇವನು ಕ್ರಿ. ಶ. 1203ರಲ್ಲಿಯೂ ವೀರಬಲ್ಲಾಳನ ಸಂಗಡ ಯುದ್ಧಮಾಡುತ್ತಿದ್ದನೆಂದು ಕೆಲವು ಶಾಸನಗಳಲ್ಲಿದೆ. ಅನಂತರ ಈ ಕಾಮದೇವನ ವಿಷಯ ಏನೂ ತಿಳಿದುಬರುವದಿಲ್ಲ.

# ಹಂಗಳದ ಕದಂಬರು.

ಚಟ್ಟ ಚಟ್ಟಯ ಅಥವಾ ಚಟ್ಟಗ

- 2ನೇ ಜಯವರ್ಮ ಅಥವಾ ಜಯಸಿಂಹ
  - ಮಾವುಲಿದೇವ
  - ತೈಲ ಅಥವಾ 1ನೆ ತೈಲಪ (ರಾಣಿ ಚಾವುಂಡಲಾದೇವಿ)
    - 2ನೇ ಕೀರ್ತಿವರ್ಮ ಅಥವಾ 1ನೇ ಕೀರ್ತಿದೇವ (ಕ್ರಿ. ಶ. 1068-69-1077-78
  - 2ನೇ ಶಾಂತಿವರ್ಮ ಶಾಂತ ಅಥವಾ ಸಾಂತಯ (ರಾಣಿ ಸಿರಿಯಾದೇವಿ) (ಕ್ರಿ. ಶ. 1075-1089)
    - ತೈಲ ಅಥವಾ 2ನೇ ತೈಲಪ (ರಾಣಿ ಬಚ್ಚಲಾದೇವಿ ಮತ್ತು ಚಾಮಲಾದೇವಿ) (ಕ್ರಿ. ಶ. 1099-1129)
      - 2ನೇ ಮಯೂರವರ್ಮ (ಕ್ರಿ. ಶ. 1131)
      - ಮಲ್ಲಿಕಾರ್ಜುನ (ಕ್ರಿ. ಶ. 1132-1145)
      - ತೈಲಮ
        - 2ನೇ ಕೀರ್ತಿದೇವ
        - ಕಾಮದೇವ ರಾಣಿ ಕೇತಲಾ ದೇವಿ ಕ್ರಿ. ಶ. 1181-82-1203
  - ಜೊಕಿದೇವ ಅಥವಾ ಜೊಕಿದೇವ
  - ವಿಕ್ರಮ ಅಥವಾ ವಿಕ್ರಮಾಂಕ

# 5 ನೇ ಅಧ್ಯಾಯ.

## ಜೈನರೂ ಜಿನಮತವೂ.

ಜೈನಮತವು ಬೌದ್ಧಮತದ ಒಂದು ಶಾಖೆ ಎಂದು ಕೆಲವರು ಹೇಳುವದಾದರೂ ಅದು ಒಂದು ಶಾಖೆಯಲ್ಲ; ಅದು ಒಂದು ಪ್ರತ್ಯೇಕ ಮತವಾಗಿದೆ. ಬೌದ್ಧಮತವೂ ಜೈನಮತವೂ ಕ್ರಿಸ್ತ ಪೂರ್ವ 6ನೇ ಶತಮಾನದಲ್ಲಿ ಉಂಟಾದವು. ಈ ಶತಮಾನದಲ್ಲಿ ಮತಸಂಬಂಧವಾದ ಅನೇಕ ಸುಧಾರಣೆಗಳು ಉಂಟಾದವು; ತತ್ವಜ್ಞಾನವೂ ಉನ್ನತ ಸ್ಥಿತಿಯನ್ನು ಹೊಂದಿತು. ಕ್ಷತ್ರಿಯರು ಬ್ರಾಹ್ಮಣರ ಮತವನ್ನೂ ತತ್ವ ಜ್ಞಾನವನ್ನೂ ಪರಿಶೋಧಿಸಿ ಕಲಿಯಲಾರಂಭಿಸಿದರು. ಬ್ರಾಹ್ಮಣರಷ್ಟೇ ಮತಸಂಬಂಧದ ಹಕ್ಕುಗಳು ಮತ್ತು ಸ್ವಾತಂತ್ರ್ಯಗಳು ಕ್ಷತ್ರಿಯರಿಗೂ ಉಂಟೆಂದು ದೃಢಪಡಿಸಿದರು. ಕ್ಷತ್ರಿಯರು ಋಷಿಗಳಾಗಕೂಡದೆಂದು ಬ್ರಾಹ್ಮಣರು ಬಹಳ ಸಾಧಿಸಿದರು. ಆದರೆ ಕ್ಷತ್ರಿಯರು ಇದಕ್ಕೆ ಕಿವಿಗೊಡಲಿಲ್ಲ. ಆದುದರಿಂದ ಬ್ರಾಹ್ಮಣ ಮತದಲ್ಲಿ ಅನೇಕ ಭೇದಗಳು ಉಂಟಾದವು. ಜೈನಮತವು ಬ್ರಾಹ್ಮಣರ ಜಾತಿಭೇದಕ್ಕೆ ವಿರೋಧವಾಗಿ ಉಂಟಾದ್ದಲ್ಲ; ಆದರೆ ಬ್ರಾಹ್ಮಣರೇ ಮತಸಂಬಂಧವಾದ ಎಲ್ಲಾ ಕೆಲಸಗಳಿಗೂ ಹಕ್ಕುದಾರರಲ್ಲದೆ ಬೇರೆ ಯಾವ ಜಾತಿಯವರೂ ಹಕ್ಕುದಾರರಲ್ಲ ಎಂಬ ಸೂತ್ರಕ್ಕೆ ಮಾತ್ರವೇ ವಿರೋಧವಾಗಿ ಉಂಟುಮಾಡಿದ್ದಾಗಿರುತ್ತದೆ.

ಈ ಮತಸ್ಥಾಪಕನು ವರ್ಧಮಾನ ಮಹಾವೀರನು. ವರ್ಧಮಾನನು ನಾಥ ಅಥವಾ ನಾಯ ಎಂಬ ಕ್ಷತ್ರಿಯ ವಂಶಕ್ಕೆ ಸೇರಿದ ಸಿದ್ಧಾರ್ಥ ಎಂಬ ಅರಸನ ಮಗನು. ಈ ವಂಶದವರು ಪಾಟ್ನಾ ಪಟ್ಟಣದಿಂದ 27 ಮೈಲು ಉತ್ತರಕ್ಕೆ ಇರುವ ವೈಸಾಲಿ ಎಂಬಲ್ಲಿದ್ದರು. ವರ್ಧಮಾನನ ತಾಯಿಯಾದ ತ್ರಿಕಾಲಾ ಎಂಬವಳು ಲಚ್ಛೀವಿದೇಶದ ವೈಸಾಲಿಯಲ್ಲಿ ರಾಜನಾದ ಕಟಕ ಎಂಬವನ ಸಹೋದರಿ. ಮಗಧದೇಶದ

ಅರಸನಾದ ಬಿಂಬಸಾರನಿಗೂ ವಿದೇಹ ದೇಶದ ಅರಸನಿಗೂ ವೈಸಾಲಿಯ ರಾಜನಾದ ಕಟಕನಿಗೂ ಸಂಬಂಧವಿದ್ದಿತು.

ವರ್ಧಮಾನನು ಕ್ರಿ ಪೂ. 599ಲ್ಲಿ ಹುಟ್ಟಿದನು. ಇವನು ಯಶೋದಾ ಎಂಬವಳನ್ನು ಮದುವೆಯಾಗಿ ತಂದೆಯ ಅರಮನೆಯಲ್ಲಿಯೇ ಸುಖದಿಂದ ಇದ್ದನು. ಆ ಮೇಲೆ ಇವನೂ ಬುದ್ಧನ ಹಾಗೆಯೇ ಲೋಕಾಚಾರದ ಸಂಗತಿಗಳನ್ನೆಲ್ಲಾ ಬಿಟ್ಟು ಸನ್ಯಾಸಿಯಾದನು. ಇವನಿಗಿಂತಲೂ ಬಹಳ ಹಿಂದೆ ಕ್ರಿ. ಪೂ. 8ನೇ ಶತಮಾನದಲ್ಲಿ ಪಾರ್ಶ್ವನಾಥನೆಂಬ ಒಬ್ಬ ಋಷಿಯು ನಾಥವಂಶದ ಕ್ಷತ್ರಿಯರಿಗೋಸ್ಕರ ಒಂದು ಸನ್ಯಾಸಾಶ್ರಮವನ್ನು ಸ್ಥಾಪಿಸಿದನು. ಚೋಟಾ ನಾಗಪುರದಲ್ಲಿ ಅತೀ ಎತ್ತರವಾದ (4500 ಅಡಿ) ಪರ್ವತಕ್ಕೆ ಪಾರ್ಶ್ವನಾಥ ಎಂದು ಇವನಿಂದಲೇ ಹೆಸರು ಬಂದಿದೆ. ಈ ಪರ್ವತದ ಮೇಲೆ ಜೈನರಿಗೆ ಬಹಳ ಪ್ರಸಿದ್ಧವಾದ ಬಸದಿಗಳಿವೆ. ವರ್ಧಮಾನನು ತನ್ನ 30ನೇ ವರುಷ ಪ್ರಾಯದಲ್ಲಿ ಈ ಮತವನ್ನವಲಂಬಿಸಿ ಸನ್ಯಾಸಿಯಾದನು. ಆ ಪಾರ್ಶ್ವನ ಮತವು ಇವನಿಗೆ ಒಪ್ಪಲಿಲ್ಲ. ಎರಡು ವರುಷಗಳ ನಂತರ, ಇವನು ಆ ಮತವನ್ನು ಬಿಟ್ಟು, ಬೀಹಾರ ದೇಶದಲ್ಲೆಲ್ಲಾ ಸಂಚರಿಸಿದನು. ಆ ಮೇಲೆ ಇವನು ನಿರ್ಗ್ರಂಥ, ಎಂದರೆ, ಯಾವ ಬಂಧನೆಯಲ್ಲಿಯೂ ಇಲ್ಲದವನು ಎಂದೆಂದುಕೊಂಡು, ಲೋಕಾಚಾರದ ಯಾವ ಸಂಗತಿಗಳಿಗೂ ಕಿವಿಗೊಡದೆಯೂ, ವಸ್ತ್ರವನ್ನು ಸಹ ಉಟ್ಟುಕೊಳ್ಳದೆಯೂ, ಬತ್ತಲೆಯಾಗಿ ತಿರುಗಾಡಿದನು. ಹನ್ನೆರಡು ವರುಷಗಳ ವರೆಗೂ ಇವನ ಬೋಧನೆಗೆ ಯಾರೂ ಕಿವಿಗೊಡಲಿಲ್ಲ. ಕಡೆಗೆ ಇವನು ಜಿನ, ಎಂದರೆ, ಪರಿಶುದ್ಧನು ಎನ್ನಿಸಿಕೊಂಡನು. ಮತ್ತು ಇವನ ಮತವನ್ನವಲಂಬಿಸಿದವರಿಗೆ ಜೈನರೆಂದು ಕರೆದರು. ಇವನು ಬುದ್ಧನಿಗಿಂತಲೂ ಪ್ರಾಯದಲ್ಲಿ 42 ವರುಷಕ್ಕೆ ದೊಡ್ಡವನು. ವರ್ಧಮಾನನು ತನ್ನ ಮತವನ್ನು ಮಗಧ, ವಿದೇಹ, ಅಂಗ (ಬಂಗಾಲ ಬೀಹಾರ) ದೇಶಗಳಲ್ಲಿ ಬೋಧಿಸಿದನು. ಕ್ರಿ. ಪೂ. 527ರಲ್ಲಿ ಇವನು ತನ್ನ 72ನೇ ವರುಷ ಪ್ರಾಯದಲ್ಲಿ ಪಾಟ್ನಾ ಜಿಲ್ಲೆಯ

'ಪಾವಾ' ಎಂಬಲ್ಲಿ ಕಾಲವಾದನು. ಪಾವಾ—ಇದು ಜೈನರ ಯಾತ್ರಾ ಸ್ಥಳಗಳಲ್ಲಿ ಒಂದಾಗಿದೆ. ವರ್ಧಮಾನಮಹಾವೀರನಿಗೆ 12 ಮಂದಿ ಶಿಷ್ಯರಿದ್ದರು. ಈ ಶಿಷ್ಯರಲ್ಲಿ ಕೇವಳಿ, ಶ್ರುತಕೇವಳಿ, ದಶಪೂರ್ವಿಗಳು ಎಂಬ ಮೂರು ತರದ ಶಿಷ್ಯರಿದ್ದರು. ಈ 12 ಮಂದಿ ಶಿಷ್ಯರಲ್ಲಿ ಗೋಸಾಲಾ ಎಂಬವನು ಒಂದು ಹೊಸ ಮತವನ್ನು ಸ್ಥಾಪಿಸಿದನು.

## ಜೈನರು ದಕ್ಷಿಣ ಹಿಂದೂ ದೇಶಕ್ಕೆ ಬಂದುದು.

ಮಹಾವೀರನು ಕಾಲವಾದ ಸುಮಾರು 200 ವರುಷಗಳ ತರುವಾಯ, ಎಂದರೆ, ಕ್ರಿ. ಪೂ. 310ರಲ್ಲಿ ಜೈನರ ತವರುಮನೆಯಾಗಿದ್ದ ಮಗಧಾ ದೇಶದಲ್ಲಿ ದೊಡ್ಡ ಬರಗಾಲವು ಬಂದಿತ್ತು. ಈ ಬರಗಾಲವು 12 ವರುಷಗಳ ವರೆಗೂ ಇತ್ತು. ಚಂದ್ರಗುಪ್ತ ಮೌರ್ಯನು ಆ ಸಮಯದಲ್ಲಿ ರಾಜ್ಯವನ್ನಾಳುತ್ತಿದ್ದನು. ಆಗ ಜೈನರ ಗುರುವಾಗಿಯೂ ಮಹಾವೀರನ ಶಿಷ್ಯರಲ್ಲಿ ಕಡೇ ಕೇವಳಿಯಾಗಿಯೂ ಆಗಿದ್ದ, ಭದ್ರಬಾಹುವು ತನ್ನ ಶಿಷ್ಯರಲ್ಲಿ ಅನೇಕರನ್ನು ಕರಕೊಂಡು, ಈ ಬರಗಾಲದಿಂದ ರಕ್ಷಿಸುವದಕ್ಕಾಗಿ ಕರ್ಣಾಟಕ ದೇಶಕ್ಕೆ ಬಂದನು. ಹಳೆಗನ್ನಡದಲ್ಲಿ ಬರೆದ ಜೈನರಾಮಾಯಣದ ಪ್ರಕಾರ ಚಂದ್ರಗುಪ್ತ ಮೌರ್ಯನು ತಾನು ಕಾಲವಾಗುವ 12 ವರುಷಗಳ ಮೊದಲು ರಾಜ್ಯ ಭಾರವನ್ನು ತನ್ನ ಮಗನಿಗೆ ಬಿಟ್ಟುಕೊಟ್ಟು ಸನ್ಯಾಸವನ್ನು ಅವಲಂಬಿಸಿ, ಭದ್ರಬಾಹುವಿನ ಶಿಷ್ಯನಾಗಿ, ಅವನ ಸಂಗಡ ಮೈಸೂರಿಗೆ ಬಂದು, ಭದ್ರಬಾಹುವಿನ ಮರಣಕಾಲದಲ್ಲಿ ಅವನೊಡನೆಯೇ ಇದ್ದನೆಂದು ತಿಳಿಯುತ್ತದೆ. ಚಂದ್ರಗುಪ್ತನು 12 ವರುಷಗಳ ತರುವಾಯ, ಒಂದು ಗುಡ್ಡದ ಮೇಲೆ ಕಾಲವಾದನೆಂದೂ, ಆ ಗುಡ್ಡಕ್ಕೆ ಚಂದ್ರಗಿರಿ ಎಂಬ ಹೆಸರಾಯಿತೆಂದೂ ತಿಳಿದುಬರುತ್ತದೆ. ಈಗ ಆ ಬೆಟ್ಟದ ಮೇಲಿರುವ ಬಸದಿಗೆ ಈಗಲೂ ಚಂದ್ರಗುಪ್ತಬಸದಿ ಎಂದು ಹೆಸರಿದೆ. ಇದರ ಹತ್ತಿರವೇ ಶ್ರಾವಣಬೆಳುಗುಳದಲ್ಲಿ 90 ಅಡಿ ಎತ್ತರವಾದ ಬಿಳಿಯ ಶಿಲೆ

ಯಿಂದ ತಯಾರಿಸಿದ ಗೋಮಟೇಶ್ವರನ ಪ್ರತಿಮೆಯು ಈಗಲೂ ಅಲ್ಲಿ ಇದೆ. ಇದನ್ನು ಕ್ರಿ. ಶ. 100ರಿಂದ 1000 ವರೆಗೆ ಗಂಗವಾಡಿಯಲ್ಲಿ (ಮೈಸೂರಿನ ಭಾಗ) ಆಳಿದ ಗಂಗವಂಶದ ಅರಸರಲ್ಲಿ ಚಾಮುಂಡ ರಾಯನೆಂಬ ಜೈನ ಅರಸನು ಮಾಡಿಸಿದನು. ಶ್ರಾವಣಬೆಳುಗುಳದ ಶಾಸನಗಳಿಂದ ಇವೆಲ್ಲಾ ಸಂಗತಿಗಳು ನಿಜವಾಗಿ ನಡೆದ ಸಂಗತಿಗಳೆಂದು ಈಗ ತಿಳಿದು ಬಂದದೆ.

ದಕ್ಷಿಣ ದೇಶಕ್ಕೆ ಬಾರದೆ ಬೀಹಾರ ದೇಶದಲ್ಲಿಯೇ ನಿಂತ ಜೈನರಿಗೆ ಸ್ಥೂಲಭದ್ರನು ಗುರುವಾದನು. ಕ್ರಿ. ಪೂ. 300ರಲ್ಲಿ ಪಾಟಲೀಪುತ್ರ (ಪಾಟ್ನಾ)ದಲ್ಲಿ ಜೈನರು ಒಂದು ದೊಡ್ಡ ಸಭೆಕರೆದು, ತಮ್ಮ ಪ್ರಾಚೀನ ಶಾಸ್ತ್ರದ "ಪೂರ್ವ" ಎಂಬ ಪುಸ್ತಕಗಳನ್ನು ತಿದ್ದಿ, ಅಂಗಗಳೆಂಬ ಹೊಸ ಪುಸ್ತಕಗಳನ್ನು ತಯಾರಿಸಿದರು. ಸನ್ಯಾಸಿಗಳು ಬತ್ತಲೆಯಾಗಿ ತಿರುಗಾಡುವದನ್ನು ಬಿಟ್ಟು, ಬಿಳೀ ವಸ್ತ್ರವನ್ನು ಧರಿಸಿಕೊಳ್ಳ ಬಹುದೆಂದೂ, ಹೆಂಗಸರೂ ಸನ್ಯಾಸಿನಿಗಳಾಗಬಹುದೆಂದೂ ನಿಶ್ಚಯಿಸಿದರು. ಸ್ವಲ್ಪ ಸಮಯದ ನಂತರ ಬರಗಾಲವು ಹೋದ ಸಮಾಚಾರವನ್ನು ಕೇಳಿ, ದಕ್ಷಿಣ ದೇಶಕ್ಕೆ ಬಂದ ಜೈನರು ತಮ್ಮ ಬೀಹಾರ ದೇಶಕ್ಕೆ ಹೋದರು. ಆದರೆ ಇವರು ಬೀಹಾರದಲ್ಲಿ ಮಾಡಿದ ನವಸುಧಾರಣೆಗಳನ್ನು ಒಪ್ಪಲಿಲ್ಲ. ಕೆಲವುಕಾಲ ಈ ವಿಷಯದ ವಾಗ್ವಾದಗಳು ನಡೆದು ಕ್ರಿ. ಪೂ. 82ರಲ್ಲಿ ಸನ್ಯಾಸಿಗಳು ವಸ್ತ್ರವನ್ನು ಉಟ್ಟುಕೊಳ್ಳಬಹುದೆಂದು ಹೇಳುವ ಉತ್ತರ ದೇಶದ ಜೈನರಿಗೆ ಶ್ವೇದಂಬರರೆಂದೂ, ಸನ್ಯಾಸಿಗಳು, ವಸ್ತ್ರವನ್ನು ಉಟ್ಟುಕೊಳ್ಳದೆ, ನಿರ್ವಾಣದಲ್ಲಿರಬೇಕೆಂದು ಹೇಳುವ ದಕ್ಷಿಣ ದೇಶದ ಜೈನರಿಗೆ ದಿಗಂಬರಜೈನರೆಂದೂ ಹೆಸರಾಯಿತು.

ಭದ್ರಬಾಹುವಿನ ಶಿಷ್ಯರು ಜೈನಮತವನ್ನು ದಕ್ಷಿಣ ಹಿಂದೂಸ್ಥಾನ ದಲ್ಲಿ ಬೋಧಿಸಲುಪಕ್ರಮಿಸಿದರು. ಚಂದ್ರಗುಪ್ತಮೌರ್ಯನ ಕಾಲ ದಲ್ಲಿಯೇ ಇದ್ದ ವ್ಯಾಸಕಮುನಿ ಎಂಬ ಜೈನ ಸನ್ಯಾಸಿಯು ಪಾಂಡ್ಯ, ಚೋಳ, ತುಳು ದೇಶಗಳಿಗೆ ಹೋಗಿ, ಜೈನ ಮತವನ್ನು ಬೋಧಿಸಲು

ಆರಂಭಿಸಿದನು. ಇದಕ್ಕಾಗಿ ಅನೇಕ ಸಂಘಗಳನ್ನೇರ್ಪಡಿಸಿದನು. ಸಂಘಗಳನ್ನು ಗಚ್ಛಗಳನ್ನಾಗಿಯೂ ಗಚ್ಛಗಳನ್ನು ಗಣಗಳನ್ನಾಗಿಯೂ ವಿಭಾಗಿಸಿದನು. ಈಗ ಕ್ರೈಸ್ತಮತದವರು ಯಾವ ರೀತಿಯಲ್ಲಿ ಸಂಘಗಳನ್ನು ಮಾಡಿ, ತಮ್ಮ ಮತಕ್ಕೆ ಜನರನ್ನು ಸೇರಿಸಿಕೊಳ್ಳುತ್ತಾರೋ ಅದೇ ರೀತಿಯಲ್ಲಿ ಮತಪ್ರಸಾರಣೆಯನ್ನು ಮಾಡುತ್ತಿದ್ದರು. ಜೈನಸನ್ಯಾಸಿಗಳು ತಾವು ಹೋದ ದೇಶಗಳ ಭಾಷೆಗಳನ್ನು ಕಲಿತು, ಆಯಾ ದೇಶದ ಭಾಷೆಗಳಲ್ಲಿಯೇ ತಮ್ಮ ಮತವನ್ನು ಬೋಧಿಸುತ್ತಿದ್ದರು. ಈ ಸನ್ಯಾಸಿಗಳು ಬಹಳ ಪ್ರವೀಣರಾದ ಸಂಸ್ಕೃತ ಪಂಡಿತರಾಗಿದ್ದುದರಿಂದ ಇದು ಅವರಿಗೆ ಸುಲಭಸಾಧ್ಯವಾಯಿತು. ಕನ್ನಡ ಭಾಷೆಯಲ್ಲಿ ಮೊದಲು ಗ್ರಂಥಗಳನ್ನು ಬರೆದು, ಆ ಭಾಷೆಗೆ ಮಹತ್ವವನ್ನು ತಂದವರು ಜೈನರೆಂದು ರೆವರೆಂಡ ಕಿಟ್ಟಲ್ ದೊರೆಗಳು ಬರೆದ ಲೇಖನಗಳಿಂದ ತಿಳಿದುಬರುತ್ತದೆ. ತಮಿಳು ದೇಶದಲ್ಲಿಯೂ ಇದೇ ಸಮಯದಲ್ಲಿ "ಕುರಾಲ" ಮತ್ತು "ಶಿಲ್ಲಪತಿಹಾರಂ" ಎಂಬ ತಮಿಳು ಗ್ರಂಥಗಳನ್ನು ಜೈನವಿದ್ವಾಂಸರು ಬರೆದರೆಂದು ತಿಳಿದುಬರುತ್ತದೆ.

ರಾಜ್ಯಭಾರದ ವಿಷಯದಲ್ಲಿ ನೋಡಿದರೆ, ಕೆಲವು ಶತಮಾನಗಳವರೆಗೆ ದಕ್ಷಿಣ ಹಿಂದೂದೇಶದಲ್ಲಿ ತುಳು, ಕರ್ಣಾಟಕ, ತಮಿಳು ರಾಜ್ಯಗಳಲ್ಲಿ ಆಳಿದ ಅರಸುಗಳು ಜೈನರಾಗಿದ್ದರು. ಮೌರ್ಯ್ಯರಾಜ್ಯವು ಬಿದ್ದುಹೋದ ಮೇಲೆ ಆಂಧ್ರರಾಜ್ಯವು ಉನ್ನತಿಗೆ ಬಂತು. ಆಂಧ್ರವಂಶದ ಹಿದವಾಹನ ಅರಸರು ಜೈನರಿಗೆ ಬಹಳ ಸಹಾಯಮಾಡುತ್ತಿದ್ದರು. ಕ್ರಿಸ್ತಶಕದ ಆದಿಯಲ್ಲಿ, ಎಂಗರೆ, ಕ್ರಿ. ಶ. 78ರಲ್ಲಿ ಜೈನ ಮತವು ಕನ್ನಡ ಜಿಲ್ಲೆಯಲ್ಲಿ ಉನ್ನತಿಗೆ ಬಂದಿತ್ತೆಂದು ಕಾಣುತ್ತದೆ. ಯಾಕೆಂದರೆ, ಕನ್ನಡ ಜಿಲ್ಲೆಯಲ್ಲಿ ಬಾರಕೂರಿನಲ್ಲಿ ಆಳಿ, ಅಳಿಯ ಸಂತಾನ ಕಟ್ಟನ್ನು ಪ್ರಚಾರಕ್ಕೆ ತಂದ ಭೂತಾಳಪಾಂಡ್ಯನು ಜೈನ ಮತಾವಲಂಬಿಯಾಗಿದ್ದನು. ಕ್ರಿ. ಶ. 3ನೇ-4ನೇ ಶತಮಾನಗಳಲ್ಲಿ ಜೈನರ ಸ್ಥಿತಿ ಯಾವ ರೀತಿಯಲ್ಲಿ ಇತ್ತೆಂದು ದಕ್ಷಿಣ ಹಿಂದೂಸ್ಥಾನದ ಶಾಸನಗಳಲ್ಲಿಯಾಗಲಿ, ಉತ್ತರ

ಹಿಂದೂಸ್ಥಾನದ ಚರಿತ್ರೆಯಲ್ಲಾಗಲಿ ಕಾಣುವದಿಲ್ಲ. ಚಾಲುಕ್ಯರು 5ನೇ ಶತಮಾನದಲ್ಲಿ ಆಳುತ್ತಿದ್ದಾಗ ಆ ಅರಸರಲ್ಲಿ ಅನೇಕರು ಜೈನರಾಗಿದ್ದರು. ಆದ್ದರಿಂದ ಕ್ರಿ. ಶ. 550-750ರ ವರೆಗೆ ಜೈನರು ಬಹಳ ಅಭಿವೃದ್ಧಿಹೊಂದಿದರೆಂದು ಹೇಳಬಹುದು. ಚಾಲುಕ್ಯರ ತರುವಾಯ ಆಳಿದ ರಾಷ್ಟ್ರಕೂಟ ಅರಸರೂ ಜೈನರಿಗೆ ಬಹಳ ಸಹಾಯಮಾಡುತ್ತಿದ್ದರು. ಈ ಅರಸರಲ್ಲಿ 3ನೇ ಗೋವಿಂದನೂ ಅವನ ಮಗ ಅಮೋಘವರ್ಷನೂ ಅಥವಾ ನೃಪತುಂಗನು (ಕ್ರಿ. ಶ. 814-877) ಜೈನರನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರು. ಅಮೋಘವರ್ಷನು ದೊಡ್ಡ ವಿದ್ವಾಂಸನೂ ಅರಸನೂ ಆಗಿದ್ದನು. ಕನ್ನಡ ಭಾಷೆಯಲ್ಲಿ ಬಹಳ ಪ್ರಾಚೀನ ಪುಸ್ತಕವಾದ 'ಕವಿರಾಜಮಾರ್ಗ'ವನ್ನು ಇದೇ ಅರಸನು ಬರೆದನು. ಇವನ ರಾಜಸಭೆಯಲ್ಲಿ ದಿಗಂಬರ ಜೈನ ಸನ್ಯಾಸಿಯೂ ಕವಿಯೂ ಆದ "ಜಿನಸೇನನು" ಇದ್ದನು. ಇವನು ಈ ಅರಸನ ಗುರುವೂ ಮಂತ್ರಿಯೂ ಆಗಿದ್ದನು. ಕ್ರಿ. ಶ. 9ನೇ ಶತಮಾನದಲ್ಲಿ ರಾಷ್ಟ್ರಕೂಟ ಅರಸರ ಪ್ರಾಬಲ್ಯವು ಹೀನಸ್ಥಿತಿಗೆ ಬಂತು. ಮತ್ತು ಮಹಾವೀರರೂ ಜೈನ ಮತದ್ವೇಷಿಗಳೂ ಆದ ಚೋಳ ಅರಸರು ಉನ್ನತಸ್ಥಿತಿಗೆ ಬಂದರು. ಜೈನರಿಗೆ ರಾಜಾಶ್ರಯವು ತಪ್ಪಿ ಚೋಳ ದೇಶವನ್ನು ಬಿಡಬೇಕಾಯಿತು. ಲೂಯಿಸರ್ಯ್ಸಾಸ್-ಇವರು ಹೇಳುವ ಪ್ರಕಾರ ಈಗಿನ ಹೈದರಾಬಾದು ಮತ್ತು ಮೈಸೂರನ್ನು ಒಳಕೊಂಡಿರುವ ಗಂಗವಾಡಿಯು ಒಂದು ಜೈನ ರಾಜ್ಯವಾಗಿತ್ತೆಂದು ಕಾಣುತ್ತದೆ. ಆಗ ಉತ್ತರ ದೇಶದಿಂದ ಬಂದು, ಹೊಂಬುಚ್ಚ ಎಂಬಲ್ಲಿ ಜಿನದತ್ತರಾಯನೆಂಬವನು ರಾಜ್ಯಸ್ಥಾಪನೆಮಾಡಿ ಆಳುತ್ತಿದ್ದನು. ಕ್ರಿ. ಶ. 11ನೇ ಶತಮಾನದ ಆದಿಯಿಂದ (1000-1310) 13ನೇ ಶತಮಾನದ ವರೆಗೆ ಆಳುತ್ತಿದ್ದ ಹೊಯ್ಸಳರ ರಾಜ್ಯವು ಇದರ ಪಶ್ಚಿಮ ಭಾಗದಲ್ಲಿತ್ತು. ವಿಷ್ಣುವರ್ಧನನ ಕಾಲದ ವರೆಗಿನ ಅರಸರು ಜೈನರಾಗಿದ್ದರು. ಕ್ರಿ. ಶ. 1104-1141ರಲ್ಲಿ ಆಳಿದ ಬಿಟ್ಟಿಗ ಅಥವಾ ಬಿಟ್ಟದೇವನು ಜೈನಮತವನ್ನು ಬಿಟ್ಟು, ರಾಮಾನುಜಾಚಾರ್ಯರ

ಶಿಷ್ಯನಾಗಿ, ಶ್ರೀವೈಷ್ಣವ ಮತವನ್ನು ಅವಲಂಬಿಸಿ, ವಿಷ್ಣುವರ್ಧನನೆನ್ನಿಸಿ ಕೊಂಡನು. ರಾಮಾನುಜಾಚಾರ್ಯರು 700 ಬಸದಿಗಳನ್ನು ಕೆಡವಿ ಅದೇ ಕಲ್ಲುಗಳಿಂದ ಮೇಲುಕೋಟೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದರು. ಜೈನರಿಗೆ ಕನ್ನಡ ರಾಜ್ಯದಲ್ಲಿಯೂ ರಾಜಾಶ್ರಯವು ತಪ್ಪಿತು. ತಮಿಳು ದೇಶದಲ್ಲಿ ಜೈನರು ಅನೇಕ ಮಹತ್ವದ ಕೆಲಸಗಳನ್ನು ಮಾಡಿದ್ದಾರೆ. ಅವರು ಮಾಡಿದ ಕೆಲಸಗಳ ವಿಷಯ ಪುಸ್ತಕಗಳೆ ನಮಗೆ ಆಧಾರವಾಗಿವೆ. ತಮಿಳು ಗ್ರಂಥಗಳನ್ನು (1) ಸಂಘಗಳ ಕಾಲ. (2) ಶೈವನ್ಯಾನಾರ್‌ರ ಕಾಲ. (3) ವೈಷ್ಣವ ಅಲ್ವಾರರ ಕಾಲ ಎಂಬ ಮೂರು ಕಾಲದವುಗಳೆಂದು ವಿಭಾಗಿಸಬಹುದು. ಇವುಗಳಿಂದ ಜೈನರ ಚರಿತ್ರೆಯನ್ನು ತಿಳಕೊಳ್ಳಬಹುದು. ಸಂಘಗಳ ಕಾಲವು ಕ್ರಿ. ಪೂ. 5ನೇ ಶತಮಾನದಿಂದ ಕ್ರಿ. ಶ. 3ನೇ ಶತಮಾನದ ವರೆಗೆ ಆಗಿತ್ತು. ಈ ಕಾಲದಲ್ಲಿ ಬರೆಯಲ್ಪಟ್ಟ ಗ್ರಂಥಗಳು 'ಕುರಾಲ' ಮತ್ತು 'ಶಿಲ್ಲಪತಿಹಾರಂ'. "ಕುರಾಲ" ಎಂಬ ಗ್ರಂಥವನ್ನು ಕ್ರಿ ಶ. 1ನೇ ಶತಮಾನದಲ್ಲಿ **ಎಲಚಾರಿಯುರ್** ಎಂಬವನು ಬರೆದನು. ಇದಕ್ಕೆ ಭಾಷ್ಯವನ್ನು ಬರೆದ ಜೈನ ವಿದ್ವಾಂಸನಾದ **ನೀಲಕೇಶಿಯು** ಇದನ್ನು ಬಹಳವಾಗಿ ಹೊಗಳಿ, ಇದು ತನ್ನ ವೇದವೆಂದು ಹೇಳಿರುವನು. **ಶಿಲ್ಲಪತಿಹಾರಂ** ಎಂಬ ಗ್ರಂಥವನ್ನು ಬರೆದವನು ಜೈನವಿದ್ವಾಂಸನಾದ ಇಲಂಗೊವಡಿಗಳ್ ಎಂಬವನು. ಇವನು ಚೇರದೇಶದ ಪ್ರಖ್ಯಾತಿಪಟ್ಟ ಅರಸನಾದ ಸಂಗುತವಾರ್ಡ ಎಂಬವನ ತಮ್ಮನು. ಇದರಿಂದ ಕ್ರಿ. ಶ. 1ನೇ ಶತಮಾನದಲ್ಲಿ ತಿರುವಾಂಕೂರು, ಮಲೆಯಾಳ, ಕೊಚ್ಚಿ ರಾಜ್ಯಗಳನ್ನು ಒಳಕೊಂಡ ಚೇರದೇಶದ ಅರಸನು ಜೈನನಾಗಿದ್ದನೆಂದು ತಿಳಿದುಕೊಳ್ಳಬಹುದು. ತಿರುವಾಂಕೂರು, ಕೊಚ್ಚಿ, ಮಲೆಯಾಳ ದೇಶಗಳನ್ನು ಕ್ರಿ. ಪೂ. 68ರಿಂದ ಕ್ರಿ. ಶ. 375ರ ವರೆಗೆ ಆಳಿದ ಚೆರುಮಾನ ಪೆರುಮಾಳ ಎಂಬವರು ಚೇರದೇಶದಿಂದ ಬಂದ ಮಹಾಮಂಡಲೇಶ್ವರರಾಗಿದ್ದರು. ಆದರೆ ಈ ದೇಶಗಳ ಪ್ರಜೆಗಳು ಜೈನಮತವನ್ನು ಅವಲಂಬಿಸಲಿಲ್ಲ. ಈ ಮೇಲಿನ

ಸಂಗತಿಗಳಿಂದ ಕ್ರಿ. ಶ. 1ನೇ ಶತಮಾನದಲ್ಲಿ ಜೈನರು ತಮಿಳು ದೇಶದಲ್ಲಿ ನೆಲೆಗೊಂಡು ಮಧುರೆ ಜಿಲ್ಲೆಯಲ್ಲಿಯೂ ಪ್ರಬಲಕ್ಕೆ ಬಂದಿದ್ದರು ಎಂದು ತಿಳಿಯಬಹುದು. ಮಧುರೆಯಲ್ಲಿ 1ನೇ ಶತಮಾನದಿಂದ 7ನೇ ಶತಮಾನದ ಮಧ್ಯಕಾಲದ ವರೆಗೆ ಆಳಿದ ಪಾಂಡ್ಯ ಅರಸರು ಜೈನರಾಗಿದ್ದರು. ಈ ಸಮಯದಲ್ಲಿ ಕ್ರಿ. ಶ. 1ನೇ ಶತಮಾನದಲ್ಲಿ ಪಾಂಡ್ಯ ರಾಜರ ವಂಶದಲ್ಲಿ ಒಬ್ಬನು ಹಡಗು ದಾರಿಯಾಗಿ ತುಳು ರಾಜ್ಯಕ್ಕೆ ಬಂದು, ಆ ಸಮಯದಲ್ಲಿ ತುಳು ರಾಜ್ಯದಲ್ಲಿ ದೊಡ್ಡ ಬಂದರಾಗಿದ್ದ ಬಾರಕೂರಿನಲ್ಲಿ ಭೂತಾಳಪಾಂಡ್ಯನೆಂಬ ಹೆಸರಿನಿಂದ ಕ್ರಿ. ಶ. 78ರಲ್ಲಿ ಆಳಲಾರಂಭಿಸಿದನು. ಈ ಸಮಯದಲ್ಲಿ ಜೈನರು, ಕರ್ಣಾಟಕ, ಮಲೆಯಾಳ, ಹೈಗ ದೇಶಗಳಲ್ಲಿ ಬಹಳ ಉನ್ನತಸ್ಥಿತಿಯಲ್ಲಿ ಇದ್ದುದರಿಂದ ಆ ದೇಶದ ಜೈನರಾಜರು ಭೂತಾಳಪಾಂಡ್ಯನ ಪಟ್ಟಾಭಿಷೇಕಕ್ಕೆ ಬಂದಿದ್ದರು. ಆ ಸಮಯದಲ್ಲಿ ಭೂತಾಳಪಾಂಡ್ಯನು ಪ್ರಬಲಕ್ಕೆತಂದ ಅಳಿಯ ಸಂತಾನಕಟ್ಟನ್ನು ಅವನ ಸ್ನೇಹಿತನಾದ ಮಲೆಯಾಳ ದೇಶದ ಜೈನ ಮಹಾಮಂಡಲೇಶ್ವರ ಚೇರುಮಾನ ಪೆರುಮಾಳನು ಅದೇ ಕಟ್ಟನ್ನು 'ಮರಿಮಕ್ಕತಾಯಂ' ಎಂಬ ಹೆಸರಿನಿಂದ ತನ್ನ ರಾಜ್ಯದಲ್ಲಿ ಪ್ರಚಾರಕ್ಕೆ ತಂದನೆಂದು ಊಹಿಸಬಹುದು. ಆದ್ದರಿಂದ ಮಲೆಯಾಳ, ಕೊಚ್ಚಿ, ತಿರುವಾಂಕೂರು ರಾಜರಿಗೆ ಅಳಿಯಸಂತಾನಕಟ್ಟು ಉಂಟಾಗಲಿಕ್ಕೆ ಕಾರಣವಾಯಿತು. 4ನೇ ಶತಮಾನದಿಂದ 7ನೇ ಶತಮಾನದ ವರೆಗೆ ಜೈನರಿಗೂ ಬ್ರಾಹ್ಮಣರಿಗೂ ಅನೇಕ ಕಲಹಗಳು ಎದ್ದವು. ಡೋಕ್ಟರ ಭಂಡಾರಕಾರರಿಗೆ ಸಿಕ್ಕಿದ 5ನೇ ಶತಮಾನದ, ತಾರೀಕಿಲ್ಲದ ಒಂದು ಶಾಸನದ ಪ್ರಕಾರ ಮುಂಬಯಿ ಸಂಸ್ಥಾನದ ದಿಗಂಬರ ಜೈನರು ಮಧುರೆಯಲ್ಲಿ ಒಂದು ತಮಿಳು ಸಂಘವನ್ನು ಸ್ಥಾಪಿಸಿದರೆಂದು ಕಾಣುತ್ತದೆ. ಈ ಸಮಯದಲ್ಲಿ ಬರೆದ ನಳದಿಯಾರ ಎಂಬ ಗ್ರಂಥದಲ್ಲಿ ಬ್ರಾಹ್ಮಣರಿಗೂ ಜೈನರಿಗೂ ನಡೆದ ವಾಗ್ವಾದಗಳ ವಿಷಯ ಬರೆದಿದೆ. ಈ ಕಾಲದಲ್ಲಿ ಒಬ್ಬ ಬ್ರಾಹ್ಮಣ ಸನ್ಯಾಸಿಯಾದ ತಿರುಗ್ನಾನ ಸಮ್ಮಂದರ್

ಎಂಬವನು ಬ್ರಾಹ್ಮಣ ಮತವನ್ನು ಉನ್ನತಿಗೆ ತಂದನು. ಈ ಸನ್ಯಾಸಿಗೂ ಜೈನರಿಗೂ ಬಹಳ ದ್ವೇಷವಿತ್ತು. ಈ ಸನ್ಯಾಸಿಯು ಮಧುರೆಯಲ್ಲಿ ಆಳುತ್ತಿದ್ದ ಜೈನ ಅರಸನಾದ ಗುಣಪಾಂಡ್ಯನೆಂಬ ಅರಸನನ್ನು ಜೈನ ಮತದಿಂದ ಶೈವಮತಕ್ಕೆ ಸೇರಿಸಿಕೊಂಡನು. ಅಂದಿನಿಂದ ಪಾಂಡ್ಯ ರಾಜ್ಯದಲ್ಲಿ ಜೈನಮತವು ಕಳೆಗುಂದಿತು. ಇದೇ ಸಮಯದಲ್ಲಿ ಚಾಲುಕ್ಯರ ರಾಜಧಾನಿಯನ್ನು ಸುಟ್ಟುಹಾಕಿದ ಪಲ್ಲವ ಅರಸನಾದ ನರಸಿಂಹ ವರ್ಮನ ಕಾಲದಲ್ಲಿದ್ದ ಅಪ್ಪಾರ (ತಿರುನವು)ನೆಂಬ ಬ್ರಾಹ್ಮಣ ಸನ್ಯಾಸಿಯು ಪಲ್ಲವ ರಾಜ್ಯದಿಂದ ಜೈನಮತದ ಹುಟ್ಟಡಗಿಸಿದನು. ಈ ಮೇಲಿನ ಸಂಗತಿಗಳು ಕ್ರಿ. ಶ. 7ನೇ ಶತಮಾನದಲ್ಲಿ ನಡೆದುದರಿಂದ ಈ ಸಮಯದಿಂದ ತಮಿಳು ದೇಶದಲ್ಲಿ ಜೈನರ ಪ್ರಾಬಲ್ಯವು ಪೂರ್ಣವಾಗಿ ಕಳೆಗುಂದಿತು. ಎಲ್ಲರೂ ಶೈವರಾದರು. ಬಸದಿಗಳು ಶಿವಾಲಯಗಳಾದವು. ಜೈನಮತವನ್ನು ನಾಶಪಡಿಸುವ ಶೈವನಾಯನಾರರ ಕೆಲಸವನ್ನು ವೈಷ್ಣವ ಅಲ್ವಾರರು ಕೈಕೊಂಡರು. ಇವರ ಸಾಹಸದಿಂದ ಜನರೆಲ್ಲರೂ ಜೈನರಿಗೆ ವಿರೋಧವಾಗಿ ನಿಂತರು. 8ನೇ-9ನೇ ಶತಮಾನಗಳಲ್ಲಿ ಮತ ಬೋಧನೆಮಾಡುತ್ತಿದ್ದ ಶಂಕರಾಚಾರ್ಯರು, ಉತ್ತರ ದೇಶಕ್ಕೆ ಹೋಗಿ ತನ್ನ ಮತವನ್ನು ಬೋಧಿಸಿದರಲ್ಲದೆ, ದಕ್ಷಿಣ ದೇಶದ ತಮಿಳು ರಾಜ್ಯದಲ್ಲಿ ತನ್ನ ಮತವನ್ನು ವಿಶೇಷವಾಗಿ ಬೋಧಿಸಲಿಲ್ಲ. ಯಾಕೆಂದರೆ, ತಮಿಳು ದೇಶದಲ್ಲಿ ಇದರ ಮೊದಲೇ ರಾಜ್ಯಭಾರ ವಿಷಯದಲ್ಲಿಯೂ ಮತಸಂಬಂಧ ವಿಷಯದಲ್ಲಿಯೂ ಜೈನರು ಕ್ಷೀಣಗತಿಗೆ ಬಂದಿದ್ದರು. 10ನೇ–12ನೇ ಶತಮಾನಗಳೊಳಗೆ ಜೈನಮತವು ತಮಿಳು ದೇಶದಲ್ಲಿ ಪೂರ್ಣ ನಾಶವಾಯಿತು. ರಾಜ್ಯಭಾರವು ಜೈನರ ಕೈಯಿಂದ ತಪ್ಪಿದರೂ ಬುದ್ಧಿ ಕೌಶಲ್ಯವು ಇವರ ಕೈಯಿಂದ ತಪ್ಪಲಿಲ್ಲ. 11ನೇ ಶತಮಾನದ ನಂತರವೂ ಇವರು ನೀತಿಶಾಸ್ತ್ರ, ವೈದ್ಯಶಾಸ್ತ್ರ, ಕಾವ್ಯ, ಕೌಶಲ್ಯ ಇವುಗಳಲ್ಲಿ ಹಿಂದುಳಿಯಲಿಲ್ಲ. ಇವುಗಳ ವಿಷಯ ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. 12ನೇ ಶತಮಾನದಲ್ಲಿ ಕನ್ನಡ ರಾಜ್ಯದಲ್ಲಿ

ಜೈನಮತವು ಹೀನಸ್ಥಿತಿಗೆ ಬಂತು. ಆದರೆ ತುಳುರಾಜ್ಯದಲ್ಲಿ ಜೈನ ಮತವು ಪ್ರಬಲಕ್ಕೆ ಬಂತು.



ಕಾರ್ಕಳ ಗೋಮಟೇಶ್ವರನ ಪ್ರತಿಮೆಯೂ ಬಸದಿಯೂ

ಮಹಮ್ಮದೀಯರು 12ನೇ ಶತಮಾನದಲ್ಲಿ ದಕ್ಷಿಣ ದೇಶಕ್ಕೆ ಬಂದ ನಂತರ ಜೈನಮತವು ಬಹಳ ಹೀನಸ್ಥಿತಿಗೆ ಬಂತು. ಕ್ರಿಸ್ತ ಶಕದ 13ನೇ ಶತಮಾನದಿಂದ 16ನೇ ಶತಮಾನದ ವರೆಗೆ ಆಳಿದ ವಿಜಯನಗರದ ಅರಸುಗಳ ಕಾಲದಲ್ಲಿ ತುಳು ರಾಜ್ಯದಲ್ಲಿ ಜೈನರು ಬಹಳ ಉನ್ನತಸ್ಥಿತಿಯಲ್ಲಿದ್ದರು. 15ನೇ ಶತಮಾನದ ಮಧ್ಯಭಾಗ ದಲ್ಲಿ ಕಾರ್ಕಳದ ಗೋಮಟೇಶ್ವರನನ್ನೂ (1432); ಮೂಡಬಿದರೆ

ಸಾವಿರ ಕಂಬಗಳ ಬಸದಿಯನ್ನೂ (1429); ಬೈರಾದೇವಿ ಮಂಟಪವನ್ನೂ (1451); 16ನೇ ಶತಮಾನ (1581) ದಲ್ಲಿ ಕಾರ್ಕಳ ಚತುರ್ಮುಖ ಬಸದಿಯನ್ನೂ, 17ನೇ ಶತಮಾನದ ಆದಿಯಲ್ಲಿ ಕ್ರಿ. (ಶ. 1605); ವೇಣೂರು ಗೋಮಟೇಶ್ವರನನ್ನೂ ಪ್ರತಿಷ್ಠಿಸಿದರು. ಕ್ರಿ. ಶ. 1605ರಲ್ಲಿ ಮೂಡಬಿದರೆ ನಾಯಿ ಬಸದಿಯನ್ನು ಚಂದ್ರಕೀರ್ತಿ ಗುರುವಿನ ಹೆಸರಿನಲ್ಲಿ ಕಟ್ಟಿಸಿದರು. ಈ ಶತಮಾನದ ಮಧ್ಯಕಾಲದಲ್ಲಿ ಕಾರ್ಕಳ ಬೈರರಸರ ಸಂತತಿಯು ನಾಶವಾಯಿತು.

ಕನ್ನಡ ಮತ್ತು ತಮಿಳು ಭಾಷೆಗಳು ಜೈನರಿಂದ ಉನ್ನತಿಗೆ ಬಂದವು. ವೈಷ್ಣವರು ಬರಿಯುವ ಮಣಿಪ್ರವಾಳ ಎಂಬ ಶೈಲಿಯ ಮೂಲಕರು ಜೈನರು. ಜೈನರ ಬಸದಿಗಳ ರೀತಿಯಲ್ಲಿಯೇ ಹಿಂದೂ ದೇವಸ್ಥಾನಗಳನ್ನು ಕಟ್ಟಿದರು. ಸಮ್ಮಂದರ್ ಮತ್ತು ಅಪ್ಪಾರರ ಕಾಲದಲ್ಲಿ ದಕ್ಷಿಣ ಹಿಂದೂಸ್ಥಾನದಲ್ಲೆಲ್ಲಾ ಜೈನರ ರೀತಿಯಲ್ಲಿಯೇ ಆರಾಧನೆಗಳು ಉಂಟಾದವು. ಪ್ರತಿಮೆಗಳನ್ನು ಪ್ರತಿಷ್ಠಿಸಿ ಪೂಜಿಸುಸುವದು ಜೈನರಿಂದಲೇ ಬಂದ ಪದ್ಧತಿಯಾಗಿದೆ. ಜಿನೇಶ್ವರನ ಬದಲಾಗಿ ಈಶ್ವರನನ್ನು ಆರಾಧಿಸಿದರು. ಹಿಂದೂಮತದಲ್ಲಿಯೂ ಅಲ್ಲಲ್ಲಿ ಯತಿಗಳ ಮಠಗಳನ್ನು ಸ್ಥಾಪಿಸಿ ಯತಿಗಳ ಪೂಜೆಗೆ ಮೂಲವಾಯಿತು. ಮದುರೆ, ಮೀನಾಕ್ಷಿ ದೇವಸ್ಥಾನದಲ್ಲಿ 63 ನ್ಯಾನಾರರನ್ನು ಸಣ್ಣ ಸಣ್ಣ ಗರ್ಭಗೃಹಗಳಲ್ಲಿ ಪ್ರತಿಷ್ಠಿಸಿ ಈಗಲೂ ಪೂಜಿಸುತ್ತಾರೆ. ಜೈನರು ಇದೇ ರೀತಿಯಲ್ಲಿ ತಮ್ಮ ತೀರ್ಥಂಕರರನ್ನು ಪೂಜಿಸುತ್ತಿದ್ದರು. ತೀರ್ಥಂಕರರ ಮಂಟಪಕ್ಕೆ ತೀರ್ಥಮಂಟಪವೆಂದು ಕರೆದರು.* ವಿದ್ಯೆಯನ್ನು ಕಲಿಯುವುದಕ್ಕೆ ಜೈನರು ಸನ್ಯಾಸಿ ಮಠಗಳನ್ನು ಕಟ್ಟಿದ ಹಾಗೆಯೇ ಗುರುಮಠಗಳಲ್ಲಿ ವಿದ್ಯಾಶಾಲೆಗಳನ್ನು ತೆರೆದರು. ಜೈನರ ವಿದ್ವಾಂಸರು ಬರೆದಿಟ್ಟ ಅನೇಕ ಗ್ರಂಥಗಳು ಮೂಡಬಿದರೆಯ ಗುರುಗಳ ಮಠದ ಪುಸ್ತಕಭಂಡಾರದಲ್ಲಿವೆ. ಬ್ರಾಹ್ಮಣ ಮತದಲ್ಲಿ ಮೃಗಗಳನ್ನು ದೇವರಿಗೆ ಬಲಿಕೊಡುವದನ್ನು ನಿಲ್ಲಿಸಿದವರು ಜೈನರು.

ಹಿಂದುಗಳಲ್ಲಿ ಅನೇಕರು ಮಾಂಸಾಹಾರವನ್ನು ಬಿಟ್ಟು ಬಿಡಲಿಕ್ಕೂ ಜೈನರೇ ಕಾರಣರು. ಅನೇಕ ಉಪವಾಸವ್ರತಗಳೂ ಜೈನರಿಂದಲೇ ಉಂಟಾದವು.

## 6ನೇ ಅಧ್ಯಾಯ.

### ಭೂತಾಳಪಾಂಡ್ಯ ಅರಸರು.

ತುಳು ರಾಜ್ಯದಲ್ಲಿಯೂ ಮಲೆಯಾಳ, ಕೊಚ್ಚಿ, ತಿರುವಾಂಕೂರು ಜಿಲ್ಲೆಯಲ್ಲಿಯೂ ಅಳಿಯಸಂತಾನಕಟ್ಟನ್ನು ಉಂಟುಮಾಡಿದವನು ಭೂತಾಳಪಾಂಡ್ಯರಾಯನೆಂಬ ವಿಷಯವು ಎಲ್ಲರಿಗೂ ತಿಳಿದಿರುವ ಸಂಗತಿಯಾಗಿದೆ. ಭೂತಾಳಪಾಂಡ್ಯರಾಯನ ಚರಿತ್ರೆ ಎಂಬ 13 ಅಧ್ಯಾಯದ ಸಂಸ್ಕೃತ ಪುಸ್ತಕದಲ್ಲಿ ಈ ವಂಶದ ವಿಷಯ ವಿವರವಾಗಿ ಬರೆದಿದೆ. ಭೂತಾಳಪಾಂಡ್ಯನು ಕ್ರಿ. ಶ. 78ರಲ್ಲಿ ಪಟ್ಟಕ್ಕೆ ಬಂದನೆಂದು ಆ ಚರಿತ್ರೆಯಲ್ಲಿದೆ. ಜೈನರು ಈ ಸಮಯದಲ್ಲಿ ಕನ್ನಡ ಜಿಲ್ಲೆಗೆ ಬರಲಿಲ್ಲವೆಂದು ಕೆಲವರ ಅಭಿಪ್ರಾಯವಿದೆ. ಕ್ರಿ. ಶ. 12ನೇ ಶತಮಾನದಲ್ಲಿ ಹೊಯ್ಸಳಬಲ್ಲಾಳ ವಿಷ್ಣುವರ್ಧನನು ಹುಂಬುಚ್ಚದ ಜೈನ ರಾಜರನ್ನು ಗೆದ್ದಮೇಲೆ, ಅವರ ಕುಟುಂಬದವರು ಕನ್ನಡ ಜಿಲ್ಲೆಗೆ ಬಂದು ಅದರ ಹೆಚ್ಚಿನ ಭಾಗವನ್ನು ಸ್ವಾಧೀನಪಡಿಸಿ ಭೂತಾಳಪಾಂಡ್ಯ ಎಂಬ ಹೆಸರಿನಿಂದ ಬಾರಕೂರಿನಲ್ಲಿ ಆಳಿದರೆಂದೂ ಕೆಲವರ ಅಭಿಪ್ರಾಯವಿದೆ.. ಈ ಕುಟುಂಬವರು 12ನೇ ಶತಮಾನದಲ್ಲಿ ಆಳಿದರೆಂಬದರ ವಿಷಯ ಶಾಸನಗಳೂ ಇವೆ. ಡೊಕ್ಟರ ಕೃಷ್ಣಸ್ವಾಮಿ ಅಯ್ಯಂಗಾರರು ಮದರಾಸಿನಲ್ಲಿ ಜೈನರ ವಿಷಯ ಕೊಟ್ಟ ಭಾಷಣದಲ್ಲಿ, ಜೈನರು 1ನೇ ಶತಮಾನದಲ್ಲಿಯೇ ಬಹಳ ಉನ್ನತ ಸ್ಥಿತಿಯಲ್ಲಿದ್ದು, ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರನಡಿಸುತ್ತಿದ್ದರೆಂದೂ ಮತಬೋಧನೆಗಾಗಿ ಅಲ್ಲಲ್ಲಿ ಸಂಘಗಳನ್ನು ಸ್ಥಾಪಿಸಿದ್ದರೆಂದೂ ಹೇಳಿರುತ್ತಾರೆ. ಆದ್ದರಿಂದ ಕ್ರಿ. ಶ. 1ನೇ ಶತಮಾನದಲ್ಲಿ ಭೂತಾಳಪಾಂಡ್ಯನು ಬಾರಕೂರಿನಲ್ಲಿ ಆಳುತ್ತಿದ್ದನೆಂಬದರಲ್ಲಿ ಸಂಶಯವಿಲ್ಲ.

## ಜಯ ಭೂತಾಳಪಾಂಡ್ಯರಾಯ.

ಭೂತಾಳಪಾಂಡ್ಯರಾಯನು ಹುಂಬುಚ್ಚದಲ್ಲಿ ಆಳುತ್ತಿದ್ದ ಜಿನದತ್ತ ರಾಯನ ಕುಟುಂಬದವನಲ್ಲ. ಜಿನದತ್ತರಾಯನ ಕುಟುಂಬದವರು ಭೂತಾಳಪಾಂಡ್ಯವಂಶದವರಲ್ಲ. ಕ್ರಿ. ಶ. 1ನೇ ಶತಮಾನದಲ್ಲಿ ಮಧುರೆ ಪಾಂಡ್ಯವಂಶದವರಲ್ಲಿ ದೇವಪಾಂಡ್ಯನೆಂಬ ಒಬ್ಬ ದೊಡ್ಡ ಮನುಷ್ಯನು ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರಮಾಡುವಾಗ ತುಳು ರಾಜ್ಯದಲ್ಲಿ ಅದರ ಮುಖ್ಯ ಪಟ್ಟಣವಾದ ಬಾರಕೂರು ದೊಡ್ಡ ವ್ಯಾಪಾರದ ಸ್ಥಳವಾಗಿರುತ್ತದೆಂದು ತಿಳಿದು ಅಲ್ಲಿಯೆ ಬಂದು ನಿಂತು ವ್ಯಾಪಾರಮಾಡುತ್ತಿದ್ದನು. ಈ ಸಮಯದಲ್ಲಿ ವ್ಯಾಪಾರವು ರೆಡ್‌ಸೀ ಮತ್ತು ಆಫ್ರಿಕದ ಪೂರ್ವ ಕರಾವಳಿಯೊಡನೆ ನಡಿಯುತ್ತಿತ್ತು; ಹೆಚ್ಚಾಗಿ ಇಜಿಪ್ಟ ದೇಶದ ಸಂಗಡ ನಡಿಯುತ್ತಿತ್ತು. ದೇವಪಾಂಡ್ಯನು ಬಾರಕೂರಿನಲ್ಲಿದ್ದಾಗ ಒಂದು ದೊಡ್ಡ ಹಡಗವನ್ನು ಕಟ್ಟಿಸಿದನು. ಈ ಹಡಗವನ್ನು ಶುರುವಿಗೆ ನೀರಿಗೆ ಇಳಿಸಬೇಕಾದರೆ ಕುತ್ತಿಪೂಜೆ ಆಗಬೇಕೆಂಬ ವಿಷಯವು ಎಲ್ಲರಿಗೂ ತಿಳಿದಿರುವ ಸಂಗತಿಯಾಗಿದೆ. ಬಡಗಿಯವರೆಲ್ಲರೂ ಅದಕ್ಕೆ ನರಬಲಿಯನ್ನು ಕೊಡಬೇಕೆಂದು 'ಕುಂಡೋದರ'ವೆಂಬ ಭೂತವು ಹೇಳುತ್ತದೆಂದು ಹೇಳಿದರು. ಆಗ ದೇವಪಾಂಡ್ಯನು ಜೈನ ಧರ್ಮವನ್ನಾಚರಿಸುವವನಾದ್ದರಿಂದ ಬಹಳ ಬೇಸರಪಟ್ಟು ಬೇರೆಯವರ ಮಕ್ಕಳನ್ನು ಬಲಿಕೊಡಲು ಕೇಳುವದಕ್ಕಿಂತ ತನ್ನ ಮಕ್ಕಳಲ್ಲಿಯೇ ಒಬ್ಬನನ್ನು ಬಲಿಕೊಡುವದಾಗಿ ನಿಶ್ಚಯಿಸಿದನು. ದೇವಪಾಂಡ್ಯನು ತುಳುರಾಜ್ಯದಲ್ಲಿಯೇ ನಿಂತಿದ್ದರಿಂದ ತನ್ನ ತಂಗಿಯನ್ನು ಇಲ್ಲಿಯೇ ಮದುವೆಮಾಡಿಕೊಟ್ಟು ತಾನೂ ಇಲ್ಲಿಯ ಜೈನ್ ಹೆಂಗಸೊಬ್ಬಳನ್ನು ಮದುವೆಮಾಡಿಕೊಂಡಿದ್ದನು. ದೇವಪಾಂಡ್ಯನು ಮಗನನ್ನು ಕೊಡಬೇಕೆಂದು ತನ್ನ ಹೆಂಡತಿಯಾದ ಶಿವದೇವಿಯನ್ನು ಕೇಳಲು, ಅವಳು ಇದಕ್ಕೆ ಒಪ್ಪಲಿಲ್ಲ. ಆಗ ದೇವಪಾಂಡ್ಯನು ಬಹಳ ದುಃಖಪಟ್ಟು, ಹಡಗವನ್ನು ಸಮುದ್ರದಲ್ಲಿ ಇಳಿಸದೆ ಇದ್ದರೆ ಬಹಳ ಹಣ ನಷ್ಟವಾಗುತ್ತದೆಂದು ತಂಗಿಯಾದ ಸತ್ಯವತಿಯೊಡನೆ ಹೇಳಿ, ಅವಳ ಮಗನಾದ ಜಯನನ್ನು

ಕೊಡಬೇಕೆಂದು ಕೇಳಿದನು. ಅವಳು ಅದಕ್ಕೆ ಒಪ್ಪಿದಳು. ಆಗ ಜೈನ ಮತವು ತುಳುರಾಜ್ಯದಲ್ಲಿ ಸ್ವಲ್ಪ ಸ್ವಲ್ಪವಾಗಿ ಹಬ್ಬುತ್ತಾ ಬರುತ್ತಿತ್ತು; ಆದ್ದರಿಂದ ದೇವಪಾಂಡ್ಯನು ಜನರ ಮನಸ್ಸನ್ನು ನೋಯಿಸಲು ಇಷ್ಟ ವಿಲ್ಲದೆ ಹೀಗೆ ವರ್ತಿಸಲು ಕಾರಣವಾಯಿತು. ಈ ನರಾಹುತಿಯನ್ನಾಗಲಿ ಇತರ ಯಾವ ತರದ ಹಿಂಸೆಯನ್ನಾಗಲಿ ಮಾಡುವದು ಜೈನಮತಕ್ಕೆ ಪೂರ್ಣ ವಿರುದ್ಧವಾದದ್ದು. ಆದರೆ ಉಪಾಯವಿಲ್ಲದೆ ಜಯನನ್ನು ಹಡಗಕ್ಕೆ ಬಲಿ ಕೊಡುವದಕ್ಕಾಗಿ ಕೊಂಡುಹೋಗಲು, ಬಡಗಿಯವರು, 'ಕುಂಡೋದರ'ನು ನರಾಹುತಿ ಕೊಡುವದು ಬೇಡವೆನ್ನುತ್ತಾನೆಂದು ಹೇಳಿ, ಕುರಿ, ಆಡು ಮುಂತಾದ್ದನ್ನು ಮಾತ್ರ ಆಹುತಿಯಾಗಿ ಕೊಟ್ಟು, ಹಡಗವನ್ನು ಸಮು ದ್ರಕ್ಕೆ ಇಳಿಸಿದರು. ನರಾಹುತಿಯನ್ನು ಕೊಡುವ ಪದ್ಧತಿಯು ಶಂಕರಾ ಚಾರ್ಯರ ಕಾಲದ ವರೆಗೆ, ಎಂದರೆ, ಕ್ರಿ. ಶ. 8ನೇ ಶತಮಾನದ ವರೆಗೂ ವಾಡಿಕೆಯಲ್ಲಿತ್ತೆಂದು ಶಂಕರ ವಿಜಯದಿಂದಲೂ ಬೇರೆ ಗ್ರಂಥಗಳಿಂದಲೂ ಕಂಡುಬರುತ್ತದೆ.

ಅನಂತರ ಹಡಗದಲ್ಲಿ ವ್ಯಾಪಾರವನ್ನು ತುಂಬಿಸಿ, ತಮ್ಮನಾದ ನಾರಾಯಣ ಪಾಂಡ್ಯನನ್ನು ಅದಕ್ಕೆ ಮುಖ್ಯಸ್ಥನಾಗಿ ನೇಮಿಸಿ, ಅದನ್ನು ಇತರ ಹಡಗುಗಳೊಡನೆ ಇಜಿಪ್ಟ ದೇಶಕ್ಕೆ ಕೊಂಡುಹೋದರು. ಕೆಂಪುಸಮು ದ್ರವನ್ನು ದಾಟಿ, ಅದರ ಉತ್ತರ ಭಾಗದಲ್ಲಿರುವ ಇಜಿಪ್ಟಿನ ಬಂದರವಾದ ಬರನಿಸ್ ಪಟ್ಟಣದ ಹತ್ತಿರ ಲಂಗರಹಾಕಿದರು. ಈ ಸಮಯದಲ್ಲಿ ಇದು ಬಹಳ ದೊಡ್ಡ ಬಂದರವಾಗಿತ್ತು. ಇಲ್ಲಿಂದ ವ್ಯಾಪಾರವು ರೋಮರಾಜ್ಯಕ್ಕೆ ಹೋಗುತ್ತಿತ್ತು. ಕೆಂಪುಸಮುದ್ರದಲ್ಲಿ ಉತ್ತರ ಭಾಗದಲ್ಲಿ ಬಹಳ ಬಂಡೆ ಕಲ್ಲುಗಳಿದ್ದವು. ಈ ಸಮುದ್ರದಲ್ಲಿ ಸುಳಿ ಗಾಳಿಗಳು ಈಗಲೂ ಬೀಸು ತ್ತವೆ. ದೇವಪಾಂಡ್ಯನ ಹಡಗುಗಳು ರೇವಿನಲ್ಲಿ ನಿಂತಿರುವಾಗ, ಒಂದು ಬಿರುಗಾಳಿಯು ಬಂದು, ದೇವಪಾಂಡ್ಯನ 3 ಹಡಗುಗಳು ಗಾಳಿಯ ಹೊಡೆತದಿಂದ ಬಂಡೆ ಕಲ್ಲುಗಳ ಎಡೆಯಲ್ಲಿ ಸಿಕ್ಕಿಕೊಂಡವು. ಕೆಲವು ದಿವಸಗಳ ಮೇಲೆ ಇನ್ನೊಂದು ಗಾಳಿಯು ಬೀಸಿ ಹಡಗುಗಳು ಬಂಡೆ ಕಲ್ಲುಗಳ ಎಡೆಯಿಂದ ಅಪಾಯವಿಲ್ಲದೆ ಹೊರಗೆ ಬಂದವು. ಅನಂತರ

ಈ ಹಡಗಿನವರು ಬರನಿಸ್ ಬಂದರದಿಂದ ಬೇಕಾದ ಸಾಹಿತ್ಯಗಳನ್ನು ಕೊಂಡುಕೊಂಡು, ತಾವು ಕೊಂಡುಹೋದ ವ್ಯಾಪಾರವನ್ನು ಮಾರಿ ಆ ಬರನಿಸ್ ಪಟ್ಟಣದ ವಾಯುವ್ಯಕ್ಕಿರುವ ಹಸುರು ಶಿಲೆಯ ಪರ್ವತ ದಿಂದ ಕೆಲವು ಕಲ್ಲುಗಳನ್ನು ಕ್ರಯಕ್ಕೆಪಡದು, ಅಲ್ಲಿಯ ಜನರಾದ ಸಿದ್ಧಿಯರಿಂದ ಬಂಗಾರವನ್ನು ತಯಾರಿಸುವ ಸಿದ್ಧರಸವನ್ನು ತೆಗೆದು ಕೊಂಡು, ಪುನಃ ಬಾರಕೂರಿನ ಕಡೆಗೆ ಬಂದರು. ಬರನಿಸ್ ಪಟ್ಟಣವು ಇಜಿಪ್ಟಿನ ಬಂದರವಾಗಿತ್ತೆಂದೂ, ಕೆಂಪುಸಮುದ್ರದ ಉತ್ತರದಲ್ಲಿ ಬಂಡೆ ಕಲ್ಲುಗಳು ಇವೆ ಎಂದೂ, ಈ ಪಟ್ಟಣದ ವಾಯುವ್ಯಕ್ಕೆ ಹಸುರು ಶಿಲೆಯ ಪರ್ವತ ಇತ್ತೆಂದೂ, ಈಗ ಅದು ಹ್ಯೊಗೆಯ ಅಡಿಯಲ್ಲಿ ಮುಚ್ಚಿಹೋಗಿಯದೆಂದೂ, ಆ ಪ್ರದೇಶದ ಜನರಿಗೆ 'ಸಿದ್ಧಿ'ಯರೆಂದು ಹೇಳುತ್ತಾರೆಂದೂ, ಅವರಿಗೆ ಬಂಗಾರ ತಯಾರಿಸುವ ವಿದ್ಯೆಯು ಗೊತ್ತಿತ್ತೆಂದೂ ಇಜಿಪ್ಟ ದೇಶದ ಹಳೆಯ ಚರಿತ್ರೆಯಲ್ಲಿದೆ.

ಹಡಗಗಳು ಬಾರಕೂರಿನಿಂದ ಇಜಿಪ್ಟ ದೇಶಕ್ಕೆ ತೆರಳಿದ ಮೇಲೆ ದೇವಪಾಂಡ್ಯನ ಹೆಂಡತಿಯು ತಾಯಿಯ ಮನೆಗೆ ಹೋದವಳು ತಿರಿಗಿ ಬರಲೇ ಇಲ್ಲ. ಬಾರಕೂರಿನಲ್ಲಿ ಆಳುತ್ತಿದ್ದ ಸಂತತಿಯ ಕಡೇ ಅರಸನು ಕಾಲವಾಗಲು, ಸಿಂಹಾಸನಕ್ಕೆ ಹಕ್ಕುದಾರರಿಲ್ಲದೆ, ಪ್ರಜೆಗಳೆಲ್ಲರೂ ಕೂಡಿ ಬಹಳ ಐಶ್ವರ್ಯವಂತನಾದ ದೇವಪಾಂಡ್ಯನ ಅಳಿಯನಾದ ಜಯನಿಗೆ ಪಟ್ಟ ವನ್ನು ಕಟ್ಟುವದೆಂದು ಆಲೋಚಿಸಿದರು. ಆ ಮೇಲೆ ಅವನಿಗೆ ಪಟ್ಟಕಟ್ಟಿ 'ಭೂತಾಳಪಾಂಡ್ಯ'ನೆಂಬ ಹೆಸರನ್ನಿಟ್ಟರು. ತುಳು ಜನರೆಲ್ಲರೂ ಭೂತಗಳ ನ್ನಾರಾಧಿಸುವವರಾದ್ದರಿಂದ 'ಕುಂಡೋದರ' ಎಂಬ ಭೂತದ ದಯೆಯಿಂದ ಈ ಕೆಲಸಗಳೆಲ್ಲಾ ನಡೆದವೆಂದು ಈ ಹೆಸರನ್ನು ಇಟ್ಟರು. ಈ ಸಮಯ ದಲ್ಲಿ ಕನ್ನಡ ಜಿಲ್ಲೆಯು ಬನವಾಸಿಯ ಕದಂಬರಾಜರ ಆಳಿಕೆ ಯಲ್ಲಿತ್ತು. ಕದಂಬರ ಮಹಾಮಂಡಲೇಶ್ವರನು ಗೋಕರ್ಣದಲ್ಲಿ ಆಳುತ್ತಿದ್ದಾಗ ಭೂತಾಳಪಾಂಡ್ಯನು ಅವನ ಕೈಕೆಳಗೆ ಮಂಡಲೇಶ್ವರನಾಗಿ ಆಳುತ್ತಿದ್ದನು. ಭೂತಾಳಪಾಂಡ್ಯ ಚರಿತ್ರೆಯಲ್ಲಿ ಇವನ ಬಿರುದುಗಳು

ಹೀಗೆ ಇವೆ—"ರಾಜರಾಜೇಂದ್ರ, ರಾಮಭೋಜ, ಸಿಂಹಾಸನಾಧೀಶ್ವರ, ಭಾರಕನ್ಯಾಪುರ ಗೋಕರ್ಣ ಮಂಡಲಾಧೀಶ್ವರ, ತ್ರಿಪುಣಾತ್ರಿ, ತ್ರಿಶ್ರೋತ್ರಿ, ಅಪ್ರತಿಮನರಾಧೀಶ್ವರ, ಪಾಂಡ್ಯಕುಮಾರ, ಸತ್ಯಾವತಿ ಬಾಲ, ಜಿನಕುಲಾಶ್ವ, ದೇವಪಾಂಡ್ಯ ಪ್ರತಿನಿಧಿ, ಸಾಲಕಸಂಪ್ರದಾಯ ಪ್ರತಿನಿಧಿ, ಕೋಟಿ ಬಿರಿದಂಕದೇವ, ಗುರುದ್ವಿಜ ಸಾಧು ಶಡುಮತ ಸನ್ಮತಾಧೀಶ್ವರ, ಸಕಲ ಕುಲಧರ್ಮ ಸಂಸ್ಥಿತಿ ಮಾರ್ಗ, ಸದ್ಧರ್ಮ ವಿಚಾರಾ, ಶ್ರೀಮತ್ತ ತೌಳವವನ್ನಾಳುವ, ಭಾರಕನ್ಯಾಪುರವರಾಧೀಶ್ವರಾ" ಈ ಬಿರುದುಗಳು ಮೊಯಾರಿನಲ್ಲಿಯೂ ನೆಲ್ಲಿಕಾರಿನಲ್ಲಿಯೂ ಸಿಕ್ಕಿದ ಭೂತಾಳಪಾಂಡ್ಯ ಚರಿತ್ರೆಯಲ್ಲಿವೆ. ಬಾರಕೂರಿನಲ್ಲಿರುವ ಚರಿತ್ರೆಯಲ್ಲಿ ಬೇರೆ ರೀತಿ ಇದೆ.

ಹಡಗಗಳು ಬಂದ ಕೂಡಲೇ ಭೂತಾಳಪಾಂಡ್ಯನಿಗೆ ವರ್ತಮಾನವು ತಿಳಿದು, ಯಾರ ಹಡಗುಗಳೆಂದು ಗೊತ್ತಾಗದೆ, ಅವುಗಳನ್ನು ಸರಕಾರದ ಸ್ವಾಧೀನವಿಡಬೇಕೆಂದು ಅಪ್ಪಣೆಕೊಟ್ಟನು. ಅನಂತರ ವಿಚಾರಿಸಿ ನೋಡಿದಾಗ ಅವು ತನ್ನ ಮಾವನ ಹಡಗುಗಳೆಂದು ತಿಳಿದು ಬಂತು. ಆ ವಿಚಾರವನ್ನು ಅವನು ಒಡನೆಯೇ ತನ್ನ ಮಾವನಿಗೆ ತಿಳಿಸಿದನು. ಹಡಗುಗಳು ತಿರುಗಿ ಬರುವಾಗ 6 ವರುಷಗಳಾದ್ದರಿಂದ ಅವುಗಳು ಮುಳುಗಿಹೋಗಿರಬಹುದೆಂದು ದೇವಪಾಂಡ್ಯನು ಆಲೋಚಿಸಿದ್ದನು. ಅವನು ತನ್ನ ಹೆಂಡತಿಯು ಸಿಟ್ಟಿನಿಂದ ಹೋದುದರಿಂದ, ತನ್ನ ಮಕ್ಕಳಿಗೆ ಏನೊಂದೂ ಕೊಡಲಿಕ್ಕಿಲ್ಲವೆಂದು ಹೇಳಿ, ಅಳಿಯನಾದ ಜಯಭೂತಾಳಪಾಂಡ್ಯನಿಗೆ ತನ್ನ ಆಸ್ತಿಯನ್ನೂ ಹಡಗುಗಳನ್ನೂ ಕೊಟ್ಟನು. ಈ ಸಿಟ್ಟಿನಿಂದ ಇನ್ನುಮುಂದೆ ಮಕ್ಕಳಕಟ್ಟೆಂಬದೇ ಇರಕೂಡದೆಂದು, 'ಅಳಿಯಸಂತಾನಕಟ್ಟು' ಎಂಬ ಹೊಸಕಾಯಿದೆಯನ್ನು ಭೂತಾಳಪಾಂಡ್ಯನಿಂದ ಉಂಟುಮಾಡಿಸಿದನು. ಈ ಅಳಿಯಕಟ್ಟನ್ನು ತುಳುರಾಜ್ಯದಲ್ಲಿ ಪ್ರಚಾರಕ್ಕೆ ತಂದದ್ದಲ್ಲದೆ, ತನ್ನ ಸ್ನೇಹಿತನಾದ ಮಲೆಯಾಳರಾಜ್ಯದ ರಾಜನಾದ ಚೆರುಮಾನ ಪೆರುಮಾಳನಿಂದ ಸಹ ಈ ಕಟ್ಟನ್ನು 'ಮರಿಮಕ್ಕತಾಯಂ' ಎಂಬ ಹೆಸರಿನಿಂದ ಅಲ್ಲಿಯೂ

ಪ್ರಚಾರಕ್ಕೆ ಬರುವ ಹಾಗೆ ಮಾಡಿದನು. ಎಲ್ಲಾ ಜಾತಿಯವರು ಈ ಕಟ್ಟಿನ ಪ್ರಕಾರ ನಡಿಯಬೇಕಾದರೆ, ಭೂತಾಳಪಾಂಡ್ಯನು ಬಲಿಷ್ಠನಾದ ರಾಜನಾಗಿರಬೇಕೆಂದು ಊಹಿಸಬೇಕಾಗಿದೆ. ಬ್ರಾಹ್ಮಣರು ಮಾತ್ರ ಈ ಕಟ್ಟಿನ ಪ್ರಕಾರ ನಡಿಯಲಿಕ್ಕೆ ಒಪ್ಪಲಿಲ್ಲ. ಈ ಕಟ್ಟನ್ನು ಅನುಸರಿಸದೆ ಇರುವ ಜಾತಿಯವರು ಈ ಜಿಲ್ಲೆಗೆ ಭೂತಾಳಪಾಂಡ್ಯನ ಆಳಿಕೆಯ ತರುವಾಯ ಬಂದರೆಂದು ತಿಳಕೊಳ್ಳಬೇಕಾಗಿದೆ.

ಅನಂತರ ಭೂತಾಳಪಾಂಡ್ಯನು 12 ಮಂದಿ ರಾಣಿಯರನ್ನು ಮದುವೆಮಾಡಕೊಂಡನು. ಅರಮನೆಯ ವಾಯುವ್ಯ ದಿಕ್ಕಿಗೆ ಸಿದ್ಧೇಶ್ವರನ ದೇವಸ್ಥಾನವನ್ನೂ ಆ ದೇವಸ್ಥಾನದ ಮುಂದುಗಡೆ ಪಶ್ಚಿಮಕ್ಕೆ ಬಹಳ ದೊಡ್ಡದಾದ ಕೆರೆಯನ್ನೂ ಕಟ್ಟಿಸಿದನು. ಈ ಅರಸನ ಆಳಿಕೆಯಲ್ಲಿ ಬಾರಕೂರು ಪಟ್ಟಣವು ಅಭಿವೃದ್ಧಿಯನ್ನು ಹೊಂದಿತು. ಎಲ್ಲಾ ತುಳುಜನರ ನ್ಯಾಯಗಳನ್ನು ತೀರಿಸಲಿಕ್ಕೆ ನಿಡಂಬೂರು ಮತ್ತು ಚಿಟ್ಟಿಪಾಡಿ ಈ ಎರಡು ಊರುಗಳಲ್ಲಿ ಇಬ್ಬರು ಬಲ್ಲಾಳರನ್ನು ನಿಯಮಿಸಿದನು. ಹಾಳುಬಿದ್ದಿರುವ ಚಿಟ್ಟಿಪಾಡಿ, ನಿಡಂಬೂರು ಎಂಬ ಎರಡೂ ಪಟ್ಟಣಗಳನ್ನು ಈಗಲೂ ಉಡುಪಿಯ ಹತ್ತಿರ ನೋಡಬಹುದು. ಈಗ ಈ ಎರಡು ಬಲ್ಲಾಳಿಕೆಗಳು ಬ್ರಾಹ್ಮಣರ ಕೈಯಲ್ಲಿವೆ. ಬಾರಕೂರಿನಲ್ಲಿ 12 ಮಂದಿ ರಾಣಿಯರಿಗೋಸ್ಕರ 12 ಬಸದಿಗಳನ್ನೂ 12 ದೇವಾಲಯಗಳನ್ನೂ ಕಟ್ಟಿಸಿದನು. ಈಗ ಬಾರಕೂರಿನಲ್ಲಿರುವ ಅನೇಕ ದೇವಸ್ಥಾನಗಳಲ್ಲಿ ಭೂತಾಳಪಾಂಡ್ಯನು ಕಟ್ಟಿಸಿದ 12 ದೇವಸ್ಥಾನಗಳು ಯಾವವೆಂದು ತಿಳಿಯುವದಿಲ್ಲ. ಭೂತಾಳಪಾಂಡ್ಯನು 74 ವರುಷ ರಾಜ್ಯಭಾರಮಾಡಿ ತನ್ನ ಅಳಿಯನಾದ ವಿದ್ಯುಮ್ನಪಾಂಡ್ಯನಿಗೆ ಪಟ್ಟಕಟ್ಟಿ ತಾನು ಯತಿಯಾದನು. ಜೈನರಲ್ಲಿ ಈಗಲೂ ಈ ಪದ್ಧತಿಯು ವಾಡಿಕೆಯಲ್ಲಿದೆ; ಅನೇಕರು ನಿರ್ವಾಣಯತಿಗಳಾಗುತ್ತಾರೆ.

## ವಿದ್ಯುಮ್ನ ಪಾಂಡ್ಯರಾಯ.

ವಿದ್ಯುಮ್ನಪಾಂಡ್ಯನು, ಭೂತಾಳಪಾಂಡ್ಯ ಚರಿತ್ರೆಯ ಪ್ರಕಾರ ಕ್ರಿ. ಶ. 148ರಲ್ಲಿ ಪಟ್ಟಕ್ಕೆಬಂದು ಮಾವನಂತೆಯೆ ಧರ್ಮದಿಂದ

ರಾಜ್ಯವನ್ನಾಳಿದನು. ಇವನೂ 12 ಮಂದಿ ಕನ್ನಿಕೆಯರನ್ನು ಮದುವೆ ಯಾದನು. ಅಳಿಯಸಂತಾನಕಟ್ಟಿನ ಪ್ರಕಾರ ಹೆಂಡತಿಯ ಮಕ್ಕಳಿಗೆ ಯಾವ ತರದ ಹಕ್ಕೂ ಇಲ್ಲದ್ದರಿಂದ ಅವನ 12 ಮಂದಿ ರಾಣಿಯರ 12 ಮಂದಿ ಮಕ್ಕಳಿಗೆ ತನ್ನ ರಾಜ್ಯದಲ್ಲಿ 12 ಮಾಗಣೆಗಳನ್ನು ಬಿಟ್ಟು ಕೊಟ್ಟು ಅವರನ್ನು 12 ಮಂದಿ ಬಲ್ಲಾಳರಾಗಿ ಮಾಡಿದನು.

ಈ ಬಲ್ಲಾಳರು ಯಾರೆಂದರೆ:—(1) ಕಟ್ಟುಪಾಡಿ ದೊರೆಬಲ್ಲಾಳ. (2) ಕಾಪು ಮರ್ದಹೆಗ್ಗಡೆ. (3) ಎಮರ್ಾಳ ಮಾರಂಹೆಗ್ಗಡೆ. (4) ಪಡುಬಿದರೆ ಕಿನ್ನಿಕ್ಕಬಲ್ಲಾಳ. (5) ಪಣಂಬೂರು ಮದ್ದಹೆಗ್ಗಡೆ. (6) ಕೊಳೂರು ದೊರೆಬಲ್ಲಾಳ. (7) ಸುರಾಲಿನ ಹತ್ತಿರವಿರುವ ಇರ್ವತ್ತೂರು ಕಿನ್ನರಿಬಲ್ಲಾಳ. (8) ಕುತ್ತೈತ್ತೂರು ಮದೂರಿಪ್ಪೈಹೆಗ್ಗಡೆ. (9) ಎನರ್ಾಡು ಬಲ್ಲಾಳ. (10) ಏಳುನಾಡುವಂಡಾರ ಕಾಪಿಟ್ಟು ಹೆಗ್ಗಡೆ. (11) ಮುದ್ರಾಡಿ ಕಿನ್ನರಿಹೆಗ್ಗಡೆ. (12) ಕಾಂತಾವರ ಕಿನ್ನರಿಹೆಗ್ಗಡೆ. ಇವುಗಳಲ್ಲಿ ಕಾಪು, ಕಟ್ಟಪಾಡಿ, ಪಣಂಬೂರು, ಏಳುನಾಡುಕಾಪಿಟ್ಟು ಈ ಮನೆತನಗಳು ನಾಶವಾಗಿವೆ ಇವು ಈಗ ಬಂಟರ ಸ್ವಾಧೀನ ಇವೆ. ವಿದ್ಯುಮ್ನಪಾಂಡ್ಯರಾಯನು ಕ್ರಿ. ಶ. 229ರಲ್ಲಿ ಕಾಲವಾದನು.

ವಿದ್ಯುಮ್ನಪಾಂಡ್ಯನ ತರುವಾಯ ವೀರಪಾಂಡ್ಯನು ಕ್ರಿ. ಶ. 262ರ ವರೆಗೂ, ಚಿತ್ರವೀರ್ಯಪಾಂಡ್ಯನು ಕ್ರಿ. ಶ. 281ರ ವರೆಗೂ, ದೇವವೀರಪಾಂಡ್ಯನು ಕ್ರಿ. ಶ. 290ರ ವರೆಗೂ, ಬಲವೀರಪಾಂಡ್ಯನು ಕ್ರಿ. ಶ. 316ರ ವರೆಗೂ, ಜಯವೀರಪಾಂಡ್ಯನು ಕ್ರಿ. ಶ. 343ರ ವರೆಗೂ ಆಳಿದರು.

ಜಯವೀರಪಾಂಡ್ಯನ ತರುವಾಯ ಈ ವಂಶವು ನಾಶವಾಯಿತು. ಆ ಮೇಲೆ ಸಿದ್ಧಪಾಂಡ್ಯನೆಂಬ ನಾಡವರ ಜಾತಿಯವನು 50 ವರುಷ ಆಳಿದನು. ಇವನ ತರುವಾಯ ಭೂತಾಳಪಾಂಡ್ಯನ ಅರಮನೆಯು ಬಿದ್ದುಹೋಯಿತು. ಸಿಂಹಾಸನವು ನೆಲದಡಿಯಲ್ಲಿ ಬಿದ್ದದೆ. ಅರಮನೆಯ

ಅಡಿಸ್ಥಳವು ಸುಮಾರು 3 ಏಕ್ರೆ ಸ್ಥಳದಲ್ಲಿ ಹಾಳುಬಿದ್ದಿರುವದನ್ನು ಈಗಲೂ ನೋಡಬಹುದು. ಸಿಂಹಾಸನವು ಭೂಸ್ಥಾಪನೆಯಾದ ಸ್ಥಳದ ಮೇಲೆ ಒಂದು ಸಣ್ಣ ಗುಡಿಯನ್ನು ಕಟ್ಟಿ ಅದರ ಒಳಗಡೆ ಒಂದು ಪೀಠವನ್ನು ಕಟ್ಟಿದ್ದಾರೆ. ನವರಾತ್ರಿ ಸಮಯ ಈ ಪೀಠದ ಮೇಲೆ 9 ದಿವಸವೂ ಶ್ರೀಚಕ್ರವನ್ನು ಬರೆದು ಪೂಜೆಯು ಇಂದಿಗೂ ನಡಿಯುತ್ತದೆ. ಅರಮನೆಯಲ್ಲಿ ಪೂಜಿಸುತ್ತಿದ್ದ ಅಮ್ಮನವರ ಪ್ರತಿಮೆ ಯನ್ನು ಪಂಚಲಿಂಗೇಶ್ವರ ಎಂಬ ಸೀಮೆಯ ದೇವಸ್ಥಾನದಿಂದ ತಂದು ಪೀಠದ ಹತ್ತಿರ ಇಟ್ಟು ಪೂಜಿಸುತ್ತಾರೆ. ನವರಾತ್ರಿ ಸಮಯದಲ್ಲಿ ಸಿಂಹಾಸನದ ಪೂಜೆಗೆ 40 ರೂಪಾಯಿ ತಸದೀಕು ಸಿಕ್ಕುತ್ತದೆ. ಇದೇ ಪದ್ಧತಿಯು ಈಗ ಊರ್ಜಿತಸ್ಥಿತಿಯಲ್ಲಿರುವ ಸುರಾಲ ಅರಮನೆಯಲ್ಲಿ ಬಹಳ ವಿಜೃಂಭಣೆಯಿಂದ ನಡಿಯುತ್ತದೆ. ಭೂತಾಳಪಾಂಡ್ಯನ ಸಿಂಹಾ ಸನ ಪೂಜಿಸಮಯ ಪುರಾತನಕಾಲದಲ್ಲಿ ಅರಮನೆಯ ಸೇವೆಮಾಡಿ ಕೊಂಡಿದ್ದ ವೇಶ್ಯಾಸ್ತ್ರೀಯರ ಕುಟುಂಬದವರೂ ಇತರ ಕೆಲಸದವರೂ ಈಗ ಅವರಿಗೆ ಸಿಗುವ ಹಣವು ಒಂದೆರಡು ರೂಪಾಯಿಯಾದರೂ ಭಕ್ತಿಯಿಂದ ಅಲ್ಲಿಗೆ ಹೋಗಿ 9 ದಿವಸ ಸೇವೆಮಾಡುತ್ತಾರೆ.

ಬಾರಕೂರಿನಲ್ಲಿರುವ ಕೋಟೆಯನ್ನೂ, ಮೂಡಕೇರಿ ಸೋಮೇಶ್ವರ ದೇವಸ್ಥಾನವನ್ನೂ, ಅದರ ಮುಂದುಗಡೆ ಇರುವ ದೊಡ್ಡ ಕಲ್ಲು ಕಟ್ಟಿದ ಕೆರೆಯನ್ನೂ, ಮೂಡಕೇರಿಯಲ್ಲಿರುವ ಶಿಲೆಯ ಮಂಟಪಗಳನ್ನೂ, (ಕಲ್ಲುಚಪ್ಪರ) ಚೌಳಿಕೇರಿ ಗಣಪತಿ ದೇವಸ್ಥಾನವನ್ನೂ, ಅದರ ಮುಂದುಗಡೆ ಇರುವ ಅರ್ಧ ಮುಚ್ಚಿಹೋಗಿರುವ ದೊಡ್ಡ ಕೆರೆಯನ್ನೂ, ಕೋಟೆಕೇರಿ ಸೋಮನಾಥೇಶ್ವರ ದೇವಸ್ಥಾನವನ್ನೂ, ಶೀಮೆಯ ದೇವ ಸ್ಥಾನವಾದ ಪಂಚಲಿಂಗೇಶ್ವರ ದೇವಸ್ಥಾನವನ್ನೂ, ಅರಮನೆಯ ವಾಯುವ್ಯ ದಿಕ್ಕಿಗಿರುವ ಸಿದ್ಧೇಶ್ವರ ದೇವಸ್ಥಾನವನ್ನೂ, ಅದರ ಮುಂದು ಗಡೆ ಇರುವ ಶುದ್ಧವಾದ ನೀರಿನ ಸರೋವರವನ್ನೂ, ಗೋಪಾಲಕೃಷ್ಣ ದೇವಸ್ಥಾನವನ್ನೂ, ಅಮ್ಮನವರ ದೇವಸ್ಥಾನಗಳನ್ನೂ, ಪಂಚಲಿಂಗೇಶ್ವರ

ದೇವಸ್ಥಾನದ ಕೆರೆಯನ್ನೂ, ಇನ್ನೂ ಅಲ್ಲಲ್ಲಿ ಇರುವ ಸಣ್ಣ ದೇವಸ್ಥಾನಗಳನ್ನೂ, ಜೈನರ ಬಸದಿಗಳನ್ನೂ, ಅದರಲ್ಲಿಯೂ ಕತ್ತಲೆ ಬಸದಿಯನ್ನೂ, ಅದರ ಮುಂದುಗಡೆ ಇರುವ ಮಾನಸ್ತಂಬವನ್ನೂ, ಸುಮಾರು 300ರ ಮೇಲೆ ಅಲ್ಲಲ್ಲಿರುವ ಶಾಸನಕಲ್ಲುಗಳನ್ನೂ, ಮದನಕ್ಕೈಗಳನ್ನೂ, ಸತಿಕಲ್ಲುಗಳನ್ನೂ, ನಾಗಕಟ್ಟೆಗಳನ್ನೂ, ಉದ್ದವಾಗಿಯೂ ಅಗಲವಾಗಿಯೂ ಪಗಡೆ ಸಾಲಿನಲ್ಲಿರುವ ಅನೇಕ ಮಾರ್ಗಗಳನ್ನೂ, ಮುಖ್ಯವಾಗಿ ಚೌಳಿಕೇರಿ(ಜವುಳಿ ಕೇರಿ) ಮಣೆಗಾರಕೇರಿ (ಮಣಿಗಾರ—ರತ್ನಾದಿಕ ವ್ಯಾಪಾರಸ್ಥರಕೇರಿ) ಕೋಟೆಕೇರಿ (ಕೋಟೆಯ ಹತ್ತಿರವಿರುವ ಕೇರಿ) ಇವುಗಳನ್ನೂ, ಹಾಳಾದ ಪ್ರತಿಮೆಗಳನ್ನೂ, ನೋಡಿದರೆ ಯಾವ ಮನುಷ್ಯನಿಗಾದರೂ ಬಾರಕೂರಿನ ಪ್ರಾಚೀನ ಮಹತ್ವವು ಮನಸ್ಸಿಗೆ ಬಂದು ದುಃಖವು ಉಂಟಾಗದಿರಲಾರದು. ಪೋರ್ತುಗೀಸರ ಸಂಗಡ ಯುದ್ಧಮಾಡುವದಕ್ಕಾಗಿ ಸುರಾಲ ಅರಸರು ಸೀತಾನದಿಯ ದಕ್ಷಿಣಭಾಗದಲ್ಲಿ ಬಾರಕೂರಿಗೆ ಎದುರಾಗಿ ಕಟ್ಟಿಸಿದ ಮಣ್ಣಿನ ಗೋಡೆ ಇರುವ ಕೋಟೆಯು ಈಗಲೂ ಇದೆ. ವಿಜಯನಗರದ ಅರಸರ ಕಾಲದಲ್ಲಿ ಬಾರಕೂರು ರಾಜ್ಯದ ಒಡೆಯರು ಅಲ್ಲಿ ಇದ್ದುದರಿಂದ ಈ ಪಟ್ಟಣವು ಉನ್ನತಸ್ಥಿತಿಯಲ್ಲಿತ್ತು. ಸಿಂಹಾಸನದ ಪೂಜೆಯ ಸಮಯ ಈ ಒಡೆಯರು ಕೂತುಕೊಳ್ಳಲಿಕ್ಕೆ ಮಾಡಿಸಿದ ಮರ್ಯಾದೆಯ ಹಾಸಿಗೆಯನ್ನು ಈಗಲೂ ಸಿಂಹಾಸನದ ಕೋಣೆಯ ಜಗಲಿಯ ಮೇಲೆ ವರ್ಷಕ್ಕೊಂದು ಹೊಸ ಚಾಪೆಯಲ್ಲಿ ಕಟ್ಟಿ ಇಡುತ್ತಾರೆ. ಹಾಸಿಗೆಯು ಹರದು ಚೂರುಚೂರಾಗಿ ಹತ್ತಿಯು ಹೊರಗೆ ಬಂದಿದೆ. ಈ ವಸ್ತ್ರದ ಜರಿಯ ಬೆಳ್ಳಿಯ ಕ್ರಯವು ಸುಮಾರು 50 ರೂಪಾಯಿ ಆದೀತು. ಪೋರ್ತುಗೀಸರು ಈ ಪಟ್ಟಣವನ್ನು ಹಿಡಿದಾಗ ಸುರಾಲ ತೋಳಾರ ಅರಸರು ಯುದ್ಧಮಾಡಿ ಅವರನ್ನು ಓಡಿಸಿದ್ದಕ್ಕಾಗಿ ಆ ಅರಸರ ಮೇಲೆ ಸಿಟ್ಟಿನಿಂದ ಬಾರಕೂರು ಪಟ್ಟಣವನ್ನು ಅನೇಕ ಸಾರಿ ಸುಟ್ಟು ಹಾಳುಮಾಡಿದರು. ಅವರು ಭೂತಾಳಪಾಂಡ್ಯನ ಅರಮನೆಯ ಪೂರ್ವಕ್ಕೆ ಕಟ್ಟಿಸಿದ ಸಣ್ಣ ಇಗರ್ಜಿಯನ್ನು ಈಗ ದೊಡ್ಡದಾಗಿ

ಕಟ್ಟಿಸಿದ್ದಾರೆ. ಶಿರಿಯಾರಕ್ಕೆ ಹೋಗುವ ಮಾರ್ಗವು ಈ ಪಟ್ಟಣದ ಮಧ್ಯದಿಂದ ಹೋಗುವುದರಿಂದಲೂ ವಾರಕ್ಕೊಂದು ಸಂತೆಯೂ ಅರಮನೆಯ ಹತ್ತಿರವೇ ಕೂಡುವದರಿಂದಲೂ ಬಾರಕೂರು, ಪಟ್ಟಣದ ಹಾಗೆ ಕಾಣುತ್ತದೆ. ಇಲ್ಲದಿದ್ದರೆ ಈ ಪಟ್ಟಣವು ಹಳ್ಳಿಯ ಹಾಗೆ ತೋರುತ್ತಿತ್ತು.

## 7 ನೇ ಅಧ್ಯಾಯ.

### ನಾಡವರು ಅಥವಾ ಬಂಟರು.

ಬಂಟರು ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಪಯಸ್ವಾನಿ ನದಿಯ ಉತ್ತರ ದಿಕ್ಕಿನಿಂದ ಉಡುಪಿಯ ವರೆಗೂ, ನಾಡವರು ಉಡುಪಿಯಿಂದ ಉತ್ತರಕ್ಕೆ ಬೈಂದೂರಿನ ವರೆಗೂ ವ್ಯಾಪಿಸಿರುತ್ತಾರೆ. ಇವರು ಬಹಳ ಪುರಾತನಕಾಲದಿಂದ, ಎಂದರೆ, ಬ್ರಾಹ್ಮಣರು ಕನ್ನಡ ಜಿಲ್ಲೆಗೆ ಬರುವ ಮೊದಲೇ ಇಲ್ಲಿ ಬಂದು ನೆಲೆನಿಂತ ಒಂದು ವಂಶದವರು. ಇವರು ಈ ಜಿಲ್ಲೆಯಲ್ಲಿ ಪುರಾತನಕಾಲದಿಂದಲೇ ಇದ್ದರೊ, ಅಥವಾ ಉತ್ತರ ದೇಶದಿಂದ ಇಲ್ಲಿಗೆ ಬಂದ ದ್ರಾವಿಡರ ಒಂದು ಶಾಖೆಯವರೊ ಎಂಬದು ಸರಿಯಾಗಿ ತಿಳಿದುಬರುವದಿಲ್ಲ. ಆದರೆ ಇವರ ಪದ್ಧತಿಗಳನ್ನೂ ದೇಹ ಆಕೃತಿ ಮೊದಲಾದುವನ್ನೂ ನೋಡಿದರೆ ಇವರು ದ್ರಾವಿಡವಂಶಕ್ಕೆ ಸೇರಿದ ಒಂದು ಕುಟುಂಬದವರೆಂದು ಎಣಿಸಬಹುದು. ಇವರು ಅಲ್ಲಲ್ಲಿ ಸಣ್ಣ ಸಣ್ಣ ರಾಜ್ಯಗಳನ್ನು ಸ್ಥಾಪಿಸಿ ಆಳಿಕೊಂಡಿದ್ದರು; ಮಹಾ ಧೈರ್ಯಶಾಲಿಗಳು; ಕಾಯಶಕ್ತಿಯುಳ್ಳವರು; ರಾಜ್ಯಭಾರವನ್ನು ಮಾಡಲಿಕ್ಕೆ ಯೋಗ್ಯತೆಯುಳ್ಳವರು. ಆದುದರಿಂದ ಇವರು ಈ ಜಿಲ್ಲೆಯಲ್ಲಿರುವ ಬೇರೆ ದ್ರಾವಿಡ ವಂಶದವರನ್ನು ತಮ್ಮ ಕೈಕೆಳಗೆ ಇಟ್ಟುಕೊಂಡು ಆಳುತ್ತಿದ್ದರು. ಈಗಲೂ ಎಲ್ಲಾ ಶೂದ್ರಜಾತಿಯವರು ಇವರನ್ನು ಮರ್ಯಾದೆಯಿಂದ ಕಾಣುತ್ತಾರೆ.

ಕ್ರಿ. ಪೂ. 3ನೇ ಶತಮಾನದಲ್ಲಿ ಜೈನಮತವು ಈ ಜಿಲ್ಲೆಯಲ್ಲಿ ಎಂದರೆ, ತುಳುರಾಜ್ಯದಲ್ಲಿ, ಜೈನಮತ ಬೋಧಕರಿಂದ ಬೋಧಿಸಲ್ಪಟ್ಟಾಗ ಅನೇಕರು ತಮ್ಮ ಮತವನ್ನು ಬಿಟ್ಟು ಜೈನಮತಸ್ಥರಾದರು. ಅಂದಿನಿಂದ ಜೈನಮತವನ್ನು ಅವಲಂಬಿಸಿದವರಿಗೆ ಜೈನರೆಂದೂ, ತಮ್ಮ ಮತದಲ್ಲಿಯೇ ಉಳಿದವರಿಗೆ ಮಾಸಾದಿಕ ಜೈನರೆಂದೂ ಹೆಸರಾಯಿತು. ಕ್ರಿ. ಪೂ. 200ರಿಂದ ಕ್ರಿ. ಶ. 600ರ ವರೆಗೆ ಆಳಿದ ಕದಂಬ ಅರಸರ ಕಾಲದಲ್ಲಿಯೂ ಕ್ರಿ. ಶ. 578—757ರ ವರೆಗೆ ಆಳುತ್ತಿದ್ದ ಚಾಲುಕ್ಯರ ಕೈಕೆಳಗೂ, 754—973ರ ವರೆಗೆ ಆಳಿದ ರಾಷ್ಟ್ರಕೂಟ ಅರಸರ ಕಾಲದಲ್ಲಿಯೂ, 1047—1336ರ ವರೆಗೆ ಆಳುತ್ತಿದ್ದ ಹೊಯ್ಸಳಬಲ್ಲಾಳರ ಕಾಲದಲ್ಲಿಯೂ, 1336—1565ರ ವರೆಗೆ ಆಳಿದ ವಿಜಯನಗರ ಅರಸುಗಳ ಕಾಲದಲ್ಲಿಯೂ ಇವರು ದೊಡ್ಡ ದೊಡ್ಡ ಸೇನಾಧಿಪತಿಗಳಾಗಿಯೂ ಸೈನಿಕರಾಗಿಯೂ ಇದ್ದರು. ಈಗ ಇರುವ ಗುತ್ತುಗಳ ಯಜಮಾನರ ಹಿರಿಯರಲ್ಲಿ ಪ್ರತಿಯೊಬ್ಬರು ಜೈನರಾಜರ ಸೇನಾಧಿಪತಿಗಳಾಗಿದ್ದರು. ಈಗಲೂ ಜೈನರಾಜರೂ, ವಿಟ್ಲದ ಅರಸನೂ, ಕುಂಬಳೆಯ ಅರಸನೂ ರಾಜ್ಯವನ್ನು ಕಳಕೊಂಡರೂ ಶಾಸ್ತ್ರಪ್ರಕಾರ ಪಟ್ಟವನ್ನೇರುವ ಸಮಯ ಆಯಾಯ ಸೇನಾಧಿಪತಿಗಳ ವಂಶದ ಗುತ್ತಿನವರು ಬರುವ ಪದ್ಧತಿ ಇದೆ. ಕೆಲವು ಕುಟುಂಬದವರಿಗೆ ರಾಜನ ಕೈಯಲ್ಲಿ ಪಟ್ಟದ ಕತ್ತಿಯನ್ನು ಕೊಡುವ ಹಕ್ಕೂ, ಕೆಲವು ಕುಟುಂಬದವರಿಗೆ ಪಟ್ಟದ ಉಂಗುರವನ್ನು ಹಾಕಿ ಪಟ್ಟದ ಹೆಸರಿನಿಂದ ಕರೆಯುವ ಹಕ್ಕೂ ಈಗಲೂ ಇದೆ. ಆ ಸಮಯದಲ್ಲಿ ಅರಸರು ಉಚಿತವಾಗಿ ಬಿಟ್ಟ ಮಾನ್ಯದ ಭೂಮಿಗಳನ್ನು ಈಗಲೂ ಅವರ ಸಂತತಿಯವರು ಅನುಭವಿಸಿಕೊಂಡು ಬರುತ್ತಾರೆ. 1560—1763ರ ವರೆಗೆ ಈ ಜಿಲ್ಲೆಯನ್ನು ಆಳಿದ ಇಕ್ಕೇರಿ ಅರಸರ ಕಾಲದಲ್ಲಿ ಇವರು ಹೆಚ್ಚಾಗಿ ಸೈನ್ಯದಲ್ಲಿರಲಿಲ್ಲ. ಜೈನರಾಜರೂ ಅವರ ಸೇನಾಧಿಪತಿಗಳಾದ ನಾಡವರೂ ಬಂಟರೂ ತಮ್ಮ ಮೇಲೆ ಒಳಸಂಚು ನಡಿಸಲಿಕ್ಕೆ ಸಾಕೆಂಬ ಇರಾದೆಯಿಂದ ಇವರು ದೂರದೇಶದಿಂದ ರಾಮ ರಾಜ ಕ್ಷತ್ರಿಯರನ್ನು ತಂದು ಸೈನಿಕರಾಗಿ ನೇಮಿಸಿದರು. ಅಂದಿನಿಂದ

ಇವರು ಬೇಸಾಯದ ಕಸಬನ್ನೇ ಅನುಸರಿಸಿಕೊಂಡಿರುತ್ತಾರೆ. ತುಳು ರಾಜ್ಯದಲ್ಲಿ ಬ್ರಾಹ್ಮಣರ ನಂತರ 2ನೇ ಮರ್ಯಾದೆಯು ಎಲ್ಲಾ ದೇವಸ್ಥಾನಗಳಲ್ಲಿಯೂ ಭೂತಸ್ಥಾನಗಳಲ್ಲಿಯೂ ಇವರಿಗೆ ಸಲುತ್ತದೆ. ಇವರಲ್ಲಿ ಉತ್ತರದಲ್ಲಿರುವ ನಾಡವರೂ ದಕ್ಷಿಣದಲ್ಲಿರುವ ಬಂಟರೂ ಅಳಿಯಸಂತಾನ ಕಟ್ಟನ್ನೇ ಆಚರಿಸುತ್ತಾರೆ. ಪರಿವಾರ ಬಂಟರಿಗೆ ಮಕ್ಕಳಸಂತಾನ ಕಟ್ಟು. ಈಗಲೂ ಬಂಟರು ಬಹಳ ಐಶ್ವರ್ಯವಂತರಾಗಿರುತ್ತಾರೆ

## 8 ನೇ ಅಧ್ಯಾಯ.

### ಪ್ರಾಚೀನಕಾಲದ ಸಾಮಾಜಿಕ ಪದ್ಧತಿಗಳು.

ಅತೀ ಪ್ರಾಚೀನಕಾಲದಿಂದ ನಡೆದುಬಂದ ಪದ್ಧತಿಗಳೂ, ಉಡಿಗೆ ತೊಡಿಗೆಗಳೂ, ಸಾಮಾಜಿಕಸ್ಥಿತಿಯೂ ತುಳು ದೇಶದಲ್ಲಿ ಈಗಲೂ ಊರ್ಜಿತಸ್ಥಿತಿಯಲ್ಲಿವೆ.

**ರಾಜ್ಯಭಾರಕ್ರಮ**—ಈ ಜಿಲ್ಲೆಯು ಅನೇಕ ಭಾಗಗಳಾಗಿ ವಿಭಾಗಿಸಲ್ಪಟ್ಟು ಅಲ್ಲಲ್ಲಿ ಸಣ್ಣ ಸಣ್ಣ ಅರಸುಗಳು ರಾಜ್ಯಭಾರಮಾಡುತ್ತಿದ್ದರು. ರಾಜನು ಅಷ್ಟಮಂತ್ರಿಗಳ ಸಹಾಯದಿಂದ ರಾಜ್ಯವಾಳುತ್ತಿದ್ದನು. ಅಷ್ಟಪ್ರಧಾನಿಗಳು ಯಾರೆಂದರೆ: 1 ಪ್ರಧಾನಿ 2 ಸೇನಾಧಿಪತಿ 3. ಜೋಯಿಸ 4. ರಾಜಪುರೋಹಿತ 5. ರಾಜವೈದ್ಯ 6. ದಂಡಾಧಿಕಾರಿ, 7. ಕೋಶಾಧಿಪತಿ 8. ಹಾಸ್ಯಗಾರ. ಅರಸನು ಬಹಳ ವೈಭವದಿಂದ ಅರಮನೆಯಲ್ಲಿ ವಾಸಮಾಡುತ್ತಿದ್ದನು.

**ಕಂದಾಯ**—ಭೂತೆರಿಗೆ ಮತ್ತು ಸುಂಕ ಇವುಗಳರೆಡೇ ರಾಜಾದಾಯಗಳು. ಬಂದರುಗಳಲ್ಲಿ ಇಳಿಸಿದ ಪ್ರತಿಯೊಂದು ವಸ್ತುವಿನ ಮೇಲೆ ಸುಂಕವನ್ನು ಕೊಟ್ಟು ಅರಸನ ಮುದ್ರೆಯೊತ್ತಿದ ನಂತರ ಆ ವಸ್ತುಗಳನ್ನು ಅಲ್ಲಿಂದ ಕೊಂಡುಹೋಗಬೇಕಿತ್ತು. ಮುಖ್ಯವಾದ ಮಾರ್ಗಗಳಲ್ಲಿಯೂ,

ರಾಜ್ಯದ ಗಡಿಗಳಲ್ಲಿಯೂ ಸುಂಕವನ್ನು ವಸೂಲುಮಾಡುತ್ತಿದ್ದರು. ಆ ಸುಂಕದ ಕಟ್ಟೆಗಳು ಜಿಲ್ಲೆಯ ಎಲ್ಲಾ ಭಾಗಗಳಲ್ಲಿಯೂ ಈಗಲೂ ಇವೆ. ಈಗ ಆ ಕಟ್ಟೆಗಳಲ್ಲಿ ಸುಂಕವನ್ನು ವಸೂಲುಮಾಡದೆ ಇದ್ದರೂ ಕಟ್ಟೆಗಳ ಹೆಸರುಗಳು ಉಳಿದಿವೆ. ಭೂಕಂದಾಯವು ಧಾನ್ಯದ ರೂಪವಾಗಿಯೂ ಹಣದ ರೂಪವಾಗಿಯೂ ವಸೂಲಾಗುತ್ತಿತ್ತು. ಭೂತಾಳಪಾಂಡ್ಯನ ಕಾಲದ ವರೆಗೆ ಭತ್ತವನ್ನೇ ಕಂದಾಯವಾಗಿ ಕೊಡುತ್ತಿದ್ದರು. ಇವನು ಭತ್ತದ ಬಧಲಾಗಿ ಅಕ್ಕಿಯನ್ನು ಕೊಡಬೇಕೆಂದು ವಿಧಿಸಿ ಅಕ್ಕಿ ಮಾಡುವ ಖರ್ಚನ್ನು ಪ್ರಜೆಗಳ ಮೇಲೆಯೇ ಹೊರಿಸಿದನು. ಮೇಲಾಧಿಕಾರವನ್ನು ನಡಿಸುವ ಅರಸನು ಒಳ ಅರಸುಗಳಿಂದ ಕಪ್ಪವನ್ನು ತೆಗೆದುಕೊಳ್ಳುತ್ತಿದ್ದನು. ಇಕ್ಕೇರಿ ಅರಸರ ಕಾಲದಲ್ಲಿ ಒಬ್ಬೊಬ್ಬ ಒಳ ಅರಸನು ಒಂದೊಂದು ವಿಧದ ವಸ್ತುವಿನ ರೂಪದಲ್ಲಿ ಕಪ್ಪವನ್ನು ಸಲ್ಲಿಸುತ್ತಿದ್ದನು. ಬಂಗರಾಜನು ಹಣವನ್ನೂ, ವಿಟ್ಲದ ಡೊಂಬಹೆಗಡೆಯು ಅಡಿಕೆಯನ್ನೂ, ವೇಣೂರಿನ ಅಜಿಲನು ಅಕ್ಕಿಯನ್ನೂ, ಬೈಲಂಗಡಿ ಮೂಲನು ಏಲಕ್ಕಿಯನ್ನೂ, ಮೂಲಿಕೆ ಸಾವಂತನು ಉಪ್ಪನ್ನೂ ಪಣಪಿಲ ಕೊನ್ನಾರ ಅರಸನು ತೆಂಗಿನಕಾಯಿಗಳನ್ನೂ ಕೊಡುತ್ತಿದ್ದರು.

**ಸೈನ್ಯ:**—ಬ್ರಾಹ್ಮಣರು ಮತ್ತು ಕೈಗಾರಿಕೆಗಳಲ್ಲಿ ನಿರತರಾಗಿರುವ ಜಾಡರು, ಕುಂಬಾರರು, ಕಮ್ಮಾರರು, ಪಾಂಚಾಲರು, ಗುಡಿಗಾರರು, ಕಂಚುಗಾರರು, ಇವರು ಹೊರತು ಉಳಿದ ಎಲ್ಲಾ ಜಾತಿಯವರು, ಎಂದರೆ, ಬಂಟರು, ನಾಡವರು, ಬಿಲ್ಲವರು, ಬಾಕುಡರು, ಮುಂಡಾಲ ಹೊಲೆಯರು ಮನೆಗೆ ಒಬ್ಬನ ಪ್ರಕಾರ ಯುದ್ಧದ ಸಮಯ ರಣಭೇರಿಯನ್ನು ರಾಜಮಂದಿರದ ಹೆಬ್ಬಾಗಲಲ್ಲಿ ಹೊಡೆದ ಕೂಡಲೇ ತಮ್ಮ ಆಯುಧಗಳ ಸಹಿತ ಹೊರಟುಬರಬೇಕಿತ್ತು. ಪ್ರತಿ ಒಂದು ಗುತ್ತಿನ ಬಂಟರೂ ನಾಡವರೂ ಕೆಲವು ಬಿಲ್ಲವರೂ ಮುಂಡಾಲ ಹೊಲೆಯರ ಪ್ರತಿ ಒಬ್ಬ ಮುಖಾರಿಯೂ ಸೇನಾಧಿಪತಿಗಳಾಗಿದ್ದರು. ಈಗಲೂ ತುಳುರಾಜರಿಗೆ ಪಟ್ಟಕಟ್ಟುವ ಸಮಯದಲ್ಲಿ ಎಲ್ಲರೂ

ಅರಮನೆಗೆ ಬರುವ ಪದ್ಧತಿ ಇದೆ. ಕತ್ತಿಯು ಮುಖ್ಯವಾದ ಆಯುಧವಾಗಿತ್ತು. ಅರಸನು ಯುದ್ಧದ ಸಮಯ ತಾನೇ ಮುಂದಾಳಾಗಿ ಹೋಗುತ್ತಿದ್ದನು. ಸೈನಿಕರೆಲ್ಲರೂ ರಾಜಭಕ್ತಿಯಿಂದ ಇದ್ದರು. ಸೈನ್ಯವನ್ನು ಸಾಕಲಿಕ್ಕೆ ಖರ್ಚು ತಗಲುತ್ತಿದ್ದಿಲ್ಲ.

**ಸಾಮಾಜಿಕ ಸ್ಥಿತಿ:**—ರಾಜನು ರಾಜ್ಯಾಧಿಕಾರಿಯಾಗಿದ್ದು ಪ್ರಜೆಗಳ ಸುಖದುಃಖಗಳಲ್ಲಿ ಸಮಭಾಗಿಯಾಗಿದ್ದನು. ದೇವಸ್ಥಾನಗಳ ಉತ್ಸವಕಾಲಗಳಲ್ಲಿಯೂ, ಬರಗಾಲ, ಸಾಂಕ್ರಾಮಿಕ ರೋಗಗಳು ತಲೆದೋರಿದ ಕಷ್ಟಕಾಲಗಳಲ್ಲಿಯೂ ತಾನು ಮುಂದಾಳಾಗಿ ಪುರೋಹಿತನೊಡನೆ ದೇವಸ್ಥಾನಗಳಲ್ಲಿಯೂ ಬಸದಿಗಳಲ್ಲಿಯೂ ಪ್ರಾರ್ಥನೆ ಮಾಡುತ್ತಿದ್ದನು. ಈಗ ಇರುವ ಒಳ ಅರಸುಗಳು ರಾಜ್ಯಗಳನ್ನು ಕಳಕೊಂಡರೂ, ಸೀಮೆದೇವಸ್ಥಾನಗಳಲ್ಲಿ ಉತ್ಸವಾದಿಗಳು ನಡಿಯಬೇಕಾದರೆ, ಹಾಗು ಸಾಂಕ್ರಾಮಿಕ ರೋಗಗಳು ತಲೆದೋರಿದಾಗ ದೇವಸ್ಥಾನಗಳಲ್ಲಿ ಅಭಿಷೇಕ ಮುಂತಾದ್ದನ್ನು ನಡಿಸಬೇಕಾದರೆ ಆಯಾಯ ರಾಜರೂ, ಮಂತ್ರಿ, ಸೇನಾಧಿಪತಿ ಪುರೋಹಿತ ಮುಂತಾದವರೂ ಬಾರದೆ ಯಾವದೊಂದು ಕೆಲಸವನ್ನು ಮಾಡಲಿಕ್ಕೆ ಸಾಧ್ಯವಿಲ್ಲ. ಯುದ್ಧದ ಸಮಯ ಯುದ್ಧಕ್ಕೆ ಹೊರಡಬೇಕಾದರೆ ದೇವಸ್ಥಾನಗಳಿಗೂ ಬಸದಿಗಳಿಗೂ ಹೋಗಿ ಪ್ರಾರ್ಥನೆಮಾಡಿ ನಂತರ ಹೊರಡುತ್ತಿದ್ದರು. ದ್ರಾವಿಡ ಜನರಲ್ಲಿ ಜಾತಿಭೇದಗಳು ಇದ್ದರೂ ರಾಜ್ಯಭಾರದ ಸಂಗತಿಯಲ್ಲಿ ಯಾವ ತರದ ತೊಂದರೆಯೂ ಉಂಟಾಗುತ್ತಿದ್ದಿಲ್ಲ. ಪ್ರತಿ ಒಂದು ಜಾತಿಯು ರಾಜ್ಯದ ಏಳಿಗೆಗೆ ಬೇಕಾದ ಒಂದೊಂದು ಸಂಸ್ಥೆಯಾಗಿತ್ತು. ಬ್ರಾಹ್ಮಣರು ಒಳ್ಳೇ ವಿದ್ಯಾವಂತರಾಗಿದ್ದು ಎಲ್ಲರೂ ಅವರನ್ನು ಮರ್ಯಾದೆಯಿಂದ ಕಾಣುತ್ತಿದ್ದರು.

**ಉಡಿಗೆತೊಡಿಗೆ:**—ಉಡಿಗೆತೊಡಿಗೆಗಳು ಸಾಧಾರಣ ತರದವುಗಳಾಗಿದ್ದವು. ಗಂಡಸರು ಒಂದು ವಸ್ತ್ರವನ್ನು ಉಟ್ಟುಕೊಂಡು ಒಂದು ದೋತ್ರವನ್ನು ಹೊದ್ದುಕೊಳ್ಳುತ್ತಿದ್ದರು. ಕೂದಲನ್ನು ಕತ್ತರಿ

ಸುತ್ತಿದ್ದಿಲ್ಲ. ತಲೆಗೆ ಬಿಸಿಲು ತಾಗದ ಹಾಗೆ ಮುಟ್ಟಾಳೆಯನ್ನು ಅಥವಾ ಮುಂಡಾಸನ್ನು ಧರಿಸಿಕೊಳ್ಳುತ್ತಿದ್ದರು. ಬ್ರಾಹ್ಮಣರು ತಲೆಯ ಮೇಲೆ ಸ್ವಲ್ಪ ಕೂದಲನ್ನು ಮಾತ್ರವೇ ಇಟ್ಟುಕೊಳ್ಳುತ್ತಿದ್ದರು. ಮೀಸೆಯ ತುದಿ ಕತ್ತರಿಸುತ್ತಿದ್ದರು. ರಾಜಸೇವಕರು ಮಾತ್ರ ಇಜಾರನ್ನೂ ಅಂಗಿಯನ್ನೂ ತೊಟ್ಟುಕೊಳ್ಳುತ್ತಿದ್ದರು. ಅರಸನು ಸಿಂಹಾಸನದ ಮೇಲೆ ಕೂತುಕೊಳ್ಳುವಾಗಲೂ ಒಂದು ವಸ್ತ್ರವನ್ನು ಮಾತ್ರವೇ ಉಟ್ಟು, ತಲೆಗೆ ರುಮಾಲನ್ನು ಕಟ್ಟಿಕೊಳ್ಳುತ್ತಿದ್ದನು. ಹೆಗಲ ಮೇಲೆ ಒಂದು ಶಾಲನ್ನೂ ಹಾಕಿಕೊಳ್ಳುತ್ತಿದ್ದನು. ಕೈಗೆ ತೋಳು ಸರಿಗೆಗಳನ್ನೂ ಕೊರಳಿಗೆ ಮುತ್ತಿನ ಹಾರವನ್ನೂ ಹಾಕಿಕೊಳ್ಳುತ್ತಿದ್ದನು. ಹೆಂಗಸರು ಸೀರೆಯನ್ನು ಉಟ್ಟುಕೊಂಡು ಬಂಗಾರದ ಆಭರಣಗಳನ್ನು ತೊಟ್ಟುಕೊಳ್ಳುತ್ತಿದ್ದರು. ಬಡವರು ಹವಳದ ಸರಗಳನ್ನೂ ಮಣಿಗಳ ಸರಗಳನ್ನೂ ಹಾಕಿಕೊಳ್ಳುತ್ತಿದ್ದರು.

**ಸ್ತ್ರೀಯರು:**—ಹೆಂಗಸರಿಗೆ ಮತಸಂಬಂಧವಾದ ಮದುವೆ, ಉಪನಯನ, ಮುಂತಾದ ಎಲ್ಲಾ ಕೆಲಸಗಳಲ್ಲಿ ಪೂರ್ಣ ಸ್ವಾತಂತ್ರ್ಯವು ಪೂರ್ವಕಾಲದಲ್ಲಿಯೂ ಇತ್ತು; ಈಗಲೂ ಇದೆ. ಬಡ ಹೆಂಗಸರು ಹೊಲಗಳಲ್ಲಿ ಗಂಡಂದಿರಿಗೆ ಬೇಕಾದ ಸಹಾಯವನ್ನು ಮಾಡುತ್ತಿದ್ದರು. ಮಾರ್ಗಗಳಲ್ಲಿ ಹೆಂಗಸರು ತಿರುಗಾಡುವದರಲ್ಲಿ ಏನೊಂದು ಆಕ್ಷೇಪವಿರಲಿಲ್ಲ. ಮದುವೆ ಸಮಯದಲ್ಲಿಯೂ ಉತ್ಸವಾದಿಗಳ ಸಮಯದಲ್ಲಿಯೂ ಹೆಂಗಸರೂ ಗಂಡಸರೂ ಬೇರೆ ಬೇರೆ ತಂಡಗಳಾಗಿ ಹೋಗುತ್ತಿದ್ದರು. ಹೆಂಗಸರು ಗಂಡಸರ ಗುಂಪಿನಲ್ಲಿ ಸೇರುವ ವಾಡಿಕೆಯಿರಲಿಲ್ಲ. ರಾಣಿಯೂ ಇತರ ಹೆಂಗಸರೂ ಪ್ರತಿದಿನ ಬೆಳಿಗ್ಗೆ ಮತ್ತು ಸಾಯಂಕಾಲ ದೇವಾಲಯಗಳಿಗೂ ಬಸದಿಗಳಿಗೂ ಹೋಗುವ ವಾಡಿಕೆ ಇತ್ತು. ಗಂಡಸರು ಹೆಂಗಸರನ್ನು ಮರ್ಯಾದೆಯಿಂದ ಕಾಣುತ್ತಿದ್ದರು.

**ಆಹಾರ:**—ಜನರು ತಮ್ಮ ಆಹಾರಕ್ಕಾಗಿ ಅಕ್ಕಿಯನ್ನೇ ಮುಖ್ಯವಾಗಿ ಉಪಯೋಗಿಸುತ್ತಿದ್ದರು. ಹಾಲು, ಬೆಣ್ಣೆ ತುಪ್ಪ, ಜೇನು

ಇವುಗಳನ್ನು ಸಹ ಉಪಯೋಗಿಸುತ್ತಿದ್ದರು. ಬಡವರೂ ಸೈನಿಕರೂ ತೆಂಗಿನ ಮತ್ತು ತಾಳೆಮರದ ಕಳ್ಳನ್ನು ಕುಡಿಯುತ್ತಿದ್ದರು.

**ವಿನೋದಕರ ಆಟಗಳು:**—ಹಾಡುಗಳನ್ನು ಹಾಡುವದು, ಕೋಳಿಯ ಜೂಜಾಟ, ಕೋಣಗಳನ್ನು ಓಡಿಸುವದು, ಚಂಡು ಕುಟ್ಟು ವದು ಇವುಗಳೇ ಮುಖ್ಯವಾದ ವಿನೋದಕರವಾದ ಆಟಗಳಾಗಿದ್ದುವು. ಹೆಂಗಸರು ಮನೆಗಳಲ್ಲಿ ಗಿಳಿಗಳನ್ನು ಸಾಕಿ ಅವುಗಳಿಗೆ ಮಾತನಾಡಲು ಕಲಿಸುತ್ತಿದ್ದರು. ಪಗಡೆಯಾಟ, ಚನ್ನೆಮಣೆಯಾಟ ಇವುಗಳನ್ನು ಆಡಿ ಐಶ್ವರ್ಯವಂತರೂ ಬಡವರೂ ವಿನೋದಿಸುತ್ತಿದ್ದರು.

**ಕಲೆಗಳು:**—ಅನೇಕ ತರದ ವಾದ್ಯಗಳು ಇದ್ದವು. ಕೊಳ ಲನ್ನು ಒಳ್ಳೇ ರೀತಿಯಲ್ಲಿ ಊದುತ್ತಿದ್ದರು. ಮತಸಂಬಂಧವಾದ ಕಥೆಗಳನ್ನು ದಶಾವತಾರಆಟದ ರೂಪದಲ್ಲಿ ಆಡಿತೋರಿಸುತ್ತಿದ್ದರು. ಇದರಿಂದ ಬಡವರು ಏನೂ ಖರ್ಚು ಇಲ್ಲದೆ ಸಂತೋಷಪಡಬಹುದಿತ್ತು. ರಾಮಾಯಣ, ಭಾರತ, ಭಾಗವತ ಮುಂತಾದವುಗಳನ್ನು ಬರಹ ತಿಳಿಯ ದವರು ಈ ಆಟಗಳ ಮೂಲಕ ತಿಳಿದುಕೊಳ್ಳುತ್ತಿದ್ದರು.

**ಮನೆಗಳು:**—ಬಡವರ ಮನೆಗಳ ಗೋಡೆಗಳನ್ನು ಮಣ್ಣಿನಿಂದ ಕಟ್ಟಿ, ಬಿದಿರನ್ನೂ ಮುಳಿಹುಲ್ಲನ್ನೂ ಮಾಡಿಗೆ ಉಪಯೋಗಿಸುತ್ತಿದ್ದರು ಐಶ್ವರ್ಯವಂತರು ಮನೆಗಳನ್ನು ಕಲ್ಲುಗಳಿಂದಲೂ ಮರಮಟ್ಟು ಗಳಿಂದಲೂ ಕಟ್ಟಿಸುತ್ತಿದ್ದರು.

**ಭಾಷೆಯೂ ಗ್ರಂಥಗಳೂ:**—ಈ ಜಿಲ್ಲೆಯಲ್ಲಿ ತುಳು, ಕನ್ನಡ ಮಲೆಯಾಳಿ, ತೆಲುಗು ಈ 4 ದ್ರಾವಿಡ ಭಾಷೆಗಳನ್ನು ಆಡುತ್ತಿದ್ದರು ತುಳುಭಾಷೆಯೇ ಮುಖ್ಯವಾದದ್ದು. ಬ್ರಾಹ್ಮಣರು ಸಂಸ್ಕೃತ ಗ್ರಂಥ ಗಳನ್ನು ತುಳು ಮಲೆಯಾಳಿ ಬರಹದಿಂದ ಬರೆಯುತ್ತಿದ್ದರು. ಇವು ಗಳು ಓಲೆಯಲ್ಲಿ ಬರೆಯಲ್ಪಟ್ಟಿರುವವು.

# 9 ನೇ ಅಧ್ಯಾಯ.

## ಬಾದಾವಿಯ ಪಶ್ಚಿಮ ಚಾಲುಕ್ಯರು.

ಈ ವಂಶದ ಅರಸರು ಕನ್ನಡ ಜಿಲ್ಲೆಯಲ್ಲೇ ಬಂದು ನಿಂತು ಆಳದೆ ಇದ್ದರೂ, ಈ ಜಿಲ್ಲೆಯನ್ನು ಸುಮಾರು 200 ವರುಷಗಳ ವರೆಗೆ ಕದಂಬರಾಜರ ನಂತರ, ರಾಷ್ಟ್ರಕೂಟದ ರಾಜರು ಇದನ್ನು ಸ್ವಾಧೀನ ಪಡಿಸಿಕೊಳ್ಳುವ ವರೆಗೆ, ಮೇಲಾಧಿಕಾರಿಗಳಾಗಿ ಆಳುತ್ತಿದ್ದರು. ಆದ್ದರಿಂದ ಇವರ ವಿಷಯ ಸ್ವಲ್ಪ ತಿಳಕೊಳ್ಳಬೇಕಾಗಿದೆ.

ಚಾಲುಕ್ಯರು ಗುರ್ಜರವಂಶಕ್ಕೆ ಸೇರಿದ ಅಗ್ನಿಕುಲ ರಾಜಪುತ್ರರು ಇವರು ಕ್ರಿ. ಶ. 1ನೇ ಅಥವಾ 2ನೇ ಶತಮಾನದಲ್ಲಿ ಮಧ್ಯಆಸ್ಯದಿಂದ ಬಂದರೆಂದು ಕಾಣುತ್ತದೆ. ಪುರಾಣಗಳ ಪ್ರಕಾರ ಇವರು ಅಯ್ಯೋಧ್ಯಾ ದೇಶದಿಂದ ಬಂದ ಒಂದು ಕ್ಷತ್ರಿಯರ ವಂಶದವರೆಂದು ತೋರುತ್ತದೆ. ಇವರು ಸೋಮವಂಶಕ್ಕೆ ಸೇರಿದ ರಾಜಪುತ್ರರು; ಯಶೋವಂತರು; ಮಾನವ್ಯಗೋತ್ರದ ಹರಿತಪುತ್ರರು; ಸಪ್ತಮಾತ್ರಿಕೆಯರನ್ನೂ ಕಾರ್ತಿಕೇಯನನ್ನೂ ಪೂಜಿಸುತ್ತಿದ್ದರು. ವರಹಾರೂಪದ ನಾರಾಯಣನ ರೂಪವು ಇವರ ಮುಕುಟದಲ್ಲಿ ಕೆತ್ತಲ್ಪಟ್ಟಿತ್ತು. ಬಾದಾವಿಯ ಗವಿಗಳಲ್ಲಿರುವ ಕ್ರಿ. ಶ. 578ನೆಯ 1ನೇ ಕೀರ್ತಿವರ್ಮನ ಕಾಲದ ಶಾಸನದಲ್ಲಿ ಕಾರ್ತಿಕೇಯನ (ಸುಬ್ರಹ್ಮಣ್ಯನ) ಪಾದಕಮಲವನ್ನು ಈ ಅರಸನು ಪೂಜಿಸುವ ಚಿತ್ರವಿದೆ. ಈ ಅರಸರು, ಅಗ್ನಿಸ್ಟೋಮ, ಅಗ್ನಿಚಾಯನ, ವಾಜಪೇಯ, ಪುಂಡರೀಕ, ಬಹುಸುವರ್ಣ, ಅಶ್ವಮೇಧ ಮೊದಲಾದ ವ್ರತಗಳನ್ನು ಆಚರಿಸಿದ್ದಾರೆಂದು ಕಾಣುತ್ತದೆ. ಮಹಾಕೂಟ ವಿಜಯಸ್ತಂಭದಲ್ಲಿ ಕ್ರಿ. ಶ. 602ರ ಮಂಗಳೇಶ ವಿಷ್ಣುವರ್ಧನ ಮತ್ತು 2ನೇ ಪುಲಿಕೇಶಿ ಇವರ ಶಾಸನಗಳಿಂದಲೂ ಇವರು ಮಹಾಸೇನನನ್ನು ಪೂಜಿಸುತ್ತಿದ್ದರೆಂದೂ ಕಾಣುತ್ತದೆ. ಇವರು ವೈಷ್ಣವರಾದರೂ ಶೈವರಿಗಾಗಲೀ, ಜೈನರಿಗಾಗಲೀ, ಬೌದ್ಧರಿಗಾಗಲೀ ಪೀಡಿಸುತ್ತಿರಲಿಲ್ಲ. ಇವರ

ಕಾಲದಲ್ಲಿ ಅನೇಕ ದೇವಸ್ಥಾನಗಳು ಕಟ್ಟಲ್ಪಟ್ಟವು. ಪುರಾಣಗಳು ಬರೆಯಲ್ಪಟ್ಟವು.

ಚಾಲುಕ್ಯರಲ್ಲಿ ಅನೇಕ ಶಾಖೆಗಳಿದ್ದವು. ಒಂದು ಶಾಖೆಯು ಬಾದಾವಿಯ ಪಶ್ಚಿಮಚಾಲುಕ್ಯರೆಂಬ ಹೆಸರಿನಿಂದ 7ನೇ-8ನೇ ಶತಮಾನಗಳ ವರೆಗೆ ದಕ್ಷಣದಲ್ಲಿ ಆಳಿಕೊಂಡಿದ್ದರು. ಅನಂತರ ರಾಷ್ಟ್ರಕೂಟರು ಇವರನ್ನು ಜಯಿಸಿದರು. ಇನ್ನೊಂದು ಶಾಖೆಯು ಕಲ್ಯಾಣಿಯ ಚಾಲುಕ್ಯರೆಂಬ ಹೆಸರಿನಿಂದ ದಕ್ಷಣದಲ್ಲಿ 10ನೇ ಶತಮಾನದಿಂದ 12ನೇ ಶತಮಾನದ ವರೆಗೆ ಆಳಿಕೊಂಡಿತ್ತು. ನಂತರ ಚರಿತ್ರೆಯಲ್ಲಿ ಇವರ ವಿಷಯ ಏನೂ ತಿಳಿದುಬರುವುದಿಲ್ಲ. ಮತ್ತೊಂದು ಶಾಖೆಯು ವೆಂಗಿಯ ಪೂರ್ವ ಚಾಲುಕ್ಯರೆಂಬ ಹೆಸರಿನಿಂದ ದಕ್ಷಣದ ಪೂರ್ವಭಾಗದಲ್ಲಿ 7ನೇ ಶತಮಾನದಿಂದ 8ನೇ ಶತಮಾನದ ವರೆಗೆ ಆಳಿಕೊಂಡಿತ್ತು. ಚೋಳ ರಾಜರು ಇವರನ್ನು ಗೆದ್ದು ತಮ್ಮ ರಾಜ್ಯವನ್ನು ಸ್ಥಾಪಿಸಿದರು. ನಾಲ್ಕನೇ ಶಾಖೆಯು ಗುಜರಾಥಿನಲ್ಲಿ 7ನೇ-8ನೇ ಶತಮಾನದಲ್ಲಿ ಆಳಿಕೊಂಡಿತ್ತು. ದಕ್ಷಿಣ ಕನ್ನಡ ಜಿಲ್ಲೆಯನ್ನು ಬಾದಾವಿಯ ಪಶ್ಚಿಮ ಚಾಲುಕ್ಯರು ಮಾತ್ರವೇ ಆಳಿದ್ದರಿಂದ ಅವರ ವಿಷಯ ಮಾತ್ರ ಇಲ್ಲಿ ಬರೆದಿದೆ.

**(1) ಜಯಸಿಂಹ:**—ಇವನು ಈ ವಂಶದ ಮೊದಲನೆಯ ಅರಸನು. ಈ ಅರಸನು ರಾಷ್ಟ್ರಕೂಟರನ್ನು ಜಯಿಸಿ ಬಿಜಾಪುರದ ಹತ್ತಿರ ಒಂದು ಸಣ್ಣ ರಾಜ್ಯವನ್ನು ಸ್ಥಾಪಿಸಿದನು. ಇವನು ಬನವಾಸಿಯ ಕದಂಬರ ಕೈಕೆಳಗಿದ್ದನು. ನಿಜವಾಗಿ ಇವನು ಅರಸನಾಗಿರಲಿಲ್ಲ. ಪಲ್ಲವ ರಾಜನಾದ ತ್ರಿಲೋಚನನ ಸಂಗಡ ಯುದ್ಧದಲ್ಲಿ ಮಡಿದುಹೋದನು.

**(2) ರಣರಾಗ:**—ಇವನು ಜಯಸಿಂಹನ ಮಗನು. ಇವನೂ ಕದಂಬರ ಕೈಕೆಳಗೆ ಆಳಿಕೊಂಡಿದ್ದು ಪಲ್ಲವರ ಸಂಗಡ ಯುದ್ಧಮಾಡಿ ಅವರ ಸ್ನೇಹವನ್ನು ಬೆಳೆಸಿ ಒಬ್ಬ ಪಲ್ಲವ ರಾಜಕುಮಾರಿಯನ್ನು ಮದುವೆಮಾಡಿಕೊಂಡನು.

**(3) ಸತ್ಯಾಶ್ರಯ ರಣವಿಕ್ರಮ ಪುಲಿಕೇಶಿ:**—ಇವನು ಕ್ರಿ. ಶ. 550ರಲ್ಲಿ ಆಳಲಾರಂಭಿಸಿದನು. ಈ ವಂಶಸ್ಥಾಪಕನು ಇವನೇ ಎಂದು ಹೇಳಬೇಕಾಗಿದೆ. ತನ್ನ ಕೀರ್ತಿಯು ಚಿರಸ್ಥಾಯಿಯಾಗ ಬೇಕೆಂದು ಇವನು ಒಂದು ಅಶ್ವಮೇಧಯಾಗವನ್ನು ಮಾಡಿದನು. ವಾತಾಪಿ ಯಲ್ಲಿ ಸುಮಾರು ಒಂದು ಶತಮಾನದ ವರೆಗೆ ಆಳಿಕೊಂಡಿದ್ದ ಪಲ್ಲವ ರಾಜನನ್ನು ಜಯಿಸಿ, ವಾತಾಪಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿ ಅದಕ್ಕೆ ಬಾದಾವಿ ಎಂದು ಹೆಸರಿಟ್ಟನು. ಇವನ ಪೂರ್ಣ ಹೆಸರು ಸತ್ಯಾಶ್ರ ಯರಣವಿಕ್ರಮ ಶ್ರೀವಲ್ಲಭ 1ನೇ ಪುಲಿಕೇಶಿ ಮಹಾರಾಜ. ಈ ಅರಸನು ತನ್ನ ರಾಜಧಾನಿಯಲ್ಲಿ ಅನೇಕ ದೇವಸ್ಥಾನಗಳನ್ನೂ ದೊಡ್ಡ ಕಟ್ಟಡ ಗಳನ್ನೂ ಕಟ್ಟಿಸಿ ಬಾದಾವಿಯ ಸ್ಥಾಪಕನೆಂದು ಹೆಸರನ್ನು ಪಡೆದನು. ಇವನ ರಾಣಿಯ ಹೆಸರು ದುರ್ಲಭದೇವಿ.

**(4) ರಣಪರಾಕ್ರಮ 1ನೇ ಕೀರ್ತಿವರ್ಮ:**—ಕ್ರಿ. ಶ. 567-591ರಲ್ಲಿ ಇವನು ಬನವಾಸಿಯ ಕದಂಬರಾಜನನ್ನು ಜಯಿಸಿ ಆ ಪಟ್ಟಣವನ್ನು ಹಿಡಿದನು. ಕದಂಬರು ಬಲಹೀನರಾಗಿ ಚಾಲುಕ್ಯರ ಮಹಾಮಂಡಲೇಶ್ವರರಾದರು. ಕನ್ನಡ ಜಿಲ್ಲೆಯು ಕದಂಬರ ಮೇಲಾಧಿ ಕಾರದಿಂದ ತಪ್ಪಿ ಚಾಲುಕ್ಯರ ಮೇಲಾಧಿಕಾರಕ್ಕೊಳಪಟ್ಟಿತು. ಕೊಂಕಣ ದಲ್ಲಿ ಆಳುತ್ತಿದ್ದ ಮಗಧದೇಶದ ಮೌರ್ಯ್ಯರ ಒಂದು ಶಾಖೆಯನ್ನು ಜಯಿಸಿದನು. ಇವನಿಗೆ ಮೂವರು ಗಂಡುಮಕ್ಕಳಿದ್ದರು. ಆದರೆ ಇವನು ಸಾಯುವ ಕಾಲದಲ್ಲಿ ಈ ಮಕ್ಕಳು ಸಣ್ಣವರಾಗಿದ್ದರಿಂದ ಇವನ ತಮ್ಮನಾದ ಮಂಗಳೇಶನು ಪಟ್ಟಕ್ಕೆ ಬಂದನು.

**(5) ರಣವಿಕ್ರಾಂತ ಮಂಗಳೇಶ:**—ಕ್ರಿ. ಶ. 591-608 ಜಬಲಪುರದ ಹತ್ತಿರ "ತ್ರಿಪುರ" ಎಂಬ ರಾಜಧಾನಿಯಲ್ಲಿ ಆಳುತ್ತಿದ್ದ ಚೇದಿದೇಶದ, ಕಾಲಚೂರಿ ರಾಜಪುತ್ರರನ್ನು ಗೆದ್ದು ಮಂಗಳೇಶನು ತನ್ನ ರಾಜ್ಯವನ್ನು ದಕ್ಷಣದ ಉತ್ತರಭಾಗದಲ್ಲಿಯೂ ಸ್ಥಾಪಿಸಿದನು. ಇವನು ತನ್ನ ಮಗನಿಗೆ ಪಟ್ಟಕಟ್ಟುವ ಆಲೋಚನೆಯಲ್ಲಿದ್ದನು. ಆದರೆ

ಕೀರ್ತಿವರ್ಮನ ಮಗನಾದ ಪುಲಿಕೇಶಿಯು ಬಹಳ ನಿಪುಣನಾಗಿದ್ದುದರಿಂದ ಪ್ರಜೆಗಳೆಲ್ಲರೂ ಮಂಗಳೇಶನಿಗೆ ಎದುರುನಿಂತು ಯುದ್ಧದಲ್ಲಿ ಅವನನ್ನು ಕೊಂದು ಪುಲಿಕೇಶಿಗೆ ಪಟ್ಟಕಟ್ಟಿದರು.

**(6) ಸತ್ಯಾಶ್ರಯ 2ನೇ ಪುಲಿಕೇಶಿ:**—ಕ್ರಿ. ಶ. 608-642. ಚಾಲುಕ್ಯ ಅರಸರಲ್ಲೆಲ್ಲಾ ಕೀರ್ತಿಪಡೆದವನು 2ನೇ ಪುಲಿಕೇಶಿಯು. ಇದೇ ಸಮಯದಲ್ಲಿ ಉತ್ತರ ಹಿಂದೂದೇಶದಲ್ಲಿ ಆಳುತ್ತಿದ್ದ ಹರ್ಷವರ್ಧನನು ದೊಡ್ಡ ಅರಸನಾಗಿದ್ದ ಹಾಗೆಯೇ ಪುಲಿಕೇಶಿಯು ದಕ್ಷಣದಲ್ಲಿ ದೊಡ್ಡ ಅರಸನಾಗಿದ್ದನು. ಇವನು ಪಟ್ಟಕ್ಕೆ ಬಂದ ಕೂಡಲೇ ಇವನ ತಂದೆಯ ಕಾಲದಲ್ಲಿ ಮಹಾಮಂಡಲೇಶ್ವರರಾಗಿದ್ದ ರಾಷ್ಟ್ರಕೂಟರೂ ಕದಂಬರೂ ಕೊಂಕಣದ ಮೌರ್ಯ್ಯರೂ ದಂಗೆ ಎಬ್ಬಿಸಿದರು. ಬಲವಾದ ಸೈನ್ಯವನ್ನು ತೆಗೆದುಕೊಂಡು ಹೋಗಿ ಎಲ್ಲರನ್ನೂ ಜಯಿಸಿದನು. ಅನಂತರ ಗಂಗವಾಡಿಯಲ್ಲಿ ಆಳುತ್ತಿದ್ದ ಗಂಗರಾಜರನ್ನೂ ಜಯಿಸಿ ಚಾಲುಕ್ಯರ ರಾಜ್ಯವನ್ನು ದಕ್ಷಣದ ಪಶ್ಚಿಮಭಾಗದಲ್ಲಿ ನೆಲೆಗೊಳಿಸಿದನು. ಬಳಿಕ ಮಹಾಕೋಸಲವನ್ನು ಆಳುತ್ತಿದ್ದ ಚೇದಿರಾಜನನ್ನೂ, ಕಳಿಂಗದೇಶವನ್ನು ಆಳುತ್ತಿದ್ದ ಗಂಗರಾಜನನ್ನೂ ಜಯಿಸಿ ಅವರಿಂದ ಕಪ್ಪವನ್ನು ಪಡೆದನು.

ಇದಾದ ಮೇಲೆ ಕ್ರಿ. ಶ. 300ರಲ್ಲಿ ಆಂಧ್ರರನ್ನೂ ಗೆದ್ದು, ವೆಂಗಿಯಲ್ಲಿ ರಾಜಧಾನಿಯನ್ನು ಸ್ಥಾಪಿಸಿ ಅಲ್ಲಿ ಆಳುತ್ತಿದ್ದ ಪಲ್ಲವರನ್ನು ಪೂರ್ಣವಾಗಿ ಜಯಿಸಿ, ಕ್ರಿ. ಶ. 615ರಲ್ಲಿ ತನ್ನ ತಮ್ಮನಾದ ವಿಷ್ಣುವರ್ಧನನಿಗೆ ಆ ವೆಂಗಿದೇಶದ ಮಂಡಲೇಶ್ವರನಾಗಿ ನೇಮಿಸಿದನು. ಅನಂತರ ಈ ವಿಷ್ಣುವರ್ಧನನು ಕ್ರಿ. ಶ. 632ರಲ್ಲಿ ಪೂರ್ವಚಾಲುಕ್ಯರ ಒಂದು ವಂಶವನ್ನು ಸ್ಥಾಪಿಸಿ, ಸ್ವತಂತ್ರವಾಗಿ ಆಳತೊಡಗಿದನು. ಪುಲಿಕೇಶಿಯ ಕೀರ್ತಿಯನ್ನು ಕೇಳಿ ಹರ್ಷವರ್ಧನನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದನು. ಆದರೆ ಯುದ್ಧದಲ್ಲಿ ಸೋತುಹೋದನು. ಪುಲಿಕೇಶಿಯು ವಿಂಧ್ಯಾಪರ್ವತದ ಘಾಟಿಗಳಲ್ಲಿಯೂ, ಹೊಳೆಗಳನ್ನು



ಅಜಿಂತೆಯಲ್ಲಿಯ ಗವಿಯೊಳಗಿನ ಕೆತ್ತಿದ ಪುಲಿಕೇಶಿಯು ತನ್ನ ರಾಜಸಭೆಯಲ್ಲಿ ಪರ್ಶಿಯಾ ದೇಶದ ರಾಯಭಾರಿಗೆ ಭೇಟಿ ಕೊಟ್ಟದ್ದು ಚಿತ್ರ.

ದಾಟುವ ಸ್ಥಳಗಳಲ್ಲಿಯೂ ಬಲವಾದ ಸೈನ್ಯವನ್ನಿಟ್ಟದ್ದರಿಂದ ಹರ್ಷ ವರ್ಧನನಿಗೆ ವಿಂದ್ಯಾಪರ್ವತವನ್ನು ದಾಟಿಬರುವದು ಕಷ್ಟವಾಯಿತು.

ಇದಾದ ಮೇಲೆ ಪುಲಿಕೇಶಿಯು ಪಲ್ಲವರಾಜ್ಯದ ರಾಜಧಾನಿಯಾದ ಕಂಚಿಪಟ್ಟಣಕ್ಕೆ ಮುತ್ತಿಗೆಹಾಕಿದನು. ಆದರೆ ಅದನ್ನು ಹಿಡಿಯಲಿಕ್ಕಾಗಲಿಲ್ಲ. ಆ ಮೇಲೆ ಕಾವೇರಿನದಿಯನ್ನು ದಾಟಿ ಪಾಂಡ್ಯ, ಚೋಳ, ಕೇರಳ ರಾಜ್ಯವನ್ನು ಜಯಿಸಿ ಅವರಿಂದ ಕಪ್ಪವನ್ನು ತೆಗೆದುಕೊಂಡನು. ಕೊನೆಗೆ ಬಾದಾವಿಗೆ ಬಂದು ಕ್ರಿ. ಶ. 642ರ ವರೆಗೆ ಆಳಿದನು.

ತನ್ನ ತಮ್ಮಂದಿಯರಲ್ಲಿ ಒಬ್ಬನಾದ ವಿಷ್ಣುವರ್ಧನನನ್ನು ವೆಂಗಿಯ ಮಹಾಮಂಡಲೇಶ್ವರನಾಗಿ ಮಾಡಿದ್ದಲ್ಲದೆ, ಇನ್ನೊಬ್ಬ ತಮ್ಮನಾದ ಜಯಸಿಂಹನನ್ನು ನಾಸಿಕದ ಮಹಾಮಂಡಲೇಶ್ವರನಾಗಿಯೂ, ತನ್ನ ಹಿರೇ ಮಗನಾದ ಚಂದ್ರಾದಿತ್ಯನನ್ನು ಸಾವಂತವಾಡಿ ಜಿಲ್ಲೆಯ ಮಹಾಮಂಡಲೇಶ್ವರನಾಗಿಯೂ, ಇನ್ನೊಬ್ಬ ಮಗನಾದ ಆದಿತ್ಯವರ್ಮನನ್ನು ತುಂಗಭದ್ರಾ ಮತ್ತು ಕೃಷ್ಣಾ ನದಿಗಳ ಮಧ್ಯದಲ್ಲಿರುವ ರಾಜ್ಯಕ್ಕೆ ಮಹಾಮಂಡಲೇಶ್ವರನಾಗಿಯೂ ನೇಮಿಸಿದನು. ಪುಲಿಕೇಶಿಯು ಕಾಲವಾದ ನಂತರ ಇವರು ಸ್ವತಂತ್ರವಾಗಿ ಆಳತೊಡಗಿದರು.

ಪುಲಿಕೇಶಿಯ ಕೀರ್ತಿಯು ಪರ್ಷಿಯಾದೇಶದ ವರೆಗೆ ಹಬ್ಬಿ ಆ ದೇಶದ ಅರಸನಾದ 2ನೇ ಖುಸ್ರುವು ಕ್ರಿ. ಶ. 625ರಲ್ಲಿ ಒಬ್ಬ ರಾಯಭಾರಿಯೊಡನೆ ಇವನಿಗೆ ಉಡಿಗೆಉಚಿತಗಳನ್ನು ಕಳುಹಿಸಿದನು. ಅನಂತರ ಪುಲಿಕೇಶಿಯು ತನ್ನ ಕಡೆಯ ರಾಯಭಾರಿಯನ್ನು ಉಡಿಗೆಉಚಿತಗಳ ಸಹಿತ ಪರ್ಷಿಯಾದೇಶಕ್ಕೆ ಕಳುಹಿಸಿಕೊಟ್ಟನು. ಪರ್ಷಿಯದ ರಾಯಭಾರಿಯು ಪುಲಿಕೇಶಿಯ ರಾಜಸಭೆಗೆ ಬಂದದನ್ನು ತೋರಿಸುವ ಚಿತ್ರವನ್ನು ಅಜಂತದ ಗವಿಗಳಲ್ಲಿ ಕಲ್ಲಿನ ಮೇಲೆ ಕೆತ್ತಿದ್ದಾರೆ.

ಪುಲಿಕೇಶಿಯ ಕಾಲದಲ್ಲಿ, ಕ್ರಿ.ಶ. 639ರಲ್ಲಿ, ಹಿಂದೂದೇಶವನ್ನು ಸಂಚರಿಸಲಿಕ್ಕೆ ಬಂದ ಚೀನಾದೇಶದ ಪ್ರಯಾಣಿಕನಾದ 'ಹೀಯನ್‌ಸಾಂಗನು'

ಪುಲಿಕೇಶಿಯು ನಾಸಿಕದಲ್ಲಿ ರಾಜಸಭೆಯನ್ನು ಮಾಡಿಕೊಂಡಿರುವಾಗ ನೋಡಿದ ಸಂಗತಿಯನ್ನು ಹೀಗೆ ವರ್ಣಿಸಿರುತ್ತಾನೆ:—ರಾಜ್ಯವು ಬಹಳ ವಿಸ್ತಾರವಾಗಿದೆ. ನೆಲವು ಫಲವತ್ತಾಗಿದೆ. ಜನರು ಪ್ರಾಮಾಣಿಕರು, ದೀರ್ಘಕಾಯ ಉಳ್ಳವರು, ದೃಢಕಾಯರು. ತಮಗೆ ಮಾಡಿದ ಉಪಕಾರವನ್ನು ಮರೆಯರು. ವೈರಿಗಳಿಗೆ ಏನೂ ಕರುಣೆ ತೋರಿಸಲಾರರು. ಯುದ್ಧದಲ್ಲಿ ಬರ್ಚಿಗಳನ್ನು ಉಪಯೋಗಿಸುವರು. ಶರಣಾಗತರಾದವರನ್ನು ಕೊಲ್ಲಲೊಲ್ಲರು. ಸೇನಾಧಿಪತಿಯು ಯುದ್ಧದಲ್ಲಿ ಸೋತರೆ ಅವನಿಗೆ ಶೀರೆಯನ್ನು ಉಡಿಸುವರು. ಆಗ ಅವನೇ ಆತ್ಮಹತ್ಯಮಾಡಿಕೊಳ್ಳುವನು. ಯುದ್ಧಕ್ಕೆ ಹೊರಡಬೇಕಾದರೆ ಶಿಫಾಯರಿಗೂ ಆನೆಗಳಿಗೂ ಮದ್ಯವನ್ನು ಕುಡಿಸುವರು. ಅರಸನು ಕ್ಷತ್ರಿಯನು. ಪ್ರಜೆಗಳೆಲ್ಲರೂ ರಾಜಭಕ್ತಿಯುಳ್ಳವರು. ವಿದ್ಯಾವಂತರಾದ ಬೌದ್ಧರೂ, ಬ್ರಾಹ್ಮಣರೂ ಇರುವರು. ಸನ್ಯಾಸಿಗಳಿಗಾಗಿ ಅನೇಕ ಗವಿಗಳೂ ಹಿಂದೂಗಳಿಗಾಗಿ ಅನೇಕ ದೇವಸ್ಥಾನಗಳೂ ಇರುವವು.

ಕ್ರಿ. ಶ. 642ರಲ್ಲಿ ಕಂಚಿಯ ಪಲ್ಲವ ರಾಜನಾದ ನರಸಿಂಹವರ್ಮನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದು ಪುಲಿಕೇಶಿಯನ್ನು ಸೋಲಿಸಿ ಕೊಂದು, ದೇಶವನ್ನು ಹಾಳುಮಾಡಿದನು. ನರಶಿಂಹವರ್ಮನು ಸಾಯುವ ವರೆಗೆ ಚಾಲುಕ್ಯರ ಅರಸರು ತಲೆ ಎತ್ತಲಿಲ್ಲ. ಪಲ್ಲವರು ಶೈವರು, ಆದರೆ ಚಾಲುಕ್ಯರು ವೈಷ್ಣವರಾದ್ದರಿಂದ, ಪಲ್ಲವರಾಜನಾದ ಈ ನರಸಿಂಹವರ್ಮನು ವಿಷ್ಣು ಆಲಯಗಳ ಉಂಬಳಿಯನ್ನು ತೆಗೆದು ಶಿವಾಲಯಗಳಿಗೆ ಕೊಟ್ಟನು.

**ಸತ್ಯಾಶ್ರಯ, ರಣರಾಸಿಕ 1 ನೇ ವಿಕ್ರಮಾದಿತ್ಯ:**—(ಕ್ರಿ. ಶ. 655-680) ಪಲ್ಲವರಾಜನಾದ ನರಶಿಂಹವರ್ಮನು ಸಾಯುವ ವರೆಗೆ ಬಾದಮಿಯಲ್ಲಿ ಯಾರೂ ಪಟ್ಟಕ್ಕೆ ಬರಲಿಲ್ಲ. ತರುವಾಯ ಪುಲಿಕೇಶಿಯ 3ನೇ ಮಗನಾದ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದನು. ಇವನು ತನ್ನ "ಚಿತ್ರಕಾಂತ" ಎಂಬ ಕುದುರೆಯ ಮೇಲೆ ಕೂತು

ಪಟ್ಟದಕತ್ತಿಯನ್ನು ಝಳಪಿಸುತ್ತಾ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಕಂಚಿಪಟ್ಟಣವನ್ನು ಹಿಡಿದು ಪಲ್ಲವರಾಜನು ತನ್ನ ಕಿರೀಟ ಸಹಿತ ಇವನ ಕಾಲಡಿಗಳಿಗೆ ಬೀಳುವ ಹಾಗೆ ಮಾಡಿದನು. ಕ್ರಿ. ಶ. 655 ರಲ್ಲಿ ತನ್ನ ತಂದೆಯ ನಂತರ ಸ್ವತಂತ್ರವಾಗಿದ್ದ ಪಾಂಡ್ಯ, ಚೋಳ, ಕೇರಳ ದೇಶಗಳನ್ನು ಜಯಿಸಿದನು. ತನ್ನ ತಮ್ಮನಾದ ಜಯಸಿಂಹವರ್ಮನಿಗೆ ಗುಜರಾಥ ದೇಶದ ಪಟ್ಟವನ್ನು ಕಟ್ಟಿದನು. ಅವನು ಗುಜರಾಥದ ಚಾಲುಕ್ಯರ ವಂಶದ ಮೊದಲನೇ ಅರಸನಾದನು.

**ಸತ್ಯಾಶ್ರಯ ರಾಜಾಶ್ರಯ ವಿನಯಾದಿತ್ಯ:**—(ಕ್ರಿ. ಶ. 680-696) ಈ ಅರಸನು ಹೇಹಯ (ಕಾಲಚೂರಿ) ವಿಲಾಪ, ಮಲೆ, ಚೋಳ, ಪಾಂಡ್ಯ, ಅಲೂಪ, ಗಂಗ ಅರಸರನ್ನು ಗೆದ್ದನು, ಎಂದು ಇವನ ಕಾಲದ ಶಾಸನದಲ್ಲಿದೆ.

**ವಿಜಯಾದಿತ್ಯ:**—(ಕ್ರಿ. ಶ. 696-734 ಇವನಿಗೆ ಸತ್ಯಾಶ್ರಯ ಸಮಸ್ತಭುವನಾಶ್ರಯ ಎಂಬ ಹೆಸರಿತ್ತು. ಅಜ್ಜನು ದಕ್ಷಿಣ ಭಾಗದಲ್ಲಿ ರಾಜ್ಯಗಳನ್ನು ಜಯಿಸುವಾಗ, ಇವನು ರಾಜ್ಯದ ಹೆಚ್ಚಿನ ಕೆಲಸಗಳನ್ನು ನಡಿಸುತ್ತಿದ್ದನು. ಇವನು ಪಟ್ಟದಕಲ್ಲು ಎಂಬಲ್ಲಿ "ವಿಜಯೇಶ್ವರ" ಎಂಬ ಶಿವದೇವಸ್ಥಾನವನ್ನು ಕಟ್ಟಿಸಿದನು. ಈಗ ಈ ದೇವಸ್ಥಾನಕ್ಕೆ ಸಂಗಮೇಶ್ವರ ದೇವಸ್ಥಾನವೆಂದು ಹೇಳುತ್ತಾರೆ. ಪೂಜ್ಯಪಾದ ಎಂಬ ಜೈನಗುರುವು 730ರಲ್ಲಿ ಈ ಅರಸನ ಕಾಲದಲ್ಲಿ ಒಂದು ವ್ಯಾಕರಣವನ್ನು ಬರೆದನೆಂದು ಕಾಣುತ್ತದೆ.

**ಸತ್ಯಾಶ್ರಯ 2ನೇ ವಿಕ್ರಮಾದಿತ್ಯ:**—(ಕ್ರಿ. ಶ. 734-747. ಇವನಿಗೆ ಲೋಕಮಹಾದೇವಿ ಮತ್ತು ತ್ರೈಲೋಕ್ಯಮಹಾದೇವಿ ಎಂಬ ಇಬ್ಬರು ರಾಣಿಯರಿದ್ದರು. ತ್ರೈಲೋಕ್ಯಮಹಾದೇವಿಯಲ್ಲಿ 2ನೇ ಕೀರ್ತಿವರ್ಮನು ಹುಟ್ಟಿದನು. ಲೋಕಮಹಾದೇವಿಯು ಪಟ್ಟದಕಲ್ಲಿನ ಲೋಕೇಶ್ವರದೇವಸ್ಥಾನವನ್ನೂ (ಈಗಿನ ವಿರೂಪಾಕ್ಷ ದೇವಸ್ಥಾನ) ತ್ರೈಲೋಕ್ಯಮಹಾದೇವಿಯು ತ್ರೈಲೋಕೇಶ್ವರದೇವಸ್ಥಾನವನ್ನೂ

ಕಟ್ಟಿಸಿದರು. ಈ ಅರಸನು ಪಾಂಡ್ಯ, ಚೋಳ, ಕೇರಳ ದೇಶಗಳನ್ನು ಜಯಿಸಿ, ಪಲ್ಲವರಾಜ್ಯವನ್ನು ಪ್ರವೇಶಿಸಿ, ಕಂಚಿಪಟ್ಟಣವನ್ನು ಹೊಕ್ಕು ಅಲ್ಲಿರುವ ರಾಜಸಿಂಹೇಶ್ವರ ಮೊದಲಾದ ದೇವಸ್ಥಾನಗಳಿಗೆ ಉಂಬಳಿಬಿಟ್ಟನೆಂದು ರಾಜಸಿಂಹೇಶ್ವರ ದೇವಸ್ಥಾನದ ಶಾಸನದಲ್ಲಿದೆ. ಮುಸಲ್ಮಾನರು ಕ್ರಿ. ಶ. 739ರಲ್ಲಿ ದಕ್ಷಿಣಕ್ಕೆ ದಂಡೆತ್ತಿಬಂದಾಗ ಇವನ ಸಾಮಂತರಾಜನಾದ ಅವನಿಜಾಶ್ರಯಪುಲಿಕೇಶಿಯು ಅವರನು. ಸೋಲಿಸಿ ಓಡಿಸಿದನೆಂದು ನೌಸಾರಿಯ ಶಾಸನದಲ್ಲಿದೆ.

**2ನೇ ಕೀರ್ತಿವರ್ಮ:**—(ಕ್ರಿ. ಶ. 747) ವಿಕ್ರಮಾದಿತ್ಯನ ತರುವಾಯ ಅವನ ಮಗನಾದ ಕೀರ್ತಿವರ್ಮನು ಪಟ್ಟಕ್ಕೆ ಬಂದನು. ಈ ಸಮಯದಲ್ಲಿ ಇವನ ರಾಜ್ಯದ ಉತ್ತರ ಭಾಗದಲ್ಲಿ ರಾಷ್ಟ್ರಕೂಟ ರಾಜವು ಬಲವಾಗುತ್ತಾ ಬಂತು. 2ನೇ ಕೀರ್ತಿವರ್ಮನು ಕಂಚಿ ಪಟ್ಟಣವನ್ನು ಹಿಡಿಯಲಿಕ್ಕೆ ಹೋದಾಗ, ರಾಷ್ಟ್ರಕೂಟದ ಅರಸನಾದ ದಂತಿದುರ್ಗನು ಬಾದಾವಿಯನ್ನು ಹಿಡಿದನು. ಕೀರ್ತಿವರ್ಮನು ಕಂಚಿಯಿಂದ ಬಂದು ಯುದ್ಧದಲ್ಲಿ ಸೋತು ಮಡಿದುಬಿದ್ದನು. ಇವನ ನಂತರ ಬಾದಾವಿಯ ಚಾಲುಕ್ಯವಂಶವು ನಾಶವಾಯಿತು. 2ನೇ ಕೀರ್ತಿವರ್ಮನ ಕಾಲದ ಸಂಸ್ಕೃತ ಮತ್ತು ಕನ್ನಡ ಬರಹದಲ್ಲಿರುವ ಒಂದು ಶಾಸನವು ಕಾಸರಗೋಡು ತಾಲೂಕಿನ ಅಡೂರು ದೇವಸ್ಥಾನದಲ್ಲಿದೆ. ಇದು ಹಾಳಾದ್ದರಿಂದ ಇದನ್ನು ಓದಲು ಸಾಧ್ಯವಿಲ್ಲ. ಕನ್ನಡ ಜಿಲ್ಲೆಯ ಮೇಲಾಧಿಕಾರವು ಬಾದಾವಿಯ ಚಾಲುಕ್ಯರ ಕೈಯಿಂದ ತಪ್ಪಿ ರಾಷ್ಟ್ರಕೂಟರ ಕೈಸೇರಿತು.

# ಬಾದಾಮಿಯ ಪಶ್ಚಿಮ ಚಾಲುಕ್ಯರು.

ಜಯಸಿಂಹ

ರಣರಾಗ

(1) ಸತ್ಯಾಶ್ರಯ ರಣವಿಕ್ರಮ 1ನೇ ಪುಲಿಕೇಶಿ ರಾಣಿ ದುರ್ಲಭದೇವಿ

(2) ರಣವಿಕ್ರಮ 1ನೇ ಕೀರ್ತಿವರ್ಮ
(ಕ್ರಿ. ಶ. 567-7—597-98)

(3) ರಣವಿಕ್ರಾಂತ ಮಂಗಳೇಶ
(ಕ್ರಿ. ಶ. 597-98—608)

ಸತ್ಯಾಶ್ರಯ ಧ್ರುವರಾಜ ಇಂದ್ರವರ್ಮ
ಕ್ರಿ. ಶ. 590—610-611

(4) ಸತ್ಯಾಶ್ರಯ 2ನೇ ಪುಲಿಕೇಶಿ
(ಕ್ರಿ. ಶ 609-642)

ಕುಬ್ಜ 1ನೇ ವಿಷ್ಣುವರ್ಧನ
ವೆಂಗಿಯ ಪೂರ್ವಚಾಲುಕ್ಯರ ಸ್ಥಾಪಕ
(ಕ್ರಿ. ಶ 615—633)

ಆದಿತ್ಯವರ್ಮ

ಚಂದ್ರಾದಿತ್ಯ
ರಾಣಿ ವಿಜಯ ಮಹಾದೇವಿ
(ಕ್ರಿ. ಶ. 655-659)

(5) ಸತ್ಯಾಶ್ರಯ ರಣರಾಶಿಕ
1ನೇ ವಿಕ್ರಮಾದಿತ್ಯ
(ಕ್ರಿ ಶ. 655-680)

(6) ಸತ್ಯಾಶ್ರಯ ರಾಜಾಶ್ರಯ ವಿನಯಾದಿತ್ಯ
(ಕ್ರಿ. ಶ. 680-696)

(7) ಸತ್ಯಾಶ್ರಯ ಸಮಸ್ತ ಭುವನಾಶ್ರಯ ವಿಜಯಾದಿತ್ಯ
(ಕ್ರಿ. ಶ. 696—733-34)

ಕುಂಕುಮ ಮಹಾದೇವಿ

(8) ಸತ್ಯಾಶ್ರಯ 2ನೇ ವಿಕ್ರಮಾದಿತ್ಯ
ರಾಣಿಯವರು ಲೋಕ ಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿ
(ಕ್ರಿ. ಶ. 733-34—746-47)

(9) ಸತ್ಯಾಶ್ರಯ ನರಸಿಂಹ 2ನೇ ಕೀರ್ತಿವರ್ಮ
(ಕ್ರಿ. ಶ. 746-47—757)

# 10 ನೇ ಅಧ್ಯಾಯ.

## ಅಲೂಪ ಅರಸರು.

ಅಲೂಪ ಅರಸರು ಯಾರೆಂದೂ ಯಾವ ವಂಶದವರೆಂದೂ ಇಷ್ಟರ ವರೆಗೆ ತಿಳಿದುಬರಲಿಲ್ಲ. ಮಂಗಳೂರು ಗೊಲ್ಲರ ಗಣಪತಿಯ ದೇವಸ್ಥಾನದ ಮುಂದುಗಡೆ ಇರುವ ಶಾಸನದ ಮೇಲ್ಗಡೆಯಲ್ಲಿ ಸುರುಳಿ ಹಾಕಿ ಕೂತು ಹೆಡೆಯನ್ನು ಬಿಚ್ಚಿದ ಹಾವಿನ ನಕ್ಷೆಯು ಇದೆ. ಇದರ ಮೂಲಕ ಇವರು ಸುಬ್ರಮಣ್ಯನನ್ನು ಪೂಜಿಸುತ್ತಿದ್ದರೆಂದೂ ಅಥವಾ ಇವರು ನಾಗವಂಶಕ್ಕೆ ಸೇರಿದವರೆಂದೂ ಊಹಿಸಬಹುದು. ಈ ನಾಗವಂಶವು ಹಿಂದೂದೇಶದ ಎಲ್ಲಾ ಕಡೆಗಳಲ್ಲಿಯೂ ಹರಡಿಕೊಂಡಿತ್ತು.

ಇವರ ವಿಷಯ ಇಷ್ಟರ ವರೆಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಿಕ್ಕಿದ ಶಾಸನಗಳು: ಉಡುಪಿಯ ಹತ್ತಿರವಿರುವ ಉದ್ಯಾವರ ಶಂಭು ಕಲ್ಲು ಭೈರವದೇವಸ್ಥಾನದಲ್ಲಿಯೂ ಅದರ ಸುತ್ತಮುತ್ತಲೂ 12 ಶಾಸನಗಳು. ಮಂಗಳೂರು ಗೊಲ್ಲರ ಗಣಪತಿ ದೇವಸ್ಥಾನದ ಮುಂದುಗಡೆಯಲ್ಲಿ 1; ಮಂಗಳೂರು ಅತ್ತಾವರ ಚಕ್ರಪಾಣಿ ದೇವಸ್ಥಾನದಲ್ಲಿ 1; ಮೂಡಬಿದರೆ (ಪ್ರಾಂತ್ಯ ಗ್ರಾಮ) ಗೌರೀ ದೇವಸ್ಥಾನದಲ್ಲಿ 3; ಬಾರಕೂರು ಮೂಡಕೇರಿ ಸೋಮೇಶ್ವರ ದೇವ ಸ್ಥಾನದಲ್ಲಿ 2; ಬಾರಕೂರು ಮಣಿಗಾರಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿ 1; ಬಾರಕೂರು ಕೋಟೆಕೇರಿ ಪಂಚಲಿಂಗೇಶ್ವರ ದೇವಸ್ಥಾನದಲ್ಲಿ 2; ಕಾಪು ಪೇಟೆಯ ಬೀದಿ ಅಶ್ವತ್ಥಕಟ್ಟೆಯ ಹತ್ತಿರ 1; ಕದರೆ ಮಂಜುನಾಥ ದೇವಸ್ಥಾನದ ಬಾಗಲಲ್ಲಿ 1; ಹೀಗೆ 24 ಶಾಸನಗಳು. ಬೇರೆ ಕಡೆಗಳಲ್ಲಿ ಅಹಿಹೊಳೆಯಲ್ಲಿ 1; ಸೊರೆಬದಲ್ಲಿ 1; ಹರಿಹರದಲ್ಲಿ 1; ಮಹಾಕೂಟ ವಿಜಯಸ್ತಂಭದಲ್ಲಿ 1. ಹೀಗೆ 4 ಶಾಸನಗಳು.

ಈ ಶಾಸನಗಳಿಂದ ಅಲೂಪ ಅರಸರು ಕ್ರಿ. ಶ. 567ರಿಂದ ಕ್ರಿ. ಶ. 1325ರ ವರೆಗೆ ಬೇರೆ ಬೇರೆ ಕಡೆಗಳಲ್ಲಿ ಎಂದರೆ, ಉತ್ತರ ಕನ್ನಡ ಮತ್ತು ಪಯಸ್ವಾನಿನದಿಯ ವರೆಗಿನ ತುಳು ರಾಜ್ಯವನ್ನು ಆಳುತ್ತಿದ್ದರೆಂದು ತಿಳಿಯಬಹುದು. ಮಹಾಕೂಟ ವಿಜಯಸ್ತಂಭದ ಮೇಲಿನ ಶಾಸನದಿಂದ ಕ್ರಿ. ಶ. 567ರಲ್ಲಿಯೂ ಕ್ರಿ. ಶ. 597ರಲ್ಲಿಯೂ ಪಶ್ಚಿಮ ಚಾಲುಕ್ಯರ ಅರಸನಾದ 1ನೇ ಕೀರ್ತಿವರ್ಮನು ಇವರನ್ನು ಜಯಿಸಿದನೆಂದೂ, ಇವರು ಶೇಶವಂಶ (ನಾಗ)ದವರೆಂದೂ ಇದೆ. ವಿನಯಾದಿತ್ಯನ ಶಾಸನದಲ್ಲಿ, ಇವರು ಇಡೆವೊಳಲು ವೈಶ್ಯದಲ್ಲಿ ಮಂಡಲೇಶ್ವರರಾಗಿ ಆಳುತ್ತಿದ್ದರೆಂದೂ ಇದೆ. ಇಡೆವೊಳಲು ಬನವಾಸಿಯ ಈಶಾನ್ಯಕ್ಕಿದೆ. ಅಹಿಹೊಳೆಯ ಶಾಸನದ ಪ್ರಕಾರ ಕ್ರಿ. ಶ. 608ರಲ್ಲಿ 2ನೇ ಪುಲಿಕೇಶಿಯು ಗಂಗರಾಜರನ್ನು ಜಯಿಸಿದ ಮೇಲೆ ಅಲೂಪರನ್ನೂ ಜಯಿಸಿದನೆಂದು ಇದೆ. ಕ್ರಿ. ಶ. 694ರ ವಿನಯಾದಿತ್ಯನ ಶಾಸನದಿಂದ ಅಲೂಪರು ಪಶ್ಚಿಮ ಚಾಲುಕ್ಯರ ವಂಶಪಾರಂಪರ್ಯ ಕೆಲಸಗಾರರಾಗಿದ್ದರೆಂದು ತಿಳಿದುಬರುತ್ತದೆ. ಕ್ರಿ. ಶ. 692ರ ಸೊರೆಬದ ವಿನಯಾದಿತ್ಯನ ಶಾಸನದಿಂದ, ವಿನಯಾದಿತ್ಯನು ತೊರೆವಾರ ವೈಶ್ಯದ ಚಿತ್ರಸೇದುಗ್ರಾಮದಲ್ಲಿ ದಂಡನ್ನು ಇಳಿಸಿಕೊಂಡಿರುವಾಗ ಅಲೂಪ ಅರಸು, ಗುಣಸಾಗರನ ಮಗ, ಮಹಾರಾಜ ಚಿತ್ರವಾಹನನ ಅಪೇಕ್ಷೆ ಪ್ರಕಾರ ಇಡೆವೊಳಲು ವೈಶ್ಯದ ಸಾಲಿವೊಗೆ ಗ್ರಾಮವನ್ನು ದೇವಸ್ಥಾನಕ್ಕೆ ಉಂಬಳಿಬಿಟ್ಟನೆಂದು ಕಾಣುತ್ತದೆ. 694ರ ಶಾಸನದಿಂದ ಇಡೆವೊಳಲು ವೈಶ್ಯದ ಕಿರುಕಾಗಾಮಾಸಿ ಗ್ರಾಮವನ್ನು ಅಲೂಪ ಅರಸನ ಅಪೇಕ್ಷೆ ಪ್ರಕಾರ ವಿನಯಾದಿತ್ಯನು ಉಂಬಳಿಬಿಟ್ಟನೆಂದೂ ಇದೆ. ಇದರಿಂದ ಅಲೂಪರು 694ರ ವರೆಗೆ ಇಡೆವೊಳಲು ವೈಶ್ಯದ ಮಂಡಲೇಶ್ವರರಾಗಿರಬಹುದೆಂದು ಊಹಿಸಬಹುದು. ಇವರು ಕ್ರಿ. ಶ. 694ರಿಂದ 1325ರ ವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ತುಳುರಾಜ್ಯದ ಮಂಡಲೇಶ್ವರರಾಗಿದ್ದರೆಂದೂ ಹೇಳಬಹುದು.

ಅನೇಕ ವರುಷಗಳ ವರೆಗೆ ಇವರು ಉಡುಪಿಯ ಹತ್ತಿರವಿರುವ ಉದಯಪುರ (ಉದ್ಯಾವರ)ವನ್ನು ರಾಜಾಧಾನಿಯಾಗಿ ಮಾಡಿಕೊಂಡು ಆಳಿಕೊಂಡಿದ್ದರು. ರಾಜ್ಯಭಾರದ ಕೊನೆಯ ಭಾಗದಲ್ಲಿ ಮಂಗಳೂರನ್ನು ರಾಜಧಾನಿಯಾಗಿಮಾಡಿ ಆಳುತ್ತಿದ್ದರು. ಇವರ ಕಾಲದಲ್ಲಿ ಮಂಗಳೂರು ಹೋಬಳಿಯಲ್ಲಿ, ಎಂದರೆ, ಕುಡುಪು, ಬಳ್ಳಮಂಜ, ಸುಬ್ರಹ್ಮಣ್ಯ ಮುಂತಾದ ಸ್ಥಳಗಳಲ್ಲಿ ಸುಬ್ರಹ್ಮಣ್ಯ ದೇವಸ್ಥಾನಗಳು ಉಂಟಾದವು. ನಾಗನ ಪೂಜೆಯೂ ಹೆಚ್ಚಾಯಿತೆಂದು ಹೇಳಬಹುದು.

ಇವರಲ್ಲಿ ಮೇಲಿನ ಶಾಸನಗಳಿಂದ ತಿಳಿದುಬರುವ ಅರಸರ ವಿಷಯ ಸ್ವಲ್ಪ ಬರೆದಿದೆ.

(1) **ಗುಣಸಾಗರ:**—ಇಷ್ಟರ ವರೆಗೆ ತಿಳಿದು ಬಂದ ಪ್ರಕಾರ ಇವನೇ ಈ ವಂಶದಲ್ಲಿ ಮೊದಲನೇ ಅರಸನೆಂದು ಹೇಳಬಹುದು.

(2) **ಚಿತ್ರವಾಹನ:**—ಇವನು ಗುಣಸಾಗರನ ಮಗನೆಂದು ಸೊರೆಬದ ಕ್ರಿ. ಶ. 692ರ ಶಾಸನದಿಂದ ಕಾಣುತ್ತದೆ. ಆ ಸಮಯದಲ್ಲಿ ಇವನು ಇಡೆವೊಳಲು ವೈಶ್ಯದಿಂದಲೇ ದಕ್ಷಿಣ ಕನ್ನಡ ಜಿಲ್ಲೆಯನ್ನು ಆಳುತ್ತಿದ್ದನೆಂದು ತೋರುತ್ತದೆ. ಉಡುಪಿಯ ಹತ್ತಿರವಿರುವ ಉದ್ಯಾವರ ಶಂಭುಕಲ್ಲು ಭೈರವ ದೇವಸ್ಥಾನದಲ್ಲಿರುವ ಒಂದು ಶಾಸನದಲ್ಲಿ ಅಲೂಪ ಅರಸು ರಣಸಾಗರನ ಸಂಗಡ ಇವನ ಹೆಸರೂ ಇದೆ.

(3) **ರಣಸಾಗರ:**—ಇವನು ಯಾರ ಮಗನೆಂದೂ ತಿಳಿಯುವದಿಲ್ಲ. ಇವನ ವಿಷಯ ಉದ್ಯಾವರ, ಶಂಬುಕಲ್ಲು, ಭೈರವ ದೇವಸ್ಥಾನದಲ್ಲಿ 3 ಶಾಸನಗಳು ಇವೆ. ಒಂದರಲ್ಲಿಯೂ ಶಕವಾಗಲಿ ಸಂವತ್ಸರವಾಗಲಿ ಇಲ್ಲ. ಒಂದರಲ್ಲಿ ಒಬ್ಬ ವೀರನ ಮರಣದ ವಿಷಯ ಬರೆದಿದೆ. ಇನ್ನೊಂದರಲ್ಲಿ ಚಂಬುಕಲ್ಲು, (ಉದ್ಯಾವರ), ಶಿವಳ್ಳಿಗ್ರಾಮ ಹೆಸರಿದೆ. ಮತ್ತೊಂದರಲ್ಲಿ ಶ್ವೇತವಾಹನನ ಮರಣದ ವಿಷಯ ಇದೆ. ಶ್ವೇತವಾಹನನು ಯಾರೆಂದು ತಿಳಿಯದಿದ್ದರೂ ವಾಹನ ಎಂಬ ಹೆಸರು ಅಲೂಪರಲ್ಲಿ ವಾಡಿಕೆಯಲ್ಲಿದೆ ಎಂಬದರಿಂದ ಇವನು ಅಲೂಪರ ವಂಶದವನೇ ಆಗಿರಬಹುದು.

(4) **ವಿಜಯಾದಿತ್ಯ ಯಾನೆ ಉತ್ತಮಪಾಂಡ್ಯ:**—ಇವನ ಶಾಸನಗಳು ಉದ್ಯಾವರ, ಶಂಭುಕಲ್ಲು ದೇವಸ್ಥಾನದಲ್ಲಿ ಇವೆ. ಇವುಗಳಲ್ಲಿ ಹೇಳಿದ ಪ್ರಕಾರ ಇವನು ಉದಯಪುರ (ಉದ್ಯಾವರ) ದಲ್ಲಿಯೇ ಆಳುತ್ತಿದ್ದನು. ಆ ಸಮಯದಲ್ಲಿ ಉದ್ಯಾವರವು ಬಹಳ ದೊಡ್ಡ ವ್ಯಾಪಾರಸ್ಥಳವಾಗಿರಬಹುದು. ಹೊಳೆಯೂ ಆಳವಾಗಿದ್ದು ಹಡಗುಗಳು ಹೊಳೆಯಲ್ಲಿ ಬರುತ್ತಿರಬಹುದು.

(5) **ಪ್ರಿಥ್ವಿಸಾಗರ:**—ಇವನಿಗೂ ವಿಜಯಾದಿತ್ಯನಿಗೂ ಯಾವ ಸಂಬಂಧವಿತ್ತೆಂದು ತಿಳಿಯುವದಿಲ್ಲ. ಈ ಅರಸನಿಗೆ ಉದಯಾದಿತ್ಯ ಮತ್ತು ಉತ್ತಮಪಾಂಡ್ಯನೆಂಬ ಹೆಸರಿತ್ತೆಂದು ಉದ್ಯಾವರ ಶಂಬುಕಲ್ಲು ಭೈರವ ದೇವಸ್ಥಾನದ ಹತ್ತಿರವಿರುವ 3 ಶಾಸನಗಳಿಂದ ತಿಳಿಯಬಹುದು.



ಕದ್ರಿ ದೇವಸ್ಥಾನ.

(6) **ಕುಂದವರ್ಮ:**—ಕದರೆ ಮಂಜುನಾಥ ದೇವಸ್ಥಾನದಲ್ಲಿ ಲೋಕೇಶ್ವರನ ಒಂದು ಬಹಳ ಅಂದವಾದ, ನಾಥ ಸಂಪ್ರದಾಯದವರು

ಪೂಜಿಸುವ ಪ್ರತಿಮೆ ಇದೆ. ಈ ಪ್ರತಿಮೆಯ ಪೀಠದಲ್ಲಿ ಒಂದು ಶಾಸನವು ಗ್ರಂಥಾಕ್ಷರದಲ್ಲಿಯೂ ಸಂಸ್ಕೃತ ಶ್ಲೋಕ ರೂಪದಲ್ಲಿಯೂ ಇದೆ. ಇದರಲ್ಲಿ ಸೋಮವಂಶದ ಕುಂದವರ್ಮನೆಂಬ ಅಲೂಪ ಅರಸನು ಕಲಿವರ್ಷ 4068 (ಕ್ರಿ. ಶ. 968)ರ ಮಕರಮಾಸ ಕನ್ಯಾಲಗ್ನ, ರೋಹಿಣಿ ನಕ್ಷತ್ರ ಸಾಯಂಕಾಲದಲ್ಲಿ ಕದ್ರಿಕಾ (ಕದ್ರೆ) ವಿಹಾರದಲ್ಲಿ ಲೋಕೇಶ್ವರ ದೇವನನ್ನು ಪ್ರತಿಷ್ಠಿಸಿದನು ಎಂದು ಇದೆ. ಈ ಸಮಯದಲ್ಲಿ ಕದ್ರೆಗುಡ್ಡೆಯ ಮೇಲೆ ಜೋಗಿಯವರಿಗೆ (ಯೋಗಿಶ್ವರರಿಗೆ) ಮಠವನ್ನು ಸಹ ಇದೇ ಅರಸನು ಕಟ್ಟಿಸಿದನು ಎಂದು ಮಠದ ಹತ್ತಿರ ಇರುವ ಒಂದು ಚೌಕದ ಕಂಬದ ಮೇಲೆ ಇರುವ ಶಾಸನದಲ್ಲಿದೆ.



ಲೋಕೇಶ್ವರ ದೇವರ ಪ್ರತಿಮೆ.

(7) **ಭುಜಬಲಕವಿ:**—ಕ್ರಿ. ಶ. 1113-1155.

ಇವನ ಕಾಲದ ಶಾಸನಗಳು 3 ಇವೆ. 1ನೇ ಶಾಸನವು ಉದ್ಯಾವರ ಶಂಭುಕಲ್ಲು ದೇವಸ್ಥಾನದ ಹತ್ತಿರವಿರುವ ರಾಘವೇಂದ್ರ ಭಟ್ಟರ ಮನೆಯ ಜಗಲಿಗೆ ತಾಗಿ ಇದೆ. ಶಾ. ಶ 1036 ಕ್ರಿ. ಶ. 1114. 2ನೇ ಶಾಸನವು ಬಾರಕೂರು ಕೋಟೆಕೇರಿ ಪಂಚಲಿಂಗೇಶ್ವರ ದೇವಸ್ಥಾನ ದಲ್ಲಿದೆ. ಶಾ. ಶ. 1077ನೇ ಯುವಸಂವತ್ಸರ ಕ್ರಿ. ಶ. 1155. ಇನ್ನೊಂದು ಅದೇ ದೇವಸ್ಥಾನದಲ್ಲಿದೆ. ಶಾ. ಶ. 1062 ಸಿದ್ಧಾರ್ಥಿ ಸಂವತ್ಸರ ಕ್ರಿ. ಶ. 1140. ಇವುಗಳ ಆಧಾರದಿಂದ ಈ ಅರಸನು 1113ರಿಂದ ಕ್ರಿ. ಶ. 1155ರ ವರೆಗೆ ಆಳಿದನೆಂದು ಹೇಳಬಹುದು.

(8) **ಕುಲಶೇಖರ:**—ಕ್ರಿ. ಶ 1204-1215.

ಈ ಅರಸನ ಕಾಲದ ಒಂದು ಶಾಸನವು ಮಂಗಳೂರು ಅತ್ತಾವರ ಚಕ್ರಪಾಣಿ ದೇವಸ್ಥಾನದಲ್ಲಿದೆ. ಶಾ. ಶ. 1129 (ಕ್ರಿ. ಶ. 1207) ಪ್ರಭವ ಸಂವತ್ಸರ. ಇನ್ನು ಮೂರು ಶಾಸನಗಳು ಮೂಡಬಿದರೆ ಪ್ರಾಂತ್ಯ ಗಾರಿ ದೇವಸ್ಥಾನದಲ್ಲಿವೆ. ಒಂದನೇ ಶಾ. ಶ 1126 ರಕ್ತಾಕ್ಷಿ ಸಂವತ್ಸರ ಕ್ರಿ. ಶ. 1204. 2ನೇ ಶಾ. ಶ. 1127ನೇ ಕ್ರೋಧನ ಸಂವತ್ಸರ (ಕ್ರಿ. ಶ. 1205). 3ನೇ ಶಾ. ಶ. 1137ನೇ ಯುವ ಸಂವತ್ಸರ (ಕ್ರಿ. ಶ. 1215).

(9) **ಬಂಕಿದೇವ ಅಲುಪೇಂದ್ರ:**—ಕ್ರಿ. ಶ. 1303.

ಇವನ ಕಾಲದ ನಾಲ್ಕು ಶಾಸನಗಳು ಸಿಕ್ಕಿಯುವೆ. ಒಂದು ಮಂಗಳೂರು ಗೊಲ್ಲರಕೇರಿಯಲ್ಲಿರುವ ಗಣಪತಿ ದೇವಸ್ಥಾನದ ಮುಂದು ಗಡೆಯ ಒಂದು ಚೌಕದ ಕಂಬದ ಮೇಲಿದೆ. ಇದರ ಪ್ರಕಾರ ಈ ಬಂಕಿದೇವನು ಶಾ. ಶ. 1225 (ಕ್ರಿ. ಶ. 1303)ರಲ್ಲಿ ತನ್ನ ರಾಜಧಾನಿ ಯಾದ ಮಂಗಳೂರಿನಲ್ಲಿ ಆಳಿಕೊಂಡಿದ್ದನೆಂದು ಇದೆ. ಮತ್ತು ಈ ದೇವಸ್ಥಾನಕ್ಕೆ ಬಿಟ್ಟ ಉಂಬಳಿ ವಿಷಯವೂ ಇದೆ. 3ನೇ ಶಾಸನವು ಮಂಗಳೂರು ಕದ್ರಿ ಮಂಜುನಾಥ ದೇವಸ್ಥಾನದ ಹೆಬ್ಬಾಗಿಲಿನ ಹತ್ತಿರವಿದೆ. ಇದು ಓದಲಾರದಷ್ಟು ಸವೆದು ಹೋಗಿದೆ.

ಇನ್ನು ಎರಡು ಬಾರಕೂರು ಮೂಡಕೇರಿ ಸೋಮೇಶ್ವರ ದೇವಸ್ಥಾನ ದಲ್ಲಿವೆ. ಶಕವೇನೂ ತಿಳಿಯುವುದಿಲ್ಲ. ಆ ದೇವಸ್ಥಾನಕ್ಕೆ ಭೂಮಿ ಉಂಬಳಿ ಬಿಟ್ಟನೆಂದೂ ಸುವರ್ಣ ದಾನಕೊಟ್ಟನೆಂದೂ ಇವುಗಳಲ್ಲಿದೆ.

(10) **ಸೊಯಿದೇವ ಅಲುಪೇಂದ್ರ:—** ಕ್ರಿ. ಶ. 1315-1325.

ಇವನ ಕಾಲದ 2 ಶಾಸನಗಳು ಸಿಕ್ಕಿಯುವೆ. ಒಂದು ಶಾ. ಶ. 1238 (ಕ್ರಿ. ಶ. 1316)ರ ಶಾಸನವು ಬಾರಕೂರು ಮಣಿಗಾರ ಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿದೆ. ಇನ್ನೊಂದು ಶಾ. ಶ. 1247 ರಕ್ತಾಕ್ಷಿ ಸಂವತ್ಸರ ಕ್ರಿ. ಶ. 1235ರ ಶಾಸನವು ಕಾಪು ಬೀದಿಯ ಅಶ್ವತ್ಥ ಕಟ್ಟೆಯ ಹತ್ತಿರವಿದೆ.

ಈ ಆಳಿಕೆಗಳಿಂದ ಅಲೂಪ ಅರಸರು ತುಳು ರಾಜ್ಯದ ಮಂಡಲೇಶ್ವರರಾಗಿ 1325ರ ವರೆಗೆ ಆಳುತ್ತಿದ್ದರೆಂದು ತಿಳಿಯಬಹುದು.

# 11 ನೇ ಅಧ್ಯಾಯ.

## ನಾಥಸಂಪ್ರದಾಯವೂ, ಜೋಗಿಯವರೂ.

ನಾಥಸಂಪ್ರದಾಯವೆಂಬದು ಬೌದ್ಧ ಜೈನಮತಗಳ ಹಾಗೆಯೇ ಒಂದು ಪ್ರತ್ಯೇಕ ಮತವಾಗಿದೆ. ಆರ್ಯರು ವೇದಾಂತಮತವನ್ನು ಅನುಸರಿಸುತ್ತಿದ್ದರು. ಅದು ಕ್ರಮೇಣ ಪ್ರಾಚೀನ ಹಿಂದುಮತ ವಾಯಿತು. ಆ ಸಮಯದಲ್ಲಿ ಜಾತಿಭೇದಗಳು ಉಂಟಾದವು. ಬ್ರಾಹ್ಮಣರೇ ಮತಸಂಬಂಧವಾದ ಕೆಲಸಗಳಿಗೆ ಹಕ್ಕುದಾರರಲ್ಲದೆ ಕ್ಷತ್ರಿಯರು ಸಹ ಹಕ್ಕುದಾರರಲ್ಲ ಎಂದು ಹೇಳಲಾರಂಭಿಸಿದರು. ಶೂದ್ರರಿಗೆ ವೇದಾಂತ ಮತದಲ್ಲಿಯಾಗಲೀ ನವೀನ ಹಿಂದುಧರ್ಮದಲ್ಲಿ ಯಾಗಲೀ ಎಡೆ ಇರಲಿಲ್ಲ. ಈ ಸಮಯದಲ್ಲಿ ಗಂಗಾನದೀತೀರದಲ್ಲಿರುವ ಗೌಡದೇಶದಲ್ಲಿ (ಬಿಹಾರ) ಮೂರು ಹೊಸ ಮತಗಳುಂಟಾದವು. 1. ನಾಥಸಂಪ್ರದಾಯ 2. ಬೌದ್ಧಮತ 3. ಜೈನಮತ.

ಕ್ರಿ. ಪೂ. 8ನೇ ಶತಮಾನದಲ್ಲಿ ಗೌಡದೇಶದಲ್ಲಿ ನಾಥವಂಶಕ್ಕೆ ೕರಿದ ಪಾರ್ಶ್ವನಾಥನೆಂಬ ರಾಜಕುಮಾರನು ತನ್ನ ವಂಶದ ಕ್ಷತ್ರಿಯರಿ ೋಸ್ಕರ ಒಂದು ಹೊಸಮತವನ್ನು ಸ್ಥಾಪಿಸಿದನು. ಕ್ಷತ್ರಿಯರು ಯೋಗ ಾಧನೆಯನ್ನು ಕಲಿತು, ಯೋಗೀಶ್ವರರಾಗಿ ಎಲ್ಲಾ ತರದ ಲೌಕಿಕ ಸುಖಗ ನ್ನು ಬಿಟ್ಟು, ಮುಕ್ತಿಯನ್ನು ಪಡಿಯುವದೇ ಉತ್ತಮವೆಂದು ಆಲೋಚಿಸಿ, ಾರ್ಶ್ವನಾಥನು ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ಯೋಗಸಾಧನೆಯಲ್ಲಿ ರತನಾಗಿ, ಕಡೆಗೆ ಮುಕ್ತಿಪಡೆಯುವದಕ್ಕೆ ಬ್ರಾಹ್ಮಣರ ಮತಕ್ಕಿಂತಲೂ ೋಗೀಶ್ವರನಾಗುವದೇ ಉತ್ತಮವೆಂದು ತಿಳಿದು, ಅದನ್ನೇ ಎಲ್ಲರಿಗೂ ೋಧಿಸಲುಪಕ್ರಮಿಸಿದನು. ಇವನು ಆದಿನಾಥನೆಂಬ ಹೆಸರನ್ನಿಟ್ಟು ೊಂಡನು. ಬದರಿಕಾಶ್ರಮದಿಂದ ಹೊರಟು ಗೌಡದೇಶಕ್ಕೆ ಬಂದು ನ್ನ ಮತವನ್ನು ಬೋಧಿಸಲಾರಂಭಿಸಿದನು. ಆದರೆ ಇವನ ಬೋಧನೆಗೆ ಾರೂ ಕಿವಿಗೊಡಲಿಲ್ಲ. ಇವನು ತರುವಾಯ ಹಿಂದೂದೇಶದಲ್ಲೆಲ್ಲಾ ಂಚರಿಸಿ, ಎಲ್ಲಾ ತೀರ್ಥಸ್ಥಳಗಳಲ್ಲಿಯೂ ತಿರುಗಿ ಬದರಿಕಾಶ್ರಮಕ್ಕೆ ಂದು, ತಪಸ್ಸುಮಾಡುತ್ತಾ ಇದ್ದನು. ಕೆಲವು ಮಂದಿ ಇವನ ಷ್ಯರಾದರು. ಇವನ ಕಾಲದಲ್ಲಿ ಈ ಮತವು ಪ್ರಬಲಕ್ಕೆ ಬರಲಿಲ್ಲ.

ಇವನ ಮತದ ಉದ್ದೇಶವೇನೆಂದರೆ: ಬಹಳ ಸುಖಸಂತೋಷ ಳಲ್ಲಿಯೂ, ವೈಭವಗಳಲ್ಲಿಯೂ ಬಿದ್ದಿರುವ ಮನುಷ್ಯರನ್ನು, ಅವ ಲ್ಲಿಯೂ ಮುಖ್ಯವಾಗಿ ಅರಸರನ್ನೂ ಯೋಗೀಶ್ವರರಾಗಿ ಮಾಡುವದು, ಾತಿಭ್ರಷ್ಟರಾಗಿ ಕಷ್ಟದಲ್ಲಿ ಬಿದ್ದವರನ್ನು ಈ ಮತಕ್ಕೆ ಸೇರಿಸಿ, ವರನ್ನು ಉದ್ಧರಿಸುವದು. ಈ ಮತಕ್ಕೆ ನಾಥಸಂಪ್ರದಾಯವೆಂದು ಹೆಸರಾ ುತು. ಇದಕ್ಕೆ ಸೇರಿದೊಡನೆಯೇ ಕಿವಿಗಳಿಗೆ ದೊಡ್ಡ ತೂತುಗಳನ್ನು ಗೆದು, ಮಕರಕುಂಡಲಗಳನ್ನು ಧರಿಸಿಕೊಂಡು, ಜಟೆಯನ್ನು ಬೆಳೆಸಿ, ದರ ಸುತ್ತಲೂ ರುದ್ರಾಕ್ಷಮಾಲೆಯನ್ನು ಸುತ್ತಿ, ಮೈಗೂ ಜಟೆಗೂ ಭೂತಿಯನ್ನು ಹಚ್ಚಿಕೊಂಡು, ಕಂಕುಳಲ್ಲಿ ಜೋಲಿಯನ್ನು ತೂಗಾಡಿಸಿ ೊಂಡು, ಸೊಂಟಕ್ಕೆ ಉಣ್ಣೆಯ ಉಡಿದಾರವನ್ನು ಕಟ್ಟಿ, ಕೌಪೀನ

ಮಾತ್ರವೇ ಉಟ್ಟು, ಶೃಂಗಿ, ಶೌಲಿ, ತ್ರಿಶೂಲ ಮುಂತಾದ್ದನ್ನು ಧರಿಸಿಕೊಂಡು, ಹಿಂದೂದೇಶದಲ್ಲಿರುವ ತೀರ್ಥಗಳಲ್ಲೆಲ್ಲಾ ಸ್ನಾನಮಾಡಿ ನಂತರ ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ನಾಥಸಂಪ್ರದಾಯದ ತತ್ವಗಳನ್ನು ಯೋಗೀಶ್ವರರಿಂದ ಕಲಿತುಕೊಂಡು ಮತಪ್ರಸಾರಣೆಗಾಗಿ ದೇಶದಲ್ಲಿ ಸಂಚರಿಸುವರು. ಇವರಲ್ಲಿ ಕೆಲವರು ಯೋಗ್ಯವಾದ ಸ್ಥಳಗಳನ್ನು ನೋಡಿ ದೇವರ ಧ್ಯಾನದಲ್ಲಿಯೇ ನಿರತರಾಗಿ ಯೋಗಸಾಧನೆಯಲ್ಲಿ ಕುಳಿತುಕೊಳ್ಳುತ್ತಾರೆ. ಈ ಮತದವರು ಈಶ್ವರನನ್ನು ಆದಿನಾಥ ಅಥವಾ ಲೋಕೇಶ್ವರನೆಂಬ ಹೆಸರಿನಿಂದ ಪೂಜಿಸುವರು. ಅಲ್ಲದೆ ಶಕ್ತಿಯನ್ನೂ ಭೈರವನನ್ನೂ ಪೂಜಿಸುತ್ತಾರೆ.



ಮತ್ಸ್ಯೇಂದ್ರನಾಥ.

ಈ ಮತವು ಮತ್ಸ್ಯೇಂದ್ರನಾಥನ ಕಾಲದಲ್ಲಿ ಉನ್ನತಸ್ಥಿತಿಗೆ ಬಂತು. ಮತ್ಸ್ಯೇಂದ್ರನಾಥನು, ಗಂಗಾನದಿಯು ಸಮುದ್ರಕ್ಕೆ ಸಂಗಮವಾಗುವ ರುವ ಸಾಗರ ಎಂಬ ದ್ವೀಪದಲ್ಲಿ ಮಾರ್ಗಶಿರ ಮಾಸ ಶುಕ್ಲಪಕ್ಷ ರವಾರ ಶ್ರವಣನಕ್ಷತ್ರ ಮಧ್ಯರಾತ್ರಿಯ ಸಮಯ ಹುಟ್ಟಿದನು. ತ್ಸ್ಯೇಂದ್ರನಾಥನು ತನ್ನ ಮತವನ್ನು ಬೋಧಿಸುತ್ತಾ ಸಂಚರಿಸುವಾಗ್ಗೆ ಯೋಧ್ಯಾಪಟ್ಟಣದ ಹತ್ತಿರವಿರುವ 'ಅಪೂರ್ವ ಪುಣ್ಯಪುರಿ' ಎಂಬ ಪಟ್ಟಣ ಲ್ಲಿ ಗೋರಕ್ಷನಾಥನೆಂಬ ಶಿಷ್ಯನು ಇವನಿಗೆ ಸಿಕ್ಕಿದನು. ಗೋರಕ್ಷ ಥನು ನಾಥಸಂಪ್ರದಾಯಕ್ಕೆ ಸೇರಿದ ವಿಷಯ ಒಂದು ಕಥೆ ಇದೆ. ಪೂರ್ವ ಪುಣ್ಯಪುರಿ ಎಂಬ ಊರಿನಲ್ಲಿ ವಿಜಯಧ್ವಜನೆಂಬ ಅರಸನು ಳುತ್ತಿದ್ದನು. ಇವನಿಗೆ ಸುಶೀಲೆ ಎಂಬ ರಾಣಿ ಇದ್ದಳು. ರಾಜಧಾನಿ ಲ್ಲಿ ಸದ್ಬೋಧನೆಂಬ ಒಬ್ಬ ಬ್ರಾಹ್ಮಣನಿದ್ದನು. ಈ ಬ್ರಾಹ್ಮಣನಿಗೆ ದ್ವೃತ್ತಿ ಎಂಬ ಹೆಂಡತಿ ಇದ್ದಳು. ಈ ಬ್ರಾಹ್ಮಣನು ಬಹಳ ಐಶ್ವರ್ಯ ತನಾಗಿದ್ದು, ದಾನಧರ್ಮ, ಪರೋಪಕಾರ ಮುಂತಾದ್ದನ್ನು ಮಾಡು ದ್ದರೂ ಇವನಿಗೆ ಮಕ್ಕಳಿರಲಿಲ್ಲ. ಒಂದಾನೊಂದು ದಿವಸ ಈ ಬ್ರಾಹ್ಮ ನು ಪೇಟೆಗೆಹೋದ ಸಮಯ ಮತ್ಸ್ಯೇಂದ್ರನಾಥನು ಅವನ ಬಾಗಿಲಿಗೆ ದು, 'ಅಲಕ್'' ಎಂದು ಹೇಳಿದನು. ಆಗ ಸದ್ವೃತ್ತಿಯು ಯಾರೋ ೋಗೀಶ್ವರರು ಭಿಕ್ಷೆ ಎತ್ತುವುದಕ್ಕೆ ಬಂದಿದ್ದಾರೆಂದು ತಿಳಿದು ಭಿಕ್ಷೆ ನ್ನು ಕೊಡಲಿಕ್ಕೆ ಬಂದಾಗ ಮತ್ಸ್ಯೇಂದ್ರನಾಥನು ಬಾಡಿದ ಅವಳ ಖವನ್ನು ನೋಡಿ ಬಹಳ ಐಶ್ವರ್ಯವಂತೆಯಾದ ನಿನ್ನ ಮುಖವು ಂದಿಹೋಗಲು ಕಾರಣವೇನೆಂದು ಕೇಳಿದನು. ಆಗ ಅವಳು ತಮಗೆ ಲ್ಲಾ ತರದ ಸುಖ ಸಂತೋಷಗಳಿದ್ದರೂ ಮಕ್ಕಳು ಇಲ್ಲದೆ ಇರುವುದರಿಂದ ಗೆ ಆಗಲಿಕ್ಕೆ ಕಾರಣವೆಂದು ಹೇಳಿದಳು. ಆಗ ಮತ್ಸ್ಯೇಂದ್ರನಾಥನು ಪ್ಪ ವಿಭೂತಿಯನ್ನು ಕೊಟ್ಟು ಇದನ್ನು ನೀನು ದೇವರ ಮೇಲೆ ಕ್ತಿಯಿಟ್ಟು ಸೇವಿಸಿದರೆ ನಿನಗೆ ಗಂಡುಮಗುವು ಹುಟ್ಟುವುದೆಂದು ಹೇಳಿ ರಟುಹೋದನು.

ಆ ಹೆಂಗಸು ಅದನ್ನು ದೇವರ ಕೋಣೆಯೊಳಗೆ ಇಟ್ಟು ನೆರೆಮನೆಯ ಹೆಂಗಸಿನ ಹತ್ತಿರ ಈ ಸಂಗತಿಯನ್ನು ಹೇಳಿದಾಗ ಆಕೆಯು 'ಯೋಗಿಗಳನ್ನು ನಂಬಬಾರದು' ಎಂದು ಹೇಳಿದಳು. ಆಗ ಈ ಹೆಂಗಸು ಆ ವಿಭೂತಿಯನ್ನು ಸೆಗಣಿಯ ರಾಶಿಗೆ ಬಿಸಾಡಿದಳು. ಹನ್ನೆರಡು ವರುಷಗಳ ನಂತರ ಮತ್ಸ್ಯೇಂದ್ರನಾಥನು ಅದೇ ಊರಿಗೆ ಬಂದು ಆ ಬ್ರಾಹ್ಮಣನ ಮನೆಗೆ ಹೋದಾಗ ಮತ್ಸ್ಯೇಂದ್ರನಾಥನ ಗುರುತನ್ನು ಹಿಡಿದು ಸದ್ವೃತ್ತಿಯು ಹೆದರಿ ಧರ್ಮವನ್ನು ಕೊಡಲಿಕ್ಕೆ ಗಂಡನನ್ನು ಕಳುಹಿಸಿದಳು. ಮತ್ಸ್ಯೇಂದ್ರನಾಥನು 'ಬ್ರಾಹ್ಮಣನೊಡನೆ ಮಗನೆಲ್ಲಿದ್ದಾನೆಂದು' ಕೇಳಲು, ಬ್ರಾಹ್ಮಣನ ಹೆಂಡತಿಯು ತಾನು ವಿಭೂತಿಯನ್ನು ಸೆಗಣಿಯ ರಾಶಿಗೆ ಬಿಸಾಡಿದ್ದೇನೆಂದು ಹೇಳಿ ತಾನು ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡಳು. ಆಗ ಮತ್ಸ್ಯೇಂದ್ರನಾಥನು ಸೆಗಣಿಯ ರಾಶಿಯನ್ನು ಅಗಿಸಲು, ಅದರಲ್ಲಿ 12 ವರುಷದ ಹುಡುಗನು ಯೋಗಸಾಧನೆಯಲ್ಲಿ ಕುಳಿತಿರುವುದು ಕಾಣಬಂತು. ಅವನನ್ನು ಮೇಲಕ್ಕೆ ತೆಗೆದು ಗೋರಕನಾಥ(ಗೊ + ರಕ + ನಾಥ ದನದ ಸೆಗಣಿಯಲ್ಲಿ ರಕ್ಷಿಸಲ್ಪಟ್ಟವನು) ಎಂಬ ಹೆಸರನ್ನಿಟ್ಟನು. ಇವನು ಕೂಡಲೇ ಸನ್ಯಾಸಿಯಾಗಿ ಮತ್ಸ್ಯೇಂದ್ರನಾಥನ ಹಿಂದೆಯೆ ಹೋದನು. ಈ ಕಥೆಯಿಂದ ಗೋರಕನಾಥನು ಸದ್ಬೋಧ ಎಂಬ ಬ್ರಾಹ್ಮಣನ ಮಗನೆಂದೂ ನಂತರ ಇವನು 12 ವರುಷ ಪ್ರಾಯದಲ್ಲಿಯೇ ನಾಥಸಂಪ್ರದಾಯವನ್ನು ಅನುಸರಿಸಿ ಸನ್ಯಾಸಿಯಾದನೆಂದೂ ಹೇಳಬಹುದು.

ಗೋರಕನಾಥನಲ್ಲದೆ ಮತ್ಸ್ಯೇಂದ್ರನಾಥನಿಗೆ ಜಾಲಂಧರನಾಥ, ಗೋಪೇಂದುನಾಥ, ಕನಿಫನಾಥ, ಚರ್ಪಟಿನಾಥ, ಚೌರಂಗಿನಾಥ ಮುಂತಾದ 12 ಮಂದಿ ಶಿಷ್ಯರಿದ್ದರು. ಇವರಲ್ಲಿ ಗೋರಕನಾಥನು ಬಹಳ ಬುದ್ಧಿವಂತನಾದ ಶಿಷ್ಯನಾಗಿದ್ದನು. ಇವನು ಆ ಊರಿನ ಅರಸನನ್ನೇ ಈ ಮತವನ್ನು ಅವಲಂಬಿಸುವಂತೆ ಮಾಡಿ ಅಯೋಧ್ಯೆಯ ಹತ್ತಿರ ತನ್ನ ಹೆಸರಿನಿಂದ ಗೋರಕ್ಷಪುರಿ (ಗೋರಕಪುರ) ಎಂಬ ಪಟ್ಟಣವನ್ನು

ಸ್ಥಾಪಿಸಿ ಅಲ್ಲಿ ಗೋರಕ ಬನಸರಿ ಮಠವನ್ನು ಸ್ಥಾಪಿಸಿದನು. ಇದು ನಾಥಸಂಪ್ರದಾಯದವರಿಗೆ ದೊಡ್ಡ ಪುಣ್ಯಸ್ಥಳವಾಗಿದೆ. ಇಲ್ಲಿ ಹದಿನೆರಡು ವರುಷಗಳಿಗೊಮ್ಮೆ ಈ ಮತದ ಯೋಗೀಶ್ವರರೆಲ್ಲರೂ ಕೂಡಿಬರುವ ವಾಡಿಕೆಯಿದೆ. ಗೋರಕ್ಷನು ನಾಥರ ಒಂದು ದೊಡ್ಡ ಸಭೆಯನ್ನು ಇಲ್ಲಿ ಜರಗಿಸಿದನು. ಈ ಸಭೆಗೆ ಮತ್ಸ್ಯೇಂದ್ರನಾಥ, ಶಾರದಾನಂದ ಭೈರವನಾಥ, ಚೌರಂಗಿನಾಥ, ಮೆನಿನಾಥ, ವಿಲೇಪಾಕ್ಷನಾಥ, ಬಲಿಶಯು, ಮಂಥಾರ, ಭೈರವಯೋಗೀನಾಥ, ಸಿದ್ಧ ಬುದ್ಧ ಕುಕ್ಕುಟನಾಥ, ಪಾರಂಟಿಕ ಸುರಾನಂದನಾಥ, ಸಿದ್ಧಿಪಾದ, ಚರ್ಪಟನಾಥ, ಕರಣಿ ಪೂಜ್ಯಪಾದನಾಥ, ನಿರಂಜನನಾಥ, ಕಾಪಾಲಿಬಿಂಧುನಾಥ, ಕಾಕಚಂಡಿಶ್ವರೋದಯ, ಸೂಕ್ಷ್ಮಸಹ ಪ್ರಬುದ್ಧನಾಥ, ಗೋಡಾಚಾಲಿ ಗಾಂಟಣಿನಾಥ, ಬಾಲಕಿ ನಾಗಬೋಧನಾಥ, ಚಂಡ, ಕಾಪಾಲಿ ಮುಂತಾದ ಈ ಮತಕ್ಕೆ ಸೇರಿದ ಮಹನೀಯರು ಬಂದಿದ್ದರು. ಆಗ ತಮ್ಮ ಮತಪ್ರಸಾರಣೆಯ ಕೆಲಸಕ್ಕಾಗಿ ಪ್ರತಿಯೊಬ್ಬರೂ ಒಂದೊಂದು ರಾಜ್ಯಕ್ಕೆ ಹೋಗಿ ಆ ರಾಜನನ್ನೂ ಅವನ ಪ್ರಜೆಗಳನ್ನೂ ತಮ್ಮ ಮತಕ್ಕೆ ಸೇರುವ ಹಾಗೆ ಮಾಡಬೇಕೆಂದು ನಿಶ್ಚಯಿಸಲಾಯಿತು. ಹನ್ನೆರಡು ವರುಷಗಳ ನಂತರ ತಿರಿಗಿ ನಾಸಿಕ ತ್ರ್ಯಯಂಬಕದಲ್ಲಿ ಕೂಡಿಬರಬೇಕೆಂದು ನಿಶ್ಚಯಿಸಲ್ಪಟ್ಟಿತು. ಅನಂತರ ಎಲ್ಲರೂ ಅವರವರು ನಿಶ್ಚಯಿಸಿದ ಸ್ಥಳಕ್ಕೆ ಹೊರಟು ಹೋದರು.

ಜಾಲಂಧರನಾಥನೆಂಬವನು ಗೌಡಬಂಗಾಳ (ಬಿಹಾರ ಬಂಗಾಳ) ದೇಶಕ್ಕೆ ಹೋದನು. ಆ ಸಮಯದಲ್ಲಿ ತ್ರೈಲೋಕ್ಯಚಂದ್ರನೆಂಬ ಅರಸನು ಈ ಎರಡೂ ದೇಶಗಳನ್ನು ಆಳುತ್ತಿದ್ದನು. ಇವನ ರಾಣಿಯ ಹೆಸರು ಮೈನಾವತಿ. ಮಗನ ಹೆಸರು ಗೋಪಿಚಂದ್ರ. ಜಾಲಂಧರನಾಥನು ಈ ಅರಸನ ಅರಮನೆಗೆ ಹೋಗಿ ತನ್ನ ಮತಬೋಧನೆಯನ್ನು ಮಾಡತೊಡಗಿದನು. ತ್ರೈಲೋಕ್ಯಚಂದ್ರನಿಗೆ ನಾಥಸಂಪ್ರದಾಯವನ್ನು ಅನುಸರಿಸಲಿಕ್ಕೆ ಮನಸ್ಸಿರಲಿಲ್ಲ. ಆದರೆ ಅವನ ರಾಣಿಯಾದ ಮೈನಾವತಿಯು ನಾಥಸಂಪ್ರದಾಯ

ವನ್ನು ಅನುಸರಿಸಲಾರಂಭಿಸಿದಳು. ಜಾಲಂಧರನಾಥನು ಅಲ್ಲಿಯೇ ನಿಂತನು. ಈ ಸಮಯದಲ್ಲಿ ತ್ರೈಲೋಕ್ಯಚಂದ್ರನು ಕಾಲವಾದನು. ಗೋಪಿಚಂದ್ರನು ಪಟ್ಟಕ್ಕೆ ಬಂದನು. ಮೈನಾವತಿಯು ಜಾಲಂಧರನಾಥನಿಗೆ ರಾಜಧಾನಿಯ ಹತ್ತಿರವಿರುವ ಕಾಡಿನಲ್ಲಿ ಒಂದು ಮಠವನ್ನು ಕಟ್ಟಿಸಿ ಕೊಟ್ಟಳು. ಗೋಪಿಚಂದ್ರನು ತನ್ನ ತಾಯಿಯು ದುರ್ನಡತೆಗೆ ಬಿದ್ದಿದ್ದಾಳೆಂಬ ಸೂಚನೆಯನ್ನು ಬೇರೆಯವರಿಂದ ತಿಳಿದು, ಜಾಲಂಧರನಾಥನನ್ನು ಹಿಡಿದು ಕುದುರೆ ಲದ್ದಿ ತುಂಬಿಸುವ ಒಂದು ಭಾವಿಯಲ್ಲಿ ಹೂಣಿಡಿಸಿದನು. ಆವನು ಅಲ್ಲಿಯೇ ಯೋಗಸಾಧನೆಗೆ ಕೂತನು.

ಗೋಪಿಚಂದ್ರನು ಎಲ್ಲಾ ತರದ ಸುಖಸಂತೋಷಗಳಲ್ಲಿಯೇ ಬಿದ್ದಿದ್ದನು. ಒಂದು ದಿವಸ ಅಂತಃಪುರದ ರಾಜಾಂಗಣದಲ್ಲಿ ಸ್ತ್ರೀಯರೆಲ್ಲರೂ ಕೂಡಿ ಪನ್ನೀರಿನಿಂದ ಅವನನ್ನು ಮೀಯಿಸುವಾಗ ಮಾಳಿಗೆಯ ಮೇಲೆ ನಿಂತು ನೋಡುತ್ತಿದ್ದ ಮೈನಾವತಿಯ ಕಣ್ಣೀರು ಇವನ ಮೈಮೇಲೆ ಬಿತ್ತು. ಆಗ ಗೋಪಿಚಂದ್ರನು ಮೇಲಕ್ಕೆ ನೋಡಲು ತಾಯಿಯು ಮಾಳಿಗೆಯ ಮೇಲೆ ನಿಂತು ಅಳುವುದನ್ನು ಕಂಡನು. ಕೂಡಲೇ ಮೀಯುವುದನ್ನು ಬಿಟ್ಟು ಮಾಳಿಗೆಗೆ ಹೋಗಿ ತಾಯಿಗೆ ಸಂಭವಿಸಿದ ಕಷ್ಟವೇನೆಂದು ವಿಚಾರಿಸಿದನು. ಆಗ ಮೈನಾವತಿಯು ಹೀಗೆ ಹೇಳಿದಳು. "ನಾನು ನಾಥಸಂಪ್ರದಾಯವನ್ನು ಅನುಸರಿಸುವುದರಲ್ಲಿದ್ದೇನೆಂದು ನೀನು ನನ್ನ ಗುರುವಾದ ಜಾಲಂಧರನಾಥನೆಂಬ ಯೋಗೀಶ್ವರನನ್ನು ಬಾವಿಯಲ್ಲಿ ಹೂಣಿಡಿಸಿ, ಇಂದಿಗೆ 12 ವರುಷಗಳಾದವು. ನೀನು ಸ್ತ್ರೀಲೋಲನಾಗಿ ಪರಲೋಕದ ಎಲ್ಲಾ ಸಂಗತಿಗಳನ್ನು ಮರೆತುಬಿಟ್ಟಿದ್ದಿ. ಮುಂದೆ ನಿನ್ನ ಗತಿಯು ಏನಾಗುವುದೋ ಎಂದು ನನಗೆ ಕಣ್ಣೀರು ಬಂತೆ"ಂದು ಹೇಳಿದಳು. ಆಗ ಗೋಪಿಚಂದ್ರನು ಬಹಳ ಬೇಸರಪಟ್ಟು ಆ ಬಾವಿಯನ್ನು ಅಗಿಸಿ ನೋಡಲು ಜಾಲಂಧರನು ಯೋಗಸಾಧನೆಯಲ್ಲಿದ್ದನು. ಆಗ ಜಾಲಂಧರನು ಎದ್ದು ಗೋಪಿಚಂದ್ರನು ಮಾಡಿದ ತಪ್ಪನ್ನು ಕ್ಷಮಿಸಿದನು. ಗೋಪಿಚಂದ್ರನೂ ನಾಥಸಂಪ್ರದಾಯವನ್ನು ಅನುಸರಿಸಿ ಸನ್ಯಾಸಿ

ಯಾಗಿ ಮಠಕ್ಕೆ ಉಂಬಳಿ ಉತ್ತಾರುಬಿಟ್ಟು, ಮಗನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟನು. ಜಾಲಂಧರನಾಥನು ನಾಸಿಕ ತ್ರ್ಯಯಂಬಕದಲ್ಲಿ ಕೂಡುವ ಸಭೆಗೆ ಹೊರಟುಹೋದನು.

ಜಾಲಂಧರನು ಬಂಗಾಳಕ್ಕೆ ಹೋಗುವಾಗ ಮತ್ಸ್ಯೇಂದ್ರನಾಥನು ಮಧ್ಯಹಿಂದೂದೇಶದ ದಾರಿಯಾಗಿ ಹೊರಟು ಅನೇಕ ಅರಸರನ್ನು ತನ್ನ ಮತಕ್ಕೆ ಸೇರಿಸಿ, ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿ, ರಾಮೇಶ್ವರಕ್ಕೆ ಹೋಗಿ, ಆ ದೇಶದ ಅರಸನನ್ನು ತನ್ನ ಮತಕ್ಕೆ ಸೇರಿಸಿ, ಅಲ್ಲಿಯೂ ಮಠವನ್ನು ಸ್ಥಾಪಿಸಿ, ಅಲ್ಲಿಂದ ಕನ್ಯಾಕುಮಾರಿಗೆ ಹೋಗಿ ಮಲೆಯಾಳ ದೇಶಕ್ಕೆ ಬಂದನು. ಆ ಸಮಯದಲ್ಲಿ ಮಲೆಯಾಳ ದೇಶವನ್ನು ಪರಿಮಳಾ ಅಥವಾ ಪ್ರೆಮಳಾ ಎಂಬ ರಾಣಿಯು ಆಳುತ್ತಿದ್ದಳು. ಮತ್ಸ್ಯೇಂದ್ರನು ಆ ರಾಣಿಗೂ ತನ್ನ ಮತವನ್ನು ಬೋಧಿಸಲು ಆವಳು ಈ ಮತವನ್ನು ಅವಲಂಬಿಸಿದಳು; ಅನಂತರ ರಾಜಧಾನಿಯ ಹತ್ತಿರ ಕಾಡಿನಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟಳು. ಮತ್ಸ್ಯೇಂದ್ರನಾಥನು 12 ವರುಷಗಳ ವರೆಗೆ ಮಲೆಯಾಳದೇಶದಲ್ಲಿ ತನ್ನ ಮತವನ್ನು ಬೋಧಿಸುತ್ತಾ ಇದ್ದನು. ಇಲ್ಲಿ ಅನೇಕರು ಇವನ ಮತವನ್ನು ಅವ ಲಂಬಿಸಿದರು. ಮಲೆಯಾಳದಲ್ಲಿ ಅನೇಕರು ಸನ್ಯಾಸಿಗಳು ಆಗಲು ಮತ್ಸ್ಯೇಂದ್ರನಾಥನ ಬೋಧನೆಯೇ ಕಾರಣವೆಂದು ಹೇಳಬಹುದು. 1921ನೇ ಇಸವಿಯಲ್ಲಿ ಪೊಂಡಿಚೇರಿ ಕೊಲೇಜಿನ ಒಬ್ಬ ಪಂಡಿತರಾದ ಜಿ ಜೊವಿಯೊದುಬ್ರೈಲ ಎಂಬವರು ಬರೆದ "ವೇದಿಕ್ ಎಂಟಕ್ವಿಟಿಸ್" ಎಂಬ ಪುಸ್ತಕದಲ್ಲಿ ಕೇರಳದೇಶದಲ್ಲಿ ಕಾಡುಗುಡ್ಡಗಳ ಮೇಲೆ ಶಾಂತ ವಾದ ಸ್ಥಳಗಳಲ್ಲಿ ಮುರದಕಲ್ಲಿನಿಂದ ಕಟ್ಟಿದ ಗವಿಗಳು ಇವೆ ಎಂದೂ ಇವುಗಳಿಗೆ ಕಮಾನಿನ ದ್ವಾರಗಳು ಇವೆ ಎಂದೂ ಈ ಗವಿಗಳ ಒಳಗಡೆಯಲ್ಲಿ ಅಗ್ನಿಕುಂಡಗಳು ಇವೆ ಎಂದೂ ಆ ಅಗ್ನಿಕುಂಡಗಳ ಹತ್ತಿರವಿರುವ ಗೋಡೆಯಲ್ಲಿ ಒಂದೊಂದು ಕರಡಿಗೆ ಇದೆ ಎಂದೂ, ತ್ರಿಶೂಲ ಗಳೂ, ಚಿಮಿಟಿಗಳೂ, ಕತ್ತಿಗಳೂ ಇವೆ ಎಂದೂ ಇವನ್ನೆಲ್ಲಾ ತಾನು

ಸ್ವತಃ ನೋಡಿದ್ದೇನೆಂದೂ ಬರೆದಿರುತ್ತಾರೆ. ಆದರೆ ಇವರು ಈ ಗವಿಗಳು ಆರ್ಯಬ್ರಾಹ್ಮಣರು ತಮ್ಮ ಹೆತ್ತವರನ್ನು ಹೂಣಿಟ್ಟ ಸ್ಥಳಗಳೆಂದು ಬರೆದಿದ್ದಾರೆ. ನಂಬೂದಿರಿ ಬ್ರಾಹ್ಮಣರು ಹೆಣಗಳನ್ನು ಸುಡುತ್ತಾರಲ್ಲದೆ ಹೂಣಿಡುವದಿಲ್ಲ. ಈ ಗವಿಗಳನ್ನು ಮತ್ಸ್ಯೇಂದ್ರನಾಥನು ತನ್ನ ಮತವನ್ನು ಕೇರಳದಲ್ಲಿ ಬೋಧಿಸುವ ಸಮಯದಲ್ಲಿಯೂ ಅದರ ನಂತರವೂ ಯೋಗೀಶ್ವರರು ಯೋಗಸಾಧನೆಯಲ್ಲಿ ಕುಳಿತುಕೊಳ್ಳಲು ಆಯಾ ಅರಸರು ಕಟ್ಟಿಸಿಕೊಟ್ಟ ಗುಹೆಗಳಾಗಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕುಂಬಳೆಯ ಹತ್ತಿರವಿರುವ ಪೊಸೊಡಿಗುಂಪೆ ಎಂಬ ಗುಡ್ಡದ ಬದಿಯಲ್ಲಿರುವ ಗವಿಗಳು, ವಿಟ್ಲದ ಹತ್ತಿರವಿರುವ ಜೋಗಿಯವರ ಮಠದ ಹತ್ತಿರದ ಗುಡ್ಡದ ಬದಿಯಲ್ಲಿರುವ ಗವಿಗಳು, ಕದರೆ ಯೋಗೀಶ್ವರರ ಮಠದಲ್ಲಿರುವ ಯಜ್ಞಕುಂಡ ಇರುವ ಕೋಣೆ ಮತ್ತು ಅಲ್ಲಿಯೆ ಇರುವ ಗವಿಗಳು, ಕುಟಶಾದ್ರಿಯಲ್ಲಿಯೂ ಸೂಡದಲ್ಲಿಯೂ ಇವರು ಮಠಗಳು ಮತ್ತು ಗವಿಗಳು ಇವನ್ನು ನೋಡಿದರೆ ಮನಸ್ಸಿಗೆ ಮೇಲಿನ ಸಂಗತಿಯು ಖಚಿತವಾಗುವದು. ಮಲೆಯಾಳ, ಕೊಚ್ಚಿ, ತಿರುವಾಂಕೂರಿನಲ್ಲಿ ನಾಥಸಂಪ್ರದಾಯವನ್ನು ಅನುಸರಿಸುವ ಜನರು ಅನೇಕರಿರುತ್ತಾರೆ.

ನಾಥರೆಲ್ಲರೂ ನಾಸಿಕ ತ್ರ್ಯಯಂಬಕಕ್ಕೆ ಬಂದರು. ಗುರುವಾದ ಮತ್ಸ್ಯೇಂದ್ರನಾಥನು ಬಾರದೆ ಇರುವುದನ್ನು ನೋಡಿ ಗೋರಕನಾಥನು ಗುರುವನ್ನು ಹುಡುಕಿ ಮಲೆಯಾಳಕ್ಕೆ ಬಂದು ವಿಚಾರಿಸುವಾಗ ರಾಣಿಯ ಸೇವಕರು ಗೋರಕನಾಥನಿಗೆ ಗುರುವಿನ ಹತ್ತಿರ ಹೋಗದ ಹಾಗೆ ತಡಿಸಿಬಿಟ್ಟರು. ಗೋರಕನಾಥನು ಒಂದು ತಬಲೆಯನ್ನು ತೆಗೆದುಕೊಂಡು ಗುರುವು ಯೋಗಸಾಧನೆಯಲ್ಲಿ ಕುಳಿತ ಗವಿಯ ಹತ್ತಿರಹೋಗಿ ಕೂತು ಕೊಂಡು "ಜಾಗಮತ್ಸ್ಯೇಂದ್ರ ಗೋರಕ ಆಯಾ'' "ಜಾಗಮತ್ಸ್ಯೇಂದ್ರ ಗೋರಕ ಆಯಾ'' ಎಂಬುದನ್ನು ಬಾಯಿಯಿಂದ ಹೇಳುತ್ತಲೂ, ತಬಲೆಯ ಮೇಲೆ ಅದೇ ಶಬ್ದವನ್ನು ಮಾಡುತ್ತಲೂ ಕೂತನು. ಗುರುವು ಎಚ್ಚರವಾಗಿ ಗೋರಕನಾಥನನ್ನು ನೋಡಿದನು. ಅನಂತರ ಇಬ್ಬರೂ ನಾಸಿಕ

ತ್ರ್ಯಯಂಬಕಕ್ಕೆ ಹೊರಟರು. ಪರಿಮಳೆಯು ಯೋಗಿನಿಯಾಗಿ ನಾಥಸಂಪ್ರದಾಯವನ್ನು ಅನುಸರಿಸಿ ರಾಜ್ಯವನ್ನೆಲ್ಲಾ ಬಿಟ್ಟು ಅವರೊಡನೆ ಹೊರಟಳು. ಇವಳಿಗೆ ಮಂಗಳೆ ಎಂಬ ಹೆಸರನ್ನು ಇಟ್ಟರು. ಇವಳ ಇಬ್ಬರು ಮಕ್ಕಳೂ ಮೆನಿನಾಥ, ಪಾರ್ಶ್ವನಾಥ ಎಂಬ ಹೆಸರಿನಿಂದ ನಾಥರಾಗಿ ಅವರೂ ಹೊರಟರು. ಇವರೆಲ್ಲರೂ ಕರಾವಳಿಯ ದಾರಿಯಾಗಿಯೇ ಹೊರಟು ಕನ್ನಡ ಜಿಲ್ಲೆಗೆ ಬಂದು ಉಳ್ಳಾಲದ ಹತ್ತಿರ ನೇತ್ರಾವತಿಯನ್ನು ದಾಟಿ, ಬೋಳಾರದಲ್ಲಿ ಗೊರೆಯದಂಡೇ ಎಂಬಲ್ಲಿ ಇಳಿದರು. ಮತ್ಸ್ಯೇಂದ್ರನಾಥನು ಖರ್ಚಿಗಾಗಿ ಕೆಲವು ಬಂಗಾರದ ಗಟ್ಟಿಗಳನ್ನು ತನ್ನ ಚೀಲದಲ್ಲಿ ಹಾಕಿ ತಂದಿದ್ದನು. ಗುರುವು ಮಲಮೂತ್ರ ವಿಸರ್ಜನೆಗೆ ಹೋದಾಗ ಗೋರಕನಾಥನು ಈ ಗಟ್ಟಿಗಳನ್ನು ನೋಡಿ ಅವುಗಳನ್ನು ತೆಗೆದು ಹೊಳೆಯ ಆಳವಾದ ಸ್ಥಳದಲ್ಲಿ ಬಿಸಾಡಿದನು. ಚೀಲದಲ್ಲಿ ಅವುಗಳಷ್ಟೆ ಭಾರವಾದ ಕಲ್ಲುಗಳನ್ನು ತುಂಬಿಸಿಟ್ಟನು. ಮತ್ಸ್ಯೇಂದ್ರನಾಥನು ಮುಂದರಿಸಿ ಹೋಗುವಾಗ ಬೋಳಾರದಲ್ಲಿ ಈಗ ಮಂಗಳಾದೇವಿ ದೇವಸ್ಥಾನವಿರುವ ಯೋಗ್ಯವಾದ ಸ್ಥಳವನ್ನು ನೋಡಿ ಮಂಗಳೆಯನ್ನು ಅಲ್ಲಿ ನಿಲ್ಲಿಸಿದನು. ಅನಂತರ ಇಲ್ಲಿ ಅಲೂಪ ಅರಸರಲ್ಲಿ ಒಬ್ಬನು ಅವಳ ನೆನಪಿಗಾಗಿ ನಾಥರು ಭಜಿಸಿಬರುವ ದೇವರಲ್ಲಿ ಒಬ್ಬಳಾದ ಶಕ್ತಿಯನ್ನು ಸ್ಥಾಪಿಸಿ ಅವಳಿಗಾಗಿ ಮಂಗಳಾದೇವಿ ಎಂಬ ಹೆಸರಿನಿಂದ ದೇವಸ್ಥಾನವನ್ನು ಕಟ್ಟಿಸಿದನು. ಈ ದೇವಸ್ಥಾನವನ್ನು ಕಲಿವರ್ಷ 4068ರಲ್ಲಿ (ಕ್ರಿ. ಶ.968) ಮಂಗಳೂರನ್ನು ಆಳುತ್ತಿದ್ದ ಕುಂದವರ್ಮನೆಂಬ ಅರಸನು ಜೀರ್ಣೋದ್ಧಾರ ಮಾಡಿಸಿದನು. ಮತ್ಸ್ಯೇಂದ್ರನಾಥ ಮೊದಲಾದವರು ಬರುವಾಗ ಸಣ್ಣ ಮೈದಾನಿನಿಂದ ಉತ್ತರಕ್ಕೆ ಕದ್ರಿಯ ವರೆಗೆ ಇರುವ ಭಾಗವು ಕಾಡುಗುಡ್ಡಗಳಿಂದ ತುಂಬಿತ್ತು. ಮತ್ಸ್ಯೇಂದ್ರನಾಥ ಮೊದಲಾದವರು ಸ್ವರ್ಣಕದಳಿಗೆ ಹೋಗಿ ಅದು ತಪಸ್ಸಿಗೆ ಯೋಗ್ಯವಾದ ಸ್ಥಳವೆಂದು ನೋಡಿ ಅಲ್ಲಿ ಕೆಲವು ದಿವಸ ನಿಂತರು. ಇವರು ಉಳುಕೊಂಡ ಸ್ಥಳವು ಈಗ ಯೋಗೀಶ್ವರರ ಮಠ ಇರುವ ಸ್ಥಳದ ಉತ್ತರ ದಿಕ್ಕಿಗಿತ್ತು. ಗೋರಕನಾಥನು ಈ ಸ್ಥಳಕ್ಕೆ ಸ್ವರ್ಣಕದಳಿ

ಗೋರಕ್ಷಕ್ಷೇತ್ರ ಎಂಬ ಹೆಸರನ್ನಿಟ್ಟನು. ಅಲ್ಲಿಂದ ಮುಂದಕ್ಕೆ ಹೋಗಿ ಸೊಡ (ಬಳಿಸಾವಿರ ಮಾಗಣೆ)ದಲ್ಲಿಯೂ ಸ್ವಲ್ಪಸಮಯ ನಿಂತು ಅಲ್ಲಿಯೂ ಮತಬೋಧನೆಯನ್ನು ಮಾಡಿ ಮುಂದಕ್ಕೆ ಹೋಗಿ, ಕುಟಿಕಾದ್ರಿಯಲ್ಲಿಯೂ ಸ್ವಲ್ಪ ದಿವಸ ನಿಂತು ನಾಸಿಕ ತ್ರ್ಯಯಂಬಕಕ್ಕೆ ಹೋದರು.

ಅನಂತರ ಈ ಜಿಲ್ಲೆಯಲ್ಲಿ 3 ಮುಖ್ಯ ಮಠಗಳಾದವು. ಮೊದಲನೇ ಮರ್ಯಾದೆಯ ಮಠವು ಕದರೆ ಮಠವಾಗಿದೆ. ಕ್ರಿ. ಶ. 968ರಲ್ಲಿ ಮಂಗಳೂರನ್ನು ಆಳುತ್ತಿದ್ದ ಕುಂದವರ್ಮನೆಂಬ ಅಲೂಪ ಅರಸನು ನಾಥಸಂಪ್ರದಾಯವನ್ನು ಅನುಸರಿಸಿ ಕದರೆಯಲ್ಲಿ ಕಲಿವರ್ಷ 4068ರ ಮಕರಮಾಸ, ರೋಹಿಣಿನಕ್ಷತ್ರ, ಕನ್ಯಾಲಗ್ನದಲ್ಲಿ ಲೋಕೇಶ್ವರ ದೇವರ ಪ್ರತಿಮೆಯನ್ನು ಪ್ರತಿಷ್ಠಿಸಿದನು. ಈ ಪ್ರತಿಮೆಯು ಈಗಲೂ ಕದರೆ ಮಂಜುನಾಥ ದೇವಸ್ಥಾನದಲ್ಲಿದೆ. ಇದು ಬಹಳ ಅಂದವಾದ ಕಂಚಿನ ಎರಕದ ಪ್ರತಿಮೆಯಾಗಿದೆ. ಇದಕ್ಕೆ ಮೂರು ಮುಖಗಳು, ಆರು ಕೈಗಳು ಇವೆ. ಪದ್ಮಾಸನದಲ್ಲಿ ಕೂತುಕೊಳ್ಳಿಸಿಯದೆ; ತಲೆಯ ಮೇಲೆ ಕಿರೀಟದ ಬದಲಾಗಿ ಜಡೆಯೂ, ಜಡೆಯ ಬುಡದಲ್ಲಿ ಮತ್ಸ್ಯೇಂದ್ರನಾಥನ ಸಣ್ಣ ವಿಗ್ರಹವೂ, ಜಡೆಯ ಮೇಲ್ಗಡೆ ರುದ್ರಾಕ್ಷ ಮಾಲೆಯೂ ಇದೆ. ಅದರ ಮೇಲೆ ತಿರಿಗಿ ಮತ್ಸ್ಯೇಂದ್ರನಾಥನ ಪ್ರತಿಮೆಯೂ ಕೆತ್ತಲ್ಪಟ್ಟಿದೆ. ಕಿವಿಗೆ ಮಕರಕುಂಡಲಗಳು ಇವೆ. ತಲೆಯ ಹಿಂದಕ್ಕೆ ಪ್ರಬಾವಳಿಯು ಇದೆ. ಈ ಪ್ರಬಾವಳಿಗೆ ಎರಡೂ ಕಡೆಗಳಲ್ಲಿ ಸಿಂಹದ ಮುಖಗಳು ಇವೆ. ಈ ಮುಖದ ತಲೆಗಳ ಮೇಲೆ ಎರಡು ಕೈಗಳಿರುವ 2 ಪ್ರತಿಮೆಗಳು ನಿಂತುಕೊಂಡಿವೆ. ಈ ಪೀಠದ ಬುಡದಲ್ಲಿ ಮೇಲೆ ಬರೆದ ಶಾಸನವು ಸಂಸ್ಕೃತ ಪದ್ಯರೂಪದಲ್ಲಿಯೂ ಗ್ರಂಥಾಕ್ಷರದಲ್ಲಿಯೂ ಕೆತ್ತಲ್ಪಟ್ಟಿದೆ. ದೇವಸ್ಥಾನದ ಅರ್ಚಕರು ಇದು ಬ್ರಹ್ಮದೇವರ ಪ್ರತಿಮೆಯೆಂದು ಹೇಳುತ್ತಾರೆ. ಆದರೆ ಇದು ಆದಿನಾಥ ಅಥವಾ ಲೋಕೇಶ್ವರನ ಪ್ರತಿಮೆಯಾಗಿದೆ. ಅದೇ ತರದ

ಇನ್ನೊಂದು ಪ್ರತಿಮೆಯು ಅಲ್ಲಿಯೇ ಇದೆ. ಇದಕ್ಕೆ ಒಂದೇ ಮುಖ, ನಾಲ್ಕು ಕೈಗಳು ಇದ್ದು ಪದ್ಮಾಸನದಲ್ಲಿ ಕುಳಿತಿದೆ. ತಲೆಯ ಮೇಲೆ ಜಡೆಯೂ, ಜಡೆಯ ಮೇಲೆ ರುದ್ರಾಕ್ಷಮಾಲೆಯೂ ಇವೆ. ಅದೇ ದೇವಸ್ಥಾನದಲ್ಲಿ ಭೈರವನ ಒಂದು ಪ್ರತಿಮೆಯು ಇದೆ. ಇದು ನಿಂತು ಕೊಂಡಿದೆ. ತಲೆಗೆ ಕಿರೀಟವೂ ಕಿವಿಗೆ ಮಕರಕುಂಡಲಗಳೂ ಇವೆ. ಕೈಯಲ್ಲಿ ಶೃಂಗೀವಾದ್ಯವೂ ಇದೆ. ಕಾಲಬುಡದಲ್ಲಿ ವಾಹನವಾದ ವರಾಹ ಚಿತ್ರವೂ ಇದೆ. ಇದು ಸಹ ನಾಥರ ಪ್ರತಿಮೆಯಾಗಿದೆ. ಅದೇ ದೇವಸ್ಥಾನದ ಒಂದು ಗೋಡೆಯಲ್ಲಿ ಮತ್ಸ್ಯೇಂದ್ರನಾಥನ ಶಿಲಾ ಪ್ರತಿಮೆಯೂ ಶೃಂಗೀನಾಥನ ಇನ್ನೊಂದು ಪ್ರತಿಮೆಯೂ ಇವೆ. ಇದೇ ಕುಂದವರ್ಮನು ಕದರೆ ಗುಡ್ಡದ ಮೇಲೆ ಮೊದಲು ಮತ್ಸ್ಯೇಂದ್ರನಾಥನು ನಿಂತ ಸ್ಥಳದಲ್ಲಿ ಒಂದು ದೊಡ್ಡ ಮಠವನ್ನು ಕಟ್ಟಿಸಿಕೊಂಡು ಅಲ್ಲಿಯೇ ಇದ್ದನು. ಮೇಲಿನ ಕಾರಣಗಳಿಂದ ಕದರೆ ದೇವಸ್ಥಾನವು ಜೋಗಿ ಮಠದವರ ಸ್ವಾಧೀನ ಇತ್ತೆಂದು ಕಾಣುತ್ತದೆ. ಈ ಅರಸನು ಯೋಗೀಶ್ವರನಾದ್ದರಿಂದ ಈಗಲೂ ಈ ಮಠದಲ್ಲಿ 12 ವರುಷಗಳಿಗೊಮ್ಮೆ ಪಟ್ಟಾಭಿಷೇಕವಾಗಬೇಕು. ಮೊದಲು ಮತ್ಸ್ಯೇಂದ್ರನಾಥನ ಗುಡಿಯ ಹತ್ತಿರ ಬ್ರಾಹ್ಮಣಕ್ರಮದ ಪ್ರಕಾರವೂ ನಂತರ ಮಠದಲ್ಲಿ ನಾಥ ಸಂಪ್ರದಾಯದ ಪ್ರಕಾರವೂ ಪಟ್ಟಾಭಿಷೇಕವಾಗಬೇಕು.

ವಿಟ್ಲದ ಅರಸರಲ್ಲಿ ಒಬ್ಬನು ನಾಥಸಂಪ್ರದಾಯವನ್ನು ಅನುಸರಿಸಿ ಯೋಗೀಶ್ವರನಾಗಿ ವಿಟ್ಲದ ಹತ್ತಿರವೂ ಒಂದು ಮಠವನ್ನು ಕಟ್ಟಿಸಿ ಅಲ್ಲಿಯೇ ಇದ್ದನು. ಈ ಮಠಾಧಿಪತಿಗೂ ಪಟ್ಟವಾಗಬೇಕು. ಆದರೆ ಪಟ್ಟವಾಗುವದು ಕದರೆ ಮಠದಲ್ಲಿಯೇ ಆಗಬೇಕು. ಕನ್ನಡ ಜಿಲ್ಲೆ ಯಲ್ಲಿ ಈಗ 12 ಮಠಗಳಿವೆ. ಅವುಗಳಲ್ಲಿ ಕೆಲವು ಬಿದ್ದುಹೋಗಿವೆ. ಕದರೆ ಯಲ್ಲಿ ಪಟ್ಟವಾಗುವಾಗ ಪ್ರತಿ ಒಂದು ಮಠದಿಂದಲೂ ಒಂದೊಂದು ತರದ ವಸ್ತುಗಳನ್ನು ಒದಗಿಸಿಕೊಡಬೇಕಿತ್ತು. ಇದರಿಂದ ಕುಂದವರ್ಮನು

ಯೋಗೀಶ್ವರನಾಗುವಾಗ ಕನ್ನಡ ಜಿಲ್ಲೆಯು ಪೂರ್ಣವಾಗಿ ಇವನ ಕೈಕೆಳಗಿತ್ತೆಂದು ಹೇಳಬಹುದು.

ಅನಂತರ ಈ ಮತದಲ್ಲಿ ಸ್ವಲ್ಪ ಬದಲಾವಣೆಗಳಾಗಿ ಪ್ರತಿ ಒಬ್ಬರೂ ಸನ್ಯಾಸಿಗಳಾಗಬೇಕೆಂಬದನ್ನು ಬಿಟ್ಟು ಬಿಟ್ಟು ಮನೆಮಾಡಿಕೊಂಡಿರ ಬಹುದೆಂದಾಯಿತು. ಈ ರೀತಿಯಲ್ಲಿ ಅನೇಕ ಜನರು ಈ ಮತಕ್ಕೆ ಸೇರಿದರು. ಈ ಮತದವರಿಗೆ ಜೋಗಿಯರೆಂದು ಹೇಳುತ್ತಾರೆ. ಕಿಜಿಗಾರರು, ಹಾಲ್ವಕ್ಕಿಜಾತಿಯವರು ಈ ಮತವನ್ನು ಅನುಸರಿಸು ತ್ತಾರೆ. ಈ ಮತಕ್ಕೆ ಯಾವ ಜಾತಿಯವರೂ ಸೇರಬಹುದು. ಆದರೆ ಜಾತಿಭೇದವಿದೆ. ಈಗ ಅನೇಕರು ಯೋಗೀಶ್ವರರಿಂದ ಮಂತ್ರೋಪದೇಶ ವನ್ನು ತೆಗೆದುಕೊಳ್ಳುತ್ತಾರೆ. ಫಂಡರಪುರದ ಜ್ಞಾನದೇವ, ಏಕನಾಥ ಸೋಪಾನ, ಮುಕ್ತಾಬಾಯಿ ಮೊದಲಾದ ಸಂತರು ನಾಥಸಂಪ್ರದಾಯಕ್ಕೆ ಸೇರಿದವರು. ಏಳನೇ ಶತಮಾನದ ಮಧ್ಯಭಾಗದಲ್ಲಿ ಉತ್ತರ ಹಿಂದೂ ದೇಶದಲ್ಲಿದ್ದ ವ್ಯಾಕರಣಕಾರನೂ, ತತ್ವಜ್ಞಾನಿಯೂ, ಕವಿಯೂ ಆದ ಭರ್ತೃಹರಿಯು ನಾಥಸಂಪ್ರದಾಯಾವಲಂಬಿಯಾಗಿದ್ದನು. ಏಳನೇ ಶತ ಮಾನದ ಕಡೆಯ ಭಾಗದಲ್ಲಿ ಸುಮಾರು 20 ವರುಷಗಳ ವರೆಗೆ ಹಿಂದೂದೇಶದಲ್ಲಿ ಸಂಚಾರಮಾಡಿದ ಚೀನಾದೇಶದ ಬೌದ್ಧ ಪ್ರಯಾಣಿಕ ನಾದ ಹಿಯನ್‌ಸಾಂಗನು ಭರ್ತೃಹರಿಯ ವಿಷಯ ಹೀಗೆ ಹೇಳುತ್ತಾನೆ: ಈ ಕವಿಯು 7 ಸಾರಿ ಬೌದ್ಧಸನ್ಯಾಸಿಯಾದನು; 7 ಸಾರಿ ಲೌಕೀಕ ಮನುಷ್ಯನಾದನು; ಇವನು ಲೌಕೀಕ ಮನುಷ್ಯನಾಗಿ ಶೃಂಗಾರ ಶತಕ ವನ್ನೂ, ಬೌದ್ಧಸನ್ಯಾಸಿಯಾಗಿ ನೀತಿಶತಕವನ್ನೂ, ನಾಥಯೋಗೀಶ್ವರ ನಾಗಿ ವೈರಾಗ್ಯಶತಕವನ್ನೂ ಬರೆದನು. ಹಿಂದೂದೇಶದಲ್ಲಿ ಇವರ 1000 ಮಠಗಳಿವೆಯಂತೆ.

# 12ನೇ ಅಧ್ಯಾಯ.

## ಶಂಕರಾಚಾರ್ಯರು.

ಶಂಕರಾಚಾರ್ಯರು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹುಟ್ಟದೆ ಇದ್ದರೂ ಈ ಜಿಲ್ಲೆಯಲ್ಲಿರುವ ದ್ರಾವಿಡ ಬ್ರಾಹ್ಮಣರಲ್ಲಿ ಹೆಚ್ಚಿನವರೂ, ಬಂಟರು, ನಾಡವರು, ಹೊಲೆಯರನ್ನು ಬಿಟ್ಟು ಉಳಿದ ಎಲ್ಲಾ ಶೂದ್ರ ಜಾತಿಯವರೂ ಶಂಕರಾಚಾರ್ಯರ ಶಿಷ್ಯವರ್ಗದವರಾಗಿ ಶೃಂಗೇರಿಮಠದ ಶಿಷ್ಯವರ್ಗಕ್ಕೆ ಸೇರಿದವರಾಗಿರುತ್ತಾರೆ. ಆದ್ದರಿಂದ ಇವರ ವಿಷಯ ಬರೆಯಲು ಕಾರಣವಾಯಿತು.

ಅನೇಕ ಬ್ರಾಹ್ಮಣ ಮತಬೋಧಕರು ಕ್ರಿ. ಶ. 700ರಿಂದ 1200ರ ವರೆಗೆ ನವೀನ ಹಿಂದುಧರ್ಮವನ್ನು ಬೋಧಿಸಲಾರಂಭಿಸಿದರು. ಇವರು ಸಂಸ್ಕೃತ ಭಾಷೆಯಲ್ಲಿರುವ ಮತಸಂಬಂಧವಾದ ಶಾಸ್ತ್ರಪುಸ್ತಕಗಳನ್ನೆಲ್ಲಾ ಕಲಿತು ಮಹಾಪಂಡಿತರಾಗಿದ್ದರು. ತತ್ವಜ್ಞಾನವನ್ನೂ, ಮತಬೋಧೆಯನ್ನೂ ಕಲಿಸುವ ಅನೇಕ ಗ್ರಂಥಗಳನ್ನು ಬರೆದು ತಮ್ಮ ಹೊಸ ತತ್ವಗಳನ್ನು ಕಲಿಸುವುದಕ್ಕಾಗಿ ಒಂದೊಂದು ಮಠವನ್ನು ಸ್ಥಾಪಿಸಿ ಅನೇಕರನ್ನು ತಮ್ಮ ಮಠಕ್ಕೆ ಸೇರಿಸಿಕೊಂಡರು. ಇವರು ಸ್ಮಾರ್ತ, ಶ್ರೀವೈಷ್ಣವ ಮತ್ತು ಮಾಧ್ವ ಮತಗಳನ್ನು ಉಂಟುಮಾಡಿದರು. ಶಿವ, ವಿಷ್ಣು ಮತ್ತು ಕೃಷ್ಣನ ಪೂಜೆಯನ್ನು ಹಿಂದೂಸ್ಥಾನದ ಎಲ್ಲಾ ಭಾಗಗಳಲ್ಲಿ ಪಸರಿಸಿದರು. ಆಗ ಅನೇಕರು ಬೌದ್ಧ, ಜೈನ ಮತಗಳನ್ನು ಬಿಟ್ಟು, ನವೀನ ಹಿಂದುಮತವನ್ನು ಅವಲಂಬಿಸಿದರು. ಈ ಮತಬೋಧಕರಲ್ಲಿ ಶಂಕರಾಚಾರ್ಯರು ಒಬ್ಬರಾಗಿರುತ್ತಾರೆ.

ಶಂಕರಾಚಾರ್ಯರು ಹಿಂದುಸನ್ಯಾಸಿಗಳಲ್ಲೆಲ್ಲಾ ಬಹಳ ಪ್ರಸಿದ್ಧಿ ಪಡೆದ ಯತೀಶ್ವರರು. ಬೇರೆ ಎಲ್ಲಾ ಹಿಂದು ಮತಬೋಧಕರಿಗಿಂತಲೂ ಹಿಂದುಮತವನ್ನು ಉದ್ಧರಿಸುವುದರಲ್ಲಿ ಹೆಚ್ಚಿನ ಪ್ರಯತ್ನವನ್ನು ಮಾಡಿ

ದವರು ಇವರಾಗಿರುತ್ತಾರೆ. ಪಾಶ್ಚಿಮಾತ್ಯ ವಿದ್ವಾಂಸರು ಸಹ ಶಂಕರಾಚಾರ್ಯರನ್ನು ಮರ್ಯಾದೆಯಿಂದ ಕಾಣುತ್ತಾರೆ. ಇವರು ಕ್ರಿ. ಶ. 788ರಲ್ಲಿ ಕೊಚ್ಚಿ ರಾಜ್ಯದ ಶೊರನೂರು ರೈಲವೇ ಸ್ಟೇಶನಿನಿಂದ ದಕ್ಷಿಣಕ್ಕೆ ಆಲ್ವಾಯಿಯಿಂದ 6 ಮೈಲು ಪೂರ್ವಕ್ಕಿರುವ ಕಲಾದಿ ಎಂಬ ಗ್ರಾಮದಲ್ಲಿ ಹುಟ್ಟಿದರು. ಆನಂದಗಿರಿ ಎಂಬ ಗ್ರಂಥಕಾರನು ಹೇಳುವ ಪ್ರಕಾರ ಮಾತ್ರವೇ ಇವರು ಚಿದಂಬರದಲ್ಲಿ ಹುಟ್ಟಿದರೆಂದು ಹೇಳಬೇಕಾಗಿದೆ. ಆದರೆ ಶಂಕರಾಚಾರ್ಯರು ಬದರಿಕಾಶ್ರಮದಲ್ಲಿ ಸ್ಥಾಪಿಸಿದ ನಾರಾಯಣ ದೇವಸ್ಥಾನದ ಅರ್ಚಕನು ಈಗಲೂ ನಂಬೂದಿರಿ ಬ್ರಾಹ್ಮಣನೇ ಆಗಬೇಕಾದ್ದರಿಂದ, ಇವರು ಕಲಾದಿಯಲ್ಲಿಯೇ ಹುಟ್ಟಿದರೆಂಬುದರಲ್ಲಿ ಸಂಶಯವಿಲ್ಲ. ಈ ಕಲಾದಿ ಎಂಬ ಅಗ್ರಹಾರವನ್ನು ರಾಜಶೇಖರನೆಂಬ ಅಲ್ಲಿಯ ಅರಸನೊಬ್ಬನು ಸ್ಥಾಪಿಸಿದನೆಂದು ತೋರುತ್ತದೆ. ಈ ಅಗ್ರಹಾರದಲ್ಲಿರುವ ವಿದ್ಯಾಧಿರಾಜನೆಂಬ ಬ್ರಾಹ್ಮಣನಲ್ಲಿ ಶಿವಗುರು ಎಂಬವನು ಹುಟ್ಟಿದನು. ಈ ಶಿವಗುರುವಿನಲ್ಲಿ ಶಂಕರಾಚಾರ್ಯರು ಹುಟ್ಟಿದರು. ಶಂಕರಾಚಾರ್ಯರಿಗೆ ಸಣ್ಣ ಪ್ರಾಯದಲ್ಲಿಯೇ ವಿದ್ಯಾಭ್ಯಾಸವು ಪ್ರಾರಂಭವಾಯಿತು. ವಿದ್ಯಾಶಾಲೆಯಲ್ಲಿ ಇವರು ಬಹಳ ನಿಪುಣರಾಗಿದ್ದರು. ಏಳನೆಯ ವರುಷ ಪ್ರಾಯದಲ್ಲಿ ಉಪನಯನಕ್ಕೆ ನಿಶ್ಚಯಿಸಿದಾಗ ತಂದೆಯಾದ ಶಿವಗುರುವು ಕಾಲವಾದನು. ಆದರೆ ತಾಯಿಯು ಉಪನಯನದ ಕೆಲಸಗಳನ್ನೆಲ್ಲಾ ತೀರಿಸಿದಳು. ವೇದಗಳನ್ನೂ, ವೇದಾಂಗಗಳನ್ನೂ, ಶಾಸ್ತ್ರಗಳನ್ನೂ ಕಲಿತು ತೀರಿಸುವಾಗ ಶಂಕರಾಚಾರ್ಯರಿಗೆ 16 ವರುಷ ವಯಸ್ಸಾಯಿತು. ಶಂಕರಾಚಾರ್ಯರಿಗೆ ಬೇಗನೆ ಮದುವೆ ಮಾಡಬೇಕೆಂದು ತಾಯಿಗೆ ಬಹಳ ಆಸೆ ಇತ್ತು. ಆದರೆ ಶಂಕರಾಚಾರ್ಯರಿಗೆ ಸನ್ಯಾಸಿಯಾಗಬೇಕೆಂಬ ಆಲೋಚನೆ ಇತ್ತು. ಇವರು ಮದುವೆಯಾಗಲು ಒಪ್ಪದೆ, ತಾಯಿಯ ಅಪ್ಪಣೆಯನ್ನು ಪಡೆದು, ಆಕೆಯು ಕಷ್ಟದಲ್ಲಿ ಸಿಕ್ಕಿಬಿದ್ದರೆ ತಾನು ಕೂಡಲೇ ಬರುವೆನೆಂದು ಹೇಳಿ, ಅವಳನ್ನು ಕುಟುಂಬದವರ ಮನೆಯಲ್ಲಿರಿಸಿ ನರ್ಮದಾ ನದೀ ತೀರದಲ್ಲಿರುವ ಬಹಳ ಕೀರ್ತಿಪಡೆದ

ಗೌಡಪಾದಾಚಾರ್ಯರ ಶಿಷ್ಯರಾದ ಶ್ರೀ ಗೋವಿಂದ ಭಗವತ್ಪಾದ ಎಂಬ ಸನ್ಯಾಸಿಗಳ ಆಶ್ರಮಕ್ಕೆ ಹೋದರು. ಅಲ್ಲಿ ಶಾಸ್ತ್ರವಿಧಿಗನುಸಾರವಾಗಿ ಸನ್ಯಾಸವನ್ನು ಅವಲಂಬಿಸಿ ಶಾಸ್ತ್ರಗಳಲ್ಲಿ ಪಾರಂಗತರಾಗಿ, ಗುರುಗಳ ಅಪ್ಪಣೆಯನ್ನು ಪಡೆದು ಕಾಶಿಗೆ ಹೋದರು. ಇಲ್ಲಿ ತಂಜಾವೂರು ಜಿಲ್ಲೆಯ ಚಿದಂಬರ ಊರಿನ ಒಬ್ಬ ಬ್ರಾಹ್ಮಣನನ್ನು ತನ್ನ ಶಿಷ್ಯನಾಗಿ ಮಾಡಿ ಪದ್ಮಪಾದ ಎಂಬ ಹೆಸರಿನಿಂದ ಆಶ್ರಮವನ್ನು ಕೊಟ್ಟು, ಉಪನಿಷತ್ತುಗಳು, ಭಗವದ್ಗೀತೆ, ವೇದಾಂತಸೂತ್ರ ಇವುಗಳ ಭಾಷ್ಯವನ್ನು ಬರೆದು, ಸ್ವಲ್ಪ ಸಮಯ ಕಾಶಿಯಲ್ಲಿಯೂ, ಸ್ವಲ್ಪ ಸಮಯ ಬದರಿಕಾಶ್ರಮದಲ್ಲಿಯೂ ಕಳೆದು ಅನೇಕ ಮಂದಿ ಶಿಷ್ಯರನ್ನು ಮಾಡಿಕೊಂಡು, ಅನೇಕ ರಾಜಸಭೆಗಳಿಗೆ ಹೋಗಿ ಬಿರುದಾವಳಿಗಳನ್ನು ಪಡೆದು ತನ್ನ 25 ನೇ ವರುಷ ಪ್ರಾಯದಲ್ಲಿ ಕಾಶಿಯಿಂದ ಹೊರಟರು. ಇವರು ಪ್ರಯಾಗದಲ್ಲಿರುವಾಗ ಪೂರ್ವ ಮೀಮಾಂಸದ ಪ್ರಸಾರಕರಾಗಿಯೂ ಉತ್ತರ ಹಿಂದೂದೇಶದಲ್ಲಿ ಬೌದ್ಧಮತವನ್ನು ಆದಷ್ಟು ಕಡಿಮೆಮಾಡಿ, ಹಿಂದೂಮತವನ್ನು ಪುನರುಜ್ಜೀವಿಸಿದ ಕುಮಾರಿಲ್ಲ ಭಟ್ಟರು ಅಗ್ನಿಪ್ರವೇಶ ಮಾಡುತ್ತಾರೆಂದು ಕೇಳಿ ಅಲ್ಲಿಗೆ ಹೋಗಿ ಅವರಿಂದ ಕೆಲವು ಸಂಗತಿಗಳನ್ನು ತಿಳಕೊಂಡು ಮಾಹಿಶ್ಮತಿ ಪಟ್ಟಣದಲ್ಲಿ ಪಂಡಿತನಾದ ಮಂಡನಮಿಸ್ರನಲ್ಲಿಗೆ ಹೋದರು. ಮಂಡನಮಿಸ್ರನಿಗೆ ಭಾರತಿ ಎಂಬ ಹೆಂಡತಿ ಇದ್ದಳು. ಇವಳೂ ಗಂಡನ ಹಾಗೆಯೇ ಮಹಾ ವಿದ್ಯಾವಂತೆಯಾಗಿದ್ದಳು. ಮಂಡನಮಿಸ್ರನಿಗೂ ಶಂಕರಾಚಾರ್ಯರಿಗೂ ಶಾಸ್ತ್ರಗಳ ವಿಷಯ ಚರ್ಚೆಯಾಗಿ ಗಂಡಹೆಂಡಿರಿಬ್ಬರೂ ಸನ್ಯಾಸಿಗಳಾಗಿ ಶಂಕರಾಚಾರ್ಯರ ಸಂಗಡಲೇ ಹೊರಟರು. ಮಾಹಿಶ್ಮತಿಯ ರಾಜನೂ ಶಂಕರಾಚಾರ್ಯರ ಮತವನ್ನು ಅವಲಂಬಿಸಿದನು. ಅನಂತರ ಮಹಾರಾಷ್ಟ್ರದಲ್ಲಿ ಸಂಚರಿಸುವಾಗ ಶಂಕರಾಚಾರ್ಯರಿಗೆ ಒಂದು ಆಪತ್ತು ಸಂಭವಿಸಿತು. ಮಹಾರಾಷ್ಟ್ರದಲ್ಲಿ ಈಶ್ವರನನ್ನು ಮಲ್ಲಾರಿ ಎಂಬ ಹೆಸರಿನಿಂದ ಪೂಜಿಸುವ ಬ್ರಾಹ್ಮಣರಿದ್ದರು. ಇವರು ಶಂಕರಾಚಾರ್ಯರ ಅದ್ವೈತಮತವನ್ನು ಸ್ವೀಕರಿಸಲಿಕ್ಕೆ ಒಪ್ಪಿದರು.

ಅಲ್ಲಿ ಕಾಪಾಲಿಕರು ಎಂಬ ಇನ್ನೊಂದು ವಿಧದವರು ಭೈರವನನ್ನು ಆರಾಧಿಸಿ ವಿದ್ಯಾವಂತರಾದ ಬ್ರಾಹ್ಮಣರನ್ನೂ, ಸನ್ಯಾಸಿಗಳನ್ನೂ ಚೆನ್ನಾಗಿ ಸಾಕಿ ನಂತರ ಭೈರವನಿಗೆ ಬಲಿಕೊಡುತ್ತಿದ್ದರು. ಇವರು ಕರಾಡ ಬ್ರಾಹ್ಮಣರು. ಇವರು ಶಂಕರಾಚಾರ್ಯರನ್ನು ಹಿಡಿದು ತಲೆಕಡಿಯಲಿಕ್ಕಿರುವಾಗ ಪದ್ಮಪಾದರು ಬಂದು ಆ ಕತ್ತಿಯನ್ನು ಎಳಕೊಂಡು ಆ ಬ್ರಾಹ್ಮಣನನ್ನು ಕೊಂದುಹಾಕಿದರು. ಆ ಮೇಲೆ ಅಲ್ಲಿಂದ ಹೊರಟು ಶೃಂಗೇರಿಗೆ ಬಂದು ತುಂಗಭದ್ರಾ ನದಿಯ ತೀರದಲ್ಲಿ ಸರಸ್ವತಿಗೆ ಒಂದು ದೇವಸ್ಥಾನವನ್ನು ಕಟ್ಟಿಸಿದರು. ಅದನ್ನು ಕಟ್ಟಿಸಲಿಕ್ಕೆ ಕದಂಬ ಅರಸರಲ್ಲಿ ವೀರಸೇನನೆಂಬವನು ಸಹಾಯಮಾಡಿದನು. ಅಲ್ಲಿಯೇ ಒಂದು ಮಠವನ್ನು ಸ್ಥಾಪಿಸಿ ಆ ಮಠಕ್ಕೆ ತನ್ನ ಶಿಷ್ಯರಲ್ಲಿ ಒಬ್ಬರಾದ ಸುರೇಶ್ವರಾಚಾರ್ಯರೆಂಬ ಹೆಸರಿರುವ ಮಂಡನಮಿಶ್ರರಿಗೆ ಪಟ್ಟವನ್ನು ಕಟ್ಟಿದರು. ಶೃಂಗೇರಿ ಮಠದಿಂದ ಶಿಷ್ಯರನ್ನು ಕಳುಹಿಸಿ ಕನ್ನಡ ಜಿಲ್ಲೆಯಲ್ಲಿ ತಮ್ಮ ಮತವನ್ನು ಬೋಧಿಸಲಾರಂಬಿಸಿದರು. ಆ ಸಮಯದಲ್ಲಿ ಹಿಂದುಗಳೆಲ್ಲರೂ ಈ ಮತವನ್ನು ಅವಲಂಬಿಸಿದರು.

ಉಡುಪಿಯಲ್ಲಿ ಈ ಸಮಯದಲ್ಲಿ ಅನೇಕ ಮಂದಿ ಜೈನರಿದ್ದರು. ಈಗಿನ ಅನಂತೇಶ್ವರ ದೇವಸ್ಥಾನವು ಅನಂತನಾಥ ಬಸದಿಯಾಗಿಯೂ, ಚಂದ್ರಮೌಳೀಶ್ವರ ದೇವಸ್ಥಾನವು ಚಂದ್ರನಾಥ ಬಸದಿಯಾಗಿಯೂ ಇತ್ತು. ಉಡುಪಿಯಿಂದ ಸುಮಾರು 1½ ಮೈಲು ದೂರವಿರುವ ಚಿಟ್ಟುಪಾಡಿಯು ಜೈನರ ದೊಡ್ಡ ಪೇಟೆಯಾಗಿ ಅಲ್ಲಿ ಹಲವ ಬಸದಿ ಮುಂತಾದ ಅನೇಕ ಬಸದಿಗಳೂ ಒಬ್ಬ ಜೈನ ಬಲ್ಲಾಳರೂ ಇದ್ದರು. ಶಂಕರಾಚಾರ್ಯರು ಈ ತುಳು ರಾಜ್ಯಕ್ಕೆ ಬಂದು ತನ್ನ ಮತವನ್ನು ಬೋಧಿಸಿ ಎಲ್ಲಾ ತುಳುಜನರನ್ನು ತನ್ನ ಮತಾವಲಂಬಿಗಳಾಗಿ ಮಾಡಿದ್ದಲ್ಲದೆ ಅನಂತನಾಥ ಮತ್ತು ಚಂದ್ರನಾಥ ಬಸದಿಗಳನ್ನು ಸ್ವಾಧೀನಪಡಿಸಿಕೊಂಡು ಅನಂತೇಶ್ವರ ಮತ್ತು ಚಂದ್ರಮೌಳೀಶ್ವರ ದೇವಸ್ಥಾನಗಳಾಗಿ ಮಾಡಿದರು. ಅನಂತೇಶ್ವರ ದೇವಸ್ಥಾನದ ಮುಂದುಗಡೆ ಇರುವ ಮಾನಸ್ತಂಭವೇ ಇದಕ್ಕೆ ಸಾಕ್ಷಿಯಾಗಿ ಈಗಲೂ

ಅಲ್ಲಿಯೇ ಇದೆ. ಕಂಬದ ತಲೆಯ ಮೇಲಿರುವ ಬ್ರಹ್ಮದೇವರ ಪ್ರತಿಮೆಯನ್ನು ಮಾತ್ರವೆ ತೆಗೆದಿರುತ್ತಾರೆ. ಶಿಲಾಮಯವಾದ ದೇವರ ಗರ್ಭಗ್ರಹವೂ ಬಸದಿಯ ಆಕಾರದಲ್ಲಿಯೇ ಇದೆ. ಶಂಕರಾಚಾರ್ಯರು ಅನಂತನಾಥ ಜಿನೇಶ್ವರನ ಪ್ರತಿಮೆಯನ್ನು ತೆಗೆದು ಅನಂತೇಶ್ವರನ ಲಿಂಗವನ್ನು ಪ್ರತಿಷ್ಠಿಸಿದರು. ಆ ಮೇಲೆ ತುಳುರಾಜ್ಯದವರಿಗಾಗಿ ಅದೇ ಅನಂತೇಶ್ವರ ದೇವಸ್ಥಾನದಲ್ಲಿ ತನ್ನ ಶಿಷ್ಯರಲ್ಲಿ ಒಬ್ಬನನ್ನು ಮಠಾಧಿಪತಿಯಾಗಿ ನೇಮಿಸಿ ಶೃಂಗೇರಿಗೆ



ಅನಂತೇಶ್ವರ ದೇವಸ್ಥಾನ.

ಹೋದರು. ಕ್ರಮೇಣ ಚಿಟ್ಟಿಪಾಡಿ ನಿಡಂಬೂರು ಬಲ್ಲಾಳಿಕೆಗಳು ಜೈನರ ಕೈತಪ್ಪಿ ಬ್ರಾಹ್ಮಣರ ವಶಕ್ಕೆ ಬಂದವು. ಈ ಇಬ್ಬರು ಬಲ್ಲಾಳರೂ ಈ ಗುರುಗಳಿಗೆ ಒಳ್ಳೇ ತರದ ಸಹಾಯಮಾಡುತ್ತಿದ್ದರು. ಮಧ್ವಾಚಾರ್ಯರ ಕಾಲದ ವರೆಗೆ ಈ ಮಠವು ಇತ್ತು. ಮಧ್ವಾಚಾರ್ಯರು ಈ ಮಠಾಧಿಪತಿಗಳಾದ ಅಚ್ಯುತಪ್ರೇಕ್ಷಾಚಾರ್ಯರಲ್ಲಿಯೇ ತನ್ನ ವಿದ್ಯಾಭ್ಯಾಸವನ್ನು ಮಾಡಿದರೆಂದು ಮಧ್ವವಿಜಯದಲ್ಲಿ ಕಾಣುತ್ತದೆ. ಅಚ್ಯುತ

ಪ್ರೇಕ್ಷಾಚಾರ್ಯರಿಗೆ ವಾರ್ಧಿಕ್ಯವು ಪ್ರಾಪ್ತವಾದುದರಿಂದ ತನ್ನ ಶಿಷ್ಯನಿಗೆ ಸ್ವಾತಂತ್ರ್ಯವನ್ನು ಕೊಡಬೇಕೆಂದು ಯೋಚಿಸಿ ಪೂರ್ಣಪ್ರಜ್ಞನೆಂದು ಹೆಸರಿರುವ ಮಧ್ವಾಚಾರ್ಯರಿಗೆ ಆನಂದತೀರ್ಥ ಎಂಬ ಹೆಸರನ್ನಿಟ್ಟರು. ಅನಂತರ ಆನಂದತೀರ್ಥರು ಗುರುಗಳು ಕಾಲವಾದ ನಂತರ ತನ್ನ ಹೊಸ ಮತವನ್ನು ಬೋಧಿಸಲಾರಂಭಿಸಿ ಅದಕ್ಕೆ ಮಧ್ವಮತವೆಂದು ಹೆಸರಿಟ್ಟು ತಾನು ಮಧ್ವಾಚಾರ್ಯನೆಂಬ ಹೆಸರಿಟ್ಟುಕೊಂಡ ಮೇಲೆ ಶಂಕರಾಚಾರ್ಯರ ಶಿಷ್ಯವರ್ಗದವರ ಕೈಯಿಂದ ಈ ಮಠವು ತಪ್ಪಿತು. ಆಗ ಅನಂತೇಶ್ವರ ದೇವಸ್ಥಾನದ ಕೀರ್ತಿಯೂ ಕಡಿಮೆಯಾಯಿತು. ಬ್ರಾಹ್ಮಣರಲ್ಲಿ ಮಾತ್ರವೇ ಅನೇಕರು ಶಂಕರಾಚಾರ್ಯರ ಮತವನ್ನು ಬಿಟ್ಟರಲ್ಲದೆ ಶೂದ್ರ ಜಾತಿಯವರಲ್ಲಿ ಒಬ್ಬರೇ ಒಬ್ಬರಾದರೂ ಶಂಕರಾಚಾರ್ಯರ ಮತವನ್ನು ಬಿಟ್ಟು ಮಧ್ವಮತವನ್ನು ಅವಲಂಬಿಸಲಿಲ್ಲ. ಮತ್ತು ಉಡುಪಿಯ ಶಂಕರ ಮಠಕ್ಕೆ ಕೊಡುತ್ತಿದ್ದ ವಂತಿಗೆ ಮುಂತಾದ್ದನ್ನು ಶೃಂಗೇರಿ ಮಠಕ್ಕೆ ಕಳುಹಿಸಲಾರಂಭಿಸಿದರು. ಈಗಲೂ ಈ ವಂತಿಗೆಯನ್ನು ವಸೂಲುಮಾಡಿ ಮಠಕ್ಕೆ ಕಳುಹಿಸಲಿಕ್ಕೆ ನೇಮಿಸಲ್ಪಟ್ಟವರು ಕನ್ನಡ ಜಿಲ್ಲೆಯಲ್ಲಿ ಅಲ್ಲಲ್ಲಿರುತ್ತಾರೆ.

ಶಂಕರಾಚಾರ್ಯರು ಕನ್ನಡ ಜಿಲ್ಲೆಯ ಉಡುಪಿಯಲ್ಲಿ ಮಠಸ್ಥಾಪನೆ ಮಾಡಿದ ಮೇಲೆ ಶೃಂಗೇರಿಯಲ್ಲಿ ತನ್ನ ಶಿಷ್ಯರಾದ ಪದ್ಮಪಾದ, ಸುರೇಶ್ವರಾಚಾರ್ಯ (ಮಂಡನಮಿಸ್ರ) ಆನಂದಗಿರಿ, (ಹಸ್ತಾಮಲಕಾಚಾರ್ಯ) ಇವರಿಂದ ಅನೇಕ ಗ್ರಂಥಗಳನ್ನು ಬರಿಸಿದರು.

ಶಂಕರಾಚಾರ್ಯರು ಶೃಂಗೇರಿಯಲ್ಲಿರುವಾಗ ತನ್ನ ತಾಯಿಗೆ ಕಠಿಣ ಅಸ್ವಸ್ಥವೆಂದು ಕೇಳಿ ತಾನೊಬ್ಬನೆ ಕಲಾದಿಗೆ ಹೋದರು. ತಾಯಿಯು ಏಳಲಾರದನ್ನು, ಅಸ್ವಸ್ಥದಲ್ಲಿರುವುದನ್ನು ನೋಡಿ ಆಕೆಯ ಕಾಲಡಿಗಳಿಗೆ ನಮಸ್ಕಾರವನ್ನು ಮಾಡಲು ತಾಯಿಯು ದೇವರ ವಿಷಯ ಕೆಲವು ಸಂಗತಿಗಳನ್ನು ವಿವರಿಸಬೇಕೆಂದು ಹೇಳಿದಾಗ ಅವುಗಳನ್ನು ವಿವರಿಸಿ ಹೇಳಲು ತಾಯಿಯು ಪ್ರಾಣವನ್ನು ಬಿಟ್ಟಳು. ಸನ್ಯಾಸಿಯಾದ ಮೇಲೆ ತಾಯಿ ಇದ್ದಲ್ಲಿಗೆ ಬಂದು ತಾಯಿಗೆ ನಮಸ್ಕಾರ ಮಾಡಿದ್ದು ಶಾಸ್ತ್ರವಿಧಿಗೆ

ವಿರುದ್ಧವಾದುದೆಂದು ಹೇಳಿ ತನ್ನ ಜಾತಿಗೃಹಸ್ಥರು ಶವಸಂಸ್ಕಾರಕ್ಕೆ ಬಾರದಿರಲು, ಹಿತ್ತಿಲಲ್ಲಿಯೇ ಮನೆಯ ಸಾಮಾನುಗಳನ್ನೆ ಹಾಕಿ ತಾಯಿಯನ್ನು ದಹನಮಾಡಿದರು. ಅನಂತರ ಶಂಕರಾಚಾರ್ಯರು ಆ ದೇಶದ ಅರಸನಲ್ಲಿ ಹೋಗಿ ತನ್ನ ಮತವನ್ನು ಅವನಿಗೆ ಬೋಧಿಸಿ ಉಡಿಗೆ ಉಚಿತಗಳನ್ನು ಪಡೆದು ನಂಬೂದಿರಿ ಬ್ರಾಹ್ಮಣರು ತಮ್ಮ ಹೆಣಗಳನ್ನು ತಮ್ಮ ಹಿತ್ತಿಲಲ್ಲಿಯೇ ಸುಡಬೇಕೆಂಬ ಕಟ್ಟಳೆಯನ್ನು ಮಾಡಿಸಿದರು. ಆ ವಾಡಿಕೆ ಈಗಲೂ ರೂಢಿಯಲ್ಲಿದೆ.

ಆ ಮೇಲೆ ಶೃಂಗೇರಿಗೆ ಹೋಗಿ ತನ್ನ ಶಿಷ್ಯರೊಡನೆ ಪೂರ್ವ ಕರಾವಳಿಯಲ್ಲಿ ಸಂಚರಿಸಿ, ಪಾಂಡ್ಯದೇಶದ ದೊರೆಯನ್ನು ತನ್ನ ಮತಕ್ಕೆ ಸೇರಿಸಿ, ಅಲ್ಲಿಯ ಮೀನಾಕ್ಷಿ ದೇವಸ್ಥಾನದಲ್ಲಿ ಮೃಗಗಳನ್ನು ಬಲಿಕೊಡುವುದನ್ನು ನಿಲ್ಲಿಸಿ, ಶಾಕ್ತರನ್ನು (ಶಕ್ತಿಪೂಜೆ ಮಾಡುವವರನ್ನು) ತನ್ನ ಮತಕ್ಕೆ ಸೇರಿಸಿ, ಅಲ್ಲಿಂದ ಚೋಳದೇಶದ ಅರಸನನ್ನು ತನ್ನ ಮತಾವಲಂಬಿಯಾಗಿ ಮಾಡಿ ಕಂಚಿಯ ಕಾಮಾಕ್ಷಿ ದೇವಸ್ಥಾನದಲ್ಲಿ ಮೃಗಬಲಿ ಕೊಡುವ ಪದ್ಧತಿಯನ್ನು ನಿಲ್ಲಿಸಿ, ಆ ರಾಜ್ಯದಲ್ಲಿರುವ ಶಾಕ್ತ, ಗಾಣಪತ್ಯ (ಗಣಪತಿ ಪೂಜೆಮಾಡುವವರು) ಕಾಪಾಲಿಕರನ್ನು ಜಯಿಸಿ, ಅವರ ಕ್ರೂರಕೃತ್ಯಗಳನ್ನು ನಿಲ್ಲಿಸಿ, ಅಲ್ಲಿಂದ ಪುರಿಗೆ (ಜಗನ್ನಾಥ) ಹೋಗಿ ಗೋವರ್ಧನ ಮಠವನ್ನು ಸ್ಥಾಪಿಸಿ, ಅಲ್ಲಿ ಪದ್ಮಪಾದರಿಗೆ ಪಟ್ಟವನ್ನು ಕಟ್ಟಿದರು. ಅಲ್ಲಿಂದ ಇವರು ಬೀರಾರದೇಶಕ್ಕೆ ಹೋಗಿ ತನ್ನ ಮತವನ್ನು ಬೋಧಿಸಿ, ಉಜ್ಜಯಿನೀ ಪಟ್ಟಣಕ್ಕೆ ಹೋಗಿ ಅಲ್ಲಿಯೂ ಮೃಗಗಳನ್ನು ಬಲಿಕೊಡುವುದನ್ನು ನಿಲ್ಲಿಸಿ ಆ ಜನರನ್ನು ತನ್ನ ಶಿಷ್ಯರಾಗಿ ಮಾಡಿ, ಅಲ್ಲಿಂದ ಗುಜರಾಥ ದೇಶಕ್ಕೆ ಹೋಗಿ ದ್ವಾರಕೆಯಲ್ಲಿ ಶಾರದಾಪೀಠವನ್ನು ಸ್ಥಾಪಿಸಿ ಹಸ್ತಾಮಲಕಾಚಾರ್ಯರನ್ನು ಮಠಾಧಿಪತಿಯಾಗಿ ನಿಯಮಿಸಿದರು. ಅಲ್ಲಿಂದ ಗಂಗಾನದಿಯ ಪ್ರಾಂತ್ಯದಲ್ಲಿ ಸಂಚರಿಸಿ, ಭಾಸ್ಕರ, ದಂಡಿನ, ಬಾಣ, ಮಯೂರ ಮುಂತಾದ ವಿದ್ವಾಂಸರೊಡನೆ ವಾಗ್ವಾದಮಾಡಿ, ಗೆದ್ದು ಅಲ್ಲಿಂದ ಕಾಶ್ಮೀರ ದೇಶಕ್ಕೆ ಹೋಗಿ ಅಲ್ಲಿಯೂ

ತನ್ನ ಮತವನ್ನು ಬೋಧಿಸಿದರು. ಅಲ್ಲಿಂದ ಕಾಮರೂಪ (ಅಸ್ಸಾಮು) ದೇಶಕ್ಕೆ ಹೋಗಿ ಅಲ್ಲಿ ಶಾಕ್ತರ ಶಾಸ್ತ್ರದಲ್ಲಿ ಬಹಳ ಪ್ರವೀಣನಾದ ಅಭಿನವ ಗುಪ್ತನನ್ನು ಗೆದ್ದು, ಅಲ್ಲಿಂದ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿಯೂ ಒಂದು ಮಠವನ್ನೂ ಬದರೀನಾರಾಯಣ ದೇವಸ್ಥಾನವನ್ನೂ ಸ್ಥಾಪಿಸಿ, ಕದರನಾಥಕ್ಕೆ ಹೋಗಿ ಅಲ್ಲಿ ಕ್ರಿ. ಶ. 828ರಲ್ಲಿ ತನ್ನ 32ನೇ ವರುಷ ಪ್ರಾಯದಲ್ಲಿ ಕಾಲವಾದರು.

## 13ನೇ ಅಧ್ಯಾಯ.

## ರಾ ಷ್ಟ್ರ ಕೂ ಟ ರು .

ಪಶ್ಚಿಮಚಾಲುಕ್ಯರ ಕಡೇ ಅರಸನಾದ 2ನೇ ಕೀರ್ತಿವರ್ಮನ ಕಾಲದಲ್ಲಿ ಇವರ ರಾಜ್ಯವು ರಾಷ್ಟ್ರಕೂಟ ರಾಜನಾದ ದಂತಿದುರ್ಗನ ವಶವಾಯಿತು. ಕನ್ನಡ ಜಿಲೆಯೂ ಅವರ ಅಧೀನಕ್ಕೆ ಬಂತು. ಬಾರ್ಕೂರು ರಾಮಪ್ಪ ಕರ್ಣಿಕರ ಮನೆಯಲ್ಲಿರುವ ರಾಯಪದ್ಧತಿ ಎಂಬ ಪುಸ್ತಕದಲ್ಲಿ ಚಾಲುಕ್ಯರ ತರುವಾಯ ತುಳುರಾಜ್ಯವು ಬಾಲ್ಹಿಕ ರಾಜರ ವಶವಾಯಿತೆಂದು ಇದೆ. ಅರಬಿಯರು ಈ ರಾಷ್ಟ್ರಕೂಟರಿಗೆ ಬಾಲ್ಹಿಕ ರಾಜರೆಂದು ಕರೆಯುತ್ತಿದ್ದರು. ಕಡಬದಲ್ಲಿ ಸಿಕ್ಕಿದ ಒಂದು ತಾಮ್ರ ಶಾಸನದಿಂದಲೂ ರಾಷ್ಟ್ರಕೂಟರು ಮೇಲಾಧಿಕಾರಿಗಳಾಗಿ ಈ ಜಿಲ್ಲೆಯನ್ನು ಆಳುತ್ತಿದ್ದರೆಂದು ತಿಳಿದುಬರುತ್ತದೆ.

ರಾಷ್ಟ್ರಕೂಟರು ಬಹಳ ಪ್ರಾಚೀನ ಕಾಲದಲ್ಲಿ ಸಿಂಧೂನದಿಯ ತೀರದಿಂದ ಗುಜರಾಥ ದೇಶಕ್ಕೆ ಬಂದು ಅಲ್ಲಿಂದ ಕರಾವಳಿಯ ದಾರಿಯಾಗಿ ವಿಂದ್ಯಪರ್ವತದ ದಕ್ಷಿಣಕ್ಕೆ ಬಂದು ನರ್ಮದಾ ತಪತಿ ನದಿಗಳ ತಪ್ಪಲುಗಳಲ್ಲಿ ನೆಲೆಗೊಂಡ ಆರ್ಯರ ಒಂದು ವಂಶದವರಾಗಿರುತ್ತಾರೆ. ಈ ಸಮಯದಲ್ಲಿ ಜಾತಿಭೇದಗಳು ಇರಲಿಲ್ಲ. ಆದ್ದರಿಂದ ದಕ್ಷಿಣಕ್ಕೆ ಬಂದ ಈ ಆರ್ಯರು ಇಲ್ಲಿಯ ದ್ರಾವಿಡರೊಡನೆ ಕಲೆತು ರಟ್ಟರು

ಎಂಬ ಈ ಜನರು ಉಂಟಾದರು. ಇವರಿರುವ ರಾಜ್ಯಕ್ಕೆ ರಟ್ಟಪಾಡಿ ಎಂದೂ ಹೆಸರಾಯಿತು. ಇವರಲ್ಲಿ ದೊಡ್ಡ ಕುಟುಂಬದವರಿಗೆ ಮಹಾ ರಟ್ಟರೆಂದೂ, ರಾಜ್ಯಕ್ಕೆ ಮಹಾರಾಷ್ಟ್ರವೆಂದೂ ಹೆಸರಾಯಿತು. ಇವರು ಮಾತನಾಡುವ ಭಾಷೆಯು ಈಗಿನ ಮರಾಟಿ ಎನ್ನಿಸಿಕೊಳ್ಳುವ ಮಹಾರಾಷ್ಟ್ರೀಯಾಗಿತ್ತು. ಕೆಲವು ಕಾಲದ ನಂತರ ರಾಜ್ಯವನ್ನಾಳುವ ಕುಟುಂಬದವರಿಗೆ ಕೂಟರೆಂದೂ ಕಡೆಗೆ ರಾಷ್ಟ್ರಕೂಟರೆಂದೂ ಹೆಸರಾಯಿತು.

ರಾಷ್ಟ್ರಕೂಟರು ಅಶೋಕನ ಕಾಲಕ್ಕೆ ಮುಂಚೆಯೇ ನರ್ಮದಾ ನದಿಯ ದಕ್ಷಿಣದಲ್ಲಿ ವಾಸಮಾಡಿಕೊಂಡಿದ್ದರು. ಕ್ರಿ. ಪೂ. 250ನೇ ಅಶೋಕನ ಕಾಲದ ಶಾಸನದಿಂದ ರಾಷ್ಟ್ರಿಕರು ದಕ್ಷಿಣದಲ್ಲಿದ್ದ ಒಂದು ಜನಾಂಗವೆಂದು ತಿಳಿದುಬರುತ್ತದೆ. ಆದರೆ ಆ ಕಾಲದಲ್ಲಿ ರಾಷ್ಟ್ರ ಕೂಟರ ಬಲವಾದ ಒಂದೇ ರಾಜ್ಯವಿರಲಿಲ್ಲ. ಅಲ್ಲಲ್ಲಿ ಸಣ್ಣ ಸಣ್ಣ ಕುಟುಂಬಗಳು ಇದ್ದವು. ಇವರು ಮೊದಲು ಆಂಧ್ರರ ಕೈಕೆಳಗೂ ಅನಂತರ ಪಶ್ಚಿಮ ಕ್ಷತ್ರಪರ ಕೈಕೆಳಗೂ, ಬಳಿಕ ಕ್ರಿ. ಶ. 400ರಲ್ಲಿ ಪಶ್ಚಿಮ ಕ್ಷತ್ರಪರನ್ನು ಚಂದ್ರಗುಪ್ತ ವಿಕ್ರಮಾದಿತ್ಯನು ಜಯಿಸಿದ ನಂತರ ಗುಪ್ತವಂಶದವರ ಕೈಕೆಳಗೂ ಮಹಾ ಸಾಮಂತಾಧಿಪತಿಗಳಾಗಿದ್ದರು. ಕ್ರಿ. ಶ. 550ರಲ್ಲಿ ಬಾದಾಮಿಯ ಪಶ್ಚಿಮ ಚಾಲುಕ್ಯರು ದಕ್ಷಿಣದಲ್ಲಿ ಬಹಳ ಪ್ರಬಲಕ್ಕೆ ಬಂದಾಗ 200 ವರ್ಷಗಳ ವರೆಗೆ ರಾಷ್ಟ್ರಕೂಟರು ಅವರ ಕೈಕೆಳಗೆ ಇದ್ದರು. ಚಾಲುಕ್ಯರು ಪಲ್ಲವರ ಸಂಗಡ ಯುದ್ಧ ದಲ್ಲಿ ಬಹಳ ದೀನಸ್ಥಿತಿಗೆ ಬಂದುದನ್ನು ನೋಡಿ 2ನೇ ಕೀರ್ತಿವರ್ಮನ ಕಾಲದಲ್ಲಿ ದಂತಿದುರ್ಗನೆಂಬ ಈ ವಂಶದ ಅರಸನು ಸ್ವತಂತ್ರ ರಾಜ್ಯ ವನ್ನು ಸ್ಥಾಪಿಸಿದನು.

ಈ ವಂಶವು ನಿಜಾಮ ರಾಷ್ಟ್ರದ ಮಲೆಖೆಡ ಎಂಬಲ್ಲಿ ತಮ್ಮ ರಾಜಧಾನಿಯನ್ನು ಮಾಡಿದ್ದರಿಂದ ಇದಕ್ಕೆ ಮಲೆಖೆಡದ ರಾಷ್ಟ್ರಕೂಟ ವಂಶವೆಂದು ಹೆಸರಾಯಿತು. ಈ ವಂಶವು ಕ್ರಿ. ಶ. 754ರಿಂದ

ಕ್ರಿ. ಶ. 973ರ ವರೆಗೆ ಆಳಿತು. ಈ ಸಮಯದಲ್ಲಿ ನವೀನ ಹಿಂದೂ ಧರ್ಮವು ಹಿಂದೂದೇಶದಲ್ಲೆಲ್ಲಾ ಹಬ್ಬಿತು. ಶಂಕರಾಚಾರ್ಯ, ಕುಮಾರಿಲ್ಲ ಭಟ್ಟ ಮುಂತಾದ ಮತಬೋಧಕರು ಹಿಂದೂಸ್ಥಾನದ ಎಲ್ಲಾ ಭಾಗಗಳಲ್ಲಿಯೂ ನವೀನ ಹಿಂದೂಧರ್ಮಗಳನ್ನು ಬೋಧಿಸುತ್ತಾ ಇದ್ದರು. ಈ ಕಾಲದಲ್ಲಿ ಪುರಾಣಗಳು ಬರೆಯಲ್ಪಟ್ಟವು. ಕ್ರಿ. ಶ. 8ನೇ ಶತಮಾನದ ಆದಿಯಲ್ಲಿ ಹಿಂದೂದೇಶದಲ್ಲಿ ಆಳುತ್ತಿದ್ದ ಎಲ್ಲಾ ಕುಟುಂಬದವರು ತಮ್ಮ ಸಂತತಿ ನಕ್ಷೆಯನ್ನು ತಯಾರಿಸಲಾರಂಭಿಸಿದರು. ರಾಷ್ಟ್ರಕೂಟರೂ ತಮ್ಮ ವಂಶಾವಳಿಯನ್ನು ತಯಾರಿಸಿದರು. ಇವರು ಯಾದವಕುಲದವರೆನ್ನಿಸಿಕೊಂಡರು. ವಿಷ್ಣುವನ್ನೂ ಶಿವನನ್ನೂ ಆರಾಧಿಸಲಾರಂಭಿಸಿದರು. ಇವರ ಧ್ವಜದಲ್ಲಿ ಗರುಡನ ಚಿತ್ರವು ಇತ್ತು. ಇವರ ರಾಜಬಿರುದಾವಳಿಗಳಲ್ಲಿ ಪಾಳಿಧ್ವಜವು ಒಂದಾಗಿತ್ತು. ಪಾಳಿಧ್ವಜವೆಂದರೆ ಕೆಂಪು, ಕಪ್ಪು, ಬಿಳಿ ಈ ಮೂರು ಬಣ್ಣಗಳ ಉದ್ದವಾದ ವಸ್ತ್ರದ ತುಂಡುಗಳನ್ನು ಉದ್ದಕ್ಕೆ ಹೊಲಿದು ಮಾಡಿದ ಧ್ವಜ. ಈ ತರದ ಧ್ವಜವು ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ಜೈನ ಗುರುಗಳ ದಾನಶಾಲೆಯ ಮಠದಲ್ಲಿ ಒಂದು ಇದೆ. ಉತ್ಸವಾದಿಗಳ ಸಮಯ ಇದನ್ನು ತರುತ್ತಾರೆ. ಬೈರರಸ ಒಡೆಯರ ರಾಜಬಿರುದಾವಳಿಗಳೆಲ್ಲಾ ಈ ದಾನಶಾಲೆಯ ಮಠದಲ್ಲಿರುವುದರಿಂದ ಈ ಧ್ವಜವು ಬೈರರಸ ಒಡೆಯರದೆಂದು ಹೇಳಬಹುದು. ಈ ಬೈರರಸರು ಹುಂಬಚ್ಚದಲ್ಲಿ ಆಳಿದ ಜಿನದತ್ತರಾಯನ ಕುಟುಂಬದವರಾಗಿದ್ದುದರಿಂದ ಈ ಕುಟುಂಬದವರು ಮಾಂಡಲಿಕರಾಗಿ ರಾಷ್ಟ್ರಕೂಟರ ಕೈಕೆಳಗೆ ಇದ್ದುದರಿಂದ ಈ ಧ್ವಜವು ಇವರಿಗೆ ಇರಲು ಕಾರಣವೆಂದು ಊಹಿಸಬಹುದು. ರಾಷ್ಟ್ರಕೂಟರ ಕೈಕೆಳಗೆ ಅನೇಕ ವರುಷಗಳ ವರೆಗೆ ಇದ್ದ ಗೌಡ ಸಾರಸ್ವತ ದೇವಸ್ಥಾನಗಳಲ್ಲಿ ರಥೋತ್ಸವಗಳು ಆಗಬೇಕಾದರೆ ಗರುಡ ಧ್ವಜವನ್ನು ಈಗಲೂ ಏರಿಸುತ್ತಾರೆ. ಈ ಅರಸರ ಕಾಲದಲ್ಲಿ ಅನೇಕ ವಿಷ್ಣು ಆಲಯಗಳೂ ಶಿವಾಲಯಗಳೂ ಕಟ್ಟಲ್ಪಟ್ಟವು. ಈ ಅರಸರು

**ದೇವಸ್ಥಾನಗಳಿಗೆ ಹೆಚ್ಚು ಉಂಬಳಿ ಬಿಟ್ಟ ಶಾಸನಗಳು ದೊರಕಿವೆ.** ಅವುಗಳಿಂದ ಈ ವಂಶದ ಅರಸರ ಹೆಸರುಗಳೂ ಅವರ ಕಾಲದಲ್ಲಿ ಆದ ಯುದ್ಧಗಳ ವಿಷಯವೂ ತಿಳಿದುಬರುತ್ತದೆ. ಇವರ ಕಾಲದಲ್ಲಿ ಜೈನಮತವು ಉನ್ನತ ಸ್ಥಿತಿಯಲ್ಲಿಯೇ ಇತ್ತು. ಇವರು ಜೈನಬಸದಿಗಳಿಗೂ ಉಂಬಳಿ ಬಿಟ್ಟಿರುತ್ತಾರೆ. ಇವರ ರಾಜಾಸ್ಥಾನದಲ್ಲಿ ಅನೇಕ ಮಂದಿ ಪಂಡಿತರೂ, ಕವಿಗಳೂ ಇದ್ದರು. ಇವರ ಆಳಿಕೆಯ ಕಾಲದಲ್ಲಿ ಅನೇಕರು ಕನ್ನಡ ಗ್ರಂಥಗಳನ್ನು ಬರಿಯುವುದರಲ್ಲಿ ಆಸಕ್ತರಾಗಿದ್ದರು. ಇವರ ಮೊದಲನೇ ರಾಜಧಾನಿಯು ಮೊರಖಂಡ ಅಥವಾ ಮಯೂರಖಂಡಿ (ನಾಸಿಕ ಜಿಲ್ಲೆಯಲ್ಲಿ) ಎಂಬಲ್ಲಿ ಇತ್ತು. ಅನಂತರ ಇವರು ತಮ್ಮ ರಾಜಧಾನಿಯನ್ನು ಮಲೆಖೆಡಿಗೆ ವೈದರು. ಈ ವಂಶದಲ್ಲಿ 12 ಮಂದಿ ಅರಸರು ಆಳಿದ್ದಾರೆ.

1. **ದಂತಿವರ್ಮನು** ಮೊದಲನೇ ಅರಸನು. ಇವನ ಮಗ 1ನೇ ಇಂದ್ರನು. ಇವರಿಬ್ಬರ ಶಾಸನವು ಔರಂಗಾಬಾದಿನ ಹತ್ತಿರವಿರುವ ಎಲ್ಲೋರದ ದಶಾವತಾರ ದೇವಸ್ಥಾನದಲ್ಲಿದೆ ಇದರಲ್ಲಿ ಕೆಲವು ಹೆಸರು ಗಳು ಮಾತ್ರವೇ ಇವೆಯಲ್ಲದೆ ಇವರ ಕಾಲಗಲ್ಲಿ ಏನೇನು ನಡಿ ಯಿತು ಎಂಬ ವಿಷಯುವು ತಿಳಿಯುವುದಿಲ್ಲ.

2. **1ನೇ ಗೋವಿಂದ.** ಇವನು 1ನೇ ಇಂದ್ರನ ಮಗನು. 1ನೇ ಗೋವಿಂದನೂ ಅವನ ಮಗನಾದ ಕರ್ಕ ಅಥವಾ 1ನೇ ಕಕ್ಕನೂ ಇವರ ವಿಷಯ ಏನೊಂದೂ ತಿಳಿದುಬರುವುದಿಲ್ಲ. 1ನೇ ಕಕ್ಕ ರಾಜನಿಗೆ 2ನೇ ಇಂದ್ರ ಮತ್ತು ಅಕಾಲವರ್ಷ ಶುಭತುಂಗ 1ನೇ ಕೃಷ್ಣ ಎಂಬ ಇಬ್ಬರು ಮಕ್ಕಳಿದ್ದರು. 2ನೇ ಇಂದ್ರನ ರಾಣಿಯು ಚಾಲುಕ್ಯ ವಂಶದವಳೆಂದು ಹೇಳುವುದರಿಂದ ಇವನ ಕಾಲದ ವರೆಗೂ ಈ ಎರಡು ವಂಶದವರಿಗೂ ವೈರವು ಇರಲಿಲ್ಲವೆಂದು ಹೇಳಬಹುದು.

3. **ಖಡ್ಗಾವಲೋಕ ದಂತಿದುರ್ಗ.** ಇವನು 2ನೇ ಇಂದ್ರನ ಮಗನು. ಇವನಿಗೆ 2ನೇ ದಂತಿವರ್ಮನೆಂಬ ಹೆಸರೂ ಇತ್ತು. ಇವನಿಗೆ

ಪೃಥ್ವೀವಲ್ಲಭ ಮಹಾ ರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಎಂಬ ಬಿರುದುಗಳೂ ಇದ್ದವು. ಇವನು ದಕ್ಷಿಣದ ಉತ್ತರ ಭಾಗ ವನ್ನು ಜಯಿಸಿದನು. ಚಾಲುಕ್ಯ ಅರಸನಾದ 2ನೇ ಕೀರ್ತಿವರ್ಮನು ಪಲ್ಲವ ರಾಜಧಾನಿಯಾದ ಕಂಚೀ ಪಟ್ಟಣವನ್ನು ಹಿಡಿಯಲು ಹೋದಾಗ ದಂತಿದುರ್ಗನು ಅವನ ರಾಜಧಾನಿಯಾದ ಬಾದಾಮಿಯನ್ನು ಹಿಡಿದು ತಾನೇ ರಾಜನಾದನು. ಅನೇಕ ರಾಷ್ಟ್ರಕೂಟ ಅರಸರು ಇವನೊಡನೆ ಸೇರಿದರು. ಇವನು ತನ್ನ ರಾಜ್ಯಭಾರದ ಕಡೆಯ ಭಾಗದಲ್ಲಿ ಬಹಳ ಕೆಟ್ಟ ರೀತಿಯಲ್ಲಿ ಆಳಿದ್ದರಿಂದ ಇವನ ಚಿಕ್ಕತಂದೆಯಾದ ಅಕಾಲವರ್ಷ ಶುಭತುಂಗ ಒಂದನೇ ಕೃಷ್ಣನು ಇವನನ್ನು ಸಿಂಹಾಸನದಿಂದ ತಳ್ಳಿ ತಾನು ಪಟ್ಟಕ್ಕೆ ಬಂದನು.

4. **1ನೇ ಕೃಷ್ಣ.** ಇವನು ರಾಷ್ಟ್ರಕೂಟ ರಾಜ್ಯವನ್ನು ಬಲ ಪಡಿಸಿ ವಿಸ್ತರಿಸಿದನು. ಇವನು ಎಲ್ಲೋರದಲ್ಲಿ ಒಂದೇ ಬಂಡೆಕಲ್ಲಿನಲ್ಲಿ ಕೊರೆದು ಮಾಡಿದ ಬಹಳ ವಿಚಿತ್ರವಾದ ಶಿಲ್ಪಕೌಶಲ್ಯವನ್ನು ತೋರಿಸುವ ಕೈಲಾಸ ದೇವಸ್ಥಾನವನ್ನು ನಿರ್ಮಿಸಿದನು. ಇವನಿಗೆ 2ನೇ ಗೋವಿಂದ ಮತ್ತು ಧಾರಾವರ್ಷ ಕಲಿವಲ್ಲಭ, ನಿರುಪಮಧ್ರುವ ಎಂಬ ಇಬ್ಬರು ಮಕ್ಕಳಿದ್ದರು. ಇವರಲ್ಲಿ ಧ್ರುವನು ಪಟ್ಟಕ್ಕೆ ಬಂದು ಗಂಗರಾಜನನ್ನೂ ಕಂಚಿಯ ಪಲ್ಲವರಾಜನನ್ನೂ ಜಯಿಸಿದನು. ಧ್ರುವನಿಗೆ ಪ್ರಭೂತವರ್ಷ ಶ್ರೀವಲ್ಲಭ ಜಗತ್ತುಂಗ 3ನೇ ಗೋವಿಂದ ಮತ್ತು ಗುಜರಾಥ 2ನೇ ವಂಶದ ಸ್ಥಾಪಕನಾದ ಇಂದ್ರರಾಜನು ಎಂಬ ಇಬ್ಬರು ಮಕ್ಕಳಿದ್ದರು. ಇವರಲ್ಲಿ 3ನೇ ಗೋವಿಂದನು ಪಟ್ಟಕ್ಕೆ ಬಂದನು.

5. **3ನೇ ಗೋವಿಂದ.** ಕ್ರಿ. ಶ. 784-815. ಇವನು ತಂದೆಯ ಕಾಲದಲ್ಲಿ ಯುವರಾಜನಾಗಿದ್ದು ತನ್ನ ಅಣ್ಣಂದಿಯರಿಗಿಂತಲೂ ಬುದ್ಧಿವಂತ ನಾದ್ದರಿಂದ ತಂದೆಯ ತರುವಾಯ ಪಟ್ಟಕ್ಕೆ ಬಂದನು. ಇವನು ತನ್ನ ಮಗಳಾದ ರನ್ನಾದೇವಿಯನ್ನು ಬಂಗಾಳದ ಅರಸನಾದ ಧರ್ಮಪಾಲನಿಗೆ ಮದುವೆಮಾಡಿಕೊಟ್ಟನು. ಇವನ ಕಾಲದಲ್ಲಿ ಇವನ ಕೈಕೆಳಗಿನ



ರಾಷ್ಟ್ರಕೂಟ ಅರಸನಾದ ಕೃಷ್ಣನು ಕಟ್ಟಿಸಿದ ವೆರೂಳಿನ
ಕೈಲಾಸ ದೇವಸ್ಥಾನ

12 ಮಂದಿ ಅರಸರು ದಂಗೆ ಎಬ್ಬಿಸಿದರು. ಇವನು ಎಲ್ಲಾ ದಂಗೆಗಳನ್ನೂ ಮುರಿದು ತನ್ನ ರಾಜ್ಯವನ್ನು ವಿಂಧ್ಯಾಪರ್ವತದಿಂದ ತುಂಗಭದ್ರಾನದಿಯ ವರೆಗೆ ಭದ್ರಪಡಿಸಿ ಪಲ್ಲವರಾಜನಾದ ದಂತಿಗನನ್ನು ಗೆದ್ದು, ಅವನನ್ನು ತನ್ನ ಮಾಂಡಲಿಕನನ್ನಾಗಿ ಮಾಡಿದನು. ಇವನ ಕಾಲದ ಒಂದು ತಾಮ್ರ ಶಾಸನವು ಕನ್ನಡ ಜಿಲ್ಲೆಯ ಉಪ್ಪಿನಂಗಡಿ ತಾಲೂಕಿನ ಕಡಬದಲ್ಲಿ ಸಿಕ್ಕಿಯದೆ. ಅದರಲ್ಲಿ ಈ ಕೆಳಗಿನ ಸಂಗತಿಗಳು ಇವೆ.

ಈ ತಾಮ್ರಶಾಸನದ ತಾರೀಕು ಕ್ರಿ. ಶ. 812ನೇ ಮೇ 24. ಇದರ ಪ್ರಕಾರ ಕಡಬದಲ್ಲಿ ಬ್ರಾಹ್ಮಣ ಮಂಡಲೇಶ್ವರರು ಇದ್ದರೆಂದು ತಿಳಿಯಬಹುದು. ಬಲವರ್ಮನೆಂಬ ಚಾಲುಕ್ಯ ರಾಜನಿದ್ದನು. ಇವನ ಮಗ ಯಶೋವರ್ಮ. ಇವನು ಗಂಗಮಂಡಲದ ಚಾಕಿ ರಾಜನ ಸಹೋದರಿಯನ್ನು ಮದುವೆಯಾದನು. ಯಶೋವರ್ಮನ ಮಗ ವಿಮಲಾದಿತ್ಯನು ಕೂನುಮಗಿಲಿ ದೇಶವನ್ನು ಆಳುತ್ತಿದ್ದನು. ಈ ವಿಮಲಾದಿತ್ಯನ ಶನಿದಶೆ ಪರಿಹಾರಾರ್ಥವಾಗಿ ವಲ್ಲಭೇಂದ್ರನಾದ 3ನೇ ಗೋವಿಂದನು ಮಯೂರಖಂಡಿಯಲ್ಲಿರುವಾಗ ಗಂಗಮಂಡಲದ ಚಾಕಿ ರಾಜನ ಅಪೇಕ್ಷೆ ಪ್ರಕಾರ ಮೂಲಗಣ ಮತ್ತು ಪುನ್ನಾಗವೃಕ್ಷದ ನಂದಿ ಸಂಘದ ಆಚಾರ್ಯ ಕೀರ್ತಿಯ ವಂಶದ ಗುಪ್ತಿಗುಪ್ತ ಎಂಬ ಸಂಘದ ಆಚಾರ್ಯ ಕುವಿಯ ಶಿಷ್ಯನ ಶಿಷ್ಯನಾದ ಅರ್ಕಕೀರ್ತಿ ಎಂಬ ಜೈನ ಗುರುವಿಗೆ ಇದಿಗೂರು ವೇಶ್ಯದಲ್ಲಿರುವ ಜಾಲಮಂಗಳ ಎಂಬ ಗ್ರಾಮ ವನ್ನು ಮಾನ್ಯಪುರದಲ್ಲಿರುವ ಜೈನ ಬಸದಿಗೆ ಉಂಬಳಿಬಿಟ್ಟನೆಂದು ಇದೆ. ಬೇರೆ ಜಿಲ್ಲೆಗಳಲ್ಲಿ ಅನೇಕ ಶಾಸನಗಳು ಸಿಕ್ಕಿದರೂ ಕನ್ನಡ ಜಿಲ್ಲೆಯಲ್ಲಿ ಇವರ ಶಾಸನವು ಇದು ಒಂದೇಯಾಗಿದೆ.

**6 ನೃಪತುಂಗ.** ಇವನು 3ನೇ ಗೋವಿಂದನ ಮಗನು. ಇವನಿಗೆ ಮಹಾರಾಜೇಶ್ವರ ಒಂದನೇ ಅಮೋಘವರ್ಷ ಎಂಬ ಹೆಸರೂ ಇತ್ತು. ಇವನು ಕ್ರಿ ಶ. 815ರಲ್ಲಿ ಪಟ್ಟಕ್ಕೆ ಬಂದನು. ಇವನಿಗೆ ಅತಿಶಯಧವಳ, ಮಹಾರಾಜಶಂಡ, ಶ್ರಾವ ಮುಂತಾದ ಬಿರುದುಗಳೂ

ಇದ್ದವು. ಇವನ ಕಾಲದಲ್ಲಿ ಮಾಂಡಲಿಕರು ದಂಗೆ ಎಬ್ಬಿಸಿದಾಗ್ಲೂ ಇವನು ಅದನ್ನು ಅಣಗಿಸಿ ತನ್ನ ರಾಜಧಾನಿಯಾದ ಮಲಖೇಡದ ಸುತ್ತಲೂ ಕೋಟೆಯನ್ನು ಕಟ್ಟಿಸಿ ಭದ್ರಪಡಿಸಿದನು. ಇವನ ಕಾಲದಲ್ಲಿ ಜಿನಸೇನನೆಂಬ ಪ್ರಖ್ಯಾತಿಪಟ್ಟ ಜೈನಕವಿಯು ಇವನ ರಾಜಸಭೆಯಲ್ಲಿದ್ದು ಮುಖ್ಯ ಮಂತ್ರಿಯಾಗಿದ್ದನು. ಇವನು ಕ್ರಿ. ಶ. 878ರಲ್ಲಿ ಕಾಲವಾದನು.

7. **ಅಕಾಲವರ್ಷ ಶುಭತುಂಗ 2ನೇ ಕೃಷ್ಣ.** ಕ್ರಿ. ಶ. 888--912. ಅಮೋಘವರ್ಷನ ತರುವಾಯ ಅವನ ಮಗ 2ನೇ ಕೃಷ್ಣನು ಪಟ್ಟಕ್ಕೆ ಬಂದನು. ಇವನ ತರುವಾಯ ಇವನ ಮಗ 2ನೇ ಜಗತ್ತುಂಗನ ಮೊದಲನೇ ಹೆಂಡತಿಯಾದ ಲಕ್ಷ್ಮಿಯ ಮಗ ನಿತ್ಯವರ್ಷ ಎಂಬವನು ಅರಸನಾದನು.

8. **ನಿತ್ಯವರ್ಷ.** 3ನೇ ಇಂದ್ರನು ಕ್ರಿ. ಶ. 915ರಲ್ಲಿ ಪಟ್ಟಕ್ಕೆ ಬಂದು 917ರ ವರೆಗೆ ಆಳಿದನು. ಇವನ ರಾಣಿಯು ಚೇದಿದೇಶದ ಅರಸನಾದ ಅಮ್ಮಣದೇವನ ಮಗಳಾದ ವಿಜಾಂಬಾ. ಇವನಿಗೆ 2ನೇ ಅಮೋಘವರ್ಷ ಮತ್ತು ಪ್ರಭೂತವರ್ಷ ಸುವರ್ಣವರ್ಷ ನೃಪತುಂಗ 4ನೇ ಗೋವಿಂದ ಎಂಬ ಇಬ್ಬರು ಮಕ್ಕಳಿದ್ದರು. ಪಟ್ಟಕ್ಕೆ 2ನೇ ಮಗನಾದ 4ನೇ ಗೋವಿಂದನು ಬಂದನು. ಇವನು ಕ್ರಿ. ಶ. 918 ರಿಂದ 933ರ ವರೆಗೆ ಆಳಿದನು.

9. **ಅಮೋಘವರ್ಷ.** 4ನೇ ಗೋವಿಂದನ ತರುವಾಯ ಇವನ ಚಿಕ್ಕತಂದೆಯಾದ ಅಮೋಘವರ್ಷವಡ್ಡಿಗನು ಪಟ್ಟಕ್ಕೆ ಬಂದನು. ಇವನು 2ನೇ ಜಗತ್ತುಂಗನ 2ನೇ ಹೆಂಡತಿಯಾದ ಗೋವಿಂದಾಂಬೆಯ ಮಗನು. ಇವನ ಮಗಳನ್ನು ಪಶ್ಚಿಮ ಗಂಗರಾಜನಾದ ಸತ್ಯವಾಕ್ಯ ಕೊಂಗುಣಿವರ್ಮ ಪ್ರೇಮನಂದಿ ಭೂತುಗ ಎಂಬವಗೆ ಮದುವೆಮಾಡಿ ಕೊಟ್ಟಿತ್ತು. ಅಮೋಘವರ್ಷವಡ್ಡಿಗನಿಗೆ ಅಕಲಾವರ್ಷ 3ನೇ ಕೃಷ್ಣನು, 3ನೇ ಜಗತ್ತುಂಗನು, ನಿತ್ಯವರ್ಷಕೊಟ್ಟಿಗನು, ನಿರುಪಮನು ಎಂಬ ನಾಲ್ವರು ಮಕ್ಕಳು.

**10. ಅಕಾಲವರ್ಷ 3ನೇ ಕೃಷ್ಣ.** ಕ್ರಿ. ಶ. 940-956. ಅಮೋಘವರ್ಷ ವಡ್ಡಿಗನ ಹಿರೇಮಗನಾದ ಅಕಾಲವರ್ಷ 3ನೇ ಕೃಷ್ಣನು ಪಟ್ಟಕ್ಕೆ ಬಂದು ಆಳಿದನು. ಇವನ ಮಗನ ಹೆಸರು ತಿಳಿದುಬರುವುದಿಲ್ಲ. ಆದರೆ ಈ ಮಗನಿಗೆ 4ನೇ ಇಂದ್ರನೆಂಬ ಮಗನು ಹುಟ್ಟಿ ಕ್ರಿ. ಶ. 982ರಲ್ಲಿ ಸತ್ತನು. 3ನೇ ಕೃಷ್ಣನ ತರುವಾಯ ಅವನ ತಮ್ಮನಾದ ನಿತ್ಯವರ್ಷಕೊಟ್ಟಿಗನು ಕ್ರಿ. ಶ. 971ರಲ್ಲಿ ಪಟ್ಟಕ್ಕೆ ಬಂದನು. ಇವನಿಗೂ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ, ರಟ್ಟ ಕಂದರ್ಪ ಎಂಬ ಬಿರುದುಗಳೂ ಇದ್ದವು. ಕೊಟ್ಟಿಗನಿಗೆ ನಿರುಪಮನೆಂಬ ಸಹೋದರನು ಇದ್ದನು. ಆದರೆ ಇವನು 3ನೇ ಕೃಷ್ಣನಿಗಿಂತ ಮೊದಲೇ ಸತ್ತದ್ದರಿಂದಲೂ, ಇವನಿಗೆ ಮಕ್ಕಳಿಲ್ಲದ್ದರಿಂದಲೂ ಕೊಟ್ಟಿಗನ ತರುವಾಯ ನಿರುಪಮನ ಮಗನಾದ ಅಮೋಘವರ್ಷ ನೃಪತುಂಗ ಕಕ್ಕಳ ಅಥವಾ 2ನೇ ಕಕ್ಕನು ಕ್ರಿ. ಶ. 972ರಲ್ಲಿ ಪಟ್ಟಕ್ಕೆ ಬಂದನು. ಇವನಿಗೆ ವೀರನಾರಾಯಣ, ರಾಜತ್ರಿನೇತ್ರ, ವಲ್ಲಭ ನರೇಂದ್ರದೇವ ಮೊದಲಾದ ಬಿರುದುಗಳು ಇದ್ದವು. ಇವನು ಮಳಖೇಡದ ವಂಶದ ಕಡೇ ಅರಸನು. ಕ್ರಿ. ಶ. 974ರಲ್ಲಿ ಪಶ್ಚಿಮದ ಕಲ್ಯಾಣ ಚಾಲುಕ್ಯರ ಅರಸನಾದ 2ನೇ ತೈಲನು ಇವನನ್ನು ಸಿಂಹಾಸನದಿಂದ ತಳ್ಳಿದನು. ರಾಷ್ಟ್ರಕೂಟ ರಾಜ್ಯವು ಚಾಲುಕ್ಯರ ವಶವಾಯಿತು. ಆದರೆ ಕನ್ನಡ ಜಿಲ್ಲೆಯು ಈ ಸಮಯದಲ್ಲಿ ಪ್ರಬಲಕ್ಕೆ ಬಂದ ಹೊಯ್ಸಳ ಬಲ್ಲಾಳರ ವಶವಾಯಿತು.

## ಮಲಖೇಡದ ರಾಷ್ಟ್ರಕೂಟರು.

1ನೇ ದಂತಿವರ್ಮ

1ನೇ ಗೋವಿಂದ

ಕರ್ಕ ಅಥವಾ 1ನೇ ಕಕ್ಕ

- 2ನೇ ಇಂದ್ರ
  - (1) ಖಡ್ಗಾವಲೋಕ ದಂತಿದುರ್ಗ ಅಥವಾ 2ನೇ ದಂತಿವರ್ಮ (ಕ್ರಿ. ಶ. 754) ನೇ
- (2) ಅಕಾಲವರ್ಷ ಶುಭತುಂಗ 1ನೇ ಕೃಷ್ಣ
  - 2ನೇ ಗೋವಿಂದ
  - (3) ಧಾರಾವರ್ಷ ಕಲಿವಲ್ಲಭ ನಿರುಪಮಧ್ರುವ
    - (4) ಪ್ರಭೂತವರ್ಷ ಶ್ರೀವಲ್ಲಭ ಜಗತ್ತುಂಗ 3ನೇ ಗೋವಿಂದ ರಾಣಿ ಗಾಮುಂಡಬ್ಬೆ (ಕ್ರಿ. ಶ. 783-84-814-815)

(5) ನೃಪತುಂಗ ಮಹಾರಾಜಶರ್ವ 1ನೇ ಅಮೋಘವರ್ಷ

(6) ಅಕಾಲವರ್ಷ ಶುಭತ್ತುಂಗ 2ನೇಕೃಷ್ಣ (ಕ್ರಿ. ಶ. 888 – 911-12)

ಜಗತ್ತುಂಗ

- ಲಕ್ಷ್ಮೀ ರಾಣಿಯಿಂದ
  - (7) ನಿತ್ಯವರ್ಷ 3ನೇ ಇಂದ್ರ ರಾಣಿವಿಜಾಂಬಾ (ಕ್ರಿ.ಶ. 915-916-917)
    - 2ನೇ ಅಮೋಘವರ್ಷ
    - (8) ಪ್ರಭೂತವರ್ಷ ಸುವರ್ಣವರ್ಷ ನೃಪತುಂಗ 4ನೇ ಗೋವಿಂದ ಕ್ರಿ. ಶ. 918-933
- ಗೋವಿಂದಾಂಬೆಯಿಂದ
  - (9) ಅಮೋಘವರ್ಷ ವದ್ದಿಗ ರಾಣಿಕುಂದಕಾದೇವಿ
    - (10) ಅಕಾಲವರ್ಷ 3ನೇಕೃಷ್ಣ ಕ್ರಿ. ಶ. 949-956
      - ಒಬ್ಬ ಮಗ
        - 4ನೇ ಇಂದ್ರ (ಕ್ರಿ. ಶ. 982)
    - 3ನೇ ಜಗತ್ತುಂಗ
      - ನಿರುಪಮ
        - 12 ಅಮೋಘವರ್ಷ ನೃಪತುಂಗ ಕಕ್ಕಳ ಅಥವಾ 2ನೇ ಕಕ್ಕ ಕ್ರಿ. ಶ. 972-973
    - (11) ನಿತ್ಯಾಶಯ ಕೊಟ್ಟಿಗ 971
    - ಮಗಳು ಪ್ರೇಮ ನಂದಿ ಭೂತುಗನಿಗೆ ಮದುವೆಯಾದಳು.

# 14ನೇ ಅಧ್ಯಾಯ.

## ದ್ವಾರಸಮುದ್ರದ ಯಾದವ ಹೊಯ್ಸಳ ಬಲ್ಲಾಳ ಅರಸರು.

ಕನ್ನಡ ಜಿಲ್ಲೆಯು ರಾಷ್ಟ್ರಕೂಟರ ತರುವಾಯ ಹೊಯ್ಸಳ ಬಲ್ಲಾಳರ ಸ್ವಾಧೀನವಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಷ್ಟರ ವರೆಗೆ ಈ ಅರಸರಲ್ಲಿ 3ನೇ ವೀರನರಶಿಂಹನ ಮಗ 3ನೇ ವೀರ ಬಲ್ಲಾಳನ ಕಾಲದ 1253 ಮತ್ತು 1258ರ ಎರಡು ಶಾಸನಗಳು ಮಾತ್ರವೇ ಸಿಕ್ಕಿಯವೆ. ಇದರಲ್ಲಿ 1ನೆಯದು ಮೂಡಬಿದರೆ ಹೊಸ ಬಸ್ತಿಯಲ್ಲಿಯೂ 2ನೆಯದು ಬಾರಕೂರು ಮೂಡಕೇರಿ ದೇವಸ್ಥಾನದ ಪಶ್ಚಿಮ ಗೋಡೆಯ ಹತ್ತಿರವೂ ಇವೆ. ಚಾಲುಕ್ಯರ ಕಾಲದಲ್ಲಿಯೂ ರಾಷ್ಟ್ರಕೂಟರ ಕಾಲದಲ್ಲಿಯೂ ಈ ಕನ್ನಡ ಜಿಲ್ಲೆಯನ್ನು ಮಹಾ ಮಂಡಲೇಶ್ವರರಾಗಿ ಅಲೂಪ ಅರಸೆರು ಮಂಗಳೂರನ್ನು ರಾಜಧಾನಿ ಯಾಗಿ ಮಾಡಿಕೊಂಡು ಆಳುತ್ತಿದ್ದರು. ಹೊಯ್ಸಳರ ಕಾಲದಲ್ಲಿ ಇವರ ಬಲವು ಕಡಿಮೆಯಾಯಿತು ಇವರು ತಮ್ಮ ಕಡೆಯ ಒಡೆಯರನ್ನು ಬಾರ್ಕೂರರಲ್ಲಿಯೂ ಮಂಗಳೂರಲ್ಲಿಯೂ ನೇಮಿಸಿದರು.

ಹೊಯ್ಸಳ ರಾಜರು ಚಂದ್ರವಂಶಕ್ಕೆ ಸೇರಿದ ಯದುಕುಲದವರೆಂದು ತಿಳಿದುಬರುತ್ತದೆ. ಇವರಿಗೆ ಯದುಕುಲಾಂಬರದ್ಯೂಮಣಿ ಎಂಬ ಹೆಸರೂ ಇತ್ತು. ಯದುಕುಲದವರ ರಾಜಧಾನಿಯು ದ್ವಾರಕಾ ಪಟ್ಟಣವಾದ್ದರಿಂದ "ದ್ವಾರಾವತಿ ಪುರಾಧೀಶ್ವರ" ಎಂಬ ಬಿರುದೂ ಇವರಿಗೆ ಇತ್ತು. ಮೈಸೂರು ಸೀಮೆಯ ಬೇಲೂರಲ್ಲಿ ಸಿಕ್ಕಿದ ಕ್ರಿ. ಶ. 1117ನೇ ಇಸವಿಯ ತಾಮ್ರ ಶಾಸನದಲ್ಲಿ ಇವರ ಪೌರಾಣಿಕ ವಂಶಾವಳಿಯು ಇದೆ. ಅದರಲ್ಲಿ ಇವರ ವಂಶಾವಳಿಯು ಹೀಗೆ ವರ್ಣಿಸಿಯದೆ. "ಯದುವಂಶದಲ್ಲಿ ಸಳನೆಂಬವನು ಹುಟ್ಟಿದನು. ಈ ಸಳನೆಂಬವನು ಒಬ್ಬ ಜೈನಸನ್ಯಾಸಿಯೊಡನೆ ಶಶಾಕಪುರದ "ಪದ್ಮಾವತಿ"

ಯನ್ನು ಪೂಜಿಸುತ್ತಿದ್ದನು. ಒಂದು ದಿವಸ ಪೂಜೆಸಮಯದಲ್ಲಿ ಒಂದು ಹುಲಿಯು ಫಕ್ಕನೇ ಹಾರಿ ಅಲ್ಲಿಗೆ ಬಂತು. ಆಗ ಸನ್ಯಾಸಿಯು "ಹೊಯ್ಸಳ" ಎಂದು ಹೇಳಲು ಸಳನು ಆ ಹುಲಿಯನ್ನು ಕೊಂದನು. ಅಂದಿನಿಂದ ಇವನ ವಂಶಕ್ಕೆ "ಹೊಯ್ಸಳ, ಪೊಯ್ಸಳ" ಎಂಬ ಹೆಸರು ಬಂತು. ಇವರ ಮುಕುಟದಲ್ಲಿಯೂ ಧ್ವಜದಲ್ಲಿಯೂ ಸಿಂಹಲಾಂಛನವು ಇತ್ತು. ಸಳನು ಆ ಹುಲಿಯನ್ನು ಕೊಂದ ಸಮಯವು ವಸಂತಕಾಲವಾದ್ದರಿಂದ ಅವನು ಪದ್ಮಾವತಿಗೆ "ವಾಸಂತಿಕಾ ದೇವಿ" ಎಂಬ ಹೆಸರನ್ನಿಟ್ಟು ತನ್ನ ಕುಲದೇವಿಯಾಗಿ ಅವಳನ್ನು ಪೂಜಿಸುತ್ತಾ ಬಂದನು. ಆದರೆ ಸಳನಿಗೂ ಈ ವಂಶದ ಚರಿತ್ರೆಯಲ್ಲಿ ಕಾಣುವ ಮೂಲಪುರುಷನಿಗೂ ಯಾವತರದ ಸಂಬಂಧ ವಿತ್ತೆಂದು ಇಷ್ಟರವರೆಗೆ ತಿಳಿದುಬರಲಿಲ್ಲ. 1ನೇ ಬಲ್ಲಾಳನ ಕಾಲದಲ್ಲಿ ಇವನ ರಾಜಧಾನಿಯು ಮೈಸೂರು ಸೀಮೆಯ ಹಾಸನ ಜಿಲ್ಲೆಯಲ್ಲಿರುವ ಬೇಲೂರು ಅಥವಾ ವೇಲಾಪುರದಲ್ಲಿತ್ತು. ಸಳನ ಗುರುವು ಜೈನ ಸನ್ಯಾಸಿಯಾದ್ದರಿಂದಲೂ ಮೂಲಪುರುಷನಾದ ವಿನಯಾದಿತ್ಯನ ಏಳಿಗೆಯು ಜೈನಗುರುವಾದ ಶಾಂತಿದೇವನ ಮೇಲೆ ಆಧರಿಸಿರುವುದರಿಂದಲೂ ವಿಷ್ಣುವರ್ಧನನ ರಾಣಿಯಾದ ಶಾಂತಲಾದೇವಿಯು ಪ್ರಭಾಚಂದ್ರ ಎಂಬ ಜೈನಗುರುವಿನ ಶಿಷ್ಯಳಾಗಿದ್ದುದರಿಂದಲೂ ಅವನ ಮಂತ್ರಿಯಾದ ಗಂಗರಾಜನೂ 1ನೇ ನರಶಿಂಗನ ಪ್ರಧಾನಿಯಾದ ಹುಲ್ಲನೂ ಜೈನಮತವನ್ನು ಬಹಳ ಪ್ರಬಲಕ್ಕೆ ತಂದನೆಂದು ಹೇಳುವುದರಿಂದಲೂ ಹೊಯ್ಸಳರು ಜೈನರಾಗಿದ್ದರೆಂದು ತಿಳಿಯಬೇಕಾಗಿದೆ. 2ನೇ ವೀರಬಲ್ಲಾಳನು ವಿಜಯನಾರಾಯಣನ ದಯೆಯಿಂದ ಪಟ್ಟಕ್ಕೆ ಬಂದನೆಂದು ಹೇಳುವುದರಿಂದಲೂ ಇದೇ ಅರಸನ ಮತ್ತು 2ನೇ ನರಶಿಂಹನ ಪ್ರಧಾನಿಯಾದ ಪೊಳಾಳ್ವಾ ವೈಷ್ಣವರ ಮುಖ್ಯಸ್ಥನಾಗಿದ್ದನೆಂದು ಹೇಳುವುದರಿಂದಲೂ ನಂತರದ ಅರಸರು ವೈಷ್ಣವರಾಗಿದ್ದರೆಂದು ತಿಳಕೊಳ್ಳಬಹುದು.

**ವಿನಯಾದಿತ್ಯ** ಕ್ರಿ. ಶ 1047—1100. ಇವನು ಈ ವಂಶದ 1ನೇ ಅರಸನು. ಮೈಸೂರು ಜಿಲ್ಲೆಯ ತಿರುಮಕೂಡ್ಲು ತಾಲೂಕಿನ ಕಳಿಯೂರು ಗ್ರಾಮದಲ್ಲಿ ಕ್ರಿ. ಶ 1006ನೇ ಇಸವಿಯ ಒಂದು ಶಾಸನವಿದೆ. ಇದರಲ್ಲಿ ಚೋಳ ಅರಸನಾದ ರಾಜರಾಜ ದೇವನ ಸೇನಾಧಿಪತಿಯಾದ ಅಪ್ರಮೇಯನು ಹೊಯ್ಸಳ ಸೇನಾಧಿಪತಿಯಾದ ನಾಗಣ್ಣನನ್ನು ಸೋಲಿಸಿ ವಿನಯಾದಿತ್ಯನನ್ನು ಬೆನ್ನಟ್ಟಿದನೆಂದು ಬರೆದಿದೆ. ಇದರಿಂದ ವಿನಯಾದಿತ್ಯನು ಸ್ವತಂತ್ರ ರಾಜನಾಗಿದ್ದನೆಂದು ಊಹಿಸಬಹುದು. ಆದರೆ ದ್ವಾರಸಮುದ್ರದಲ್ಲಿ ಆಳಿದ ವಂಶಾವಳಿಯಲ್ಲಿ ಈ ವಂಶದಲ್ಲಿ ಮೊದಲು ಆಳಿದ ಅರಸನು ಮಹಾಮಂಡಲೇಶ್ವರ ವಿನಯಾದಿತ್ಯನೆಂದೂ ಅವನ ಹೆಂಡತಿ ಕೆಲಿಯಬ್ಬೆ ಅಥವಾ ಕೆಲಿಯಳಾ ದೇವಿಯಾಗಿದ್ದಳೆಂದೂ ಇದೆ. ಇವನು ಮಹಾಮಂಡಲೇಶ್ವರನಾಗಿ ಕ್ರಿ. ಶ. 1048ರಲ್ಲಿ ತಲಕಾಡು, ಸಾವಿಮಲೆ ಮುಂತಾದ ಪ್ರಾಂತ್ಯಗಳನ್ನು ಆಳುತ್ತಿದ್ದನೆಂದೂ ಮೈಸೂರಿನ ಸಿಂದಗೆರೆಯ ಶಾಸನದಲ್ಲಿದೆ. ಇವನು ಚೋಳ ಅರಸನ ಮಹಾಮಂಡಲೇಶ್ವರನಾಗಿದ್ದನೆಂದೂ ಇವನಿಗೆ ತ್ರಿಭುವನ ಮಲ್ಲನೆಂಬ ಹೆಸರಿತ್ತೆಂದೂ ಕಂಡುಬರುತ್ತದೆ.

**ಎರಿಯಂಗ** ಕ್ರಿ. ಶ. 1100—1103. ಎರಿಯಂಗನು ವಿನಯಾದಿತ್ಯನ ಹೆಂಡತಿಯಾದ ಕೇಲಿಯಳಾ ದೇವಿಯ ಮಗನು. ಎರಿಯಂಗನ ರಾಣಿಯು ಇಚ್ಚಲಾ ದೇವಿಯು. ಇವನಿಗೆ ವೀರಗಂಗನೆಂಬ ಬಿರುದು ಇತ್ತು. ಕಲ್ಯಾಣಿಯ ಚಾಲುಕ್ಯ ಅರಸನಾದ 1ನೇ ಅಥವಾ 2ನೇ ಸೋಮೇಶ್ವರ ಅಥವಾ 6ನೇ ವಿಕ್ರಮಾದಿತ್ಯನ ಸೇನಾಧಿಪತಿಯಾಗಿ ಎರಿಯಂಗನು ಪ್ರಖ್ಯಾತಿಪಟ್ಟಿದ್ದನೆಂದು ಶ್ರಾವಣಬೆಳುಗುಳದ ಶಾಸನದಲ್ಲಿದೆ.

**1ನೇ ಬಲ್ಲಾಳ** ಕ್ರಿ. ಶ. 1103—1117. ಎರಿಯಂಗನಿಗೆ ಇಚ್ಚಲಾ ದೇವಿಯಲ್ಲಿ ಮೂವರು ಗಂಡು ಮಕ್ಕಳು ಹುಟ್ಟಿದರು. (1) 1ನೇ ಬಲ್ಲಾಳ, (2) ವಿಷ್ಣುವರ್ಧನ, (3) ಉದಯಾದಿತ್ಯ.

ಹಿರೇಯುವನಾದ 1ನೇ ಬಲ್ಲಾಳನು ವೇಲಾಪುರದಲ್ಲಿ (ಬೇಲೂರು) ಆಳುತ್ತಿದ್ದನೆಂದೂ, ಇವನು ದಂಡನಾಯಕನಾದ ಮರಿಯಾನೆಯ ಮಕ್ಕಳಾದ ಪದ್ಮಲಾ ದೇವಿ, ಚಾವಳಿ ದೇವಿ, ಬೊಪ್ಪಾ ದೇವಿ ಎಂಬ ಮೂವರು ಅಕ್ಕತಂಗಿಯಂದಿರನ್ನು ಮದುವೆಯಾಗಿದ್ದನೆಂದೂ ಈ ಹೆಂಗಸರು ಗಾಯನದಲ್ಲಿಯೂ ವಿದ್ಯೆಯಲ್ಲಿಯೂ ಪ್ರವೀಣರಾಗಿದ್ದರೆಂದೂ ಸಿಂದಗೆರೆಯ ಶಾಸನದಲ್ಲಿದೆ. 1ನೇ ಬಲ್ಲಾಳನು ಪೊಟ್ಟಿ ಪೊಂಬುಚ್ಚ ಪುರದ (ಹುಂಬುಚ್ಚದ) ಜಗದೇವನನ್ನು ಸಿಂಹಾಸನದಿಂದ ತಳ್ಳಿದನೆಂಬೂ ಗದುಗಿನ ಒಂದು ಶಾಸನದಲ್ಲಿದೆ.

**ವಿಷ್ಣುವರ್ಧನ** ಕ್ರಿ. ಶ 1117—1140. 1ನೇ ಬಲ್ಲಾಳನ ತರುವಾಯ ಅವನ ತಮ್ಮನಾದ ವಿಷ್ಣುವರ್ಧನನಿಗೆ ಪಟ್ಟವಾಯಿತು. ಇವನಿಗೆ ಬಿಟ್ಟಿದೇವ ಅಥವಾ ಬಿಟ್ಟಿಗನೆಂಬ ಹೆಸರೂ ಇತ್ತು. ಇವನಿಗೆ "ತ್ರಿಭುವನಮಲ್ಲ" "ಭುಜಬಲ ವೀರಗಂಗ" "ತಲಕಾಡುಗೊಂಡ" "ಕಂಚಿಗೊಂಡ" ಮೊದಲಾದ ಬಿರುದುಗಳೂ ಇದ್ದವು. ಇವನಿಗೆ ಇಬ್ಬರು ರಾಣಿಯರು. ಒಬ್ಬಳು ಪಿರಿಯ ಹೆಗಡೆ ಮಾರಸಿಂಗಯ್ಯನ ಮಗಳೂ ಪ್ರಭಾಚಂದ್ರ ಸಿದ್ಧಾಂತ ದೇವನೆಂಬ ಜೈನಗುರುವಿನ ಶಿಷ್ಯಳೂ ಆದ ಶಾಂತಲಾದೇವಿಯು. ಇನ್ನೊಬ್ಬಳು 1ನೇ ನರಶಿಂಹನ ತಾಯಿಯಾದ ಲಕ್ಷ್ಮೀದೇವಿಯು. ವಿಷ್ಣುವರ್ಧನನು ತನ್ನ ಮಹಾ ಪ್ರಧಾನನೂ ದಂಡನಾಯಕನೂ ಆದ ಗಂಗನ ಸಹಾಯದಿಂದ ಗಂಗವಾಡಿಯ ರಾಜನನ್ನೂ, ನೊಳಂಬವಾಡಿಯ ಪಾಂಡ್ಯರಾಜನನ್ನೂ ಮೈಸೂರಿನ ಮಲೆನಾಡಿನ ಅರಸರನ್ನೂ ಜಯಿಸಿದನು. ಬೇಲೂರು ಮತ್ತು ಹಳೆಬೀಡಿನಲ್ಲಿ ಸಿಕ್ಕಿದ ಕ್ರಿ. ಶ 1117ನೇ ಎರಡು ಶಾಸನಗಳಿಂದ ಇವನು ವೇಲಾಪುರದಲ್ಲಿ ಆಳುತ್ತಿದ್ದಾಗ ಇವನ ರಾಜ್ಯವು ಪೂರ್ವ ದಿಕ್ಕಿನಲ್ಲಿ ಗಟ್ಟಿಗಳ ಕೆಳಗಿರುವ ನಂಗಳಿ, ದಕ್ಷಿಣದಲ್ಲಿ ಕೊಂಗು ಚೇರ, ಆನೆಮಲೆ, ಪಶ್ಚಿಮದಲ್ಲಿ ಬಾರಕೂರಿಗೆ ಇಳಿಯುವ ಘಟ್ಟದ ವರೆಗಿನ ದೇಶವೂ ಉತ್ತರದಲ್ಲಿ ಸಾವಿಮಲೆಯೂ ಇಷ್ಟರ ಒಳಗಿರುವ ಗಂಗವಾಡಿ



ವಿಷ್ಣುವರ್ಧನನು ಕಟ್ಟಿಸಿದ ಬೇಲೂರು ಚೆನ್ನಕೇಶವ ದೇವಸ್ಥಾನ

96 ಸಾವಿರ ಸೀಮೆಯನ್ನೂ, ಒಳಕೊಂಡಿತ್ತೆಂದು ತಿಳಿಯುತ್ತದೆ. ಅದಲ್ಲದೆ ತುಳು, ಮಲೆ ತಲಕಾಡು, ಕಂಚಿ, ಕೊಂಗ, ಚೋಳ, ಪಾಂಡ್ಯ, ಕೇರಳ, ಆಂಧ್ರ ಅರಸರನ್ನೂ, ಬನವಾಸಿಯ ಮತ್ತು ಗೋವೆಯ ಕದಂಬ ಅರಸರನ್ನೂ ಗೆದ್ದು ಅವರನ್ನು ತನ್ನ ಮಾಂಡಲಿಕರಾಗಿ ಮಾಡಿದನೆಂದೂ ಇದೆ. ಕ್ರಿ. ಶ. 1123ನೇ ಇಸವಿಯ ಶ್ರಾವಣ ಬೆಳುಗುಳದ ಶಾಸನ ದಿಂದಲೂ ಮೇಲಿನ ಸಂಗತಿಗಳು ಖಚಿತವಾಗುತ್ತವೆ. ಕ್ರಿ ಶ. 1131ನೇ ಇಸವಿಯ ಶ್ರಾವಣ ಬೆಳುಗುಳದ ಶಾಸನದಿಂದ, ವಿಷ್ಣುವರ್ಧನನು ಪಟ್ಟಪೆರುಮಾಳನನ್ನು ರಕ್ಷಿಸಿದನೆಂದೂ, ಚಕ್ರಗೊಟ್ಟವನ್ನು ಸುಟ್ಟನೆಂದೂ, ತೊಂಡ (ಪಲ್ಲವ) ಅರಸನ ರಾಜ್ಯವನ್ನು ಜಯಿಸಿದನೆಂದೂ, ಹನುಮ ಗಳನ್ನು ಹಿಡಿದನೆಂದೂ, ಕೊಂಗರನ್ನು ಕೊಂದನೆಂದೂ, ಹೆಂಜೇರು ಅರಸ ನನ್ನು ಓಡಿಸಿಬಿಟ್ಟನೆಂದೂ, ಸಾವಿಮಲೆಯನ್ನು ಸುಲಿಗೆಮಾಡಿದನೆಂದೂ, ಗಟ್ಟದ ಪ್ರದೇಶಗಳನ್ನು ಹಾಳುಮಾಡಿದನೆಂದೂ, ತುಳು ಅರಸರನ್ನೆಲ್ಲಾ ಸೆರೆಹಿಡಿದುಕೊಂಡು ಹೋದನೆಂದೂ, ಗೋವಿಂದವಾಡಿಯ ಅರಸನು ಇವನಿಗೆ ಹೆದರುತ್ತಿದ್ದನೆಂದೂ, ರಾಯರಾಯಪುರ (ತಲಕಾಡು) ವನ್ನು ನಾಶಮಾಡಿದನೆಂದೂ ತಿಳಿದುಬರುತ್ತದೆ. ಕ್ರಿ. ಶ. 1132ನೇ ಮತ್ತು ಕ್ರಿ. ಶ. 1137ನೇ ಇಸವಿಯ ಶಾಸನಗಳ ಪ್ರಕಾರ ಇವನು ತನ್ನ ರಾಜಧಾನಿಯಾದ ದ್ವಾರಸಮುದ್ರದಿಂದ, ಗಂಗವಾಡಿ 96 ಸಾವಿರ ಸೀಮೆಯನ್ನೂ, ನೊಳಂಬವಾಡಿ 32 ಸಾವಿರ ಸೀಮೆ ಯನ್ನೂ, ಬನವಾಸಿ 12 ಸಾವಿರ ಸೀಮೆಯನ್ನೂ, ಹನುಮಗಳ 500 ಸೀಮೆಯನ್ನೂ ಆಳುತ್ತಿದ್ದನೆಂದೂ ಸಿಂದ ಶಾಸನದಿಂದ ಇವನು ಚಿಂಗರಿ, ಚೇರ, ಚೋಳ, ಮಲೆಯ, ಮಲೆ, ಸಪ್ತ ತುಳು (ಬಂಗ, ಚೌಟ, ಅಜಿಲ, ಮೂಲ, ಸಾವಂತ, ತೋಳಾರ, ಬಿನ್ನಾಣ) ಕೊಲ್ಲ, ಪಲ್ಲವ, ಕೊಂಗು, ನೊಳಂಬವಾಡಿ, ಬನವಾಸಿ, ಕಡಂಬಳೆ, ಹೈವ (ಹೈಗ) ರಾಜ್ಯಗಳನ್ನು ಆಳುತ್ತಿದ್ದನೆಂದೂ ತಿಳಿದುಬರುತ್ತದೆ. ಇನ್ನು ಕ್ರಿ. ಶ. 1137, 1150, 1160, 1192ರ ಬೇರೆ

ಬಲ್ಲಾಳ ಅರಸರ ಕಾಲದ ಶಾಸನಗಳಿಂದಲೂ ಇವನು ಅನೇಕ ರಾಜ್ಯಗಳನ್ನು ಜಯಿಸಿದ್ದರಿಂದ ಪಶ್ಚಿಮ ಚಾಲುಕ್ಯರ ಪೆರಮಾದಿ ಎಂಬ 6ನೇ ವಿಕ್ರಮಾದಿತ್ಯ ಅರಸನು ವಿಷ್ಣುವರ್ಧನನನ್ನು ಬಹಳ ಮರ್ಯಾದೆಯಿಂದ ನಡಿಸಿದನೆಂದು ಕಾಣುತ್ತದೆ. ಇವನು ಮಹಾಮಂಡಲೇಶ್ವರನಾಗಿರದೆ ಸ್ವತಂತ್ರವಾಗಿ ಆಳುತ್ತಿದ್ದನು. ಇವನ ಕಾಲದಲ್ಲಿ ಮಹಾಮಂಡಲೇಶ್ವರನಾಗಿ ಕನ್ನಡ ಜಿಲ್ಲೆಯನ್ನು ಅಲೂಪ ಅರಸನಾದ ಭುಜಬಲ ಕವಿಯು ತನ್ನ ರಾಜಧಾನಿಯಾದ ಮಂಗಳೂರಲ್ಲಿ ಆಳಿಕೊಂಡಿದ್ದನು. ವಿಷ್ಣುವರ್ಧನನ ಮಹಾ ಪ್ರಧಾನಿಯೂ ಹಿರಿಯ ದಂಡನಾಯಕನೂ ಆದ ಗಂಗರಾಜನು ಗಂಗವಾಡಿಯ ಜೈನಚೈತ್ಯಾಲಯಗಳನ್ನೆಲ್ಲಾ ಜೀರ್ಣೋದ್ಧಾರ ಮಾಡಿಸಿದನು. ಇದಕ್ಕಾಗಿ ಈ ಪ್ರಧಾನಿಗೆ ವಿಷ್ಣುವರ್ಧನನು ಶ್ರಾವಣ ಬೆಳುಗುಳದ ಹತ್ತಿರವಿರುವ ಪರಮಾ ಎಂಬ ಗ್ರಾಮವನ್ನು ಉಂಬಳಿಯಾಗಿ ಬಿಟ್ಟನು.

ಬಿಟ್ಟಿಗನಾದ ವಿಷ್ಣುವರ್ಧನನು ರಾಮಾನುಜಾಚಾರ್ಯರ ಶಿಷ್ಯನಾಗಿ ಜೈನಮತವನ್ನು ತ್ಯಜಿಸಿ ಶ್ರೀ ವೈಷ್ಣವಮತವನ್ನು ಅವಲಂಬಿಸಿದನು. ಇವನು ಮೇಲುಕೋಟೆಯಲ್ಲಿ ಒಂದು ದೊಡ್ಡ ಕೆರೆಯನ್ನೂ ಗುರುಗಳಿಗೆ ಒಂದು ಮಠವನ್ನೂ ಬೇಲೂರಲ್ಲಿ ಕ್ರಿ. ಶ. 1140ರಲ್ಲಿ ಒಂದು ಚನ್ನಕೇಶವ ದೇವಸ್ಥಾನವನ್ನೂ ಕಟ್ಟಿಸಿದನು.

**ಉದಯಾದಿತ್ಯ.** ಇವನು ವಿಷ್ಣುವರ್ಧನನ ತಮ್ಮನು. ಇವನು ಪಟ್ಟಕ್ಕೆ ಬಂದ ಸಂಗತಿಯು ಸರಿಯಾಗಿ ತಿಳಿಯುವುದಿಲ್ಲ. ಉಡುಪಿಯ ಹತ್ತಿರವಿರುವ ಉದ್ಯಾವರ ಶಂಬುಕಲ್ಲು ಭೈರವ ದೇವಸ್ಥಾನದ ಹತ್ತಿರ ರಾಘವೇಂದ್ರ ಭಟ್ಟರ ಮನೆಯ ಹತ್ತಿರವಿರುವ ಶಿಲಾಶಾಸನದಲ್ಲಿ ಇವನು ಶಾ ಶ. 1036ನೇ ವಿಜಯ ಸಂವತ್ಸರದಲ್ಲಿ ಮಹಾಮಂಡಲೇಶ್ವರನಾಗಿ ತುಳು ರಾಜ್ಯವನ್ನು ಆಳುತ್ತಿದ್ದನೆಂದೂ ಉದ್ಯಾವರವು ರಾಜ್ಯಧಾನಿಯಾಗಿತ್ತೆಂದೂ, ಅಲೂಪ ಅರಸು ಕವಿ ಅಲುಪೇಂದ್ರನು ಇವನ ಕೈಕೆಳಗೆ ಮಂಡಲೇಶ್ವರನಾಗಿ ಆಳುತ್ತಿದ್ದನೆಂದೂ ಇದೆ.

**1ನೇ ನರಶಿಂಹ.** ಕ್ರಿ. ಶ. 1140—1172. ವಿಷ್ಣುವರ್ಧನನ ತರುವಾಯ ಅವನ ಮಗನಾದ 1ನೇ ನರಶಿಂಹನು ಮಹಾಮಂಡಲೇಶ್ವರನಾದನು. ಇವನಿಗೆ ತ್ರಿಭುವನಮಲ್ಲ ಭುಜಬಲ, ವೀರಗಂಗಾ, ಪ್ರತಾಪ ಹೊಯ್ಸಳನೆಂಬ ಬಿರುದುಗಳು ಇದ್ದವು. ಇವನ ಹೆಂಡತಿ ಇಚ್ಛಲಾದೇವಿ. ಶ್ರಾವಣ ಬೆಳುಗುಳದ ಒಂದು ಶಾಸನದಿಂದ ಇವನು ದಕ್ಷಿಣ ಮಹೀಮಂಡಲವನ್ನು ಆಳುತ್ತಿದ್ದನೆಂದು ಕಾಣುತ್ತದೆ. ಇವನ ಕಾಲದ ಕ್ರಿ. ಶ. 1159ನೇ ಇಸವಿಯ ಶಾಸನದಿಂದ ಇವನು ಪಶ್ಚಿಮ ಚಾಲುಕ್ಯರ ಕೈಕೆಳಗೆ ಮಹಾಮಂಡಲೇಶ್ವರನಾಗಿದ್ದನೆಂದೂ, ಕ್ರಿ. ಶ. 1169ರ ಸತ್ತೂರಿನ ಶಾಸನದಿಂದ ಇವನು ಸ್ವತಂತ್ರವಾಗಿ ಆಳುತ್ತಿದ್ದನೆಂದೂ ಕಾಣುತ್ತದೆ. ಯಾಕೆಂದರೆ, ಈ ಸಮಯದಲ್ಲಿ ಕಾಲಚೂರ್ಯರಿಗೂ ಚಾಲುಕ್ಯರಿಗೂ ಯುದ್ಧವಿತ್ತು. ನರಶಿಂಹನ ಕಾಲದಲ್ಲಿ ಹುಲ್ಲ ಹುಲ್ಲಪ್ಪ ಅಥವಾ ಹುಲಮಯ್ಯ ಎಂಬವನು ಮಹಾಪ್ರಧಾನ, ಸರ್ವಾಧಿಕಾರಿ, ಹಿರಿಯಭಂಡಾರಿ ಮತ್ತು ದಂಡನಾಯಕನಾಗಿದ್ದನೆಂದು ಶ್ರಾವಣ ಬೆಳುಗುಳದ 4 ಶಾಸನಗಳಿಂದ ತಿಳಿದುಬರುತ್ತದೆ. ಇನ್ನೊಂದು ಶಾಸನದಲ್ಲಿ ಕ್ರಿ. ಶ. 1169ರಲ್ಲಿ ಲಕ್ಷ್ಮಯ್ಯನು ಮಹಾಪ್ರಧಾನ, ಸರ್ವಾಧಿಕಾರಿ, ಸೇನಾಧಿಪತಿಯಾಗಿದ್ದನೆಂದೂ ತಿಳಿದುಬರುತ್ತದೆ. ಈ ನರಶಿಂಹನು ತುಳುರಾಜ್ಯದಲ್ಲಿ ಬೆಳತಂಗಡಿಯ ಹತ್ತಿರವಿರುವ ನರಶಿಂಹಗಡ (ಜಮಲಾಬಾದ) ಎಂಬ ಬೆಟ್ಟದಲ್ಲಿ ಒಂದು ಕೋಟೆಯನ್ನು ಕಟ್ಟಿಸಿ ಅದರ ಸುತ್ತಲೂ ದೊಡ್ಡ ಪಟ್ಟಣವನ್ನು ಕಟ್ಟಿಸಿ ಮೈಸೂರು ದೇಶದಿಂದ ಅನೇಕ ಮಂದಿ ಬ್ರಾಹ್ಮಣರನ್ನು ಕುಟುಂಬ ಸಹಿತ ಕರತಂದು ಅಲ್ಲಿ ನಿಲ್ಲಿಸಿದನು. ಇದರಲ್ಲಿ ಎಲ್ಲಾ ಜಾತಿಯವರ ಮನೆಗಳು ಸಾವಿರಕ್ಕಿಂತಲೂ ಹೆಚ್ಚಾಗಿದ್ದು ದೊಡ್ಡ ಪಟ್ಟಣವಾಯಿತು. ಶ್ರೀರಂಗ ಪಟ್ಟಣದ ಯುದ್ಧದ ವರೆಗೆ ಈ ಪಟ್ಟಣವು ಒಳ್ಳೇ ರೀತಿಯಲ್ಲಿತ್ತು. ಅನಂತರ ನಾಶವಾಗಿ ಈಗ ಕಾಡು ಬೆಳದಿದೆ. ಇವನ ತಂದೆಯಾದ ವಿಷ್ಣುವರ್ಧನನು ತುಳುರಾಜ್ಯದ ಜೈನ ಅರಸರನ್ನು ಸೆರೆಹಿಡಿದುಕೊಂಡು

ಹೋಗಿದ್ದನು. ಆದರೆ ನರಶಿಂಹನು ಅವರವರ ರಾಜ್ಯಗಳನ್ನು ಅವರವರಿಗೆ ಬಿಟ್ಟುಕೊಟ್ಟನು. ಇವನು ಚಂದ್ರಶೇಖರ ಅರಸನ ಮಗನಿಗೆ ತಾನು ಕ್ರಿ. ಶ. 1157ರಲ್ಲಿ ಮೇಲ್ಬಂಗಾಡಿಗೆ ಬಂದಾಗ, ಮೇಲ್ಬಂಗಾಡಿ, ಬೆಳತಂಗಡಿ, ಕೆಳಬಂಗಾಡಿ, ಮಾಯಬಳಲು, ಪುತ್ತೂರು, ಉಪ್ಪಿನಂಗಡಿ, ಬಂಟವಾಳ, ಮೊಗರ್ನಾಡು, ಮರ್ಕಾಡಿ, ಕೂಳೂರು, ಕೊಡಿಯಾಲ, ಮಂಜೇಶ್ವರ, ಹರೆಕಳ ಇಷ್ಟು ಮಾಗಣೆಗಳನ್ನು ಬಿಟ್ಟುಕೊಟ್ಟು ಆ ಮಗುವಿಗೆ ವೀರ ನರಶಿಂಹ ಬಂಗ ಎಂಬ ಪಟ್ಟದ ಹೆಸರಿನಿಂದ ಪಟ್ಟ ಕಟ್ಟಿ, ಅನೇಕ ಬಿರುದು ಜಾವಲಿಗಳನ್ನು ಕೊಟ್ಟನು ಎಂದು ಬಂಗರ ಚರಿತ್ರೆಯಲ್ಲಿದೆ.

**2ನೇ ವೀರಬಲ್ಲಾಳ.** (ಕ್ರಿ. ಶ. 1172–1210). 1ನೇ ನರಶಿಂಹನ ಮಗನಾದ 2ನೇ ಬಲ್ಲಾಳನು ವೀರಬಲ್ಲಾಳನೆಂಬ ಹೆಸರಿನಿಂದ ಪಟ್ಟಕ್ಕೆ ಬಂದನು. ಆಗ ಇವನು ಮಹಾಮಂಡಲೇಶ್ವರನಾಗಿಯೇ ಇದ್ದನು. ಇವನಿಗೂ ತ್ರಿಭುವನಮಲ್ಲ, ಭುಜಬಲ ವೀರಗಂಗಾ, ಪ್ರತಾಪಹೊಯ್ಸಳ, ಯಾದವನಾರಾಯಣ ಮುಂತಾದ ಬಿರುದುಗಳು ಇದ್ದವು. ರೆವಮ್ಮಾದೇವಿ, ಕೇತಳಾದೇವಿ, ಪದುಮಲಾದೇವಿ ಎಂಬ ಮೂರು ಮಂದಿ ಇವನ ರಾಣಿಯವರು. ಈತನು ಕ್ರಿ ಶ. 1173ರಿಂದ 1181ರ ವರೆಗೆ ಪಶ್ಚಿಮ ಚಾಲುಕ್ಯರ ಮಹಾಮಂಡಲೇಶ್ವರನಾಗಿ ದ್ವಾರಸಮುದ್ರದಲ್ಲಿ ಆಳುತ್ತಿದ್ದನೆಂದೂ ಭುಜಗಂದನಪುರ ಮತ್ತು ಶ್ರಾವಣಬೆಳುಗುಳದ ಶಾಸನದಿಂದ ತಿಳಿಯಬಹುದು. ಕ್ರಿ. ಶ. 1191ರಲ್ಲಿ ಪಶ್ಚಿಮ ಚಾಲುಕ್ಯ 4ನೇ ಸೋಮೇಶ್ವರನ ಸೇನಾಧಿಪತಿಯಾದ ಬ್ರಹ್ಮನನ್ನು ಧಾರವಾಡದ ಹತ್ತಿರ ಜಯಿಸಿ, ದೇವಗಿರಿ ಯಾದವರ ಅರಸನಾದ ಬಿಲ್ಲಣ್ಣನನ್ನು ಗೆದ್ದನೆಂದೂ, ಕ್ರಿ. ಶ. 1192ರ ಗದಗಿನ ಶಾಸನದಿಂದ ತಿಳಿದುಬರುತ್ತದೆ. ಈ ಸಮಯದಲ್ಲಿ ಇವನು ಸ್ವತಂತ್ರ ಅರಸನಾಗಿ, ಸಮಸ್ತ ಭುವನಾಶ್ರಯ, ಶ್ರೀ ಪ್ರಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮ ಭಟ್ಟಾರಕ, ಭುಜಬಲ ಹೊಯ್ಸಳ ಚಕ್ರವರ್ತಿ ಮುಂತಾದ ಬಿರುದುಗಳನ್ನು

ಧರಿಸಿ, ತನ್ನದೇ ಒಂದು ಶಕವನ್ನು ಉಂಟುಮಾಡಿದನು. ಕ್ರಿ. ಶ. 1175ರಲ್ಲಿ ಬಿಟ್ಟಿಮಯ್ಯನೂ, ಕ್ರಿ. ಶ. 1184ರಲ್ಲಿ ಗಡದ ಸಿಂಗಯ್ಯನೂ ಕ್ರಿ. ಶ. 1192ರಲ್ಲಿ ಇರಿಯಣ ಅಥವಾ ಇರಗನೂ, ಕ್ರಿ. ಶ. 1195ರಲ್ಲಿ ಅಮರ್ಗತಿವಾಳನೂ, ಕ್ರಿ.ಶ. 1197ರಲ್ಲಿ ಕುಮಾರಲಕ್ಷ್ಮೀದೇವನೂ, ಕ್ರಿ.ಶ. 1202ರಲ್ಲಿ ಅಮೃತೇಶ್ವರನೂ, ಕ್ರಿ.ಶ. 1203ರಲ್ಲಿ ಮಲ್ಲಣ್ಣನೂ 1208ರಲ್ಲಿ ಬಲ್ಯಾಯನೂ ಸರ್ವಾಧಿಕಾರಿ, ದಂಡನಾಯಕ, ಮಹಾಪ್ರಧಾನರಾಗಿದ್ದ ರೆಂದು ಬೇರೆ ಬೇರೆ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ. ಶ. 1196ರಲ್ಲಿ ಹಂಗಳದ ಕಾಮದೇವನು ಹನುಮಗಳದಲ್ಲಿ ಮಹಾಮಂಡಲೇಶ್ವರನಾಗಿ ಬನವಾಸಿ ಸೀಮೆಯನ್ನೂ, ತುಳುರಾಜ್ಯವನ್ನೂ ಆಳುತ್ತಿದ್ದನು. ಉಡುಪಿಯ ಹತ್ತಿರವಿರುವ ಉದ್ಯಾವರದ ಶಂಭುಕಲ್ಲು ಭೈರವ ದೇವಸ್ಥಾನದ ಒಂದು ಶಾಸನದಲ್ಲಿ ಕನ್ನಡ ಜಿಲ್ಲೆಯನ್ನು ಇರಗನ ಕೈಕೆಳಗೆ ಮಂಡಲೇಶ್ವರ ನಾಗಿ ಅಲೂಪ ಅರಸು ಪ್ರಥ್ವಿ ಸಾಗರನು ಉದ್ಯಾವರದಲ್ಲಿ ಆಳುತ್ತಿದ್ದ ನೆಂದು ಕಾಣುತ್ತದೆ. ಕ್ರಿ. ಶ. 1192ರಲ್ಲಿ ಇರಗನು ಬನವಾಸಿ 12 ಸಾವಿರ ಸೀಮೆಯನ್ನೂ ಸಾಂತಳಿಗೆ ಸಾವಿರ ಸೀಮೆಯನ್ನೂ ಆಳು ತ್ತಿದ್ದನು. ಈ ಅರಸನು ಕ್ರಿ. ಶ. 1211ರ ಒಕ್ಟೋಬರ 23ರಲ್ಲಿ ಕಾಲವಾದನೆಂದು ನಾಗವಿ ಶಾಸನದಿಂದ ಕಾಣುತ್ತದೆ.

2ನೇ **ನರಶಿಂಹ.** ಕ್ರಿ. ಶ. 1211. ಇವನ ಕಾಲದ ಕ್ರಿ. ಶ. 1224ರ ಹರಿಹರದ ಶಾಸನವೂ, ಕ್ರಿ. ಶ. 1231ರ ಶ್ರಾವಣಬೆಳುಗುಳದ ಶಾಸನವೂ ಕ್ರಿ. ಶ. 1234ರ ಬಸರಾಲದ ಶಾಸನಗಳು ಮಾತ್ರವೇ ಸಿಕ್ಕಿಯವೆ. ಇವುಗಳಿಂದ ಇವನ ಆಳಿಕೆಯ ಸಮಯವು ತಿಳಿಯುವ ದಿಲ್ಲ. ಇವನು 2ನೇ ವೀರಬಲ್ಲಾಳನ ಹೆಂಡತಿ ಪದುಮಲಾದೇವಿಯ ಮಗನು. ಇವನು ತನ್ನ ಆಳಿಕೆಯ ಕಾಲದಲ್ಲಿ ವರದಾ ಮತ್ತು ತುಂಗ ಭದ್ರಾ ನದಿಯ ಉತ್ತರದಿಕ್ಕಿನ ರಾಜ್ಯವನ್ನು ಕಳಕೊಂಡನು. ಇವನ ರಾಣಿ ಕಾಲಳೆದೇವಿ. ಮಗನು ಸೋಮೇಶ್ವರ. ಇವನು ಕ್ರಿ. ಶ. 1224ರಿಂದ 1234ರ ವರೆಗೆ ಸ್ವತಂತ್ರನಾಗಿದ್ದನೆಂದೂ, ಇವನಿಗೆ ಮಸ್ತ ಭುವನಾಶ್ರಯ

ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ, ಪರಮೇಶ್ವರ ಮುಂತಾದ ಬಿರುದುಗಳು ಇದ್ದವೆಂದೂ ಹರಿಹರ ಮತ್ತು ಶ್ರಾವಣಬೆಳುಗೊಳದ ಶಾಸನಗಳಿಂದ ತಿಳಿಯಬಹುದು. ರಾಜಧಾನಿಯು ದ್ವಾರಸಮುದ್ರವೇ ಆಗಿತ್ತು. ಕ್ರಿ. ಶ. 1234ರ ಬಸರಾಲಿನ ಶಾಸನದಲ್ಲಿ ಇವನು ಮಂಡ ಲೇಶ್ವರನಾಗಿದ್ದನೆಂದು ಇದೆ. ಆಂಧ್ರದೇಶದ ನಾರಾಯಣಪುರದ ಅತ್ತಿರಸನ ಮಗ ಪೊಳಾಳ್ವನು ಇವನ ಮಹಾಪ್ರಧಾನನೂ, ದಂಡನಾಯಕನೂ ಆಗಿದ್ದನು. ಇವನು ವೈಷ್ಣವರ ಶಿಖಾಮಣಿಯಾಗಿದ್ದನು. ಅದಾಯಿಡದ ಹರಿಹರನೂ ಮಹಾಪ್ರಧಾನನೂ ದಂಡನಾಯಕನೂ ಆಗಿದ್ದನು.

**ವೀರಸೋಮೇಶ್ವರ.** 2ನೇ ನರಶಿಂಹನು ಕಾಲವಾಗಲು ಅವನ ಮಗನಾದ ಸೋಮ ಅಥವಾ ಸೊಯಿದೇವನು ವೀರಸೋಮೇಶ್ವರ ನೆಂಬ ಹೆಸರಿನಿಂದ ಪಟ್ಟಕ್ಕೆ ಬಂದನು. ಇವನ ರಾಣಿ ಸೋಮಳಾದೇವಿ. ಇನ್ನೊಬ್ಬಳು ಬಿಜ್ಜಳರಾಣಿ. ಇವಳ ಮಗನು 3ನೇ ನರಶಿಂಹನು. ಇವರಿಬ್ಬರಲ್ಲದೆ ದೇವಳಮಹಾದೇವಿ ಎಂಬ ಚಾಲುಕ್ಯವಂಶದ ರಾಣಿಯೂ ಇದ್ದಳು. ಇವಳ ಮಗನು ವೀರರಾಮನಾಥ. 2ನೇ ನರಶಿಂಹನ ಕಾಲದಲ್ಲಿದ್ದ ಹರಿಹರನು ಮಹಾಪ್ರಧಾನನೂ, ಪರಮವಿಶ್ವಾಸಿಯೂ, ದಂಡನಾಯಕನೂ ಆಗಿದ್ದನು. ಇವನು ದೇವಗಿರಿಯಾದವ ಅರಸನಾದ ಕೃಷ್ಣಕಂದಾರನೊಡನೆ ಯುದ್ಧವನ್ನು ಮಾಡಿ ಗೆದ್ದನು.

**3ನೇ ನರಶಿಂಗ.** ಕ್ರಿ. ಶ. 1254–1290. ಸೋಮೇಶ್ವರನ ತರುವಾಯ ಅವನ ಮಗನಾದ ವೀರನರಶಿಂಗನು ಪಟ್ಟಕ್ಕೆ ಬಂದನು. ಇವನು ದ್ವಾರಸಮುದ್ರದಲ್ಲಿಯೇ ಆಳುತ್ತಿದ್ದನು. ಪೆರುಮಲೆದೇವನು ಅಥವಾ ರಾವುತರಾಯನು ಇವನ ಮಹಾಪ್ರಧಾನನೂ ದಂಡ ನಾಯಕನೂ ಆಗಿದ್ದನು.

**3ನೇ ವೀರಬಲ್ಲಾಳ.** ಕ್ರಿ. ಶ. 1292–1336. 3ನೇ ನರಶಿಂಹನು ಕಾಲವಾಗಲು ಇವನ ಮಗನಾದ ವೀರಬಲ್ಲಾಳನು

ಪಟ್ಟಕ್ಕೆ ಬಂದನು. 1310ರಿಂದ 1336ರ ವರೆಗೆ ದ್ವಾರಸಮುದ್ರವೇ ರಾಜಧಾನಿಯಾಗಿತ್ತೆಂದೂ ತಿಗದಳ್ಳಿ ಮತ್ತು ಹೆಮ್ಮರಗಳ ಎಂಬ ಮೈಸೂರಿನ ಹಳ್ಳಿಗಳಲ್ಲಿ ಸಿಕ್ಕಿದ ಶಾಸನಗಳಿಂದ ತಿಳಿಯಬಹುದು. ಕ್ರಿ. ಶ. 1310ರ ನಂತರ ಇವನಿಗೆ ಹೆಚ್ಚಿನ ರಾಜ್ಯವು ಉಳಿಯಲಿಲ್ಲ. ಯಾಕಂದರೆ ಡಿಲ್ಲಿಯ ಅಫಘಾನ ಅರಸನಾದ ಅಲ್ಲಾವುದ್ದೀನ ಖಿಲ್ಜಿಯ ಸೇನಾಧಿಪತಿಯಾದ ಮಲ್ಲಿಕಾಫರನು ಮತ್ತು ಖ್ವಾಜಿಹಾಜಿಯೂ ಹೊಯ್ಸಳ ರಾಜ್ಯವನ್ನು ಸುಲಿಗೆಮಾಡಿ ದ್ವಾರಸಮುದ್ರವನ್ನು ಹಿಡಿದು ವೀರಬಲ್ಲಾಳ ನನ್ನು ಯುದ್ಧದಲ್ಲಿ ಸೋಲಿಸಿ ಸೆರೆಹಿಡಿದು ರಾಜಧಾನಿಯನ್ನು ಸುಲಿಗೆ ಮಾಡಿ ನಂತರ ವೀರಬಲ್ಲಾಳನನ್ನು ಸೆರೆಯಿಂದ ಬಿಟ್ಟರು. ಅನಂತರ ವೀರಬಲ್ಲಾಳನು ಸ್ವಲ್ಪ ಸಮಯದ ವರೆಗೆ ಬೇಲೂರಲ್ಲಿ ಆಳುತ್ತಿದ್ದನು. ಕ್ರಿ. ಶ. 1327ರಲ್ಲಿ ಮಹಮ್ಮದ ತೊಗ್ಲಕನ ಕಾಲದಲ್ಲಿ ಮುಸಲ್ಮಾನರು ದ್ವಾರಸಮುದ್ರವನ್ನು ಪೂರ್ಣ ನಾಶಮಾಡಿದ ಮೇಲೆ, ಶ್ರೀರಂಗಪಟ್ಟಣದ ಹತ್ತಿರವಿರುವ ತೊಂಡನೂರಲ್ಲಿ (ತೊನ್ನೂರು) ಇವನೂ ಇವನ ವಂಶದ ಅರಸರೂ 50 ವರ್ಷಗಳ ವರೆಗೆ ಆಳಿದರು. 3ನೇ ವೀರಬಲ್ಲಾಳನ ಒಂದು ಶಾಸನವು ಮೂಡಬಿದರೆ ಗುರುಗಳ ಬಸದಿಯಲ್ಲಿದೆ. ಇದರ ಪ್ರಕಾರ ಶಾ. ಶ. 1263ನೇ ವಿಷು ಸಂವತ್ಸರದಲ್ಲಿ (ಕ್ರಿ. ಶ. 1341) ಬಸದಿಗೆ ಭತ್ತದಾನವನ್ನು ಮಾಡಿರುತ್ತಾನೆ. ಆ ಸಮಯದಲ್ಲಿ ದೇವಪ್ಪನು ದಂಡನಾಯಕನಾಗಿದ್ದನು. ಇನ್ನೊಂದು ಶಾಸನವು ಬಾರಕೂರು ಮೂಡಕೇರಿ ಸೋಮೇಶ್ವರ ದೇವಸ್ಥಾನದಲ್ಲಿದೆ. ಇದರ ಪ್ರಕಾರ ಶಾ. ಶ. 1258ನೇ ಧಾತು ಸಂವತ್ಸರದಲ್ಲಿ (ಕ್ರಿ ಶ. 1336) ಸೋಮೇಶ್ವರ ದೇವಸ್ಥಾನಕ್ಕೆ ಭತ್ತದಾನವನ್ನು ಮಾಡಿರುತ್ತಾನೆ. ಈ ಸಮಯ ದಲ್ಲಿ ವೈಚಪ್ಪನು ದಂಡನಾಯಕನೂ, ಅಜ್ಜನಸಾನಿಯು ಪ್ರಧಾನಿಯೂ ಆಗಿದ್ದರೆಂದು ಕಾಣುತ್ತದೆ.

ಕಟ್ಟೋಣಗಳನ್ನು ಕಟ್ಟುವುದರಲ್ಲಿ ಚಾಲುಕ್ಯರ ಕ್ರಮವೆಂಬುದು ಬಹಳ ವಿಶೇಷವಾದದ್ದು. ಈ ಕ್ರಮವು ಹೊಯ್ಸಳರ ಕಾಲದಲ್ಲಿ ಪೂರ್ಣ

ಸ್ಥಿತಿಯನ್ನು ಹೊಂದಿತು. ಹೊಯ್ಸಳ ಅರಸರು ಬಹಳ ಅಂದವಾದ ಶಿಲಾಮಯ ದೇವಸ್ಥಾನಗಳನ್ನು ಕಟ್ಟಿಸುವುದರಲ್ಲಿ ಹೆಚ್ಚು ಹಣವನ್ನು ಖರ್ಚುಮಾಡಿದ್ದಾರೆ. ದಕ್ಷಿಣ ಹಿಂದೂಸ್ಥಾನದಲ್ಲಿ ಇರುವ ದೇವಸ್ಥಾನ



ಹಳೇಬೀಡು ಹೊಯ್ಸಳೇಶ್ವರ ದೇವಸ್ಥಾನ.

ಗಳಲ್ಲಿ ಹಳೇಬೀಡಿನ (ದ್ವಾರಸಮುದ್ರ) ಹೊಯ್ಸಳೇಶ್ವರನ ದೇವಸ್ಥಾನದಲ್ಲಿನ ಕೆತ್ತನೆಯ ಕೆಲಸದಷ್ಟು ಸೂಕ್ಷ್ಮ ಕೆಲಸವು ಬೇರೆ ಎಲ್ಲಿಯೂ ಇಲ್ಲ. ಈ ದೇವಸ್ಥಾನವನ್ನು ಕ್ರಿ. ಶ. 1100ರಲ್ಲಿ ವಿನಯಾದಿತ್ಯನ ಕಾಲದಲ್ಲಿ ಪ್ರಾರಂಭಿಸಿದರು. ಆದರೆ ಇದರ ಕೆಲಸವು ಹೊಯ್ಸಳರ ಕಡೆಯ ಅರಸನ ವರೆಗೂ ತೀರಲಿಲ್ಲ. ಇನ್ನೊಂದು ಬೇಲೂರಲ್ಲಿರುವ ಚನ್ನಕೇಶವ ದೇವಸ್ಥಾನ. ವಿಷ್ಣುವರ್ಧನನು ರಾಮಾನುಜಾಚಾರ್ಯರ ಶಿಷ್ಯನಾಗಿ ವೈಷ್ಣವನಾದ ಮೇಲೆ ಈ ದೇವಸ್ಥಾನವನ್ನು ಕ್ರಿ. ಶ. 1140ರಲ್ಲಿ ಕಟ್ಟಿಸಿದನು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೊಯ್ಸಳೇಶ್ವರ ದೇವಸ್ಥಾನದ

ಆಕಾರದಲ್ಲಿ ಕಾರ್ಕಳ ಚತುರ್ಮುಖ ಬಸದಿಯನ್ನು ಕಟ್ಟಿರುತ್ತಾರೆ. ಕದರೆ ಮಂಜುನಾಥ ದೇವಸ್ಥಾನವನ್ನೂ, ಕಾರಂಜಿ ದೇವಸ್ಥಾನವನ್ನೂ ವೇಣೂರಲ್ಲಿರುವ ಶಾಂತೇಶ್ವರ ಬಸದಿಯನ್ನೂ ಸುರಾಲ ಮಹಾದೇವ ದೇವಸ್ಥಾನವನ್ನೂ ಚಾಲುಕ್ಯರ ಕಟ್ಟೋಣದ ರೀತಿಯಲ್ಲಿಯೇ ಕಟ್ಟಿರುತ್ತಾರೆ.

# ದ್ವಾರಸಮುದ್ರದ ಹೊಯ್ಸಳರು.

ವಿನಯಾದಿತ್ಯ. ರಾಣಿ. ಕೇಲಿಯಳಾದೇವಿ (ಕ್ರಿ. ಶ. 1048)

ಎರಿಯಂಗ. ರಾಣಿ ಇಚ್ಚಲಾ ದೇವಿ

1ನೇ ಬಲ್ಲಾಳ ರಾಣಿಯರು
(1) ಪದ್ಮಲಾ ದೇವಿ (2) ಚಾವಳಿ ದೇವಿ
(3) ಬೊಪ್ಪಾ ದೇವಿ (ಕ್ರಿ. ಶ 1103

ಉದಯಾದಿತ್ಯ

ಶ್ರೀ ಭುವನ ಮಲ್ಲ ಭುಜಬಲ ವೀರ ಗಂಗ ವಿಷ್ಣುವರ್ಧನ, ರಾಣಿಯರು
ಶಾಂತಲಾ ದೇವಿ ಮತ್ತು ಲಕ್ಷ್ಮೀದೇವಿ. (ಕ್ರಿ. ಶ. 1117-1137)

ತ್ರಿಭುವನ ಮಲ್ಲ ಭುಜಬಲ ವೀರಗಂಗ 1ನೇ ನರಶಿಂಹ, ರಾಣಿ
ಇಚ್ಚಲಾ ದೇವಿ. (ಕ್ರಿ. ಶ. 1150-1169)

ತ್ರಿಭುವನ ಮಲ್ಲ, ಭುಜಬಲ ವೀರಗಂಗ, 2ನೇ ವೀರ ಬಲ್ಲಾಳ, ರಾಣಿಯ
(1) ರೆವ್ಮಾ ದೇವಿ (2) ಕೇತಲಾ ದೇವಿ (3) ಪದ್ಮಲಾ ದೇವಿ
(ಕ್ರಿ. ಶ. 1173-1191 ಅಥವಾ ಸುಮಾರು 1212ರ ವರೆಗೆ)

2ನೇ ನರಶಿಂಹ, ರಾಣಿ, ಕಾಲಳಿ ದೇವಿ (ಕ್ರಿ. ಶ. 1224-1234)

ವೀರ ಸೋಮೇಶ್ವರ ರಾಣಿಯರು (1) ಸೋಮಳಾ ದೇವಿ (2) ಬಿಜ್ಜಳಾ ರಾಣಿ
(3) ದೇವಳ ಮಹಾದೇವಿ (ಕ್ರಿ. ಶ. 1234-5-1253)

ಬಿಜ್ಜಳ ರಾಣಿಯಿಂದ

ದೇವಳ ಮಹಾ ದೇವಿಯಿಂದ

3ನೇ ವೀರ ನರಶಿಂಹ (ಕ್ರಿ. ಶ. 1254-1290)

ವೀರ ರಾಮನಾಥ

ಪೊನ್ನಂಬಳಾ

3ನೇ ವೀರ ಬಲ್ಲಾಳ
(ಕ್ರಿ. ಶ.1310)

# 15ನೇ ಅಧ್ಯಾಯ.

## ಮಧ್ವಾಚಾರ್ಯರು.

ಮಧ್ವಾಚಾರ್ಯರು ಕ್ರಿ. ಶ. 1199ನೇ ಇಸವಿಗೆ ಸರಿಯಾದ ವಿಳಂಬಿ ಸಂವತ್ಸರದ ಆಶ್ವೀಜ ಶುದ್ಧ ದಶಮಿಯು ಬುಧವಾರ ದಿನ ಜನ್ಮವೆತ್ತಿದರು. ಇವರ ತಂದೆತಾಯಿಗಳು ಕೇವಲ ಬಡವರು. ಇವರು ಉಡುಪಿಯ ನೈರುತ್ಯಕ್ಕೆ ಇರುವ "ಬೆಳ್ಳೆ" ಎಂಬ ಗ್ರಾಮದಲ್ಲಿ (ಪಡು ಬಿದರೆ ಶೀಮೆ) ಮಟ್ಟೆ ಅಥವಾ ಪಾಜಕ ಕ್ಷೇತ್ರವೆಂಬ ಹೆಸರಿರುವ ಸ್ಥಳದಲ್ಲಿ ವಾಸಮಾಡಿಕೊಂಡಿದ್ದರು. ಮಧ್ವಾಚಾರ್ಯರ ತಂದೆಯವರು ಬಡವರಾಗಿದ್ದರೂ ವೇದವೇದಾಂಗಗಳನ್ನು ಓದಿ ವಿಶೇಷ ಪಾಂಡಿತ್ಯವುಳ್ಳವರಾಗಿಯೂ ಜನಾನುರಾಗವುಳ್ಳವರಾಗಿಯೂ ಇದ್ದರು. ಇವರ ಹೆಸರು **ಮಧ್ಯಗೇಹ** ಭಟ್ಟರು. ಇದು ನಿಜವಾದ ಹೆಸರಲ್ಲ. ರೂಢಿಯಲ್ಲಿರುವ ಮಾತು **ನಡುಮನೆಯವ**ರೆಂತಾಗುತ್ತದೆ. ಮಧ್ವಾಚಾರ್ಯರ ತಾಯಿಯ ಹೆಸರು ವೇದವತಿ; ಈಕೆಗೆ ರೇಣುಕೆ ಎಂಬ ಮತ್ತೊಂದು ಹೆಸರಿತ್ತು. ಈಕೆಯು ಸತ್ಕುಲಪ್ರಸೂತಳು; ಒಳ್ಳೇ ಗುಣಾಢ್ಯಳು. ಮಧ್ವಾಚಾರ್ಯರಿಗೆ ಸಣ್ಣ ಪ್ರಾಯದಲ್ಲಿ ವಾಸುದೇವನೆಂಬ ಹೆಸರಿತ್ತು. ಇವರಿಗೆ ಚಿಕ್ಕ ವಯಸ್ಸಿನಲ್ಲಿಯೇ ಉಪನಯನವಾಯಿತು. ಇವರು ಒಂಬತ್ತು ವರುಷ ವಯಸ್ಸಾಗುವದರೊಳಗಾಗಿ ವಿದ್ಯಾಭ್ಯಾಸವನ್ನು ಮುಗಿಸಿ ಸಂಸ್ಕೃತ ಕಾವ್ಯಗಳಲ್ಲಿ ಪಾರಂಗತರಾದರು. ಅನಂತರ ಇವರು ಉಪನಿಷತ್ತುಗಳನ್ನು ಕಲಿತರು. ಬಳಿಕ ಇವರು ಸನ್ಯಾಸಿಯಾಗಿ ಬಾದರಾಯಣನ ಬ್ರಹ್ಮಸೂತ್ರಗಳಲ್ಲಿರುವ ವೇದವಚನಗಳನ್ನು ಸಾಮಾನ್ಯಜನರಿಗೆ ತಿಳಿಯಪಡಿಸಬೇಕೆಂದು ನಿಶ್ಚಯಿಸಿದರು. ವಾಸುದೇವನಿಗೆ ಉಪದೇಶಮಾಡುವುದಕ್ಕಾಗಿ ಯೋಗ್ಯವಾದ ಗುರುಗಳು ಬೇಕಾಗಿದ್ದರು. ಈ ಸಮಯದಲ್ಲಿ ಶಂಕರಾಚಾರ್ಯರ ಮತಕ್ಕೆ ಸೇರಿದ ಅಚ್ಯುತಪ್ರೇಕ್ಷಾಚಾರ್ಯ ಎಂಬ ಗುರುಗಳು ಈಗಿನ ಅನಂತೇಶ್ವರ ದೇವಸ್ಥಾನದಲ್ಲಿದ್ದರು.

ವಿದ್ಯೆಯಲ್ಲಿ ಪಾಂಡಿತ್ಯವನ್ನು ಹೊಂದಿದರೂ ಇವರು ತಂದೆಗೆ ಒಬ್ಬನೇ ಮಗನಾದ್ದರಿಂದ ಇವರ ತಂದೆತಾಯಿಗಳಿಗೆ ಇನ್ನೊಬ್ಬ ಗಂಡು ಮಗನು ಹುಟ್ಟುವವರೆಗೆ ಇವರಿಗೆ ಸನ್ಯಾಸದೀಕ್ಷೆಯನ್ನು ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ. ಸಾಧಾರಣಸಂವತ್ಸರದ ಆಷಾಢ ಬ| ೪ಯ ದಿನ ವಾಸುದೇವನು ತನ್ನ 12ನೇ ವರುಷ ಪ್ರಾಯದಲ್ಲಿ ಆಶ್ರಮವನ್ನು ಸ್ವೀಕರಿಸಿದನು. ಅಚ್ಯುತಪ್ರೇಕ್ಷಾಚಾರ್ಯರು ವಾಸುದೇವನಿಗೆ ಆಶ್ರಮವನ್ನು ಕೊಟ್ಟು ಪೂರ್ಣಪ್ರಜ್ಞನೆಂದು ಹೆಸರಿಟ್ಟರು. ಪೂರ್ಣಪ್ರಜ್ಞರು ಕೆಲವು ವರುಷಗಳ ವರೆಗೆ ಬಾದರಾಯಣ ಸೂತ್ರಗಳಿಗೆ ನಾನಾ ಭಾಷ್ಯಕಾರರು ಕೊಟ್ಟಿರುವ ವ್ಯಾಖ್ಯಾನಗಳನ್ನು ಓದಿ ಅವುಗಳ ವಿಷಯ ಚಿಂತನೆಮಾಡುತ್ತಿದ್ದರು. ಶಂಕರಾಚಾರ್ಯರ ಅದ್ವೈತಸಿದ್ಧಾಂತದ ವಿಷಯ ಇವರಿಗೆ ಏನೂ ಸಮಾಧಾನವಿರಲಿಲ್ಲ. ಆ ಸಮಯದಲ್ಲಿ ಈ ಕನ್ನಡ ಜಿಲ್ಲೆಯು ಹೊಯಿಸಳ ಬಲ್ಲಾಳ ರಾಜನಾದ ಬಿಟ್ಟಿದೇವನ ಕೈಕೆಳಗಿತ್ತು. ಬಿಟ್ಟಿದೇವನು ರಾಮಾನುಜಾಚಾರ್ಯರ ಮತವನ್ನು ಅವಲಂಬಿಸಿ ಶ್ರೀ ವೈಷ್ಣವನಾಗಿ ವಿಷ್ಣುವರ್ಧನನೆಂಬ ಹೆಸರನ್ನಿಟ್ಟುಕೊಂಡು ಈ ಜಿಲ್ಲೆಗೂ ಶ್ರೀ ವೈಷ್ಣವ ಮತಪ್ರಸಾರಕರನ್ನು ಕಳುಹಿಸಿ ಅದನ್ನು ಇಲ್ಲಿಯೂ ಬೋಧಿಸಲಾರಂಭಿಸಿದನು. ಆಗ ಪೂರ್ಣಪ್ರಜ್ಞರಿಗೆ, ತಾನೂ ಒಂದು ತರದ ವೈಷ್ಣವ ಮತವನ್ನು ಸ್ಥಾಪಿಸಬೇಕೆಂಬ ಆಲೋಚನೆಯು ಹುಟ್ಟಿತು.

ಅಚ್ಯುತಪ್ರೇಕ್ಷಾಚಾರ್ಯರಿಗೆ ವಾರ್ಧಿಕ್ಯವು ಪ್ರಾಪ್ತವಾದುದರಿಂದ ತನ್ನ ಶಿಷ್ಯನಿಗೆ ಸ್ವಾತಂತ್ರ್ಯವನ್ನು ಕೊಡಬೇಕೆಂದು ಯೋಚಿಸಿ, ಒಂದು ಶುಭ ದಿವಸವನ್ನು ಗೊತ್ತುಮಾಡಿಕೊಂಡು ಆ ದಿವಸ ನಡೆಸಬೇಕಾದ ಕರ್ಮಗಳನ್ನೆಲ್ಲಾ ಮುಗಿಸಿ ಪೂರ್ಣಪ್ರಜ್ಞರಿಗೆ ಪಟ್ಟಕಟ್ಟಿ ಆನಂದತೀರ್ಥ ಎಂಬ ಹೆಸರನ್ನಿಟ್ಟರು. ಅನಂತರ ಆನಂದತೀರ್ಥರು ಹೊಸ ವೈಷ್ಣವಸಿದ್ಧಾಂತವನ್ನು ಬೋಧಿಸುತ್ತಿರಲಾಗಿ ಇವರ ಹೆಸರು ಎಲ್ಲೆಲ್ಲಿಯೂ ಪ್ರಚಾರಕ್ಕೆ ಬರಲು ಇತರ ಮತದ ಗುರುಗಳಿಗೂ ತಿಳಿಯಿತು. ಅಲ್ಲಲ್ಲಿ ನಡೆದ ವಾಗ್ವಾದಗಳಲ್ಲಿ ಆನಂದತೀರ್ಥರೇ



ಶ್ರೀಮನ್ ಮಧ್ವಾಚಾರ್ಯರು



ಉಡುಪಿ ಶ್ರೀ ಕೃಷ್ಣ ದೇವಸ್ಥಾನ.

ಗೆಲ್ಲುತ್ತಾ ಬಂದರು. ಅನಂತರ ದಕ್ಷಿಣ ಹಿಂದೂದೇಶದಲ್ಲಿ ಸಂಚರಿಸು ವಾಗ ಕುಂಬಳೆಗೆ ಬಂದು ಅಲ್ಲಿಂದ ವಿಷ್ಣುಮಂಗಲಕ್ಕೆ ಹೋಗಿ ಕುಂಬಳೆ ರಾಜನಾದ ಜಯಸಿಂಹನಿಂದ ಎಲ್ಲಾ ತರದ ರಾಜಮರ್ಯಾದೆ ಯನ್ನು ಪಡದು ಅಲ್ಲಿಂದ ಅನಂತಶಯನಕ್ಕೆ (ತಿರುವಾಂಕೂರು) ಹೋಗಿ ಅಲ್ಲಿ ವೈಷ್ಣವಸಿದ್ಧಾಂತವನ್ನು ಬೋಧಿಸುತ್ತ, ಅನೇಕ ಪಂಡಿತರು ತಮ್ಮ ದ್ವೈತಮತವನ್ನು ಅನುಸರಿಸುವಂತೆ ಮಾಡಿದರು. ಆಗ ಅಲ್ಲಿ ಇವರಿಗೆ ಶೃಂಗೇರಿ ಮಠಾಧಿಪತಿಗಳಾದ ಶ್ರೀ ವಿದ್ಯಾಶಂಕರರ ಭೇಟಿಯಾಯಿತು. ಆ ಕಾಲದಲ್ಲಿ ಎಲ್ಲಾ ಮಠಗಳಿಗಿಂತಲೂ ಶೃಂಗೇರಿ ಮಠವೇ ಶ್ರೇಷ್ಠನೆಂದು ಪ್ರಸಿದ್ಧವಾಗಿತ್ತು. ಈ ಮಠಾಧಿಪತಿಗಳಿಗಿಬ್ಬರಿಗೂ ಆಗಿನ ಕಾಲದ ಪದ್ಧತಿಗನುಸಾರವಾಗಿ ಅನಂತಶಯನದ ಅರಸನೆದುರಿಗೆ ವಾಕ್ಯಾರ್ಥವು ಜರಗಿತು. ಅಲ್ಲಿ ಇಬ್ಬರೂ ಸೋಲದೆ ಅರಸನಿಂದ ಮರ್ಯಾದೆಯನ್ನು ಪಡೆದರು. ಅಲ್ಲಿಂದ ರಾಮೇಶ್ವರಕ್ಕೆ ಹೋಗಿ ಚಾತುರ್ಮಾಸವನ್ನು ಅಲ್ಲಿಯೇ ಕಳೆದು, ಶಿಷ್ಯರೊಂದಿಗೆ ಶ್ರೀರಂಗಕ್ಕೆ ಹೋಗಿ ಅಲ್ಲಿ ಕೆಲವು ಕಾಲವಿದ್ದು, ಯಾತ್ರಾಸ್ಥಳಗಳನ್ನೆಲ್ಲಾ ಸಂಚರಿಸಿ ಉಡುಪಿಗೆ ತಿರಿಗಿ ಬಂದರು.

ಅನಂತರ ಬದರೀಕಾಶ್ರಮಕ್ಕೆ ಹೊರಟರು. ಪ್ರಯಾಣಕಾಲ ದಲ್ಲಿ ಅದ್ವೈತಸಿದ್ಧಾಂತವನ್ನು ಖಂಡಿಸುವ ಗ್ರಂಥಗಳನ್ನು ಕೂಡಿಸ ಲಾರಂಭಿಸಿದರು. ಮೊದಲು ಭಗವದ್ಗೀತೆಯ ವ್ಯಾಖ್ಯಾನವನ್ನು ಬರೆದು ಅನೇಕ ಭಾಗಗಳ ಗೂಢಾರ್ಥವನ್ನು ವಿವರಿಸಿ ದ್ವೈತಸಿದ್ಧಾಂತವನ್ನು ಸಾಧಿಸಿಕೊಳ್ಳುವದಕ್ಕೆ ಪ್ರಯತ್ನಮಾಡಿದರು. ತಮ್ಮ ಗುರುಗಳ ಅಪ್ಪಣೆ ಯನ್ನು ಪಡೆದು ಸತ್ಯತೀರ್ಥ ಮುಂತಾದ ಶಿಷ್ಯರೊಡಗೂಡಿ ಹಿಮಾ ಲಯ ಪ್ರಾಂತದಲ್ಲಿರುವ ಶ್ರೀ ಬದರೀನಾರಾಯಣ ದೇವಾಲಯಕ್ಕೆ ಬಂದು ಸೇರಿದರು. ಇವರು ನಿಂತ ಸ್ಥಳಕ್ಕೆ ಆನಂದಮಠವೆಂದು ಹೆಸರು. ಇವರು ಇಲ್ಲಿರುವಾಗ ಭಗವದ್ಗೀತೆಯ ವ್ಯಾಖ್ಯಾನವನ್ನೂ ಕವಿತ್ವವನ್ನೂ ಮಾಡಿ ಗೀತೆಯ ನಿಜಾರ್ಥವನ್ನು ಶಿಷ್ಯರಿಗೆ ಬೋಧಿಸಲಾರಂಭಿಸಿದರು.

ಅಲ್ಲಿ ಸತ್ಯತೀರ್ಥರೊಂದಿಗೆ ಶಿಷ್ಯರನ್ನೆಲ್ಲಾ ಬಿಟ್ಟು ತಾನು ಒಬ್ಬನೇ ಬಾದರಾಯಣ ಆಶ್ರಮಕ್ಕೆ ಹೋಗಿ ಬ್ರಹ್ಮಸೂತ್ರಗಳ ನಿಜಾರ್ಥವನ್ನು ತಿಳಿದುಕೊಂಡು ಬಾದರಾಯಣ ಸೂತ್ರಗಳಿಗೆ ದ್ವೈತಭಾಷ್ಯವನ್ನು ಬರೆದು ಮುಗಿಸಿದರು. ಅಲ್ಲಿಂದ ಬದರೀನಾಥಕ್ಕೆ ಬಂದು ಶಿಷ್ಯರೊಡನೆ ಹೊರಟು ಬಂಗಾಲ, ಒರಿಸ್ಸಾ ದೇಶಗಳನ್ನು ದಾಟಿ ಜಗನ್ನಾಥ ದೇವಾಲಯಕ್ಕೆ ಬಂದರು. ಅಲ್ಲಿಂದ ಬರುವಾಗ ಆಂಧ್ರದೇಶದಲ್ಲಿ ಶೋಭನ ಭಟ್ಟರೆಂಬ ಅದ್ವೈತಮತಾವಲಂಬಿಗಳಾದ ಮಹಾತ್ಮರೊಬ್ಬರು ಎದುರು ಬಿದ್ದು ಇಬ್ಬರಿಗೂ ಅನೇಕ ದಿನಗಳ ವರೆಗೆ ವಾಗ್ವಾದಗಳು ನಡೆದು ಶೋಭನ ಭಟ್ಟರು ದ್ವೈತಮತವನ್ನು ಅವಲಂಬಿಸಿ ಸನ್ಯಾಸಿಯಾದರು. ಇವರಿಗೆ ಪದ್ಮನಾಭ ತೀರ್ಥರೆಂಬ ಹೆಸರಾಯಿತು. ಗೋದಾವರಿ ನದೀತೀರ ದಲ್ಲಿರುವಾಗ ಇನ್ನೊಬ್ಬ ಸ್ವಾಮಿಶಾಸ್ತ್ರಿ ಎಂಬವರು ಇವರ ಮತವನ್ನು ಅವಲಂಬಿಸಿ ಸನ್ಯಾಸಿಯಾದರು. ಆ ಮೇಲೆ ಇವರು ಕಳಿಂಗ ದೇಶದಿಂದ ಹೊರಟು ಉಡುಪಿಗೆ ಹಿಂತಿರುಗಿ ಬಂದರು. ಬರುವಾಗ ಪದ್ಮನಾಭ ತೀರ್ಥರನ್ನು ಆಂಧ್ರ, ಕಳಿಂಗ ದೇಶಗಳಲ್ಲಿ ದ್ವೈತಸಿದ್ಧಾಂತಪ್ರಚಾರ ಕ್ಕಾಗಿ ಅಲ್ಲಿಯೇ ಬಿಟ್ಟುಬಂದರು.

ಉಡುಪಿಯಲ್ಲಿರುವಾಗ ಒಂದು ದಿನ ಮಧ್ವಾಚಾರ್ಯರು ಶಿಷ್ಯ ರೊಡಗೂಡಿ ಸಮುದ್ರಸ್ನಾನಕ್ಕೆ ಹೋಗಿ ಅಲ್ಲಿ ಸ್ನಾನ ಆಹ್ನೀಕಗಳ ನ್ನೆಲ್ಲಾ ಮುಗಿಸಿಕೊಂಡು ದಡದ ಮೇಲೆ ಕುಳಿತಿರಲಾಗಿ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಮುಳುಗಿಹೋಗುವ ಸ್ಥಿತಿಯಲ್ಲಿದ್ದ ಒಂದು ಹಡಗಿನಲ್ಲಿರುವ ಜನರ ಗೋಳಾಟವು ಕೇಳಿಸಲು ಮಧ್ವಾಚಾರ್ಯರು ಹಡಗಿನ ಕಡೆಗೆ ತಮ್ಮ ಕಾಷಾಯ ವಸ್ತ್ರವನ್ನು ಬೀಸಿದರು. ಆಗ ಆ ಪ್ರದೇಶದಲ್ಲಿ ಊರು ಉಂಟೆಂದು ತಿಳಿದುಕೊಂಡು ಆ ಜನರು ಹಡಗ ವನ್ನು ಕೆಂಪುವಸ್ತ್ರ ತೋರಿಸಿದ ಕಡೆಗೆ ತಿರುಗಿಸಿ ಕರೆಗೆ ಇಳಿದು ಮಧ್ವಾಚಾರ್ಯರಿಗೆ ನಮಸ್ಕಾರವನ್ನು ಮಾಡಿ ಹಡಗಿನಲ್ಲಿರುವ ಯಾವ ಪದಾರ್ಥವನ್ನಾದರೂ ಬಹುಮಾನಾರ್ಥವಾಗಿ ತೆಗೆದುಕೊಳ್ಳಬಹುದೆಂದು

ಬೇಡಿಕೊಂಡರು. ಮಧ್ವಾಚಾರ್ಯರು ಹಡಗಿನವರು ದ್ವಾರಕಾ ಪಟ್ಟಣದಿಂದ ತಂದಿದ್ದ ಮೂರು ಗೋಪಿಚಂದನದ ಉಂಡೆಗಳನ್ನು ಮಾತ್ರವೇ ತೆಗೆದುಕೊಂಡರು. ಅವುಗಳನ್ನು ತೆಗೆದುಕೊಂಡು ಉಡುಪಿಗೆ ಬರುವಾಗ ದಾರಿಯಲ್ಲಿ ಒಂದು ಉಂಡೆಯು ವಡಂಬಾಂಡೇಶ್ವರದಲ್ಲಿ ಫಕ್ಕನೇ ಕೆಳಗೆ ಬಿದ್ದು ಒಡೆದು ಹೋಗಲು ಅದರಲ್ಲಿ ಬಲರಾಮನ ಪ್ರತಿಮೆಯು ಇರುವುದನ್ನು ಕಂಡರು. ಅದನ್ನು ಅಲ್ಲಿಯೇ ಪ್ರತಿಷ್ಠೆಮಾಡಿದರು. ಆಗ ಇನ್ನೊಂದನ್ನು ಒಡಿಯುವಾಗ ಅದರಲ್ಲಿ ಒಂದು ಕೈಯಲ್ಲಿ ಕಡುಗೋಲನ್ನೂ ಇನ್ನೊಂದು ಕೈಯಲ್ಲಿ ಹಗ್ಗವನ್ನೂ ಹಿಡಿದಿರುವ ಸುಂದರವಾದ ಕೃಷ್ಣನ ಪ್ರತಿಮೆಯು ಇತ್ತು. ಅದನ್ನು ಕಂಡು ಮಧ್ವಾಚಾರ್ಯರು ಆನಂದಭರಿತರಾಗಿ ಆ ವಿಗ್ರಹವನ್ನು ಉಡುಪಿಗೆ ತೆಗೆದುಕೊಂಡು ಹೋಗಿ ಮಧ್ವಸರೋವರದಲ್ಲಿ ಚೆನ್ನಾಗಿ ತೊಳೆದು ಆ ಕೆರೆಯ ದಡದಲ್ಲಿ ಒಂದು ಸಣ್ಣ ದೇವಸ್ಥಾನವನ್ನು ಕಟ್ಟಿಸಿ ಅಲ್ಲಿ ಅದನ್ನು ಪ್ರತಿಷ್ಠೆಮಾಡಿದರು. ಅದು ಮೊದಲುಗೊಂಡು ಕೃಷ್ಣನ ಪೂಜೆಗೆ ಬೇಕಾದ ಏರ್ಪಾಡುಗಳನ್ನು ಮಾಡಿ ಎಂಟು ಮಂದಿ ಬಾಲ ಸನ್ಯಾಸಿಗಳು ಸರದಿ ಮೇರೆಗೆ ಎರಡೆರಡು ವರ್ಷಗಳ ಕಾಲ ಪೂಜೆಯನ್ನು ನಡಿಸಬೇಕೆಂದು ಕಟ್ಟನ್ನು ವಿಧಿಸಿ, ಪಲಮಾರು, ಕಾಣ್ಯೂರು, ಸೋದೆ, ಪುತ್ತಿಗೆ, ಅದಮಾರು, ಪೇಜಾವರ, ಕೃಷ್ಣಾಪುರ, ಶಿರೂರು ಎಂಬ 8 ಮಠಗಳನ್ನು ಸ್ಥಾಪಿಸಿ ಒಬ್ಬೊಬ್ಬರನ್ನು ಒಂದೊಂದು ಮಠದ ಅಧಿಕಾರಿಗಳಾಗಿ ನೇಮಿಸಿದರು. ಈ ಮಠಗಳ ಮೂಲ ಮಠಗಳು ಆಯಾ ಗ್ರಾಮಗಳಲ್ಲಿಯೇ ಇವೆ.

ಇದೆಲ್ಲ ಮುಗಿದ ತರುವಾಯ ಮಧ್ವಾಚಾರ್ಯರು ಮತ್ತೊಮ್ಮೆ ಬದರೀಕಾಶ್ರಮಕ್ಕೆ ಹೋಗಿ ಅಲ್ಲಿಯ ಋಷಿಗಳ ಸಂದರ್ಶನ ಮಾಡಿ ತನಗಿದ್ದ ಅನುಮಾನಗಳನ್ನೆಲ್ಲಾ ಆ ಋಷಿಗಳ ಮೂಲಕ ಪರಿಹರಿಸಿ ಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥವನ್ನು ಬರೆದು ಅಲ್ಲಿ ಆ ಋಷಿಗಳಿಂದ 8 ಸಾಲಿಗ್ರಾಮಗಳನ್ನು ಬಹುಮಾನಾರ್ಥವಾಗಿ ಪಡಕೊಂಡು

ಹೃಶಿಕೇಶ, ಹಸ್ತಿನಾಪುರ, ಕುರುಕ್ಷೇತ್ರ, ಕಾಶಿ ಮೊದಲಾದ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಗೋವೆಗೆ ಬಂದು ತನ್ನ ಸಂಗೀತಜ್ಞಾನವನ್ನು ಪ್ರಕಾಶಪಡಿಸಿದರು. ಆಗ ಗೌಡಸಾರಸ್ವತರಲ್ಲಿ ಕೆಲವು ಕುಟುಂಬದವರು ಇವರ ದ್ವೈತಮತವನ್ನು ಅವಲಂಬಿಸಿದರು. ಅಲ್ಲಿಂದ ಮಧ್ವಾಚಾರ್ಯರು ಉಡುಪಿಗೆ ಬಂದರು.

ಮಧ್ವಾಚಾರ್ಯರು ಬದರೀಕಾಶ್ರಮದಿಂದ ಹಿಂತಿರುಗಿದ ಮೇಲೆ ಅವರ ಹೆಸರು ದಕ್ಷಿಣ ಹಿಂದೂದೇಶದಲ್ಲೆಲ್ಲಾ ಹರಡಿತು. ಜಗದ್ಗುರುಗಳೆನ್ನಿಸಿಕೊಂಡ ಶೃಂಗೇರಿ ಮಠಾಧಿಪತಿಗಳೂ, ಬೇರೆ ಮಠಾಧಿಪತಿಗಳೂ ಮಧ್ವಾಚಾರ್ಯರು ತಮಗೆ ಅಧೀನರಾಗಿರುವರೆಂದು ತಿಳಿದುಕೊಂಡಿದ್ದರು. ಆದರೆ ಮಧ್ವಾಚಾರ್ಯರು ಅಧೀನರಾಗಿರಲಿಕ್ಕೆ ಒಪ್ಪದೆ ತಮ್ಮದೊಂದು ಸ್ವತಂತ್ರ ಮಠಸ್ಥಾಪನೆಮಾಡಿದರು. ಆಗ ಶೃಂಗೇರಿಯ ಮಠಾಧಿಪತಿಗಳಾಗಿದ್ದ ಪದ್ಮತೀರ್ಥರೂ ಪುಂಡರೀಕಪುರಿ ಎಂಬ ಅವರ ಶಿಷ್ಯರೂ ಮಧ್ವಾಚಾರ್ಯರೊಡನೆ ವಾಗ್ವಾದನಡಿಸಿ ಪ್ರಯೋಜನವಿಲ್ಲವೆಂದು ಹಿಂತಿರುಗಿ ಹೋದರು.

ಕುಂಬಳೆಯ ಅರಸನ ಇಷ್ಟಾನುಸಾರವಾಗಿ ಮಧ್ವಾಚಾರ್ಯರು ವಿಷ್ಣುಮಂಗಲಕ್ಕೆ ಹೋಗಿದ್ದಾಗ್ಗೆ ಒಂದು ವಿಶೇಷ ಸಂಗತಿ ನಡೆಯಿತು. ಕಾಸರಗೋಡು ತಾಲೂಕಿನ ಕಾವುಗೋಳಿಮಠದ ಪೆಜತ್ತಾಯ ವಂಶಸ್ಥನಾದ ಸುಬ್ರಹ್ಮಣ್ಯ ಪಂಡಿತನ ಮಗನಾದ ತ್ರಿವಿಕ್ರಮ ಪಂಡಿತನು ಅದ್ವೈತಸಿದ್ಧಾಂತವನ್ನು ಓದಿಕೊಂಡು ಬಲು ಸಮರ್ಥನಾಗಿದ್ದನು. ಈತನು ಮತಸಂಬಂಧವಾದ ವಾಗ್ವಾದಕ್ಕೆ ಮಧ್ವಾಚಾರ್ಯರು ಸಿಕ್ಕಿದರೆ ಸಾಕೆಂದು ಸಮಯಕಾಯುತ್ತಿದ್ದನು. ಇಂಥಾ ಸಮಯವು ಈಗ ದೊರೆತುದರಿಂದ ಇವರಿಬ್ಬರಿಗೂ 8 ದಿನಗಳ ವರೆಗೆ ಮದೂರಿನ ಹತ್ತಿರ ಇರುವ ಕೂಡಲಿನಲ್ಲಿ ಏಕರೀತಿಯಾಗಿ ವಾಗ್ವಾದನಡೆದು ಕಡೇಗೆ ದ್ವೈತಸಿದ್ಧಾಂತವೇ ನ್ಯಾಯಯುಕ್ತವಾದುದೆಂದು ಕುಂಬಳೆಯ ಅರಸನಾದ ಜಯಸಿಂಹನು ನಿರ್ಧರಿಸಲಾಗಿ ವಾಗ್ವಾದವು ಮುಗಿಯಿತು.

ಅನಂತರ ತ್ರಿವಿಕ್ರಮ ಪಂಡಿತನೂ ಇವನ ಮಗನಾದ ನಾರಾಯಣ ಪಂಡಿತನೂ ದ್ವೈತಮತವನ್ನು ಅವಲಂಬಿಸಿ ಇಬ್ಬರೂ ಸನ್ಯಾಸಿಗಳಾದರು. ಇವರಿಬ್ಬರ ವೃಂದಾವನ (ಸಮಾಧಿ)ಗಳು ಈಗಲೂ ಕಾವುಗೋಳಿ ಮಠದಲ್ಲಿವೆ. ಈ ಮಠದವರಿಗೆ ಮಧ್ವಾಚಾರ್ಯರು ಕೊಟ್ಟ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಈಗಲೂ ಈ ಮಠದವರು ಪೂಜಿಸುತ್ತಾರೆ. ಈ ಮಠದ ದಕ್ಷಿಣದಲ್ಲಿ ಮಧ್ವಾಚಾರ್ಯರು ಸ್ಥಾಪಿಸಿದ ಧ್ವಜಸ್ತಂಭವು ಇದೆ.

ಈ ರೀತಿಯಲ್ಲಿ ಮಧ್ವಾಚಾರ್ಯರು ದ್ವೈತಸಿದ್ಧಾಂತವನ್ನು ಬೋಧಿಸುತ್ತಿರಲಾಗಿ ಅದ್ವೈತಿಗಳಲ್ಲಿ ಅನೇಕರು ಅದನ್ನು ಅವಲಂಬಿಸಲಾರಂಭಿಸಿದರು. ಅಷ್ಟರಲ್ಲಿ ಮಧ್ವಾಚಾರ್ಯರು ತಮ್ಮ ಮಾತಾಪಿತೃಗಳು ಲೋಕಾಂತರವನ್ನೈದಿದ ಸಂಗತಿಯನ್ನು ತಿಳಿದು ಾಜಕಕ್ಷೇತ್ರಕ್ಕೆ ಬಂದರು. ಇವರ ತಮ್ಮನು ಉತ್ತರಕ್ರಿಯೆಗಳನ್ನೆಲ್ಲಾ ಮಾಡಿ ಮುಗಿಸಿದನು. ಒಂದು ವರ್ಷದ ನಂತರ ಮಧ್ವಾಚಾರ್ಯರು ಮಂಜೇಶ್ವರದ ಹತ್ತಿರವಿರುವ ಕಣ್ವತೀರ್ಥಕ್ಕೆ ಹೋದರು. ಈ ಪವಿತ್ರವಾದ ತೀರ್ಥದ ದಡದಲ್ಲಿ ಮಧ್ವಾಚಾರ್ಯರು ತಮ್ಮ ಸಹೋದರನಿಗೆ ಸನ್ಯಾಸಾಶ್ರಮವನ್ನು ಕೊಟ್ಟು ವಿಷ್ಣುತೀರ್ಥಾಚಾರ್ಯರೆಂದು ಹೆಸರಿಟ್ಟರು. ಇದೇ ಸಮಯ ಮತ್ತೂ ನಾಲ್ಕು ಮಂದಿಗೆ ಆಶ್ರಮಕೊಟ್ಟು ತನ್ನ ತರುವಾಯ ಅವರು ಕ್ರಮವಾಗಿ ಪೀಠಕ್ಕೆ ಬರತಕ್ಕದೆಂದು ನಿಶ್ಚಯಿಸಿದರು. ಇವರೇ ಪದ್ಮನಾಭ, ನರಹರಿ, ಮಧ್ವ, ಅಕ್ಷೋಭ ಎಂಬ ನಾಲ್ವರು. ಕಣ್ವತೀರ್ಥಮಠದ ಪೂರ್ವದಲ್ಲಿ ಈ ಶಿಷ್ಯರಿಗೆ ಆಶ್ರಮಕೊಟ್ಟ ಸ್ಥಾನವಾದ ನಾಲ್ಕು ಬಾಗಿಲುಗಳುಳ್ಳ ಜೀರ್ಣವಾದ ಒಂದು ಕಟ್ಟೆಯು ಈಗಲೂ ಇದೆ. ಅನಂತರ ಮಧ್ವಾಚಾರ್ಯರು ದಕ್ಷಿಣ ಹಿಂದೂದೇಶದಲ್ಲಿ ಸಂಚರಿಸಿದರು.

ಮಧ್ವಾಚಾರ್ಯರು ಸುಬ್ರಹ್ಮಣ್ಯಕ್ಕೆ ಹೋಗಿ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ತಮ್ಮನಾದ ವಿಷ್ಣುತೀರ್ಥಾಚಾರ್ಯರಿಗೆ ಅಲ್ಲಿ ಪಟ್ಟ ಕಟ್ಟಿದರು. ಸುಬ್ರಹ್ಮಣ್ಯ ಮಠವೆಂದು ಪ್ರಸಿದ್ಧವಾದ ಮಠವು ಇದೇ. ವಿಷ್ಣುತೀರ್ಥರ ಶಿಷ್ಯರು ಅನಿರುದ್ಧತೀರ್ಥರು. ಇವರೇ ಸುಬ್ರಹ್ಮಣ್ಯ

ಮಠದ ಆದಿ ಪುರುಷರು. ಮಧ್ವಾಚಾರ್ಯರು ಸುಬ್ರಹ್ಮಣ್ಯದಿಂದ ವಿದ್ಯಾನಾಥಕ್ಕೆ ಹೋಗಿ ಏಕಾದಶೀಮಹಾತ್ಮೆಯನ್ನು ವಿವರಿಸುವ ಕೃಷ್ಣಾಮೃತ ಮಹಾರ್ಣವ ಎಂಬ ಕಾವ್ಯವನ್ನು ಬರದು ಅಲ್ಲಿಂದ ಕಣ್ವತೀರ್ಥಕ್ಕೆ ಹೋಗಿ ತಮ್ಮ ಪ್ರಿಯ ಶಿಷ್ಯರಾದ ನರಹರಿತೀರ್ಥರು ಕಳಿಂಗ ದೇಶದಿಂದ ಬರುವ ವರೆಗೆ ಅಲ್ಲಿಯೇ ನಿಂತರು.

ಸ್ವಲ್ಪ ಸಮಯದೊಳಗಾಗಿ ಪದ್ಮನಾಭ, ನರಹರಿ, ಮಧ್ವ, ಅಕ್ಷೋಭ ಮೊದಲಾದ ಸಮಸ್ತ ಶಿಷ್ಯವರ್ಗದವರು ಅಲ್ಲಿಗೆ ಬಂದು ತಾವು ಸಂಚಾರ ಮಾಡಿದ ದೇಶಗಳಲ್ಲೆಲ್ಲಾ ಜನರು ಸರಿಯಾಗಿ ದ್ವೈತಮತವನ್ನೇ ಅನುಸರಿಸುತ್ತಾರೆಂತ ತಿಳಿಸಿದರು. ಇವರಲ್ಲಿ ನರಹರಿಯುವರನ್ನು ಕಳಿಂಗ ದೇಶದ ಅರಸನು ಸಣ್ಣಪ್ರಾಯದವನಾದ್ದರಿಂದ ಅವನ ರಾಜ್ಯಭಾರದ ಕೆಲಸಗಳನ್ನು ನಿರ್ವಹಿಸುವುದಕ್ಕಾಗಿ ಕಳುಹಿಸಿಕೊಟ್ಟರು. ಅವರು 12 ವರುಷಗಳ ವರೆಗೆ ಅಲ್ಲಿಯೇ ಇದ್ದರು. ನರಹರಿಯುವರು ಕಳಿಂಗ ದೇಶದಿಂದ ಬರುವಾಗ್ಗೆ ಅಲ್ಲಿ ಖಜಾನೆಯಲ್ಲಿದ್ದ ಪುರಾತನವಾದ ಶ್ರೀಮೂಲ ರಾಮ ಮತ್ತು ಸೀತಾದೇವಿಯ ಪ್ರತಿಮೆಗಳನ್ನು ತಂದು ಪಿಂಗಳ ಸಂವತ್ಸರದ ಆಶ್ವೀಜ ಶು॥ ೫ಯ ದಿನ ಮಧ್ವಾಚಾರ್ಯರಿಗೆ ಒಪ್ಪಿಸಿದರು. ಮಧ್ವಾಚಾರ್ಯರು ಆ ಪವಿತ್ರವಾದ ವಿಗ್ರಹಗಳನ್ನು 3 ತಿಂಗಳು 16 ದಿವಸಗಳ ವರೆಗೆ ಪೂಜೆಮಾಡಿ ತರುವಾಯ ಅವುಗಳನ್ನು ತಮ್ಮ ಮುಖ್ಯ ಶಿಷ್ಯರಾದ (ಪಲಮಾರು) ಪದ್ಮನಾಭ ತೀರ್ಥರಿಗೆ ಕೊಟ್ಟರು. ಮಾಡಬೇಕಾದ ಕೆಲಸವನ್ನೆಲ್ಲಾ ತೀರಿಸಿ ತನ್ನ 79ನೇ ವರುಷ ಪ್ರಾಯದಲ್ಲಿ ಕ್ರಿ. ಶ. 1278ರಲ್ಲಿ (ಪಿಂಗಳ ಸಂ|ರದ ಮಾಘ ಶು| ೯ಯ ದಿವಸ ಸ್ವರ್ಗಸ್ಥರಾದರು.

ಇವರ ಮತವನ್ನು ಅನುಸರಿಸುವವರಿಗೆ ಮಾಧ್ವರೆಂದು ಹೇಳುತ್ತಾರೆ. ಇವರ ಪ್ರತಿಮೆಯೊಂದು ಉಡುಪಿ ಕೃಷ್ಣದೇವಸ್ಥಾನದ ಗರ್ಭಗೃಹದ ಉತ್ತರಬಾಗಲಿನ ಒಳಗಡೆ ಇದೆ. ಇದಕ್ಕೆ ಬೆಳ್ಳಿ ಕವಚವಿದೆ. ಪಾಜಕಕ್ಷೇತ್ರದಲ್ಲಿ ಮಧ್ವಾಚಾರ್ಯರ ಬಾಲ್ಯದ ಪಾದಚಿಹ್ನೆಗಳು

ಇರುತ್ತವೆ. ಅಲ್ಲಿಯೇ ಕಾಣ್ಯೂರು ಶ್ರೀಪಾದಂಗಳವರ ಅಧಿಕಾರದಲ್ಲಿರುವ ಸುಂದರವಾದ ಶಿಲಾಮಯ ಮಧ್ವದೇವಾಲಯದಲ್ಲಿ ಮಧ್ವಾಚಾರ್ಯರ ದಿವ್ಯವಿಗ್ರಹವು ಇದೆ. ಇದೇ ಪಡುಮಠವು. ವೇಣೂರಿಗೂ ಸಿದ್ಧಕಟ್ಟೆಗೂ ಮಧ್ಯದಲ್ಲಿ ನಡ್ಯಂತಾಡಿ ಮಠವು ಇದೆ. ಮಧ್ವಾಚಾರ್ಯರು ಉಡುಪಿಯಿಂದ ಸುಬ್ರಹ್ಮಣ್ಯಕ್ಕೆ ಹೋಗುವಾಗ ಅವರ ವಿಶ್ರಾಮಕ್ಕೆ ಇದು ಮಧ್ಯಸ್ಥಾನವಾದುದರಿಂದ **ಮಧ್ಯವಾಟಿ** ತುಳುಭಾಷೆಯಲ್ಲಿ ನಡ್ಡಂತಾಡಿ ಎಂತ ಪ್ರಸಿದ್ಧವಾಯಿತು. ಇಲ್ಲಿ ಮಠಕಟ್ಟುವ ಮುಂಚೆ ಆಚಾರ್ಯರು ವಿಶ್ರಮಿಸಿಕೊಂಡ ಮಂಟಪವೂ ಇರುತ್ತದೆ. ಈಗ ಈ ಮಠವು ಸೋದೆ ಮಠದವರ ಅಧಿಕಾರದಲ್ಲಿದೆ. ಪರ್ಯಾಯಕ್ಕೆ ಕೂತುಕೊಳ್ಳುವ ಮಠಾಧಿಪತಿಗಳು ಮೊದಲು ಈ ಸ್ಥಳಕ್ಕೆ ಬಂದು ಉಡುಪಿಗೆ ಹೋಗಬೇಕು. ಕಣ್ವತೀರ್ಥದಿಂದ ಪೂರ್ವಕ್ಕೆ 19 ಮೈಲು ದೂರದಲ್ಲಿ **ಕಡ್ತಿಲ** (ಸೇತುಶಿಲ) ತುಳುಭಾಷೆಯಲ್ಲಿ **ಕಟೆತಲ** ಎಂತ ಪ್ರಸಿದ್ಧವಾದ ಇನ್ನೊಂದು ಸ್ಥಳವಿದೆ. ಇಲ್ಲಿ ಮಧ್ವಾಚಾರ್ಯರು ತಮ್ಮ ಗ್ರಂಥಗಳನ್ನೂ ವ್ಯಾಸಶಿಲೆಗಳನ್ನೂ ಸ್ಥಾಪಿಸಿದ್ದಾರೆ. ಈ ಪುಸ್ತಕ ಸ್ಥಾಪನಸ್ಥಳದ ಮೇಲೆ ಒಂದು ಗೇಣು ಆಳವಾದೊಂದು ವ್ಯಾಸತೀರ್ಥವೆಂಬ ಕುಂಡಿಕೆಯೂ ಇದೆ. ಇಲ್ಲಿ ಮಧ್ವಾಚಾರ್ಯರು ಪ್ರತಿಷ್ಠಿಸಿದ ಕೃಷ್ಣನ ದೇವಾಲಯವಿದೆ. ಪರ್ಯಾಯಕ್ಕೆ ಕೂತುಕೊಳ್ಳುವ ಮೊದಲು ಇಲ್ಲಿಯೂ ಗುರುಗಳು ಬರುವ ವಾಡಿಕೆ ಇದೆ.

# 16ನೇ ಅಧ್ಯಾಯ.

## ವಿಜಯ ನಗರದ ಅರಸರು.

ದಕ್ಷಿಣ ಹಿಂದೂದೇಶದಲ್ಲಿದ್ದ ಹಿಂದೂ ರಾಜರುಗಳೆಲ್ಲಾ ಬಲಹೀನರಾಗಿ, ದೇಶವು ಮುಸಲ್ಮಾನರ ಕೈಸೇರತೊಡಗಿತು. ಹೊಯ್ಸಳ ರಾಜರು ಸೋತು ಅಫ್ಘಾನರಿಗೆ ಕಪ್ಪಕೊಡಬೇಕಾಯಿತು. ಈ ಸಮಯದಲ್ಲಿ ಪ್ರಸಿದ್ಧವಾದ ವಿಜಯನಗರ ರಾಜ್ಯವು ಕ್ರಿ. ಶ. 1336ರಲ್ಲಿ

ಸ್ಥಾಪಿಸಲ್ಪಟ್ಟಿತು. ಈ ರಾಜ್ಯಸ್ಥಾಪನೆಯ ವಿಷಯದಲ್ಲಿ ಬೇರೆ ಬೇರೆ ಅಭಿಪ್ರಾಯಗಳಿವೆ. ಆದರೆ ಇತ್ತೀಚೆಗೆ ಆದಂಥಾ ಹೊಸ ಶೋಧನೆಗಳಿಂದ ಹೆಚ್ಚಿನ ಸಂಗತಿಗಳು ಗೊತ್ತಾಗಿವೆ. ಈಗ ಆನೆಗುಂದಿಯು ಇರುವ ಸ್ಥಳದಲ್ಲಿ ರಾಮಾಯಣಕಾಲದಲ್ಲಿ ಬಲಿಷ್ಠನಾದ ವಾಲಿಯ ರಾಜಧಾನಿಯಾದ ಕಿಷ್ಕಿಂಧ ಪಟ್ಟಣವು ಇತ್ತು. ಇದರ ನೆರೆಯಲ್ಲಿರುವ ವಾಲಿಭಾಂಡಾರವೆಂದು ತೋರಿಸಲ್ಪಡುತ್ತಿರುವ ಎರಡು ದೊಡ್ಡ ಬಂಡೆ ಕಲ್ಲುಗಳೂ, ಎಲುಬಿನ ದಿನ್ನೆಯಂತೆ ಕಾಣುವ ವಾಲಿಕಾಷ್ಠವೆಂಬ ದಿನ್ನೆಯೂ, ಅಂಜನಪರ್ವತ, ಮಾಲವಂತ, ಋಷ್ಯಮೂಕ, ಮಾತಂಗ ಎಂಬ ಗುಡ್ಡಗಳೂ, ಪಂಪಾ ಸರೋವರವೆಂಬ ಜಲಾಶಯವೂ ರಾಮಾಯಣದಲ್ಲಿ ವರ್ಣಿಸಲ್ಪಟ್ಟಂತೆಯೇ ಈಗಲೂ ದೃಷ್ಟಿಗೆ ಬೀಳುತ್ತವೆ. ಪಂಪಾ ವಿರೂಪಾಕ್ಷನ ದೇವಾಲಯವೂ ಆ ಕಾಲದಲ್ಲಿದ್ದಂತೆಯೇ ತೋರುತ್ತದೆ.

ವಿಜಯನಗರದ ಸ್ಥಾಪನೆಗಿಂತ ಮೊದಲು ಏಳುನೂರು ವರ್ಷಗಳ ವರೆಗೆ ಒಂದು ರಾಜವಂಶವು ಆನೆಗುಂದಿಯಲ್ಲಿ ಆಳುತ್ತಿತ್ತು. ಇಲ್ಲಿಯ ರಾಜರು ಹೆಚ್ಚಿನ ಜಾಗ್ರತೆಯಿಂದ ಕಾದಿಟ್ಟ ರಾಜವಂಶಾವಳಿ ಎಂಬ ಪುರಾತನ ಗ್ರಂಥವಿರುವುದು. ಇದರಿಂದ ಗೊತ್ತಾಗುವುದೇನೆಂದರೆ:—ನಂದಮಹಾರಾಯನೆಂಬವನು ಆನೆಗುಂದಿಯಲ್ಲಿ ಕ್ರಿ. ಶ. 1014ರಿಂದ 1076ರ ವರೆಗೆ ಆಳಿದನು. ಇವನ ರಾಜ್ಯವು ಬಹು ವಿಸ್ತಾರವಾಗಿದ್ದಿತೆಂದು ತಿಳಿದುಬರುತ್ತದೆ. ಇವನ ಮಗನಾದ ಚಾಲುಕ್ಯನು ಕ್ರಿ. ಶ. 1076ರಿಂದ 1117ರ ವರೆಗೆ ಆಳಿದನು. ಇವನಿಗೆ ಮೂರು ಜನ ಮಕ್ಕಳು. ಮೊದಲನೆಯವನಾದ ಬಿಜ್ಜಳನೆಂಬವನು ಕಲ್ಯಾಣಕ್ಕೆ ಹೋಗಿ ಹೊಸ ರಾಜ್ಯವನ್ನು ಸ್ಥಾಪಿಸಿದನು. ಮೂರನೇ ಮಗನು ವಿಷ್ಣುವರ್ಧನನೆಂಬವನು. ಎರಡನೆಯ ಮಗನಾದ ವಿಜಯಧ್ವಜನು ತನ್ನ ತಂದೆಯ ತರುವಾಯ ಆನೆಗುಂದಿಯಲ್ಲಿ ಕ್ರಿ. ಶ. 1117ರಿಂದ 1156ನೆಯ ಇಸವಿಯ ವರೆಗೆ ಆಳಿದನು. ಇವನು ತನ್ನ ಆಳಿಕೆಯ

ಕಾಲದಲ್ಲಿ 1150ರಲ್ಲಿ ತುಂಗಭದ್ರಾನದಿಯ ದಕ್ಷಿಣ ತೀರದ ಮೇಲೆ ವಿಜಯನಗರವೆಂಬ ಹೊಸ ಪಟ್ಟಣವನ್ನು ಕಟ್ಟಿ ಅದನ್ನು ಕೋಟೆಗಳಿಂದ ಭದ್ರಪಡಿಸಿದನು. ಇದರ ಇತಿಹಾಸವೂ ಐಶ್ವರ್ಯವೂ ಬರಬರುತ್ತ ಬೆಳೆಯುತ್ತ ಬಂದವು. ಆನೆಗುಂದಿಯು ಆ ರಾಜ್ಯದ ಉತ್ತರ ಮೇರೆಯಲ್ಲಿ ಮುಸಲ್ಮಾನರ ಸೀಮೆಗೆ ಹತ್ತಿರವಿರುವುದರಿಂದ ಅವರ ದಾಳಿಗಳಿಂದ ರಕ್ಷಿಸಿಕೊಳ್ಳುವುದಕ್ಕೆ ಹೆಚ್ಚು ಅನುಕೂಲವಾಗುವುದೆಂದು ಆಲೋಚಿಸಿ, ವಿಜಯಧ್ವಜನು ಈ ಹೊಸ ಪಟ್ಟಣವನ್ನು ನದಿಯ ದಕ್ಷಿಣ ತೀರದಲ್ಲಿ ಕಟ್ಟಿದಂತೆ ತೋರುತ್ತದೆ. ಇದನ್ನು ಕಟ್ಟಿದ ಕಾಲದಿಂದ ವಿಜಯನಗರವೇ ಆನೆಗುಂದಿಯ ರಾಜ್ಯದ ರಾಜಧಾನಿಯಾಯಿತು. ಮುಂದೆ 200 ವರುಷಗಳ ನಂತರ ವಿದ್ಯಾರಣ್ಯನು ವಿದ್ಯಾನಗರವೆಂಬ ಹೆಸರಿನಿಂದ ಈ ಪಟ್ಟಣದ ಪುನರುಜ್ಜೀವನ ಮಾಡಿ ಇದನ್ನು ಹೆಚ್ಚು ಅಂದವಾಗಿ ಮಾಡಿದನು. ವಿಜಯಧ್ವಜನ ತರುವಾಯ ಅವನ ಮಗನಾದ ಅನುವೇಯನು ಈ ಹೊಸ ರಾಜಧಾನಿಯಲ್ಲಿ ಕ್ರಿ. ಶ. 1156ನೇ ಇಸವಿಯಿಂದ 1179ನೇ ಇಸವಿಯ ವರೆಗೆ, ಇವನ ಮಗನಾದ ನರಶಿಂಹದೇವರಾಯನು 1179ನೇ ಇಸವಿಯಿಂದ 1246ರ ವರೆಗೆ ಆಳಿದರು. ಇವನ ಆಳಿಕೆಯ ಕಾಲದಲ್ಲಿ ಮುಸಲ್ಮಾನರು ದಕ್ಷಿಣ ದೇಶದ ಮೇಲೆ ದಂಡೆತ್ತಿ ಬರಲಾರಂಭಿಸಿದರು. ಮುಸಲ್ಮಾನರು ಇವನ ಹೆಸರಿನ ಮೇಲಿಂದ ವಿಜಯನಗರದ ರಾಜ್ಯಕ್ಕೆ ನರಶಿಂಗನ ರಾಜ್ಯವೆಂದು ಕರೆದಿರಬಹುದು. ಇವನ ಕಾಲದಲ್ಲಿ ರಾಜಧಾನಿಯ ವಿಸ್ತಾರವೂ ಸೌಂದರ್ಯವೂ ಹೆಚ್ಚಿ ಇದು ಮುಸಲ್ಮಾನರ ಮನಸ್ಸನ್ನು ಆಕರ್ಷಣ ಮಾಡಲಾರಂಭಿಸಿತು. ಇವನ ತರುವಾಯ ಇವನ ಮಗನಾದ ರಾಮದೇವರಾಯನು ಕ್ರಿ. ಶ. 1246ರಿಂದ 1271ರ ವರೆಗೂ, ಆ ಮೇಲೆ ರಾಮದೇವನ ಮಗನಾದ ಪ್ರತಾಪರಾಯನು ಕ್ರಿ. ಶ. 1297ರ ವರೆಗೂ, ಪ್ರತಾಪರಾಯನ ತರುವಾಯ ಅವನ ಮಗನಾದ ಜಂಬುಕೇಶ್ವರರಾಯನು ಕ್ರಿ. ಶ. 1334ರ ವರೆಗೂ ವಿಜಯನಗರದಲ್ಲಿ ಆಳಿದರು. ಇವನೇ ಈ ವಂಶದ ಕಡೆಯ ಅರಸನು.

ಮಹಮ್ಮದ ತೊಗ್ಲಾಕನು ಕ್ರಿ. ಶ. 1334ನೇ ಇಸವಿಯಲ್ಲಿ ವಿಜಯ ನಗರದ ಮೇಲೆ ದಂಡೆತ್ತಿಬಂದು ಅದನ್ನು ಹಿಡಿದು ಅಲ್ಲಿ ಮಲ್ಲಿಖಾಫರನನ್ನು ತನ್ನ ಪ್ರತಿನಿಧಿಯಾಗಿ ನೇಮಿಸಿ ಉತ್ತರಕ್ಕೆ ನಡೆದ ನೆಂತಲೂ, ಅವನು ಹೋದ ಮೇಲೆ ವಿಜಯನಗರದ ಜನರು ಮಲ್ಲಿ ಖಾಫರನಿಗೆ ವಿರೋಧವಾಗಿ ದಂಗೆ ಎಬ್ಬಿಸಿದ್ದನ್ನು ನೋಡಿ ಸುಲ್ತಾನನು ಆ ರಾಜ್ಯವನ್ನು ಅದರ ಪೂರ್ವದ ಮಂತ್ರಿಯಾದ ದೇವರಾಯನಿಗೆ ಕೊಟ್ಟನೆಂತಲೂ ನೂನಿಝುನು ಬರೆದಿರುವನು. ಇದರ ಮೇಲಿಂದ ಈ ಸಂಗತಿಗಳಿಗೂ ಮೇಲೆ ಹೇಳಿದ ರಾಜವಂಶಾವಳಿಯಲ್ಲಿರುವ ಸಂಗತಿ ಗಳಿಗೂ ಒಂದಕ್ಕೊಂದು ಸರಿಬೀಳುತ್ತದೆಂದು ಕಂಡುಬರುವುದು. ಆನೆ ಗುಂದಿಯ ರಾಜರ ವಂಶದ ಕಡೆಯ ಅರಸನು ಕ್ರಿ. ಶ. 1334ರ ವರೆಗೆ ಆಳಿ ಸಂತಾನವಿಲ್ಲದೆ ತೀರಿಹೋದನೆಂದು ರಾಜವಂಶಾವಳಿಯಲ್ಲಿ ಹೇಳಲ್ಪಟ್ಟಿದೆ. ಇದೇ ವರ್ಷದಲ್ಲಿ ಮಹಮ್ಮದ ತೊಗ್ಲಾಕನು ವಿಜಯ ನಗರದ ಮೇಲೆ ದಾಳಿಮಾಡಿದಾಗ್ಗೆ ಅಲ್ಲಿಯ ಅರಸುಮನೆತನ ದವರೆಲ್ಲಾ ಸುಲ್ತಾನನ ಕೂಡೆ ಹೋರಾಡಿ ಮಡಿದರೆಂದು ನೂನಿಝುನು ಬರೆದಿದ್ದಾನೆ. ಈ ರೀತಿ ಅರಸುಮನೆತನದವರು ಯಾರೂ ಉಳಿಯದ ಕಾರಣ ಸುಲ್ತಾನನು ವಿಜಯನಗರದ ರಾಜ್ಯವನ್ನು ಅದರ ಪೂರ್ವದ ಮಂತ್ರಿಗೆ ಕೊಡಬೇಕಾಯಿತು. ಇವನು ಬೇಟೆಯಾಡಲಿಕ್ಕೆ ಹೋದಾಗ್ಗೆ ಒಂದು ಮೊಲವು ಇವನ ನಾಯಿಗಳನ್ನು ನೋಡಿ ಅಂಜಿ ಓಡದೆ ಅವುಗಳ ಮೇಲೇರಿ ನಾಯಿಗಳನ್ನು ಕಚ್ಚಿತು. ಈ ಸಂಗತಿಯನ್ನು ನೋಡಿ ಅರಸನು ಆಶ್ಚರ್ಯಪಟ್ಟು ವಿಚಾರಮಾಡುತ್ತ ಮನೆಗೆ ತಿರುಗಿ ಬರುವಷ್ಟರಲ್ಲಿ ನದಿಯ ದಡದಲ್ಲಿ ಮಾಧವಾಚಾರ್ಯ ವಿದ್ಯಾರಣ್ಯನನ್ನು ಕಂಡನು. ಈ ಮುನಿಯು ಮೊಲವು ನಾಯಿಗಳನ್ನು ಕಚ್ಚಿದ ಸ್ಥಳ ದಲ್ಲಿ ರಾಜಧಾನಿಯನ್ನು ಕಟ್ಟಿಸಲಿಕ್ಕೆ ಅರಸನಿಗೆ ಉಪದೇಶಿಸಿದನು. ಈ ಅರಸನು ವಿದ್ಯಾರಣ್ಯನ ಹೆಸರಿನಲ್ಲಿ ವಿಜಯನಗರದಲ್ಲಿ ಒಂದು ಗುಡಿಯನ್ನು ಕಟ್ಟಿಸಿದನು. ಈ ವಿದ್ಯಾರಣ್ಯನು ವಿಜಯನಗರವನ್ನು

ಊರ್ಜಿತಸ್ಥಿತಿಗೆ ತರಲಿಕ್ಕೆ ಅರಸನಿಗೆ ಬಹಳ ಸಹಾಯಕಾರಿಯಾಗಿ ಅವನ ಮಂತ್ರಿತ್ವವನ್ನು ಸಹ ವಹಿಸಿದ್ದನು. ವಿಜಯನಗರವು ವಿದ್ಯಾನಗರವೆಂಬ ಹೆಸರಿನಿಂದ ಕ್ರಿ. ಶ. 1336ನೇ ಇಸವಿಯಲ್ಲಿ ಪುನರುಜ್ಜೀವನವನ್ನು ಹೊಂದಿದ ಸಂಗತಿಯೇ ಹಂಪೆಯ ವಿರೂಪಾಕ್ಷ ದೇವಾಲಯದೊಳಗಿನ ಒಂದು ಶಾಸನದಲ್ಲಿ ಬರೆದಿದೆ. ಇದರ ಅಭಿಪ್ರಾಯವೇನೆಂದರೆ:—

"ಶಾಲಿವಾಹನ ಶಕ 1258ನೇ ವರ್ಷ ಧಾತು ಸಂವತ್ಸರದ ವೈಶಾಖ ಶುದ್ಧ ಸಪ್ತಮಿ ಬುಧವಾರ ದಿವಸ ಗುರು ಶುಭಲಗ್ನಕಾಲದಲ್ಲಿ ಯತಿರಾಜನಿಂದ ವಿಜಯನಗರದಲ್ಲಿ ಈ ಹೊಸ ಪಟ್ಟಣವು ಸ್ಥಾಪಿಸಲ್ಪಟ್ಟಿತು." 1258ನೇ ಶಕ ವರ್ಷವೆಂದರೆ ಕ್ರಿ. ಶ. 1336ನೇ ವರ್ಷವು. "ವಿಜಯನಗರದಲ್ಲಿ" ಎಂದು ಉಪಯೋಗಿಸಿದುದರಿಂದ ಈ ಹೆಸರಿನ ಪಟ್ಟಣವು ಮೊದಲೇ ಇತ್ತೆಂದು ಸಿದ್ಧವಾಗುತ್ತದೆ. ಈ ದೇವರಾಯನಿಗೆ ಹುಕ್ಕನೆಂದೂ ಹೆಸರಿತ್ತು. ಆದರೆ ಇವನ ಪಟ್ಟದ ಹೆಸರು 1ನೇ ಹರಿಹರ. ಇವನ ತಮ್ಮನ ಹೆಸರು "ಬುಕ್ಕ."

1. **ಹರಿಹರರಾಯ.** ಕ್ರಿ. ಶ. 1336—1350. ಹುಕ್ಕ ಅಥವಾ ಒಂದನೇ ಹರಿಹರರಾಯ ಅಥವಾ ಹರಿಯಪ್ಪ ಎಂಬವನು ಸಂಗಮ ಎಂಬವನ ಮಗನು. ಸಂಗಮನ ಹೆಂಡತಿ ಕಾಮಾಂಬಿಕೆ. ಇವರಿಗೆ 5 ಮಂದಿ ಗಂಡು ಮಕ್ಕಳು. (1) ಹುಕ್ಕ (ಹರಿಹರ). (2) ಕಂಪ (ಶಂಕರ). (3) ಬುಕ್ಕ. (4) ಮಾರಪ್ಪ. (5) ಮುದ್ದಪ್ಪ. ಹರಿಹರನು ಮೊದಲು ಪಟ್ಟಕ್ಕೆ ಬಂದನು. ಮಾರಪ್ಪನು ಚಂದ್ರಗುತ್ತಿ (ಶಿವಮುಗ್ಗಾ)ಯನ್ನು ಜಯಿಸಿ ಅಲ್ಲಿ ಆಳತೊಡಗಿದನು. ತುಳು ರಾಜ್ಯವು ಈ ಸಮಯದಲ್ಲಿ ಮಹಾಮಂಡಲೇಶ್ವರ ಪಾಂಡ್ಯದೇವರಾಯನ ಕೈಕೆಳಗಿತ್ತು. ಕದಂಬ ರಾಜ್ಯವನ್ನು ಜಯಿಸಿದೊಡನೆಯೇ ಕನ್ನಡ ಜಿಲ್ಲೆಯು ವಿಜಯನಗರದ ಕೈಕೆಳಗೆ ಬಂತು. ಹರಿಹರರಾಯನಿಗೆ ತುಳು ಅರಸರೆಲ್ಲರೂ ಶರಣಾಗತರಾಗಿ ಕಪ್ಪಕೊಡುವುದಕ್ಕೆ ಒಪ್ಪಿಕೊಂಡರು. ಹರಿಹರನು ತುಳು ರಾಜ್ಯದಲ್ಲಿ ಮೂವರು ಅಧಿಕಾರಿ

ಗಳನ್ನು ನೇಮಿಸಿದನು. ಬಾರಕೂರಲ್ಲಿರುವ ಅಧಿಕಾರಿಯ ಮೇಲು ಹೆಸರು ರಾಯ. ಮಂಗಳೂರಿನ ಅಧಿಕಾರಿಯ ಮೇಲುಹೆಸರು ಒಡೆಯ. 3ನೇ ಅಧಿಕಾರಿಯು ಬಂಗಾಡಿಯಲ್ಲಿದ್ದನು. ಈ ಅಧಿಕಾರಿಗಳಿಗೆ ಸಂತಾನ ಪಾರಂಪರ್ಯದ ಅಧಿಕಾರವು ಇರಲಿಲ್ಲ. ಇವರು ನೌಕರರೇ ಆಗಿದ್ದರು. ತುಳು ಜೈನ ಅರಸರು ಸಂತಾನ ಪಾರಂಪರ್ಯವಾಗಿ ತವ್ಮು ತಮ್ಮ ರಾಜ್ಯಗಳನ್ನು ಆಳಿಕೊಂಡು ಬರಬಹುದೆಂದು ಹೇಳಿ ಅವರ ಸ್ವಂತ ಆಸ್ತಿಗಳನ್ನು ಅವರಿಗೆ ಉಂಬಳಿಯಾಗಿ ಬಿಟ್ಟನು. ಈ ಆಸ್ತಿಗಳಿಗೆ ಕಂದಾಯವಿರಲಿಲ್ಲ. ಇವರಿಗೆ ತಮ್ಮ ರಾಜ್ಯಗಳಲ್ಲಿ ಸಂಪೂರ್ಣ ಅಧಿಕಾರ ವಿತ್ತು. ಕಪ್ಪಗಳನ್ನು ಅವರವರಿರುವ ಸಂಸ್ಥಾನದ ಅಧಿಕಾರಿಗೆ ಒಪ್ಪಿಸುತ್ತಿದ್ದರು. ಪ್ರತಿ ಒಬ್ಬರ ಹತ್ತಿರ ಸೈನ್ಯವಿತ್ತು. ವಿಜಯನಗರಕ್ಕೆ ಅವಶ್ಯವಿದಾಗ ಇವರು ಸೈನ್ಯದೊಡನೆ ಸಹಾಯಮಾಡಬೇಕಿತ್ತು. ವಿಜಯನಗರದ ಅರಸರು ಈ ತುಳು ಅರಸರಿಗೆ ಮನೆತನದವರೆಂದು ಕರೆಯುತ್ತಿದ್ದರು. ಕದಂಬರಾಜನಾದ ಮಯೂರವರ್ಮನು ಬ್ರಾಹ್ಮಣರಿಗೆ ಬಿಟ್ಟುಕೊಟ್ಟ 32 ಗ್ರಾಮಗಳ ಮೇಲೆ ಈ ಜೈನ ಅರಸರಿಗೆ ಅಧಿಕಾರವಿರಲಿಲ್ಲ. ಕೋಟ, ಶಿವಳ್ಳಿ ಗ್ರಾಮಗಳ ಕಂದಾಯವನ್ನು ಬಾರಕೂರಿನ ರಾಯನೇ ಕೂಡಿಸುತ್ತಿದ್ದನು. ಉಳಿದ 30 ಗ್ರಾಮಗಳಲ್ಲಿ ಬ್ರಾಹ್ಮಣ ಬಲ್ಲಾಳರೇ ತಮ್ಮ ಗ್ರಾಮದ ಕಂದಾಯವನ್ನು ಆಯಾಯ ಒಡೆಯರಿಗೆ ಕೂಡಿಸಿ ಕೊಡುತ್ತಿದ್ದರು. ಈ ಬ್ರಾಹ್ಮಣ ಬಲ್ಲಾಳರಲ್ಲಿ ಮುಖ್ಯರಾದವರು ಚಿಟ್ಟುಪಾಡಿ ಮತ್ತು ನಿಡಂಬೂರು ಬಲ್ಲಾಳರು. ಈ ಬಲ್ಲಾಳರಿಗೂ ಕಂದಾಯ ಕೊಡಲಿಕ್ಕಿಲ್ಲದ ಮಾನ್ಯದ ಭೂಮಿಗಳಿದ್ದವು. ಪ್ರಜೆಗಳ ಮೇಲೆ ಯಾವ ತರದ ಅಧಿಕಾರವೂ ಇವರಿಗೆ ಇರಲಿಲ್ಲ. ಮರಣದಂಡನೆ ವಿಧಿಸುವ ಅಧಿಕಾರವಾಗಲೀ, ಪ್ರಜೆಗಳ ಆಸ್ತಿಗಳನ್ನು ಸ್ವಾಧೀನಪಡಿಸಿಕೊಳ್ಳುವ ಅಧಿಕಾರವಾಗಲೀ ಈ ಬಲ್ಲಾಳರಿಗೆ ಇರಲಿಲ್ಲ. ಹರಿಹರರಾಯನು ಈ ಜಿಲ್ಲೆಯನ್ನು ಸ್ವಾಧೀನಪಡಿಸಿಕೊಳ್ಳುವ ಮೊದಲು ಭೂಕಂದಾಯವನ್ನು ಕೂಡಿಸುವ ಕ್ರಮವು ಸರಿಯಾಗಿದ್ದಿಲ್ಲ. ಹರಿಹರರಾಯನ

ಪ್ರಧಾನಿಯೂ ಪರಾಶರ ಸ್ಮೃತಿಗನುಸಾರವಾಗಿ ಕಂದಾಯ ವಸೂಲುಮಾಡು ವುದಕ್ಕಾಗಿ ಒಂದು ಕಾನೂನನ್ನು ಏರ್ಪಡಿಸಿದನು. ಬಿತ್ತಿದ ಬೀಜದ 12 ಪಾಲು ಬೆಳೆ ಆಗುತ್ತದೆಂದು ಲೆಕ್ಕಹಿಡಿದು ಆ ಹುಟ್ಟುವಳಿಯನ್ನು 30 ಪಾಲು ಮಾಡಿ ಅದರಲ್ಲಿ ಭೂಮಿಯ ಯಜಮಾನನಿಗೆ ಕಾಲು ಪಾಲು ಎಂದರೆ 7½ ಪಾಲು, ಬೇಸಾಯ ಮಾಡುವವನಿಗೆ ಸಮ ಅರ್ಧ ಪಾಲು ಎಂದರೆ 15 ಪಾಲು, ಸರಕಾರಕ್ಕೆ 6ನೇ ಒಂದು ಪಾಲು ಎಂದರೆ 5 ಪಾಲು, ದೇವಸ್ಥಾನಗಳಿಗೆ 30ನೇ ಒಂದು ಪಾಲು ಎಂದರೆ 1 ಪಾಲು, ಬ್ರಾಹ್ಮಣರಿಗೆ 1½ ಪಾಲು ಎಂದು ನಿಶ್ಚಯಿಸಿದನು. ದೇವಸ್ಥಾನಗಳ ಪಾಲನ್ನೂ ಬ್ರಾಹ್ಮಣರ ಪಾಲನ್ನೂ ಸರಕಾರವೇ ಕೂಡಿಸಿ ಬ್ರಾಹ್ಮಣರಿಗೂ ದೇವಸ್ಥಾನಗಳಿಗೂ ಕೊಡುತ್ತಿತ್ತು.

ಬಾರಕೂರು ಕೋಟೆಕೇರಿಯಲ್ಲಿರುವ ಹಳೆ ಕೋಟೆಯನ್ನು ಹರಿ ಹರರಾಯನು ಕಟ್ಟಿಸಿದನು. ಇದರ ಮಧ್ಯದಲ್ಲಿ ರಾಯರ ಅರ ಮನೆಯೂ ಇತ್ತು. ಮನೆಯು ಬಿದ್ದು ಹೋದರೂ ಆ ಸಮಯದಲ್ಲಿ ಅದೇ ಕೋಟೆಯ ಮಧ್ಯದಲ್ಲಿ ಬಹಳ ಅಂದವಾಗಿ ಕಟ್ಟಿಸಿದ ಕೆರೆಯು ಈಗಲೂ ಇದೆ. ಈಗ ಅದರಲ್ಲಿ ಶಿಲಾ ಶಾಸನಗಳೂ ಶಿಲೆಯ ಅಡ್ಡಗಳೂ ಇವೆ. ಕೋಟೆಯಲ್ಲಿ ಹಾಡಿಯು ಬೆಳೆದಿದೆ. ಕೋಟೆಯ ಗೋಡೆ ಗಳನ್ನೂ ಬತ್ತೇರಿಗಳನ್ನೂ ಮುರದ ಕಲ್ಲಿನಿಂದ ಕಟ್ಟಿಸಿದನು. ಸುತ್ತಲೂ ಕಂದಕವಿದೆ.

ಕ್ರಿ. ಶ. 1342ರಲ್ಲಿ ಕನ್ನಡ ಜಿಲ್ಲೆಯಲ್ಲಿ ಪ್ರಯಾಣಮಾಡಿದ ಇಬನ ಬತೂತನೆಂಬ ಮುಸಲ್ಮಾನ ಪ್ರಯಾಣಿಕನು ಹೀಗೆ ಹೇಳುತ್ತಾನೆ:— "ನಾನು ಬಾರಕೂರಿನಿಂದ ಕಲ್ಲಿಕೋಟೆಯ ವರೆಗೆ ನೆಲದ ದಾರಿಯಾಗಿ ಪ್ರಯಾಣಮಾಡಿದೆನು. ಮಂಗಳೂರಿನಲ್ಲಿ ಪರ್ಸಿಯಾದೇಶದ ಮತ್ತು ಇಮೆನ್ (ಅರೇಬಿಯದ ಒಂದು ಭಾಗ) ದೇಶದ ಮೂವರು ಮುಸ ಲ್ಮಾನ ಸಾಹುಕಾರರಿದ್ದರು. ಮಂಗಳೂರನ್ನು ಶಂಕರದೇವಿ ಬಂಗ ರಾಣಿಯು ಆಳುತ್ತಿದ್ದಳು. ಈ ರಾಣಿಯು ಬಹಳ ಐಶ್ವರ್ಯವಂತೆ

ಯಾಗಿದ್ದಳು. ಸುಮಾರು 4000 ಮುಹಮ್ಮದೀಯ ಸಾಹುಕಾರರಿದ್ದರು. ಕ್ರಿ. ಶ. 1290ರಲ್ಲಿ ಇಲ್ಲಿಗೆ ಮಾರ್ಕೋಪೋಲೊ ಎಂಬ ಪ್ರಯಾಣಸ್ಥನು ಬಂದಾಗ ಚೀನಾದೇಶದ ವ್ಯಾಪಾರವು ಬಹಳ ಬಲವಾಗಿತ್ತು. ಆದರೆ ಈ ಸಮಯದಲ್ಲಿ ರೆಡ್‌ಸೀಯ (ಅರೇಬಿಯದ ಪಶ್ಚಿಮಕ್ಕಿರುವ) ವ್ಯಾಪಾರವು ಅದಕ್ಕಿಂತಲೂ ಹತ್ತು ಪಾಲು ಹೆಚ್ಚಾಗಿತ್ತು. ಕರಾವಳಿಯ ಮಾರ್ಗವು ಉತ್ತಮ ಸ್ಥಿತಿಯಲ್ಲಿತ್ತು. ಎರಡೂ ಕಡೆಗಳಲ್ಲಿ ಸಾಲುಮರಗಳಿದ್ದವು. ಪ್ರತಿ ½ಮೈಲಿಗೆ ಒಂದೊಂದು ಛತ್ರವಿದ್ದು ಅದರಲ್ಲಿ ಒಬ್ಬ ಹಿಂದುವು ಜಾಗ್ರತೆ ನೋಡುತ್ತಿದ್ದನು. ಹೊಲ ಗದ್ದೆಗಳೆಲ್ಲಾ ಸರಿಯಾಗಿ ಸಾಗುವಳಿ ಮಾಡಲ್ಪಡುತ್ತಿದ್ದವು. ಮನೆಗಳು ತೋಟಗಳ ಮಧ್ಯದಲ್ಲಿದ್ದವು. ಜನರು ಮೃಗಗಳ ಮೇಲೆ ಕೂತು ಪ್ರಯಾಣ ಮಾಡುತ್ತಿದ್ದರು. ರಾಜರು ಕುದುರೆಗಳ ಮೇಲೆ ಕೂತು ಸವಾರಿಮಾಡುತ್ತಿದ್ದರು. ಸಾಹುಕಾರರು ರೇಂಜುಗಳಲ್ಲಿಯೂ, ದೊಡ್ಡ ಜಮೀನುದಾರರು ದೋಲಿಗಳಲ್ಲಿಯೂ, ಪಲ್ಲಕ್ಕಿಗಳಲ್ಲಿಯೂ ಪ್ರಯಾಣಮಾಡುತ್ತಿದ್ದರು. ಪ್ರತಿ ಒಬ್ಬ ಸಾಹುಕಾರನು ಪ್ರಯಾಣಮಾಡುವಾಗ ಅವನ ಹಿಂದೆ 200-300 ಜನರು ಇರುತ್ತಿದ್ದರು. ಕಳ್ಳರ ಭಯವೇ ಇರಲಿಲ್ಲ. ಯಾಕೆಂದರೆ ಕಳ್ಳನಿಗೆ ಮರಣ ದಂಡನೆಯೇ ಶಿಕ್ಷೆಯಾಗಿತ್ತು". ಮೇಲಿನ ಸಂಗತಿಗಳಿಂದ ದೇಶವು ಉತ್ತಮ ಸ್ಥಿತಿಯಲ್ಲಿತ್ತೆಂದು ಹೇಳಬಹುದು.

ವೀರಪ್ರತಾಪ ಹರಿಹರರಾಯನು ವಿದ್ಯಾನಗರದಲ್ಲಿ ಶಾ. ಶ. 1270 ಕ್ರಿ. ಶ. 1348ರಲ್ಲಿ ಆಳುತ್ತಿದ್ದನೆಂದು 1921ನೇ ಇಸವಿಯ 'ಎಪಿಗ್ರಾಫಿಸ್ಟ ರಿಪೋರ್ಟ'ನ 9ನೇ ತಾಮ್ರಶಾಸನದಲ್ಲಿದೆ. ಹರಿಹರನ ತರುವಾಯ 1ನೇ ಕಂಪನು, ಇವನ ತರುವಾಯ ಇವನ ಮಗನಾದ 2ನೇ ಸಂಗಮನು ಪಟ್ಟಕ್ಕೆ ಬಂದನು. ಇದರಿಂದ ಹರಿಹರನ ತರುವಾಯ ಪಟ್ಟದ ಸಲುವಾಗಿ ಕದನಗಳು ಉಂಟಾಗಿ ಅವುಗಳಲ್ಲಿ ಹರಿಹರನ ತಮ್ಮನಾದ 1ನೇ ಬುಕ್ಕನು ಕಟ್ಟಕಡೆಗೆ ಜಯಶಾಲಿಯಾಗಿ ಕ್ರಿ. ಶ. 1354ರಲ್ಲಿ ಪಟ್ಟದ ಮೇಲೆ ಕುಳಿತುಕೊಂಡನು ಎಂದು ಕಾಣುತ್ತದೆ.

2. **ಬುಕ್ಕಣ್ಣ ಅಥವಾ ವೀರ ಬುಕ್ಕಣ್ಣ ಒಡೆಯ.** ಕ್ರಿ. ಶ. **1350-1379.** ಹರಿಹರನ ತರುವಾಯ ಅವನ ತಮ್ಮನಾದ ಬುಕ್ಕನು ವೀರ ಬುಕ್ಕಣ್ಣ ಒಡೆಯ ಎಂಬ ಹೆಸರಿನಿಂದ ಪಟ್ಟಕ್ಕೆ ಬಂದನು. ಇವನ ರಾಣಿ ಗೌರಾಂಬಿಕೆ; ಮಗನು 2ನೇ ಹರಿಹರ. ಇವನ ಕಾಲದಲ್ಲಿ ಒರಿಸ್ಸಾ ಸಹಿತವಾಗಿ ಇವನು ದಕ್ಷಿಣದ ಎಲ್ಲಾ ರಾಜ್ಯಗಳನ್ನು ಗೆದ್ದನು. ಇವನು ಈ ಎಲ್ಲಾ ರಾಜ್ಯಗಳನ್ನು ತನ್ನ ಬಾಹುಬಲದಿಂದ ಗೆದ್ದನೆಂದು ಹೇಳಲಿ ಕ್ಕಾಗದಿದ್ದರೂ ದಕ್ಷಿಣ ಹಿಂದೂಸ್ಥಾನದ ಎಷ್ಟೋ ರಾಜರು ಮುಸಲ್ಮಾ ನರ ಹಾವಳಿಯನ್ನು ತಡೆಯಲಾರದೆ, ಮುಸಲ್ಮಾನರ ಕೈಕೆಳಗಿರುವುದ ಕ್ಕಿಂತಲೂ, ಹಿಂದೂರಾಜರ ಸ್ವಾಮಿತ್ವಕ್ಕೆ ಅಧೀನರಾಗಿರುವುದು ಉತ್ತಮ ವೆಂದು ತಿಳಿದು 1ನೇ ಬುಕ್ಕನ ಆಡಳಿತೆಗೆ ಒಳಪಟ್ಟರೆಂದು ನಿಶ್ಚಯವಾಗಿ ಹೇಳಬಹುದು. ಈ ಅರಸನ ವಿಷಯ ಇಷ್ಟರ ವರೆಗೆ ಮಂಗಳೂರು ಅತ್ತಾವರದಲ್ಲಿ 1, ಬಾರಕೂರಿನಲ್ಲಿ 6, ಉಡುಪಿಯಲ್ಲಿ 1, ಕೋಟೇಶ್ವರ ದಲ್ಲಿ 3, ಫಲಮಾರಿನಲ್ಲಿ 1, ಬಂಟ್ವಾಳ ಮೂಡಗ್ರಾಮದಲ್ಲಿ 1 ಹೀಗೆ 13 ಶಾಸನಗಳು ಸಿಕ್ಕಿಯವೆ.

ಕ್ರಿ. ಶ. 1359-1365ರ ವರೆಗೆ ಮಲ್ಲಿಯ ಧಣಾಯಕನು ಬಾರ ಕೂರ ರಾಜ್ಯವನ್ನು ಆಳುತ್ತಿದ್ದನೆಂದು ಬಾರಕೂರು ಮೂಡಕೇರಿ ಸೋಮೇಶ್ವರ ದೇವಸ್ಥಾನದಲ್ಲಿಯೂ, ಪರಮೇಶ್ವರ ಭಟ್ಟರ ಮನೆಯ ಹತ್ತಿರವೂ, ಪದ್ಮನಾಭಭಟ್ಟರ ಮನೆಯ ಗೋಡೆಯಲ್ಲಿಯೂ, ಸೋಮ ಶಾಸ್ತ್ರಿ ಗಳ ಮನೆಯ ಹತ್ತಿರವೂ ಇರುವ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ. ಶ. **1336-1373**ರ ವರೆಗೆ ಮಹಾಪ್ರಧಾನ ಗೋಪರಸ ಒಡೆಯನು ಬಾರಕೂರಿನಲ್ಲಿ ಆಳುತ್ತಿದ್ದನೆಂದು ಬಾರಕೂರು ಅನಂತೇಶ್ವರ ದೇವಸ್ಥಾನದ ಎಡದಿಕ್ಕಿಗಿರುವ, ಮತ್ತು ಬಾರಕೂರು ಮೂಡಕೇರಿ ಸೋಮೇಶ್ವರ ದೇವಸ್ಥಾನದ ಪಶ್ಚಿಮ ಗೋಡೆಗೆ ವರಗಿಸಿರುವ ಶಾಸನಗಳಿಂದ ತಿಳಿದು ಬರುತ್ತದೆ. ಕ್ರಿ. ಶ. 1378-79ರ ವರೆಗೆ ಬೊಮ್ಮರಸ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದು ಕೋಟೇಶ್ವರದ ಕೋಟೇಶ್ವರ

ದೇವಸ್ಥಾನದಲ್ಲಿಯೂ ಬಾರಕೂರು ಮೂಡಕೇರಿ ಸೋಮೇಶ್ವರ ದೇವಸ್ಥಾನದಲ್ಲಿಯೂ ಇರುವ ಶಿಲಾಶಾಸನಗಳಿಂದ ತಿಳಿಯುತ್ತದೆ. ಶಂಕರದೇವ ಒಡೆಯನು ಮಂಗಳೂರು ಒಡೆಯನಾಗಿದ್ದನೆಂದು ಅತ್ತಾವರ ಚಕ್ರಪಾಣಿ ದೇವಸ್ಥಾನದ ಬಲಭಾಗದಲ್ಲಿರುವ ಶಿಲಾಶಾಸನದಿಂದ ತಿಳಿಯುತ್ತದೆ. ಬುಕ್ಕಣ್ಣ ಒಡೆಯನ ಕಾಲದಲ್ಲಿ ಮುಸಲ್ಮಾನರಿಗೂ ಇವನಿಗೂ ಆದ ಯುದ್ಧದಲ್ಲಿ ತುಳು ಅರಸರೆಲ್ಲರೂ ಬುಕ್ಕರಾಯನಿಗೆ ಸಹಾಯಮಾಡುತ್ತಿದ್ದರು. ಇವನ ಆಳಿಕೆಯ ಕಾಲದಲ್ಲಿ ರಾಜ್ಯದ ಒಳಗೂ ಹೊರಗೂ ಶಾಂತತೆಯು ಇತ್ತು. ಇವನು ಕ್ರಿ. ಶ. 1379ನೆಯ ಇಸವಿಯ ಎಪ್ರಿಲ್ ತಿಂಗಳ 20ರಲ್ಲಿ ಮರಣಹೊಂದಿದನು. ಬಳಿಕ ಇವನ ಮಗನಾದ 2ನೇ ಹರಿಹರನು ಪಟ್ಟಕ್ಕೆ ಬಂದನು.

**3. ಎರಡನೇ ಹರಿಹರರಾಯ ಕ್ರಿ. ಶ. 1379—1404.** ವೀರ ಬುಕ್ಕಣ್ಣ ಒಡೆಯನು ಕಾಲವಾದ ನಂತರ ಅವನ ಮಗನಾದ ಹರಿಹರನು 2ನೇ ಹರಿಹರರಾಯನೆಂಬ ಹೆಸರಿನಿಂದ ಆಳತೊಡಗಿದನು. 1ನೇ ಹರಿಹರನಾಗಲೀ ವೀರ ಬುಕ್ಕಣ್ಣನಾಗಲೀ ಒಡೆಯನೆಂಬ ಹೆಸರಿನಿಂದಲೇ ಆಳುತ್ತಿದ್ದರು. 2ನೇ ಹರಿಹರನೇ ಮೊದಲು ಮಹಾರಾಜಾಧಿರಾಜ ಎಂಬ ಬಿರುದನ್ನು ಇಟ್ಟುಕೊಂಡನೆಂದು ಶಿಲಾಲೇಖನಗಳಿಂದ ತಿಳಿಯುತ್ತದೆ. ಇವನ ಕಾಲದಲ್ಲಿ ಸಲುವ ವಂಶದ ಗುಂಡನು ಮಹಾಪ್ರಧಾನಿಯೂ ಸೇನಾಧಿಪತಿಯೂ ಆಗಿದ್ದನು. ಈ ಸೇನಾಧಿಪತಿಯು ಕೇರಳ, ತುಳು, ಆಂಧ್ರ, ಕರ್ಣಾಟಕ ರಾಜ್ಯಗಳ ಕಪ್ಪವನ್ನು ಪಡೆದು ರಾಜನಿಗೆ ಕಳುಹಿಸುತ್ತಿದ್ದನು. ಸಾಯಣಾಚಾರ್ಯನು ಇವನ ಮುಖ್ಯ ಮಂತ್ರಿಯಾಗಿದ್ದನು.

ಹರಿಹರರಾಯನ ಕಾಲದ ಶಾಸನಗಳು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಇಷ್ಟರ ವರೆಗೆ 21 ಸಿಕ್ಕಿಯವೆ. ಇವನ ಕಾಲದ ಮೊದಲನೇ ಶಾಸನಗಳು, ಎಂದರೆ ಶಾ. ಶ. 1301 (ಕ್ರಿ. ಶ. 1379)ರ ಒಂದು ಮೂಡಕೇರಿ ಸೋಮೇಶ್ವರ ದೇವಸ್ಥಾನದಲ್ಲಿಯೂ ಮತ್ತೊಂದು ಮಣಿಗಾರ

ಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿಯೂ ಇವೆ. ಕ್ರಿ. ಶ. 1379ರಲ್ಲಿ ಬೊಮ್ಮರಸ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದು ಮೂಡಕೇರಿ ಸೋಮೇಶ್ವರ ಮತ್ತು ಗೋಪಾಲಕೃಷ್ಣ ದೇವಸ್ಥಾನಗಳಲ್ಲಿರುವ ಶಾಸನಗಳಿಂದಲೂ ಕ್ರಿ. ಶ. 1380ರಲ್ಲಿ ಬಾರಕೂರು ರಾಜ್ಯವನ್ನು ಜಕ್ಕಣ್ಣ ಒಡೆಯನು ಆಳುತ್ತಿದ್ದನೆಂದೂ ಕ್ರಿ. ಶ. 1387ರಿಂದ 1390ರ ವರೆಗೆ ತುಳು, ಹೈಗ, ಕೊಂಕಣ ರಾಜ್ಯಗಳನ್ನು ಬಾರಕೂರು ರಾಜಧಾನಿಯಿಂದ ಮಲ್ಲಪ್ಪ ಒಡೆಯನು ಆಳುತ್ತಿದ್ದನೆಂದೂ ಬಾರಕೂರು ಚೌಳಿಕೇರಿಯಲ್ಲಿ ವಾಸವಾಡುವ ಸುಬ್ರಾಯ ಭಟ್ಟರ ಮನೆಯ ಹತ್ತಿರವಿರುವ ಶಾಸನದಿಂದಲೂ, ಮಣೆಗಾರ ಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿರುವ 2 ಶಾಸನಗಳಿಂದಲೂ ತಿಳಿದುಬರುತ್ತದೆ. ಕ್ರಿ. ಶ. 1390ರಲ್ಲಿ ಮಂಗರಸ ಒಡೆಯನು ಮಂಗಳೂರು ರಾಜ್ಯವನ್ನು ಆಳುತ್ತಿದ್ದನೆಂದು ಮೂಡಬಿದರೆ ಬಂಗ್ಲೆಯಿಂದ 1 ಮೈಲು ಆಗ್ನೇಯಕ್ಕೆ ಇರುವ (ಗುರುಬಸದಿಗೆ ಉಂಬಳಿಬಿಟ್ಟ) ಒಂದು ಶಾಸನದಿಂದ ತಿಳಿಯಬಹುದು. ಕ್ರಿ. ಶ. 1392ರಲ್ಲಿ ಸಿಂಗಣ್ಣ ಒಡೆಯನು ಬಾರಕೂರು ರಾಜಧಾನಿಯಿಂದ ತುಳುಮಲಹ ರಾಜ್ಯಗಳನ್ನು ಆಳುತ್ತಿದ್ದನೆಂದು ಚೌಳಿಕೇರಿ ಗಣಪತಿ ದೇವಸ್ಥಾನದಲ್ಲಿರುವ ಒಂದು ಶಾಸನದಿಂದ ತಿಳಿಯಬಹುದು. ಕ್ರಿ. ಶ. 1394-1395ರಲ್ಲಿ ಶಂಕರದೇವ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದು ಮಣೆಗಾರ ಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿಯೂ ಉಡುಪಿ ಕೃಷ್ಣಮಠದ ಗೋಡೆಯಲ್ಲಿರುವ 4ನೇ ಕಲ್ಲಿನಲ್ಲಿಯೂ ಇರುವ ಶಾಸನಗಳಿಂದ ತಿಳಿಯಬಹುದು. ಕ್ರಿ. ಶ. 1402ರಲ್ಲಿ ಬಸವಣ್ಣ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದೂ ಮೂಡಕೇರಿ ಸುಬ್ಬಣ್ಣ ಅಡಿಗಳ ಮನೆಯಲ್ಲಿರುವ 2 ಶಾಸನಗಳಿಂದಲೂ ತಿಳಿಯಬಹುದು. ಹರಿಹರರಾಯನು ಕದರೆ ಮಂಜುನಾಥ, ಕಾಂತಾವರ ಕಾಂತೇಶ್ವರ, ಬಾರಕೂರು ಮೂಡಕೇರಿ ಸೋಮೇಶ್ವರ, ಗೋಪಾಲಕೃಷ್ಣ ಚೌಳಿಕೇರಿ

ಗಣಪತಿ, ಮಣೆಗಾರಕೇರಿ ಸೋಮನಾಥೇಶ್ವರ, ಕೋಟಿಕೇರಿ ಪಂಚ ಲಿಂಗೇಶ್ವರ, ಉಡುಪಿ ಕೃಷ್ಣ, ಎರ್ಮಾಳ ಜನಾರ್ಧನ ದೇವಸ್ಥಾನಗ ಳಿಗೂ, ಮೂಡಬಿದರೆ ಗುರುಬಸದಿಗೂ, ಉಂಬಳಿಬಿಟ್ಟಿರುತ್ತಾನೆ. ಬಾರ ಕೂರಲ್ಲಿ ಕ್ರಿ. ಶ. 1392ರಲ್ಲಿ ಒಂದು ಅನ್ನ ಛತ್ರಕ್ಕೆ ಉಂಬಳಿ ಬಿಟ್ಟಿರುತ್ತಾನೆ.

ಹರಿಹರನಿಗೆ 2ನೇ ವಿರೂಪಣ್ಣ ಅಥವಾ 1ನೇ ವಿರೂಪಾಕ್ಷ, 2ನೇ ಬುಕ್ಕ, 1ನೇ ದೇವರಾಯ ಎಂಬ ಮೂವರು ಮಕ್ಕಳಿದ್ದರು. ಕ್ರಿ. ಶ. 1404ರಲ್ಲಿ 2ನೇ ಹರಿಹರನು ಕಾಲವಾದನು. ಹರಿಹರನ ಮರಣಾನಂತರ ಪಟ್ಟಕ್ಕಾಗಿ ಮೂವರು ಮಕ್ಕಳೊಳಗೆ ಕದನಗಳು ನಡೆ ದವು. 1ನೇ ದೇವರಾಯನು ಕ್ರಿ. ಶ. 1406ರಲ್ಲಿ ಪಟ್ಟಕ್ಕೆ ಬಂದನು. ಇದರಿಂದ 1404ರಿಂದ 1406ರ ವರೆಗೆ ಸ್ವಲ್ಪ ಸಮಯ 1ನೇ ವಿರೂಪಾಕ್ಷನೂ ಸ್ವಲ್ಪ ಸಮಯ 2ನೇ ಬುಕ್ಕನೂ ಆಳಿದರೆಂದು ಹೇಳ ಬಹುದು. 2ನೇ ವೀರಬುಕ್ಕಣ್ಣ ಒಡೆಯರ ಶಾಲಿವಾಹನಶಕ 1329ರ ಒಂದು ಶಾಸನವು ಮೂಡಬಿದರೆ ಗುರು ಬಸದಿಯಲ್ಲಿದೆ. ಈ ಸಮಯದಲ್ಲಿ ಬಾರಕೂರು ರಾಜ್ಯವನ್ನು ಬಚ್ಚಪ್ಪ ಒಡೆಯನು ಆಳುತ್ತಿದ್ದನೆಂದೂ ಆ ಬಸದಿಗೆ ಇವನು ಭೂದಾನ ಬಿಟ್ಟ ವಿಷಯವೂ ಇದೆ.

**4. 1ನೇ ದೇವರಾಯ** ಕ್ರಿ. ಶ. 1406—1419. ವೀರ ಪ್ರತಾಪ 1ನೇ ದೇವರಾಯನು ಕ್ರಿ. ಶ. 1406—1407ರಲ್ಲಿ ಪಟ್ಟಕ್ಕೆ ಬಂದನು. ಮುದಗಲಿನಲ್ಲಿ ಅತೀ ರೂಪವತಿಯಾದ ಒಬ್ಬ ಕುಮಾರಿಯು ಇದ್ದಳು. ಒಂದನೇ ದೇವರಾಯನು ಈ ಕುಮಾರಿಯನ್ನು ಸಂಪಾದಿಸು ವದಕ್ಕಾಗಿ ಕ್ರಿ. ಶ. 1406ನೇ ವರ್ಷದ ಅಂತ್ಯದಲ್ಲಿ, ಒಂದು ದೊಡ್ಡ ಸೈನ್ಯದೊಡನೆ ವಿಜಯನಗರದಿಂದ ಹೊರಟನು. ಮುದಗಲ್ಲಿಗೆ ಹೋಗು ವಾಗ, ಬಹಮಿನಿರಾಜ್ಯಕ್ಕೂ ವಿಜಯನಗರಕ್ಕೂ ವಿವಾದಾಸ್ಪದವಾದ ಸ್ಥಳದಿಂದ ಒಂದನೇ ದೇವರಾಯನು ಸೈನ್ಯದೊಡನೆ ದಾಟಿದನು. ಈ ತಪ್ಪಿಗಾಗಿ ಕ್ರಿ. ಶ. 1406ನೇ ವರ್ಷದ ಛಳಿಗಾಲದ ಆರಂಭದಲ್ಲಿ

ಬಹಮನಿಯ ಸುಲ್ತಾನನು ದೊಡ್ಡ ದಂಡಿನೊಡನೆ ವಿಜಯನಗರ ಪಟ್ಟಣಕ್ಕೆ ಬಂದು ಕೆಲವು ಓಣಿಗಳನ್ನು ಹಿಡಕೊಂಡನು. ಇದನ್ನು ನೋಡಿ ರಾಯನು ಸಂಧಾನಮಾಡಿದನು. ಇದರಲ್ಲಿ ಅವನು ತನ್ನ ಸೊಕ್ಕು ಮುರಿಯುವ ಕರಾರುಗಳಿಗೆ ಒಳಪಡಬೇಕಾಯಿತು. ಈ ಒಪ್ಪಂದದಿಂದ ರಾಯನು ಸುಲ್ತಾನನಿಗೆ ತನ್ನ ಮಗಳನ್ನು ಕೊಡಲಿಕ್ಕೂ, ಯುದ್ಧದ ಖರ್ಚನ್ನು ಕೊಟ್ಟು ಬಂಕಾಪುರದ ಕೋಟೆಯನ್ನು ಬಿಟ್ಟು ಬಿಡಲಿಕ್ಕೂ ಒಪ್ಪಿಕೊಂಡನು. ಕರ್ಣಾಟಕದ ರಾಯರು ತಮ್ಮ ಮಕ್ಕಳನ್ನು ಅನ್ಯಜಾತಿಯವರಿಗೆ ಎಂದೂ ಲಗ್ನಮಾಡಿಕೊಟ್ಟಿದ್ದಿಲ್ಲ. ಹಾಗೆ ಮಾಡುವುದು ತೀರ ಅಪಮಾನಕರವಾದದ್ದೆಂದು ಅವರು ತಿಳಿಯುತ್ತಿದ್ದರು. ಆದರೆ ದೇವರಾಯನು ಸುಲ್ತಾನನಿಗೆ ತನ್ನ ಮಗಳನ್ನು ಕೊಡದ ಹೊರತು ನಿರ್ವಾಹವಿಲ್ಲದ ಹಾಗಾಯಿತು. ಆದರೆ 1ನೇ ದೇವರಾಯನ ತನ್ನ ವೇಶ್ಯಾಂಗನೆಯರಲ್ಲಿ ಒಬ್ಬಳ ಮಗಳನ್ನು ಕೊಟ್ಟು ಸುಲ್ತಾನನನ್ನು ಮೋಸಗೊಳಿಸಿರಬಹುದು.

1ನೇ ದೇವರಾಯನ ಕಾಲದ ಶಾಸನಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 7 ಸಿಕ್ಕಿಯವೆ. ಕ್ರಿ. ಶ. 1413ರಿಂದ 1421ರ ವರೆಗೆ ಶಂಕರದೇವ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದು ಬಾರಕೂರು ಸೋಮೇಶ್ವರ ದೇವಸ್ಥಾನದಲ್ಲಿಯೂ, ಚೌಳಿಕೇರಿ ಗಣಪತಿ ದೇವಸ್ಥಾನದಲ್ಲಿಯೂ, ಮಣೆಗಾರಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿಯೂ ಇರುವ ಶಾಸನಗಳಿಂದ ತಿಳಿದುಬರುತ್ತದೆ. ಇವನ ರಾಣಿ ಹೇಮಾಂಬಿಕಾ. ಮಗನು ವೀರವಿಜಯ ಅಥವಾ ವಿಜಯ ಭೂಪತಿ, ದೇವರಾಯನ ಮರಣಾನಂತರ ವಿಜಯ ಭೂಪತಿಯು ಸ್ವಲ್ಪ ಸಮಯ ಆಳಿದನು. ಇವನಿಗೆ ನಾರಾಯಣಾಂಬಿಕೆ ಎಂಬ ಮಗಳಲ್ಲಿ 2ನೇ ದೇವರಾಯ ಮತ್ತು ಪ್ರತಾಪದೇವರಾಯ ಎಂಬ ಇಬ್ಬರು ಮಕ್ಕಳಿದ್ದರು. ವಿಜಯಭೂಪತಿಯ ತರುವಾಯ ಹಿರೇ ಮಗನಾದ 2ನೇ ದೇವರಾಯನು ಪಟ್ಟಕ್ಕೆ ಬಂದನು.

5. **2ನೇ ದೇವರಾಯ.** ಕ್ರಿ. ಶ. 1429—1451. 2ನೇ ದೇವರಾಯನ ಕ್ರಿ. ಶ. 1418ರ ಶಾಸನವು ಪಾವಂಜೆ ಮಹಾಲಿಂಗೇಶ್ವರ ದೇವಸ್ಥಾನದಲ್ಲಿದ್ದದರಿಂದ ಇವನು 1418-19ರಲ್ಲಿಯೇ ಪಟ್ಟಕ್ಕೆ ಬಂದನೆಂದು ಹೇಳಬಹುದು. 2ನೇ ದೇವರಾಯನ ಕಾಲದಲ್ಲಿ ವಿಜಯ ನಗರ ರಾಜ್ಯವು ಬಹಳ ಉನ್ನತಿ ಸ್ಥಿತಿಗೆ ಬಂದು, ಅನಂತರ ಅದರ ವೈಭವವು ಕಡಿಮೆಯಾಯಿತು. ಕ್ರಿ. ಶ. 1420ರಲ್ಲಿ ಇಟಲೀದೇಶದ ಒಬ್ಬ ನಿಕೋಲೋಕೊಂಟಿ ಎಂಬವನು ಹಿಂದೂದೇಶದಲ್ಲಿ ಪ್ರಯಾಣ ಮಾಡಲಿಕ್ಕೆ ಬಂದನು. ಇವನು ಗುಜರಾಥದಲ್ಲಿಯ ಕಾಂಬೆಪಟ್ಟಣಕ್ಕೆ ಬಂದು ಅಲ್ಲಿ 20 ದಿವಸ ನಿಂತು ಅಲ್ಲಿಂದ ಹಡಗದ ದಾರಿಯಾಗಿ ತುಳುರಾಜ್ಯದ ರಾಜಧಾನಿಯಾದ ಬಾರಕೂರಿಗೆ ಬಂದು, ಅಲ್ಲಿಂದ ಹೊಸಂಗಡಿ ಗಟ್ಟದ ದಾರಿಯಾಗಿ ವಿಜಯನಗರಕ್ಕೆ ಮುಟ್ಟಿದನು. ಅವನು ಇದನ್ನು ಹೀಗೆ ವರ್ಣಿಸಿರುತ್ತಾನೆ. "ವಿಜಯನಗರವು 60 ಮೈಲು ಸುತ್ತಳತೆಯುಳ್ಳ ದೊಡ್ಡ ಪಟ್ಟಣ. 90 ಸಾವಿರ ಸೈನಿಕರಿದ್ದಾರೆ. ಸಹಗಮನವು ನಡಿಯುತ್ತದೆ. ಇಲ್ಲಿಯ ಅರಸರು ಹಿಂದೂಸ್ಥಾನದ ಎಲ್ಲಾ ಅರಸರಿಗಿಂತ ಹೆಚ್ಚು ಬಲಾಢ್ಯರಿರುತ್ತಾರೆ. ಇವನಿಗೆ 12 ಸಾವಿರ ಹೆಂಡಿರು. ಇವರಿಗೆ ವರ್ಷದೊಳಗೆ 3 ಹಬ್ಬಗಳು. 1ನೇ ಯುಗಾದಿ ಹಬ್ಬ. 2ನೇ ದೀಪಾವಳಿ. 3ನೇ ಮಹಾನವಮಿ. ಗೋವಳಕೊಂಡದಲ್ಲಿ ವಜ್ರದ ಗನಿಗಳು ಇವೆ. ಕಾಂಬೇ ಪ್ರಾಂತದ ಜನರು ಮಾತ್ರ ಕಾಗದದ ಮೇಲೆ ಬರೆಯುತ್ತಾರೆ. ಉಳಿದವರು ಓಲೆಯ ಮೇಲೆ ಬರಿಯುತ್ತಾರೆ.''

ಕ್ರಿ. ಶ. 1431-32ರಲ್ಲಿ ಕಾರ್ಕಳದಲ್ಲಿ ಆಳುತ್ತಿದ್ದ ಭೈರವ ರಾಯನ ಮಗ ವೀರಪಾಂಡ್ಯನು ಕಾರ್ಕಳ ಗೋಮಟೇಶ್ವರ ವಿಗ್ರಹವನ್ನು ಪ್ರತಿಷ್ಠಿಸಿದನು. ಇದರ ಪ್ರತಿಷ್ಠೆಯ ಸಮಯ 2ನೇ ದೇವರಾಯನು ಕಾರ್ಕಳಕ್ಕೆ ಬಂದಿದ್ದನು. ಆಗ ವೀರಪಾಂಡ್ಯನು ದೇವರಾಯನನ್ನು

ರಾಜವೈಭವದಿಂದ ತನ್ನ ಗುರುಗಳ ಸಮೇತ ಎಲ್ಲಾ ಬಿರುದಾವಳಿಗಳೊಡನೆ ಕರೆದುಕೊಂಡು ಗೋಮಟೇಶ್ವರನ ಬಸದಿಗೆ ಬಂದನು.

ಪರ್ಷಿಯಾದೇಶದ ಅರಸನಾದ ಕಕ್ಕಲಿಯನ್ ಎಂಬವನ ರಾಯಭಾರಿಯಾದ ಅಬ್ದುಲ್ ರಜಾಕನು ಕ್ರಿ. ಶ. 1442ನೇ ಇಸವಿಯ ಜನವರಿ ತಿಂಗಳ 13ನೇ ತಾರೀಕಿನ ದಿವಸ ಹಿಂದುಸ್ಥಾನಕ್ಕೆ ಹೊರಟು ಅದೇ ವರ್ಷದ ನವಂಬರ ತಿಂಗಳ ಆರಂಭದಲ್ಲಿ ಕಲ್ಲಿಕೋಟೆ ಪಟ್ಟಣಕ್ಕೆ ಮುಟ್ಟಿದನು. ಅಲ್ಲಿ 1443ನೇ ಇಸವಿಯ ಎಪ್ರಿಲ್ ತಿಂಗಳ ವರೆಗೆ ನಿಂತು ಅಲ್ಲಿಂದ ವಿಜಯನಗರದ ಮೇರೆಯಾದ ಮಂಗಳೂರು ಪಟ್ಟಣಕ್ಕೆ ಸಮುದ್ರಮಾರ್ಗವಾಗಿ ಬಂದು, ಎರಡು ಮೂರು ದಿವಸ ನಿಂತು ಅಲ್ಲಿಂದ 12 ಮೈಲು ಪೂರ್ವಕ್ಕೆ ಬಹಳ ಸುಂದರವಾದ ದೇವಸ್ಥಾನವನ್ನು ನೋಡಿದನಂತೆ. ಅವನು ಹೇಳುವ ಪ್ರಕಾರ ದೇವಸ್ಥಾನವು 30 ಅಡಿ ಚಚ್ಚೌಕವಾಗಿತ್ತು. 15 ಅಡಿ ಎತ್ತರ. ಒಳಗಡೆ 3 ಸುತ್ತುಗಳು. ಗರ್ಭಗ್ರಹಕ್ಕೆ ಕಂಚಿನ ತಗಡು ಮುಚ್ಚಿತ್ತು. ಗರ್ಭಗ್ರಹದಲ್ಲಿ ಒಬ್ಬ ಮನುಷ್ಯನಷ್ಟು ಎತ್ತರವಾದ ಚಿನ್ನದಿಂದ ಮಾಡಿದ ಪ್ರತಿಮೆಯು ಇತ್ತು. 2 ಕಣ್ಣುಗಳ ದೃಷ್ಟಿಗೆ 2 ಕೆಂಪು ರತ್ನಗಳಿದ್ದವು. ಈ ದೇವಸ್ಥಾನವನ್ನು ನೋಡಿ, ಜನಭರಿತವಾದ ಪಟ್ಟಣದ ತರುವಾಯ ಪಟ್ಟಣವನ್ನು ಹಳ್ಳಿಯ ತರುವಾಯ ಹಳ್ಳಿಯನ್ನು ದಾಟಿ ಬರುವಾಗ ಗಟ್ಟಗಳು ಎದುರಿಗೆ ಕಾಣಬಂದುವು. ಅದನ್ನು ದಾಟಿ ವಿಜಯನಗರಕ್ಕೆ ಬಂದೆನೆಂದು ಹೇಳಿರುತ್ತಾನೆ. ಇದರಿಂದ ಅಬ್ದುಲರಜಾಕನು, ಮಂಗಳೂರನ್ನು ಆಳುತ್ತಿದ್ದ ಹಾವಳಿ ಬಂಗರಾಜನ ಸತ್ಕಾರಗಳನ್ನು ಪಡೆದು, ಮಂಗಳೂರಿನಿಂದ ಸುಮಾರು 12 ಮೈಲು ದೂರವಿರುವ ಪೊಳಲಿ ದೇವಸ್ಥಾನವನ್ನು ನೋಡಿ, ಬಂಟವಾಳಕ್ಕೆ ಬಂದು, ನಾವೂರು, ಸರ್ಪಾಡಿ, ಅಗ್ರಹಾರಗಳ ಮಾರ್ಗವಾಗಿ ಉಪ್ಪಿನಂಗಡಿಗೆ ಹೋಗಿ, ಅಲ್ಲಿಂದ ಬೆಳತಂಗಡಿ, ಬಂಗಾಡಿಗೆ ತಲ್ಪಿ ಕಡದಕಲ್ಲುಕಣಿವೆಯ ದಾರಿಯಾಗಿ ವಿಜಯನಗರಕ್ಕೆ ಹೋದನೆಂದು ಹೇಳಬಹುದು. ಪೊಳಲಿಯ ರಾಜರಾಜೇಶ್ವರಿಯ ಪ್ರತಿಮೆಯು

ಒಂದು ಪುರುಷಪ್ರಮಾಣವಿದೆ. ದೇವಸ್ಥಾನವು ಈ ರಾಯಭಾರಿಯು ಹೇಳಿದ ರೀತಿಯಲ್ಲಿಯೇ ಇದೆ. ಬಂಗಾರದ ಕವಚ ಮಾತ್ರ ಈಗ ಇಲ್ಲ. ರತ್ನಖಚಿತವಾದ ಬಂಗಾರದ ಕಿರೀಟ ಮಾತ್ರ ಉಳಿದಿದೆ. ಕೆಲವರು, ಇವನು ಕೊಲ್ಲೂರು ಗಟ್ಟದ ದಾರಿಯಾಗಿ ಬಿದನೂರು ಪಟ್ಟಣಕ್ಕೆ ಹೋಗಿ ಅಲ್ಲಿಂದ ವಿಜಯನಗರಕ್ಕೆ ಹೋದನೆಂದು ಹೇಳುತ್ತಾರೆ. ಅವನು ನೋಡಿದ ದೇವಸ್ಥಾನವು ಕೊಲ್ಲೂರು ಮುಕಾಂಬಿಕೆ ದೇವಸ್ಥಾನವೆಂದು ಹೇಳಲು ಸಾಧ್ಯವಿಲ್ಲ. ಯಾಕಂದರೆ ಅಲ್ಲಿಯ ದೇವಸ್ಥಾನದಲ್ಲಿ ರತ್ನಖಚಿತ ವಾದ ಮೂರ್ತಿ ಇದ್ದರೂ ಅದು ಸಣ್ಣ ಪ್ರತಿಮೆ. ಕೊಲ್ಲೂರು ಗಟ್ಟದ ಬುಡದಲ್ಲಿಯೇ ಇದೆ. ಅದರ ನಂತರ ಪಟ್ಟಣಗಳಿಲ್ಲ. ಆ ದೇವಸ್ಥಾನದ ಐಶ್ವರ್ಯವೂ ಅಷ್ಟು ಹೆಚ್ಚಾಗಿ ಆ ಸಮಯದಲ್ಲಿ ಇರಲಿಲ್ಲ. ಈ ದೇವ ಸ್ಥಾನವು ಇಕ್ಕೇರಿ ಅರಸರ ಕಾಲದಲ್ಲಿ ಬಹಳ ಉನ್ನತಸ್ಥಿತಿಗೆ ಬಂತು. ಬಿದನೂರು ಎಂಬ ಪಟ್ಟಣವು ಆ ಸಮಯದಲ್ಲಿ ಪಟ್ಟಣವಾಗಿರಲಿಲ್ಲ. ಅದಕ್ಕೆ ಬಿದರಳ್ಳಿ ಎಂದು ಹೆಸರಿತ್ತು. ಅದು ಸಹ ಇಕ್ಕೇರಿಯವರ ಕಾಲ ದಲ್ಲಿಯೇ ಉಂಟಾಯಿತು. ಅದಲ್ಲದೆ ಈ ದಾರಿಯಾಗಿ ಹೋಗುವುದಾದರೆ ಬಾರಕೂರು ದಾರಿಯಾಗಿ ಕೊಲ್ಲೂರಿಗೆ ಹೋಗಬೇಕಿತ್ತು. ಆ ಸಮಯ ದಲ್ಲಿ ಮಂಗಳೂರಿನಿಂದ ಕಡದಕಲ್ಲುಕಣಿವೆಯ ದಾರಿಯೇ ಹೆದ್ದಾರಿ ಯಾಗಿತ್ತು. ಮಾರ್ಗದಲ್ಲಿ ಗಟ್ಟದ ಬುಡದ ವರೆಗೆ ದೊಡ್ಡ ಪಟ್ಟಣಗಳು ಇದ್ದವು. ಆದ್ದರಿಂದ ಅಬ್ದುಲರಜಾಕನು ನೋಡಿದ ದೇವಸ್ಥಾನವು ಪೊಳಲಿ ದೇವಸ್ಥಾನವೇ ಆಗಿರಬೇಕು.

ಅಬ್ದುಲ್ ರಜಾಕನು ವಿಜಯನಗರದ ವಿಷಯ ಹೀಗೆ ಬರೆದಿರು ತ್ತಾನೆ:—"2ನೇ ದೇವರಾಯನು ನನ್ನನ್ನು ಬಹಳ ವೈಭವಗಳಿಂದ ಕರ ಕೊಂಡು ಹೋಗಿ ಅತೀ ವಿಶಾಲವಾದ ಮನೆಯಲ್ಲಿ ನಿಲ್ಲಿಸಿದನು. ಈ ಅರಸನ ರಾಜ್ಯವು ಕೃಷ್ಣಾನದಿಯಿಂದ ಕನ್ಯಾಕುಮಾರಿಯ ವರೆಗೆ ಹಬ್ಬಿರುತ್ತದೆ. ಸಾವಿರಕ್ಕಿಂತ ಹೆಚ್ಚು ಆನೆಗಳು ಇವೆ. 11 ಲಕ್ಷ ಸೈನ್ಯವಿದೆ. ಹಿಂದೂಸ್ಥಾನದಲ್ಲೆಲ್ಲಾ ಇಂಥಾ ಸಾರ್ವಭೌಮನನ್ನು

ನೋಡುವುದು ಅಪರೂಪ. ಈ ಪಟ್ಟಣದಂಥ ಇನ್ನೊಂದು ಪಟ್ಟಣವನ್ನು ಕಣ್ಣು ಎಂದೂ ಕಂಡಿಲ್ಲ. ಇಂಥ ಇನ್ನೊಂದು ಪಟ್ಟಣವು ಭೂಮಿಯ ಮೇಲೆ ಎಲ್ಲಿಯಾದರೂ ಉಂಟೆಂದು ಕಿವಿಯು ಇದು ವರೆಗೆ ಕೇಳಿಲ್ಲ. ಇದರ ಸುತ್ತಲೂ 7 ಗೋಡೆಗಳಿವೆ. ಎಲ್ಲಿ ನೋಡಿದರೂ ಗುಲಾಬಿ ಹೂವುಗಳ ವ್ಯಾಪಾರವು ಬಹಳ ನಡೆಯುತ್ತದೆ. ಒಂದು ಉದ್ಯೋಗದ ಜನರ ಅಂಗಡಿಗಳೆಲ್ಲ ಒತ್ತಟ್ಟಿಗಿರುವವು. ರಮಣೀಯವಾದ ಸ್ಥಳದಲ್ಲಿಯೂ ಅರಮನೆಯಲ್ಲಿಯೂ ಒಪ್ಪುಹಾಕಿ ನುಣುಪು ಮಾಡಿದ ಕಲ್ಲುಗಳಿಂದ ಕಟ್ಟಿದ ಎಷ್ಟೋ ನೀರಿನ ಕಾಲಿವೆಗಳು ಹರಿಯುತ್ತವೆ. ಸಿಂಹಾಸನವು ಬಂಗಾರದಿಂದ ಮಾಡಲ್ಪಟ್ಟದ್ದಾಗಿ ಅಮೂಲ್ಯವಾದ ರತ್ನಗಳಿಂದ ಶೋಭಾಯಮಾನವಾಗಿ ಕಾಣುತ್ತಿದೆ. ಮಹಾನವಮಿಯ ಸಮಯ ಅರಸನು 3 ದಿವಸ ಅದರ ಮೇಲೆ ಕುಳಿತುಕೊಳ್ಳುವನು !

2ನೇ ದೇವರಾಯನ ಶಾಸನಗಳು ಇಷ್ಟರವರೆಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 32 ಸಿಕ್ಕಿಯವೆ. 2ನೇ ದೇವರಾಯನು ಬಸರೂರು ಕೋಟೇಶ್ವರ ದೇವರಿಗೂ, ಮಹಾಲಿಂಗೇಶ್ವರ ದೇವರಿಗೂ ಅಲ್ಲಿಯೇ ಒಂದು ಅನ್ನಛತ್ರಕ್ಕೂ, ಅಟ್ಟಂಗಡಿ ಚಂದ್ರನಾಥ ದೇವರಿಗೂ, ಉಳುರು ಮಠಕ್ಕೂ, ವಿಲ್ಲಪುಂದ ದುರ್ಗಾದೇವರಿಗೂ, ಪಡುಪಣಂಬೂರು ದೇವ ಸ್ಥಾನಕ್ಕೂ, ಪಾವಂಜೆ ಮಹಾಲಿಂಗೇಶ್ವರ ದೇವಸ್ಥಾನಕ್ಕೂ, ಕಾಂತಾವರ ಬಡಗಣ ಮಠಕ್ಕೂ, ಮೂಡಬಿದರೆ ಹೊಸ ಬಸದಿಗೂ, ಮೂಡಕೇರಿ ಸೋಮೇಶ್ವರ ದೇವಸ್ಥಾನಕ್ಕೂ, ಚೌಳಿಕೇರಿ ಗಣಪತಿ ದೇವಸ್ಥಾನಕ್ಕೂ, ಮಣಿಗಾರಕೇರಿ ಸೋಮನಾಥೇಶ್ವರ ದೇವಸ್ಥಾನಕ್ಕೂ, ಕೋಟಿಕೇರಿ ಪಂಚಲಿಂಗೇಶ್ವರ ದೇವಸ್ಥಾನಕ್ಕೂ, ಪಸರಾಲಿ ದೇವಸ್ಥಾನಕ್ಕೂ, ಉಡುಪಿ ಕೃಷ್ಣಮಠಕ್ಕೂ, ಉದಿಯಾವರ ಶಂಬುಕಲ್ಲು ಭೈರವ ದೇವಸ್ಥಾನಕ್ಕೂ, ವಾರಂಗ ನೇಮಿನಾಥನಿಗೂ, ಉಂಬಳಿಯನ್ನು ಬಿಟ್ಟಿರುತ್ತಾನೆಂದು ಅಲ್ಲ ಲ್ಲಿರುವ ಶಾಸನಗಳಿಂದ ತಿಳಿಯಬಹುದು.

ಕ್ರಿ. ಶ. 1418ರಲ್ಲಿ ಬಾರಕೂರು, ಮಂಗಳೂರು ರಾಜ್ಯಗಳನ್ನು ಅಣ್ಣಪ್ಪಒಡೆಯನು ಆಳುತ್ತಿದ್ದನೆಂದು ಪಾವಂಜೆ ಮಹಾಲಿಂಗೇಶ್ವರ ದೇವಸ್ಥಾನದ ಮುಂದುಗಡೆ ಇರುವ ಶಾಸನದಲ್ಲಿದೆ. ಕ್ರಿ. ಶ. 1429 ರಲ್ಲಿ ತಿಮ್ಮಣ್ಣಒಡೆಯನು ಮಂಗಳೂರು ರಾಜ್ಯವನ್ನು ಆಳುತ್ತಿದ್ದ ನೆಂದು ಕೊಡಿಯಾಲಬೈಲಿನಲ್ಲಿ 26ನೇ ವರ್ಗಸ್ಥಳದಲ್ಲಿರುವ ಶಾಸನ ದಲ್ಲಿದೆ. ಕ್ರಿ. ಶ. 1425ರಲ್ಲಿ ನಾಗಣ್ಣಒಡೆಯನು ಮಂಗಳೂರು ರಾಜ್ಯವನ್ನು ಆಳುತ್ತಿದ್ದನೆಂದೂ ಮಂಗಳೂರಿನ ಹತ್ತಿರ ಬೋಳೂರು 6ನೇ ವರ್ಗಸ್ಥಳದಲ್ಲಿರುವ ಶಾಸನದಿಂದಲೂ, ಅದೇ ಸಮಯದಲ್ಲಿ ಮಹಾಮಂತ್ರಿ ನರಶಿಂಹದೇವಒಡೆಯನು ಬಾರಕೂರು ಒಡೆಯ ನಾಗಿದ್ದನೆಂದೂ ಬಾರಕೂರು ಕೋಟೆಕೇರಿ ಪಂಚಲಿಂಗೇಶ್ವರ ದೇವ ಸ್ಥಾನದಲ್ಲಿರುವ 2 ಶಾಸನಗಳಿಂದಲೂ ತಿಳಿಯಬಹುದು. ಕ್ರಿ. ಶ. 1431ರಲ್ಲಿ ಜಿಂದರಸ ಒಡೆಯ (ಚಂದ್ರ ಒಡೆಯ, ಚಂದರಸ ಒಡೆಯ)ನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದು ಬಾರಕೂರು ಚೌಳಿಕೇರಿ ಗಣಪತಿ ದೇವಸ್ಥಾನದಲ್ಲಿರುವ 1 ಶಾಸನದಿಂದಲೂ, ಬಾರಕೂರು ಮೂಡಕೇರಿ ಸೋಮೇಶ್ವರ ದೇವಸ್ಥಾನದಲ್ಲಿರುವ ಎರಡು ಶಾಸನ ಗಳಿಂದಲೂ ತಿಳಿಯಬಹುದು. ಕ್ರಿ. ಶ. 1432ರಲ್ಲಿಯೂ ಚಂದರ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದು ಮಣಿಗಾರ ಕೇರಿಯಲ್ಲಿರುವ ಶಾಸನದಿಂದ ತಿಳಿದುಬರುತ್ತದೆ. ಕ್ರಿ. ಶ. 1434ರಲ್ಲಿ ಪದುಮಲದೇವನು ಢಣಾಯಕನಾಗಿದ್ದನೆಂದು ಕೋಟೆಕೇರಿ ಪಂಚ ಲಿಂಗೇಶ್ವರ ದೇವಸ್ಥಾನದಲ್ಲಿರುವ ಶಾಸನದಲ್ಲಿದೆ. ಕ್ರಿ. ಶ. 1436ರಲ್ಲಿ ಸಿಂಗಣ್ಣನು ಢಣಾಯಕನಾಗಿದ್ದನೆಂದೂ ಅಣ್ಣಪ್ಪಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದೂ ಬಸರೂರು ಕೋಟೇಶ್ವರ ದೇವಸ್ಥಾನ ದಲ್ಲಿಯೂ ಉಡುಪಿ ಕೃಷ್ಣಮಠದ ಗೋಡೆಯಲ್ಲಿಯೂ ಇರುವ ಶಾಸನ ಗಳಿಂದ ತಿಳಿಯುತ್ತದೆ. ಕ್ರಿ. ಶ. 1440ರಲ್ಲಿ ಲಕ್ಕಣ್ಣನು (ಮದನ ನಾಯಕನ ತಮ್ಮ?) ಢಣಾಯಕನಾಗಿದ್ದನೆಂದು ಮೂಡಕೇರಿ ಸೋಮೇಶ್ವರ

ದೇವಸ್ಥಾನದ ಪಶ್ಚಿಮ ಗೋಡೆಗೆ ಒರಗಿರುವ 13ನೇ ಕಲ್ಲಿನಲ್ಲಿರುವ ಶಾಸನ ದಿಂದ ತಿಳಿಯಬಹುದು. ಕ್ರಿ. ಶ. 1441ರಲ್ಲಿ ಚಂದಪ್ಪರಸ ಒಡೆಯನು ಬಾರಕೂರುರಾಜ್ಯವನ್ನು ಆಳುತ್ತಿದ್ದನೆಂದು ಬಸರೂರು ಕೋಟೇಶ್ವರ ದೇವ ಸ್ಥಾನದಲ್ಲಿರುವ ಶಾಸನದಿಂದ ತಿಳಿಯುತ್ತದೆ. ಕ್ರಿ. ಶ. 1450ರಲ್ಲಿ ರಾಯರಸ ಒಡೆಯನು ಬಾರಕೂರು ರಾಜ್ಯವಾಳುತ್ತಿದ್ದನೆಂದು ಚೌಳಿಕೇರಿ ಗಣಪತಿ ದೇವಸ್ಥಾನದಲ್ಲಿರುವ ಶಾಸನದಲ್ಲಿದೆ. 2ನೇ ದೇವರಾಯನು 1450-51ರಲ್ಲಿ ಕಾಲವಾದನು. ಇವನ ನಂತರ ವಿಜಯನಗರದಲ್ಲಿ ನಡೆದ ಸಂಗತಿಗಳನ್ನು ವಿವರಿಸುವುದು ಕಠಿಣವಿದೆ. ಈ ಸಮಯದಲ್ಲಿ ರಾಜ್ಯದಲ್ಲೆಲ್ಲಾ ಅರಾಜಕತ್ವವು ಉಂಟಾಗಿತ್ತೆಂದು ನ್ಯೂನಿಝನ ವೃತ್ತಾಂತ ದಿಂದ ತಿಳಿದುಬರುತ್ತದೆ. 2ನೇ ದೇವರಾಯನಿಗೆ ಮಲ್ಲಿಕಾರ್ಜುನ, ವಿರೂಪಾಕ್ಷರೆಂಬ ಇಬ್ಬರು ಮಕ್ಕಳಿದ್ದರು. ಮಲ್ಲಿಕಾರ್ಜುನನು 2ನೇ ದೇವರಾಯನ ತರುವಾಯ ಪಟ್ಟಕ್ಕೆ ಬಂದನು.

**6. ಮಲ್ಲಿಕಾರ್ಜುನರಾಯ.** ಕ್ರಿ. ಶ. 1451—1465. 2ನೇ ದೇವರಾಯನು ಕಾಲವಾದ ನಂತರ ಇವನ ಮಗನಾದ ವೀರಮಲ್ಲಣ್ಣನು ಮಲ್ಲಿಕಾರ್ಜುನರಾಯನೆಂಬ ಹೆಸರಿನಿಂದ ಪಟ್ಟಕ್ಕೆ ಬಂದನು. ಇವನಿಗೆ ಪ್ರೌಢರಾಯನೆಂತಲೂ, ಇಮ್ಮಡಿದೇವರಾಯ ನೆಂತಲೂ ಹೆಸರಿತ್ತು. ಇವನ ತಾಯಿಯ ಹೆಸರು ಪೊನ್ನಳಾದೇವಿ. 2ನೇ ದೇವರಾಯನೂ, ಪೊನ್ನಳಾದೇವಿಯೂ ಮಲ್ಲಿಕಾರ್ಜುನ ಬೆಟ್ಟ ದಲ್ಲಿರುವಾಗ ಮಲ್ಲಿಕಾರ್ಜುನನೆಂಬ ಈ ಮಗನು ಹುಟ್ಟಿದನು. ಮಲ್ಲಿಕಾರ್ಜುನನು ಪಟ್ಟಕ್ಕೆ ಬಂದ ಕೂಡಲೇ ಬಹಮನೀಸುಲ್ತಾ ನನೂ ಒರಿಸ್ಸದ ಗಜಪತಿ ಅರಸನೂ ಯುದ್ಧಕ್ಕೆ ಬಂದರು. ಮಲ್ಲಿ ಕಾರ್ಜುನನು ಕ್ರಿ. ಶ. 1465ರಲ್ಲಿ ಕಾಲವಾದನು. ಈ ಸಮಯ ದಲ್ಲಿ ನರಶಿಂಹನು ಪ್ರಧಾನಿಯಾಗಿ ರಾಜ್ಯವಾಳುತ್ತಿದ್ದನು. ಈ ಮಲ್ಲಿ ಕಾರ್ಜುನನಿಗೆ ರಾಜಶೇಖರ ಮತ್ತು ವಿರೂಪಾಕ್ಷ ಎಂಬ ಇಬ್ಬರು ಮಕ್ಕಳಿದ್ದರು.

ಮಲ್ಲಿಕಾರ್ಜುನನ ಕಾಲದ ಶಾಸನಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 11 ಸಿಕ್ಕಿಯುವೆ. ಮಲ್ಲಿಕಾರ್ಜುನರಾಯನು ಬಸರೂರು ಮಹಾಲಿಂಗೇಶ್ವರ ದೇವರಿಗೂ, ಬಾರಕೂರು ಮಣಿಗಾರಕೇರಿ ಸೋಮನಾಥೇಶ್ವರ ದೇವರಿಗೂ, ಪರಂಪಳ್ಳಿ ವಿಷ್ಣು ದೇವರಿಗೂ, ಬಾರಕೂರು ಮೂಡಕೇರಿ ಸೋಮೇಶ್ವರ ದೇವರಿಗೂ, ಚೌಳಿಕೇರಿ ಗಣಪತಿ ದೇವರಿಗೂ ಉಂಬಳಿಬಿಟ್ಟಿರುತ್ತಾನೆಂದು ಅಲ್ಲಲ್ಲಿರುವ ಶಾಸನಗಳಿಂದ ತಿಳಿಯುಬಹುದು.

ಕ್ರಿ. ಶ. 1452ರಲ್ಲಿ ದೇವದಾನನಾಯಕನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದು ಕುಂದಾಪುರ ನರಶಿಂಗಸ್ವಾಮಿ ದೇವಸ್ಥಾನದಲ್ಲಿರುವ ಶಾಸನದಿಂದಲೂ, ಕ್ರಿ. ಶ. 1451ರಲ್ಲಿ ಮಂಗಳೂರು ರಾಜ್ಯವನ್ನು ಗಣಪಣ್ಣ ಒಡೆಯನು ಆಳುತ್ತಿದ್ದನೆಂದು ಮೂಡಬಿದರೆ ಹೊಸ ಬಸದಿಯುಲ್ಲಿರುವ ಶಾಸನದಿಂದಲೂ, ಕ್ರಿ. ಶ. 1458ರಲ್ಲಿ ಬಾರಕೂರು ರಾಜ್ಯವನ್ನು ಸಿದ್ಧಪ್ಪ ಢಣಾಯಕನು ಆಳುತ್ತಿದ್ದನೆಂದು ಬಾರಕೂರು ಮೂಡಕೇರಿ ಸೋಮೇಶ್ವರ ದೇವಸ್ಥಾನದಲ್ಲಿರುವ ಶಾಸನದಿಂದಲೂ, ಕ್ರಿ. ಶ. 1462ರಲ್ಲಿ ಚಂದ್ರ ಢಣಾಯಕನು ಬಾರಕೂರು ರಾಜ್ಯವಾಳುತ್ತಿದ್ದನೆಂದು ಬಸರೂರು ಕೋಟೇಶ್ವರ ದೇವಸ್ಥಾನದಲ್ಲಿರುವ ಶಾಸನದಿಂದಲೂ, ಕ್ರಿ. ಶ. 1463ರಲ್ಲಿ ಲಕ್ಕಣ್ಣ ಢಣಾಯಕನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದು ಬಾರಕೂರು ಮಣಿಗಾರಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿರುವ ಶಾಸನದಿಂದಲೂ ತಿಳಿದು ಬರುತ್ತದೆ. ಕ್ರಿ. ಶ 1461ರಲ್ಲಿ ವಿಜಯನಗರವು ಕುಂದಿದರೂ ಕನ್ನಡ ಜಿಲ್ಲೆಯು ಅವರ ಕೈಯಿಂದ ತಪ್ಪಲಿಲ್ಲವೆಂದು ಬಾರಕೂರು ಮೂಡಕೇರಿ ಸೋಮೇಶ್ವರ ಮತ್ತು ಚೌಳಿಕೇರಿ ಗಣಪತಿ ದೇವಸ್ಥಾನದಲ್ಲಿರುವ ಶಾಸನಗಳಿಂದ ತಿಳಿಯುಬಹುದು.

**7. ವಿರೂಪಾಕ್ಷ.** ಕ್ರಿ. ಶ. 1465—1479. ಮಲ್ಲಿಕಾರ್ಜುನನು ಕಾಲವಾದ ನಂತರ ಅವನ ತಮ್ಮನಾದ ವಿರೂಪಾಕ್ಷನು ಪಟ್ಟಕ್ಕೆ

ಬಂದನು. ಕೆಲವು ಸರದಾರರು ಮಲ್ಲಿಕಾರ್ಜುನನ ಮಕ್ಕಳ ಕಡೆಗೆ ಸೇರಿದರು. ವಿರೂಪಾಕ್ಷರಾಯನು ಅಯೋಗ್ಯನೂ, ಹೇಡಿಯೂ, ದುರ್ಬಲನೂ ಆಗಿದ್ದುದರಿಂದ ಇವನ ಕಾಲದಲ್ಲಿ ರಾಜ್ಯದ ಎಷ್ಟೋ ಭಾಗಗಳು ಮುಸಲ್ಮಾನರ ಕೈಸೇರಿದವು. ಇವನು ಕ್ರೂರನೂ ವಿಷಯಾಸಕ್ತನೂ ಆಗಿದ್ದುದರಿಂದ ರಾಜ್ಯದಲ್ಲೆಲ್ಲಾ ದಂಗೆಗಳು ಏಳಲಾರಂಭಿಸಿದವು. ಕಡೆಗೆ ಇವನ ಹಿರೇ ಮಗನು ಇವನನ್ನು ಕೊಂದನು. ಇವನನ್ನು ಇವನ ತಮ್ಮನಾದ ಪದಿಯರಾಯನು ಕೊಂದನು; ಮತ್ತು ಪಟ್ಟಕ್ಕೆ ಬಂದನು. ಇವನೂ ತನ್ನ ಹಿಂದಿನವರಂತೆಯೇ ಆಚರಿಸಲಾರಂಭಿಸಿದ್ದರಿಂದ ಸರದಾರರು ದಂಗೆಯೆಬ್ಬಿಸಿದರು. ಅವರು ಇವನನ್ನು ಸಿಂಹಾಸನದಿಂದ ತಳ್ಳಿ ತಮ್ಮೊಳಗಿನವನೊಬ್ಬನಾದ ನರಶಿಂಹನನ್ನು ಪಟ್ಟದ ಮೇಲೆ ಕುಳ್ಳಿರಿಸಿದರು.

2ನೇ ವಿರೂಪಾಕ್ಷರಾಯನ ಕಾಲದ ಶಾಸನಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಷ್ಟರ ವರೆಗೆ 6 ಸಿಕ್ಕಿಯವೆ. ಬಸರೂರಲ್ಲಿ 1, ಮೂಡಬಿದರೆಯಲ್ಲಿ 2, ಬಾರಕೂರಿನಲ್ಲಿ 3. ಈ ಅರಸನು ಮೂಡಬಿದರೆಯ ಹೊಸ ಬಸದಿಗೂ ಬಾರಕೂರು ಮೂಡಕೇರಿ ಸೋಮೇಶ್ವರ ಚೌಳಿಕೆರೆ ಗಣಪತಿ ದೇವಸ್ಥಾನ, ಮಣಿಗಾರಕೇರಿ ಸೋಮನಾಥೇಶ್ವರ ದೇವಸ್ಥಾನಗಳಿಗೂ ಉಂಬಳಿಬಿಟ್ಟಿರುತ್ತಾನೆ.

ಕ್ರಿ. ಶ. 1465-1476 ವರೆಗೆ ವಿರರಸ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದನೆಂದೂ, ಸಿಂಗಣ್ಣನು ಢಣಾಯಕನಾಗಿದ್ದನೆಂದೂ ಬಾರಕೂರು ಚೌಳಿಕೇರಿ ಗಣಪತಿ ದೇವಸ್ಥಾನದಲ್ಲಿರುವ ಶಾಸನದಿಂದಲೂ ಬಸರೂರಿನ ಶಾಸನದಿಂದಲೂ ಮೂಡಬಿದರೆ ಹೊಸ ಬಸದಿಯ ಗದ್ದಿಗೆ ಮಂಟಪ ಮತ್ತು ಕ್ಷೇತ್ರಪಾಲನ ಹತ್ತಿರವಿರುವ ಶಾಸನಗಳಿಂದಲೂ, ಬಾರಕೂರು ಸೋಮನಾಥೇಶ್ವರ ದೇವಸ್ಥಾನದಲ್ಲಿರುವ ಶಾಸನದಿಂದಲೂ ತಿಳಿಯಬಹುದು.

8. **ಸಲುವನರಸಿಂಹ ಅಥವಾ ನರಸನಾಯಕ.** ನರಸನಾಯಕನು ಸಲುವವಂಶಕ್ಕೆ ಸೇರಿದವನು. ಆದರೆ ಸಲುವವಂಶಕ್ಕೂ ವಿಜಯನಗರದಲ್ಲಿ ಆಳಿದ ಸಂಗಮನವಂಶಕ್ಕೂ ಯಾವ ತರದ ಸಂಬಂಧ ವಿತ್ತೆಂದು ತಿಳಿಯುವದಿಲ್ಲ. ಇವನ ಸೇನಾಧಿಪತಿಗಳಾದ ಈಶ್ವರ ನಾಯಕ ಮತ್ತು ನರಸಿಂಹ (ನರಸಿಂಹನಾಯಕ) ಇವರು ತುಳು ರಾಜ್ಯವನ್ನು ಆಳುತ್ತಿದ್ದ ಯಾದವಕುಲದವರೆಂದು ತಿಳಿಯುತ್ತದೆ. ಈ ನರಸನಾಯಕನು ಚಂದ್ರಗಿರಿಯ ಮಹಾಮಂಡಲೇಶ್ವರನಾಗಿದ್ದನು. ಸಲುವ ನರಸಿಂಹನು ಮಲ್ಲಿಕಾರ್ಜುನನ ಕಾಲದಲ್ಲಿಯೇ, ಕಳಿಂಗ, ಮತ್ತು ಬಹಮನಿಯುದ್ಧಗಳಲ್ಲಿ ಪ್ರಬಲಕ್ಕೆ ಬಂದಿದ್ದನು ಈ ಸಲುವನರಸಿಂಹನಿಗೆ ತುಳು ತಿಮ್ಮನಾಯಕನು ಸಹಾಯಕನಾಗಿದ್ದನು. ತಿಮ್ಮನ ನಂತರ ಅವನ ಮಗ ಈಶ್ವರನೂ, ಈಶ್ವರನ ಮಗನಾದ ನರಸನೂ, ಸಿವಿಲ್ ಮತ್ತು ಮಿಲಿಟರಿ ಇಲಾಖೆಗಳಲ್ಲಿ ಬಹಳ ನಂಬಿಗಸ್ಥ ಉದ್ಯೋಗಸ್ಥರಾಗಿದ್ದರು. ನರಸನಾಯಕನಿಗೆ ಮಹಾಮಂಡಲೇಶ್ವರ, ಮೇದಿನೀಶ್ವರ ಗಂಡ, ಕಠಾರಿಸಾಲುವ ಧರಣಿವರಾಹ, ನರಸಿಂಹರಾಯ ಒಡೆಯ ಎಂಬ ಬಿರುದುಗಳು ಇವೆಯೆಂದು ಕೆಲವು ಶಾಸನಗಳಿಂದ ತಿಳಿಯಬಹುದು. ಈಶ್ವರನು ಅರಸನಿಗೋಸ್ಕರ ನೆಲ್ಲೂರಿನ ಉದಯಗಿರಿ, ಹುತ್ತಾರಿ, ಗಂಡಿಗೋಟೆ, ಪೆನುಕೊಂಡ, ಬೆಂಗಳೂರು, ಕೊವಿಲನಲ್ಲೂರು, ಸೇಲಮಿನಲ್ಲಿ ಕುಂದಣಿ, ಗೊದುಗುಚಿಂತಾ, ಬಾಗೂರು, ಚಿತ್ತೂರು ತಾಲೂಕಿನ ನರಗಲ್ಲು, ಗುಡಿಯಟ್ಲ ತಾಲೂಕಿನ ಅಮೂರು ಶ್ರೀರಂಗಪಟ್ಟ ಮುಂತಾದ್ದನ್ನು ಜಯಿಸಿದನು.

ಚನ್ನಪಟ್ಟ ಸಂಸ್ಥಾನದಲ್ಲಿ ಕಂಕನಹಳ್ಳಿ ಎಂಬಲ್ಲಿ ಸಿಕ್ಕಿದ ಶಾಸನದಿಂದ ಕ್ರಿ. ಶ. 1481ರಲ್ಲಿ ಸಲುವನರಸಿಂಹನು ಬಹಳ ಬಲಿಷ್ಠನಾದ ಅರಸನಾಗಿದ್ದನೆಂದೂ, ಗಟ್ಟಗಳ ಕೆಳಗಿನ ಪ್ರಾಂತ್ಯವು ಇವನ ಕೈಕೆಳಗೆ ಇತ್ತೆಂದೂ ತಿಳಿದುಬರುತ್ತದೆ. ಮೈಸೂರಿನ ಮಲೆನಾಡು ಜಿಲ್ಲೆಗಳೂ, ಪಶ್ಚಿಮಕರಾವಳಿಯ ಮಲೆ (ಮಲೆಯಾಳ) ತುಳುರಾಜ್ಯ (ಕನ್ನಡ ಜಿಲ್ಲೆ)

ಮತ್ತು ವಿಜಯನಗರದ ಸುತ್ತಲೂ ಇರುವ ರಾಜ್ಯಗಳು ಮಾತ್ರವೇ ವಿಜಯ ನಗರದ ಅರಸನ ಕೈಕೆಳಗಿದ್ದವು. ಅನೇಕ ಭಾಗಗಳು ಮುಸಲ್ಮಾನರ ಸ್ವಾಧೀನವಾದವು. ವಿಜಯನಗರದ ಹಿಂದಿನ ಎಂದರೆ ಮೊದಲನೇ ವಂಶದ ಅರಸರು ಬಹಳ ಕಷ್ಟಪಟ್ಟು ಸ್ಥಾಪಿಸಿದ ರಾಜ್ಯವು ಸಿಂಹಾಸನದಲ್ಲಿ ಕೂತ ಮೊದಲನೇ ವಂಶದ ಅರಸನ ಬಲಹೀನತ್ವದಿಂದ ಬಿದ್ದುಹೋದಿತೆಂಬ ದುಃಖದಿಂದ 1486ರಲ್ಲಿ ಸಲುವನರಶಿಂಹನು ತಾನೇ ಅರಸನಾಗಲು ಕಾರಣ ವಲ್ಲದೆ ತನ್ನ ಯಜಮಾನರನ್ನು ಮೂಲೆಗೊತ್ತುವ ಇರಾದೆಯಿಂದಲ್ಲ. ಇವನು ಕ್ರಿ. ಶ. 1486ನೇ ಜುಲೈ 24ರಿಂದ ನವಂಬರ 1ರ ವಳಗೆ ಪಟ್ಟಕ್ಕೆ ಬಂದಿರಬೇಕು. ಇವನು ಪಟ್ಟಕ್ಕೆ ಬರುವಾಗ ಮಲ್ಲಿಕಾರ್ಜುನನ ತಮ್ಮ ವಿರೂಪಾಕ್ಷನ ಮಗನಲ್ಲದೆ ಮಲ್ಲಿಕಾರ್ಜುನನ ಇಬ್ಬರು ಮಕ್ಕಳು ಜೀವಂತರಾಗಿದ್ದರು.

9. **ಇಮ್ಮಡಿ ನರಶಿಂಹ.** ಕ್ರಿ. ಶ. 1493–1505. 2ನೇ ನರಶಿಂಹನು ಸಲುವ ನರಸಿಂಹನ ತಮ್ಮನು. ಸಲುವ ನರಸಿಂಹನು ಕ್ರಿ. ಶ. 1492ರ ಅಂತ್ಯದಲ್ಲಿ ಅಥವಾ 1493ರ ಆದಿಯಲ್ಲಿ ಕಾಲವಾದನೆಂದು ಕಾಣುತ್ತದೆ. ಆದ್ದರಿಂದ 2ನೇ ನರಶಿಂಹನು ಕ್ರಿ. ಶ. 1493ನೇ ಸಪ್ಟಂಬರ ಅಥವಾ ದಶಂಬರ ತಿಂಗಳಲ್ಲಿ ಪಟ್ಟಕ್ಕೆ ಬಂದಿರಬೇಕು. ಸಲುವ ನರಶಿಂಹನು ಯುದ್ಧದಲ್ಲಿ ಆದ ಗಾಯ ಗಳಿಂದ ಮೃತನಾದನು. 2ನೇ ನರಶಿಂಹನು ಅರಸನಾದರೂ ರಾಜ್ಯ ಭಾರವೆಲ್ಲವೂ ತುಳು ನರಸನಾಯಕನ ಕೈಯಲ್ಲಿಯೇ ಇತ್ತು. ಈ ಸಮಯದಲ್ಲಿ ವಿಜಯನಗರದ ಸೈನ್ಯಕ್ಕೆಲ್ಲಾ ನರಸನಾಯಕನೇ ಸೇನಾಧಿ ಪತಿಯಾಗಿದ್ದನು. ಇಮ್ಮಡಿನರಶಿಂಹನ ಶಾಸನಗಳು ಕಡಪಾ, ಅನಂತಪುರ, ತಿರುಚಿನಾಪಳ್ಳಿ, ಮಧುರೆ, ಮೈಸೂರು ರಾಜ್ಯಗಳಲ್ಲಿಯೂ ಅನೇಕ ಇವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 4 ಶಾಸನಗಳು ಸಿಕ್ಕಿಯವೆ. ಈ ಅರಸನು (ಶಾ. ಶ. 1421. ಕ್ರಿ ಶ. 1499)ರಲ್ಲಿ ಬಾರಕೂರು ಮಣಿಗಾರಕೇರಿ ಸೋಮನಾಥೇಶ್ವರ ದೇವರಿಗೆ ಉಂಬಳಿ

ಬಿಟ್ಟಿರುತ್ತಾನೆಂದೂ ಅದೇ ದೇವಸ್ಥಾನದಲ್ಲಿರುವ ಶಾಸನದಿಂದಲೂ (ಶಾ. ಶ. 1424 ಕ್ರಿ. ಶ. 1502)ರಲ್ಲಿ ಬಾರಕೂರಿನಲ್ಲಿ ಒಂದು ಅನ್ನ ಛತ್ರ ಕಟ್ಟಿಸಿದನೆಂದು ಚೌಳಿಕೇರಿ ಗಣಪತಿ ದೇವಸ್ಥಾನದ ಶಾಸನದಿಂದಲೂ ತಿಳಿಯುತ್ತದೆ. ಚಿಟ್ಟುಪಾಡಿ ಬಲ್ಲಾಳರ ಮನೆಯಲ್ಲಿರುವ ಶಾಸನದಿಂದ ಶಾ. ಶ. 1416 (ಕ್ರಿ. ಶ. 1494)ರಲ್ಲಿಯೂ ಅದೇ ಬಲ್ಲಾಳರ ತವ್ಮನ ಮನೆಯಲ್ಲಿರುವ ಶಾಸನದಿಂದ ಶಾ. ಶ. 1412 (ಕ್ರಿ. ಶ. 1490) ರಲ್ಲಿಯೂ ಇವನು ಚಿಟ್ಟುಪಾಡಿ ಹಲರ ಬಸದಿಗೆ ಉಂಬಳಿಬಿಟ್ಟನೆಂದು ಇದೆ. ಕ್ರಿ. ಶ. 1502ರಲ್ಲಿ ಬಸವರಸ ಒಡೆಯನು ಬಾರಕೂರು ರಾಜ್ಯವಾಳು ತ್ತಿದ್ದನೆಂದು ಚೌಳಿಕೇರಿ ಗಣಪತಿದೇವಸ್ಥಾನದ ಶಾಸನದಲ್ಲಿದೆ. ಇದರ ಮುಂಚೆ ನರಸನಾಯಕನ ಅಪ್ಪಣೆಪ್ರಕಾರ ಸಾಧಾರಣದೇವ ಒಡೆಯನು ಬಾರಕೂರು ರಾಜ್ಯವನ್ನಾಳುತ್ತಿದ್ದನು. ಹೈಗ ಮತ್ತು ಕೊಂಕಣವನ್ನು ಒಳಕೊಂಡ ನಾಗರರಾಜ್ಯವನ್ನು ಮಹಾಮಂಡಲೇಶ್ವರ ಸಲುವದೇವ ರಾಯ ಒಡೆಯನು ಕ್ರಿ. ಶ. 1500ರಲ್ಲಿ ಆಳುತ್ತಿದ್ದನು. ಕ್ರಿ. ಶ. 1505ರಲ್ಲಿ ತುಳುವ ನರಸನಾಯಕನು ಕಾಲವಾದನು. ಕ್ರಿ. ಶ. 1506ರಲ್ಲಿ ಇಮ್ಮಡಿ ನರಶಿಂಹನು ಕಾಲವಾದನು.

**10. ವೀರನರಸಿಂಹ** ಕ್ರಿ. ಶ. 1505—1509. ನರಸನಾಯಕ ನಿಗೆ ಭುಜಬಲರಾವ್ (ವೀರನರಸಿಂಹ) ಕೃಷ್ಣರಾಯ, ರಂಗ, ಅಚ್ಯುತ, ಶ್ರೀತರಾಯ, ರಾಮಗೋಪ, ಒಮಿಸಣ್ಣಯ್ಯ ಎಂಬ 7 ಮಂದಿ ಮಕ್ಕ ಳಿದ್ದರು. ಇವರಲ್ಲಿ ಹಿರಿಯವನಾದ ಭುಜಬಲರಾಯನು ವೀರನರಸಿಂಹ ನೆಂಬ ಹೆಸರಿನಿಂದ ಕ್ರಿ. ಶ. 1505ರಲ್ಲಿ ಪಟ್ಟಕ್ಕೆ ಬಂದನು. ಇವನು 6 ವರುಷ ಆಳಿದನು. ಆದರೆ ಇವನ ತಂದೆಯಾದ ನರಸನಾಯಕನು ಕಾಲವಾದ ಕೂಡಲೆ ಸಾಮಂತಾಧಿಪತಿಗಳು ಅಲ್ಲಲ್ಲಿ ದಂಗೆಯೆಬ್ಬಿಸಿದರು. ವೀರನರಸಿಂಹನು ಇವರನ್ನೆಲ್ಲಾ ಯುದ್ಧದಲ್ಲಿ ಸೋಲಿಸಿ ರಾಜ್ಯವನ್ನು ಸ್ಥಿರಗೊಳಿಸಿದನು. ರಾಜ್ಯಭಾರವನ್ನು ಕ್ರಮಪಡಿಸುವದಕ್ಕೆ 80 ಲಕ್ಷ ವರಹಗಳನ್ನು ಖರ್ಚುಮಾಡಿದನು. ಇವನ ಕಾಲದಲ್ಲಿ ಬಸವರಸ

ಒಡೆಯನು ಬಾರಕೂರು ರಾಜ್ಯವಾಳುತ್ತಿದ್ದನು. ಸಲುವ ತಿಮ್ಮರಸನು ಮಹಾ ಪ್ರಧಾನನಾಗಿದ್ದನು. ಈ ಅರಸನು ರಾಮೇಶ್ವರ, ಶ್ರೀರಂಗ, ಕುಂಭಕೋಣ, ಚಿದಂಬರ, ಸೊನಶೀಲ, ಅಹೋಬಲ, ಮಹಾನದಿ, ನಿವೃತ್ತಿ, ಹರಿಹರ, ಗೋಕರ್ಣ ಮುಂತಾದ ದೇವಸ್ಥಾನಗಳಿಗೆ ಉಂಬಳಿಬಿಟ್ಟನೆಂದು ತಾಮ್ರ ಶಾಸನಗಳಿಂದ ಕಂಡುಬರುತ್ತದೆ. ಕಡೂರು ಜಿಲ್ಲೆಯಲ್ಲಿ ಸಿಕ್ಕಿದ ಒಂದು ಶಾಸನದಿಂದ ತುಳು ರಾಜ್ಯದಲ್ಲಿರುವ ಜೈನಪಾಳೆಯಗಾರರು, ಇವರಲ್ಲಿಯೂ ಮುಖ್ಯವಾಗಿ ಕಾರ್ಕಳದಲ್ಲಿ ಆಳುತ್ತಿದ್ದ ಕಲಸದ ಇಮ್ಮಡಿ ಭೈರರಸ ಒಡೆಯನು ದಂಗೆಯೆಬ್ಬಿಸಿದುದಕ್ಕಾಗಿ ಭುಜಬಲರಾಯನು (ವೀರನರಸಿಂಹ) ದೊಡ್ಡ ಸೈನ್ಯದೊಡನೆ ತುಳುರಾಜ್ಯಕ್ಕೆ ಬಂದು ದಂಗೆ ಅಣಗಿಸಿದನೆಂದು ತಿಳಿದುಬರುತ್ತದೆ. ತುಳುವ ವೀರನರಶಿಂಹನು ವಿಜಯನಗರ ಸಿಂಹಾಸನದಲ್ಲಿ ಕೂತೊಡನೆಯೇ ಬಿಜಾಪುರದ ಮಹಮ್ಮದಿಯ ಸುಲತ್ತಾನನು ಯುದ್ಧಕ್ಕೆ ಬಂದನು. ನರಸಿಂಹನು ಅವನನ್ನು ಸೋಲಿಸಿ ಓಡಿಸಿದನು. ಕ್ರಿ. ಶ. 1509ರಲ್ಲಿ ವೀರನರಸಿಂಹನು ಕಾಲವಾದಮೇಲೆ ಅವನ ತಮ್ಮನಾದ ಕೃಷ್ಣದೇವರಾಯನು ಪಟ್ಟಕ್ಕೆ ಬಂದು ಕಳದುಹೋದ ರಾಜ್ಯಗಳನ್ನೆಲ್ಲಾ ತಿರಿಗಿ ಜಯಿಸಿ ಬಹಳ ಕೀರ್ತಿಪಡೆದನು.

11. **ಕೃಷ್ಣದೇವರಾಯ** ಕ್ರಿ. ಶ. 1509—1530. ವಿಜಯನಗರ ರಾಜ್ಯವು ಸ್ಥಾಪಿತವಾದಂದಿನಿಂದ ದಕ್ಷಿಣ ಹಿಂದೂ ದೇಶದಲ್ಲಿ ಹಿಂದೂ ನಾಗರೀಕತೆಯು ಕ್ರಮೇಣ ಉನ್ನತಸ್ಥಿತಿಗೆ ಬರುತಿತ್ತು. ಆದರೆ ಕೃಷ್ಣದೇವರಾಯನ ಕಾಲದಲ್ಲಿ ದಕ್ಷಿಣ ಹಿಂದೂದೇಶವು ಎಲ್ಲಾ ವಿಧದಲ್ಲಿಯೂ ಅತೀ ಉನ್ನತಿಯನ್ನು ಹೊಂದಿತು. ಉತ್ತರ ಹಿಂದೂಸ್ಥಾನದಲ್ಲಿ ವಿಕ್ರಮಾದಿತ್ಯನ ಹೆಸರು ಹೇಗೆ ನೆನಪಿನಲ್ಲಿದೆಯೋ, ಬಗ್ದಾದಿನಲ್ಲಿ ಹೆರೊನಲ್ ರಷ್ಹಿಲ್ಡನ ನೆನಪು ಅಲ್ಲಿಯ ಜನರಿಗೆ ಹೇಗೆ ಉಳಿದಿದೆಯೋ, ಅದೇ ರೀತಿಯಲ್ಲಿ ಕೃಷ್ಣದೇವರಾಯನ ನೆನಪು ದಕ್ಷಿಣ ಹಿಂದೂದೇಶದ ಜನರಲ್ಲಿ ಉಳಿದಿದೆ.

ಕೃಷ್ಣದೇವರಾಯನು ಆಳುತ್ತಿರುವಾಗ ಇಂಗ್ಲೆಂಡಿನಲ್ಲಿ 8ನೇ ಹೆನ್ರಿ ಎಂಬ ಅರಸನೂ—5ನೇ ಚಾರ್ಲಿಸ್ ಚಕ್ರವರ್ತಿಯೂ ಆಳುತ್ತಿದ್ದರು. ಕೃಷ್ಣರಾಯನು 1509ನೇ ಇಸವಿಯ ಮೇ 4 ಅಥವಾ ಒಕ್ಟೋಬರ 14 ಅಥವಾ ನವಂಬರ 13ರಲ್ಲಿ ತನ್ನ ಅಣ್ಣನಾದ ವೀರ ನರಶಿಂಹರಾಯನ ಮರಣಾನಂತರ ಪಟ್ಟಕ್ಕೆ ಬಂದನು. ಆದರೆ ಪಟ್ಟಾಭಿಷೇಕವು ಕ್ರಿ. ಶ. 1510ನೇ ಜನವರಿ 23 ಅಥವಾ 24ರಲ್ಲಿ ಆಯಿತು. ಇವನಿಗೆ ಪಟ್ಟಕ್ಕೆ ಬರುವಾಗ 21 ವರುಷ ಪ್ರಾಯ. ಇವನ ತಂದೆಯಾದ ನರಸನ ಕಾಲದಲ್ಲಿಯೂ ಅಣ್ಣನಾದ ವೀರ ನರಶಿಂಹನ ಕಾಲದಲ್ಲಿಯೂ ಮಹಾಪ್ರಧಾನನಾಗಿದ್ದ ಸಲುವತಿಮ್ಮನೆಂಬ ಬ್ರಾಹ್ಮಣನು ರಾಜ್ಯಕಾರ್ಯಗಳನ್ನೆಲ್ಲಾ ಬಹಳ ಒಳ್ಳೆಯ ರೀತಿಯಿಂದ ನಡಿಸುತ್ತಿದ್ದನು. ವೀರನರಶಿಂಹನ ಕಾಲದಲ್ಲಿ ಪಾಳೆಯಗಾರರು ಅಲಲ್ಲಿ ದಂಗೆ ಎಬ್ಬಿಸಿದ್ದರು. ನರಶಿಂಹರಾಯನು ಈ ಪಾಳೆಯಗಾರರಲ್ಲಿ ಹೆಚ್ಚಿನವರನ್ನು ಮುರಿದಿದ್ದನು. ಉತ್ತರದಲ್ಲಿ ಬಲವಾದ ಬಿಜಾಪುರ ರಾಜ್ಯವೂ ಪೂರ್ವದಲ್ಲಿ ಕಳಿಂಗದ ಗಜಪತಿರಾಜ್ಯವೂ ಇದ್ದವು. ಬಿಜಾಪುರ ಮತ್ತು ಕಳಿಂಗ ರಾಜರ ಹಾವಳಿಯು ಆಗಾಗ್ಗೆ ತಪ್ಪಲಿಲ್ಲ. ಆದ್ದರಿಂದ ಪಟ್ಟಕ್ಕೆ ಬಂದ ಕೂಡಲೇ ರಾಜ್ಯವನ್ನು ಸ್ಥಿರಗೊಳಿಸುವುದು ಕೃಷ್ಣದೇವರಾಯನ ಮೊದಲನೇ ಕೆಲಸವಾಯಿತು.

"ರಾಯವಾಚಕ" ಮತ್ತು "ಕೃಷ್ಣರಾಯವಿಜಯ" ಎಂಬ ಗ್ರಂಥಗಳಲ್ಲಿ ಕಾಣುವ ಪ್ರಕಾರ ಕೃಷ್ಣರಾಯನು ತನ್ನ ಆಳುವಿಕೆಯ ಆರಂಭದಲ್ಲಿ ಸಿವಿಲ್ ಮತ್ತು ಮಿಲಿಟರಿ ಸಂಸ್ಥೆಗಳಲ್ಲಿ ಕೈಹಚ್ಚಿ ಅವುಗಳನ್ನು ಸರಿಪಡಿಸಿದನು. ಅನೇಕ ಪಾಳೆಯಗಾರರು ಖಜಾನೆಗೆ ಸಲ್ಲುತ್ತಿದ್ದ ಕಪ್ಪವನ್ನು ಸರಿಯಾಗಿ ಕೊಡುತ್ತಿದ್ದಿಲ್ಲ. ನಿಶ್ಚಯಿಸಿದಷ್ಟು ಸೈನ್ಯವನ್ನು ಒದಗಿಸಿಕೊಡುತ್ತಿರಲಿಲ್ಲ. ಕೃಷ್ಣರಾಯನು ಬಹಳ ಬುದ್ಧಿವಂತನಾದ ತನ್ನ ಮಹಾಪ್ರಧಾನಿ ಸಲುವತಿಮ್ಮನ ಸಹಾಯದಿಂದ ಪ್ರೀತಿಯ ಮೂಲಕ ಇವೆರಡೂ ಸಿಕ್ಕುವ ಹಾಗೆ ಮಾಡಿದನು. ತನ್ನ

ಸಾಮಂತ ರಾಜರನ್ನೆಲ್ಲಾ ವಿಜಯನಗರಕ್ಕೆ ಕರೆಯಿಸಿ ಅವರವರು ಕೊಡಬೇಕಾದ ಕಪ್ಪವನ್ನೂ, ಇಡಬೇಕಾದ ಸೈನ್ಯವನ್ನೂ ಇಡುವ ಹಾಗೆ ಅವರಿಗೆ ತಿಳಿಸಿದನು. ಒಂದು ಸಾವಿರಕ್ಕೆ ಒಂದು ಲಕ್ಷ ವರಹ ಖರ್ಚು ತಗಲುವ 24,000 ಸಾವಿರ ಕುದುರೆ ಸವಾರರನ್ನೂ, 10 ಆನೆಗಳಿಗೆ 120,000 ವರಹ ಖರ್ಚು ತಗಲುವ 10 ಸಾವಿರ ಆನೆಗಳನ್ನೂ, ಒಂದು ಸಾವಿರಕ್ಕೆ 24,000 ವರಹ ಖರ್ಚು ತಗಲುವ 160,000 ಕಾಲಾಳುಗಳನ್ನೂ ಒಳಕೊಂಡಿರುವ ಬಲವಾದ ಒಂದು ಸೈನ್ಯ ಇರುವ ಹಾಗೆ ನಿಯಮಿಸಿದನು.



ವಿಜಯನಗರದ ಸಭಾಮಂದಿರ.

ಇಷ್ಟೆಲ್ಲಾ ಸಿದ್ಧವಾದ ಮೇಲೆ ಕೃಷ್ಣದೇವರಾಯನು ಉಮ್ಮತ್ತೂರಿನ ಗಂಗರಾಜನನ್ನೂ ಗೆದ್ದು, ಇಕ್ಕೇರಿಯ ಸಂಕುಲನಾಯಕನನ್ನೂ ಜಯಿಸಿದನು. ಅನಂತರ ಅಹಮ್ಮದನಗರ, ವಿಜಾಪುರ, ಗೊಲ್ಕೊಂಡಾ

ರಾಜ್ಯಗಳ ಗಡಿಗಳಲ್ಲಿರುವ ಕೋಟೆಗಳನ್ನು ಬಲಪಡಿಸಿದನು. ಕ್ರಿ ಶ. 1511ನೇ ವರ್ಷವು ಈ ಕೆಲಸಗಳನ್ನು ಮಾಡುವುದರಲ್ಲಿ ಕಳೆಯಿತು. ಅನಂತರದ ಎರಡು ಮೂರು ವರುಷಗಳು ಪೋರ್ತುಗೀಸರ ಚಳವಳದ ದಲ್ಲಿ ಕಳೆದವು. ಕ್ರಿ. ಶ. 1510ರಲ್ಲಿ ಪೋರ್ತುಗೀಸರು ಗೋವೆಯನ್ನು ಹಿಡಿದು ಕೃಷ್ಣರಾಯನ ಸಭೆಗೆ ರಾಯಭಾರಿಯನ್ನು ಕಳುಹಿಸಿದರು. ಆದರೆ ಪೋರ್ತುಗೀಸರಿಗೆ ವ್ಯಾಪಾರದ ವಿಷಯ ವಿಶೇಷ ಪ್ರಯೋಜನ ವಾಗಲಿಲ್ಲ.

ಕ್ರಿ. ಶ. 1514ರಲ್ಲಿ ಕನ್ನಡ ಜಿಲ್ಲೆಯ ತೀರದಲ್ಲಿ ಪ್ರಯಾಣ ಮಾಡಿದ ದುರ್ತೆಬಾರೆಬೋಸನೆಂಬ ಪೋರ್ತುಗೀಸ ಪ್ರಯಾಣಿಕನು ಈ ಪ್ರಕಾರ ಹೇಳಿರುತ್ತಾನೆ—"ತುಳುನಾಡು ಹೊನ್ನಾವರದಿಂದ ದಕ್ಷಿಣಕ್ಕೆ ಪಯಸ್ವಾನಿನದಿಯ ವರೆಗೆ ನದಿಗಳಿಂದಲೂ, ಪಟ್ಟಣಗಳಿಂದಲೂ ತುಂಬಿದೆ. ಎಲ್ಲಾ ಬಂದರುಗಳಿಂದಲೂ ವ್ಯಾಪಾರವು ಪರದೇಶಗಳಿಗೆ ಹೋಗುತ್ತಾ ಬರುತ್ತಾ ಇದೆ. ಬೈಂದೂರಿನಿಂದ ಒಳ್ಳೇ ಅಕ್ಕಿಯು ಭಟ್ಕಳಕ್ಕೆ ಹೋಗುತ್ತಿದೆ. ಬಾರಕೂರು ಬಂದರಕ್ಕೆ ಮಲಬಾರು ಒರಮುಜ್, ಏಡನ್, ಕ್ವಹೀರ್ ದೇಶಗಳಿಂದ ಅನೇಕ ಹಡಗುಗಳು ಬರುತ್ತಿವೆ. ಮಂಗಳೂರು ಬಹಳ ದೊಡ್ಡ ಬಂದರಾಗಿದ್ದು ಕಜೆ ಅಕ್ಕಿಯು ಬಡಜನರಿಗೋಸ್ಕರ ಮಲಬಾರಿಗೆ ಹೋಗುತ್ತಿದೆ. ಕರಿಮೆಣಸೂ ಸ್ವಲ್ಪ ಪರದೇಶಕ್ಕೆ ಹೋಗುತ್ತಿದೆ. ಮಂಗಳೂರು ಪಟ್ಟಣವು ಬಂದರ ದಲ್ಲಿರುವ ತೆಂಗಿನ ಮರಗಳಿಂದಲೂ, ದೇವಸ್ಥಾನಗಳಿಂದಲೂ, ಮಸೀದಿ ಗಳಿಂದಲೂ, ದೊಡ್ಡ ದೊಡ್ಡ ಮನೆಗಳಿಂದಲೂ ಕೂಡಿ ಜನಸಂಖ್ಯೆಯಿಂದ ತುಂಬಿ ಬಹಳ ಅಂದವಾಗಿ ಕಾಣುತ್ತಿದೆ. ಕುಂಬಳೆಯಲ್ಲಿ ಒಬ್ಬ ಅರಸನು ವಿಜಯನಗರಕ್ಕೆ ಅಧೀನನಾಗಿ ರಾಜ್ಯಭಾರಮಾಡುತ್ತಿದ್ದಾನೆ. ಕುಂಬಳೆ ಬಂದರದಿಂದ ಮಾಲ್ದೀವಿಗಳಿಗೆ ಹೆಚ್ಚು ಅಕ್ಕಿಯು ಹೋಗುತ್ತಿದೆ. ಅಲ್ಲಿಂದ ಹಡಗಗಳಿಗೆ ಬೇಕಾದ ಹುರಿಹಗ್ಗವು ಬರುತ್ತಿದೆ. ಪಯಸ್ವಾನಿ ನದಿಯ ದಕ್ಷಿಣಕ್ಕಿರುವ ಭಾಗವು ಮಲಬಾರು ಅರಸರ ಕೈ ಯಲ್ಲಿಯೇ ಇದೆ."

ಕೃಷ್ಣದೇವರಾಯನಿಗೂ ವಿಜಾಪುರದ ಸುಲ್ತಾನನಿಗೂ ಆದ ಯುದ್ಧದಲ್ಲಿ ಪೋರ್ತುಗೀಸರು ಬಹಳ ಸಹಾಯಮಾಡಿದರು. ಅರಬೀಯರ ಮತ್ತು ಮಾಪಿಳ್ಳೆಯರ ವ್ಯಾಪಾರವನ್ನು ನಾಶಮಾಡುವುದೇ ಪೋರ್ತುಗೀಸರ ಮುಖ್ಯ ಉದ್ದೇಶವಾಗಿತ್ತು. ಕೃಷ್ಣದೇವರಾಯನಿಗೆ ಸಹಾಯಮಾಡಿದ್ದರಿಂದ ಪೋರ್ತುಗೀಸರಿಗೆ ರಾಜಾಶ್ರಯವು ಸಿಕ್ಕಿ ಕ್ರಿ. ಶ. 1524ರಲ್ಲಿ ವಾಸ್ಕೊಡಿಗಾಮನು ಮಂಗಳೂರು ಮತ್ತು ಬಸರೂರು ಬಂದರುಗಳಲ್ಲಿದ್ದ ಅರಬಿ ಮತ್ತು ಮಾಪಿಳ್ಳೆಯರ ಹಡಗುಗಳು ಬಂದರದಿಂದ ಹೊರಗೆ ಹೋಗದಂತೆ ತಡೆಗಟ್ಟಿದನು. ಕ್ರಿ. ಶ 1526ರಲ್ಲಿ ಪೋರ್ತುಗೀಸರ ವ್ಯಾಸರಾಯಿಯಾಗಿದ್ದ ಲೊಪೆಜ್, ವಾಸ್. ಡಿ. ಸಂಪಾಯೋ ಎಂಬವನ ಕಾಲದಲ್ಲಿ ಮಂಗಳೂರು ಬಂದರವು ಪೋರ್ತುಗೀಸರ ಸ್ವಾಧೀನವಾಯಿತು. ಫ್ರಾನ್ಸಿಸ್ಕನ್ ಪಾದರಿಗಳು ಮಂಗಳೂರಿನಲ್ಲಿಯೂ ಸುತ್ತಮುತ್ತಲಿನ ಹಳ್ಳಿಗಳಲ್ಲಿಯೂ ಕ್ರೈಸ್ತಮತವನ್ನು ಬೋಧಿಸಲಾರಂಭಿಸಿದರು. ಪೋರ್ತುಗೀಸರು ಕನ್ನಡ ಜಿಲ್ಲೆಯ ಕರಾವಳಿಯ ವ್ಯಾಪಾರವನ್ನು ಅರಬಿಯರ ಮತ್ತು ಮಾಪಿಳ್ಳೆಯರ ಕೈಯಿಂದ ತಪ್ಪಿಸಿ ಎಲ್ಲಾ ಬಂದರುಗಳಿಂದಲೂ ಧಾನ್ಯದ ರೂಪವಾಗಿ ಸುಂಕವನ್ನು ವಸೂಲುಮಾಡತೊಡಗಿದರು. ಬಸರೂರಿನಿಂದ 500 ಹೊರೆ ಅಕ್ಕಿಯೂ, ಬಾರಕೂರು ಅರಸನಿಂದ (ಸುರಾಲ ಅರಸು) 1000 ಹೊರೆ ಅಕ್ಕಿಯೂ, ಮೂಲಿಕೆ ಸಾವಂತ ಅರಸನಿಂದ 800 ಮುಡಿಯೂ, ಮಂಗಳೂರು ಬಂಗರು ಅರಸನಿಂದ 2400 ಮುಡಿ ಅಕ್ಕಿಯೂ, 1000 ಬುದ್ಧಲಿ ತೆಂಗಿನ ಎಣ್ಣೆಯೂ, ಮಂಜೇಶ್ವರ ಮುಮ್ಮಸೂಪಿ ಎಂಬ ಸಾಹುಕಾರನಿಂದ 700 ಮುಡಿ ಅಕ್ಕಿಯೂ, ಕುಂಬಳೆ ಅರಸನಿಂದ 800 ಮುಡಿ ಅಕ್ಕಿಯೂ ಸುಂಕದ ರೂಪವಾಗಿ ವಸೂಲಾಗುತ್ತಿತ್ತು.

ಕ್ರಿ. ಶ. 1516-1520ರ ವರೆಗಿನ 4 ವರ್ಷಗಳನ್ನು ಕೃಷ್ಣದೇವರಾಯನು ದೇವಸ್ಥಾನಗಳನ್ನು ಜೀರ್ಣೋದ್ಧಾರಮಾಡಿಸಿ ಉಂಬಳಿ

ಬಿಡುವುದರಲ್ಲಿಯೂ ರಾಜ್ಯದ ಒಳಗಿನ ಆಡಳಿತೆಯನ್ನು ಸರಿಪಡಿಸು ವುದರಲ್ಲಿಯೂ ಕಳೆದನು. ತನ್ನ ರಾಜ್ಯದಲ್ಲಿರುವ ದೇವಸ್ಥಾನಗಳಿಗೆ 10,000 ವರಹಗಳನ್ನು ಉಂಬಳಿಯಾಗಿ ಬಿಟ್ಟನು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಷ್ಟರ ವರೆಗೆ ಕೃಷ್ಣದೇವರಾಯನ 10 ಶಾಸನಗಳು ಸಿಕ್ಕಿಯುವೆ. ಮದರಾಸು ಸಂಸ್ಥಾನದ ಬೇರೆ ಬೇರೆ ಜಿಲ್ಲೆಗಳಲ್ಲಿ 300 ಶಾಸನಗಳಿಗಿಂತಲೂ ಹೆಚ್ಚು ಸಿಕ್ಕಿಯುವೆ. ಎಲ್ಲವೂ ಶಿಲಾಶಾಸನ ಗಳಾಗಿವೆ.

ಈ ಅರಸನು ಬಾರಕೂರು ಲಕ್ಷ್ಮೀನಾರಾಯಣದೇವರಿಗೂ, ಕೋಟೇಶ್ವರ ದೇವರಿಗೂ ಬಸರೂರು ಅನ್ನಛತ್ರಕ್ಕೂ, ಹೆಬ್ಬಿಗೆ ಹನುಮಂ ತೇಶ್ವರದೇವರಿಗೂ, ಮೂಡಬಿದರೆ ಗುರುಬಸದಿಗೂ, ಮೂಡಬಿದರೆ ಪುತ್ತಿಗೆ ಸೋಮನಾಥದೇವಸ್ಥಾನಕ್ಕೂ ಉಂಬಳಿಬಿಟ್ಟಿದ್ದಾನೆಂದು ಅಲ್ಲಲ್ಲಿರುವ ಶಾಸನಗಳಿಂದ ತಿಳಿಯಬಹುದು. ಕ್ರಿ. ಶ. 1512ರಲ್ಲಿ ಸಲುವ ತಿಮ್ಮನು ಪ್ರಧಾನಿಯಾಗಿದ್ದಾನೆಂದೂ, ರತ್ನಪ್ಪನು ಮಂಗಳೂರು ಒಡೆಯನಾಗಿದ್ದನೆಂದೂ, ಪುತ್ತಿಗೆ ಸೋಮನಾಥದೇವಸ್ಥಾನದಲ್ಲಿರುವ ಶಾಸನದಿಂದ ತಿಳಿಯುತ್ತದೆ. ಕ್ರಿ. ಶ. 1515ರಲ್ಲಿ ವೈಚಪ್ಪನು ದಂಡಾಧಿ ಪತಿಯಾಗಿದ್ದನೆಂದೂ ರತ್ನಪ್ಪನು ಮಂಗಳೂರು ಒಡೆಯನಾಗಿದ್ದನೆಂದೂ ಮೂಡಬಿದರೆ ಗುರುಬಸದಿಯಲ್ಲಿರುವ ಶಾಸನದಿಂದ ತಿಳಿಯಬಹುದು. ಕ್ರಿ. ಶ. 1518ರಲ್ಲಿ ವಿಜಯ ಒಡೆಯನು ಬಾರಕೂರು ರಾಜ್ಯವನ್ನು ಆಳು ತ್ತಿದ್ದನೆಂದು ಬಸರೂರು ಕೋಟೇಶ್ವರದೇವಸ್ಥಾನದಲ್ಲಿರುವ ಶಾಸನ ದಿಂಲೂ. ಕ್ರಿ. ಶ. 1526ರಲ್ಲಿ ತಿಮ್ಮಣ್ಣ ಒಡೆಯನು ಬಾರಕೂರ ರಾಜ್ಯವಾಳುತ್ತಿದ್ದನೆಂದು ಕೋಟೇಶ್ವರದೇವಸ್ಥಾನದಲ್ಲಿರುವ ಶಾಸನ ದಿಂದಲೂ ತಿಳಿಯಬಹುದು.

ಕೃಷ್ಣದೇವರಾಯನು ವಿಜಯನಗರದಲ್ಲಿರುವ ಅನೇಕ ದೇವಸ್ಥಾನ ಗಳನ್ನೂ ಪೂರ್ಣ ಹೊಸತಾಗಿ ಕಟ್ಟಿಸಿದನು. ಕೆಲವನ್ನು ಜೀರ್ಣೋದ್ಧಾರ ಮಾಡಿಸಿದನು. ದಕ್ಷಿಣ ಹಿಂದೂಸ್ಥಾನದ ದೇವಸ್ಥಾನಗಳಿಗೆ ದೊಡ್ಡ

ಗೋಪುರಗಳನ್ನು ಕಟ್ಟಿಸಿ ಇವುಗಳಿಗೆ ರಾಯಗೋಪುರಗಳೆಂದು ಹೆಸರಿಟ್ಟನು. ಅನೇಕ ಗೋಪುರಗಳು ಕಟ್ಟಿ ಆಗುವದಕ್ಕಿಂತ ಮುಂಚೆಯೇ ವಿಜಯನಗರವು ಹಾಳಾದ್ದರಿಂದ ಇವುಗಳ ಕೆಲಸವು ಅರ್ಧದಲ್ಲಿಯೇ ಉಳಿದಿದೆ. ಬಳ್ಳಾರಿಯ ಹೊಸಪೇಟೆ ಅಥವಾ ನಾಗಲಾಪಟ್ಟಣವನ್ನು ತನ್ನ ತಾಯಿಯ ಹೆಸರಿನಲ್ಲಿ ಕಟ್ಟಿಸಿದನು. ರಾಜಧಾನಿಗೆ ನೀರಿಗೋಸ್ಕರ ಒಂದು ದೊಡ್ಡ ಕೆರೆಯನ್ನು ಅಗಿಸಿದನು. ಇವನ ರೀತಿಯನ್ನು ಅನುಸರಿಸಿ ಅಲ್ಲಲ್ಲಿಯ ಅಧಿಕಾರಿಗಳೂ ಒಳಅರಸರೂ ಇದೇ ತರದ ಜಲಾಶಯಗಳನ್ನು ತೋಡಿಸಿದರು.

ಕೃಷ್ಣದೇವರಾಯನು ತನ್ನ ರಾಜ್ಯಭಾರದ ಕೊನೆಯ 10 ವರ್ಷಗಳನ್ನು ರಾಜ್ಯವನ್ನು ಸಮಾಧಾನದಿಂದ ಆಳುವದರಲ್ಲಿ ಕಳೆದನು. ಸಲುವನರಶಿಂಹನ ಅಪೇಕ್ಷೆಯಂತೆ ವಿಜಯನಗರ ಸಾಮ್ರಾಜ್ಯವು ಆಗ ಅತೀ ಉನ್ನತಸ್ಥಿತಿಯನ್ನು ಹೊಂದಿತು.

ಕೃಷ್ಣದೇವರಾಯನಿಗೆ ಮೂವರು ರಾಣಿಯರಿದ್ದರು. ಒಬ್ಬಳು ಶ್ರೀರಂಗ ಪಟ್ಟಣದ ಅರಸನ ಮಗಳಾದ ತಿರುಮಲಾದೇವಿ. 2ನೇಯವಳು ಪಟ್ಟದ ರಾಣಿಯಲ್ಲ; ಪ್ರೀತಿಯ ವೇಶ್ಯಾಸ್ತ್ರೀಯಾದ ಚಿನ್ನದೇವಿ. 3ನೇಯವಳು ಗಜಪತಿ ಅರಸನ ಮಗಳಾದ ತುಕ್ಕಾ ದೇವಿ. ತಿರುಮಲಾದೇವಿ, ಚಿನ್ನದೇವಿ, ಕೃಷ್ಣದೇವರಾಯ ಈ 3 ಮಂದಿಯವರ ತಾಮ್ರಪ್ರತಿಮೆಗಳು ತಿರುಪತಿದೇವಸ್ಥಾನದಲ್ಲಿವೆ. ಕೃಷ್ಣದೇವರಾಯನ ತರುವಾಯ ಅವನ ರಾಣಿಯಾದ ತಿರುಮಲಾದೇವಿಯ ಮಗ ತಿರುಮಲ ರಾಯನು ಪಟ್ಟಕ್ಕೆ ಬಂದನು.

ಕೃಷ್ಣದೇವರಾಯನು ವೈಷ್ಣವನಾಗಿದ್ದನು. ಆದರೆ ಎಲ್ಲಾ ಮತದವರನ್ನು ಪ್ರೀತಿಯಿಂದ ನಡಿಸುತ್ತಿದ್ದನು. ಅಧಿಕಾರಿಗಳು ಅನ್ಯಾಯ ಮಾಡದ ಹಾಗೆ ಚೆನ್ನಾಗಿ ಜಾಗ್ರತೆಯಿಂದ ಇರುತ್ತಿದ್ದನು.

**12. ಅಚ್ಯುತರಾಯ:—ಕ್ರಿ. ಶ. 1530—1542.** ಸಲುವ ನರಶಿಂಹನಿಗೆ ಶಿವಪ್ಪಾಜಿದೇವಿ, ನಾಗಲಾದೇವಿ, ಓಬಾಂಬಿಕಾದೇವಿ ಎಂಬ

ಮೂವರು ರಾಣಿಯರಿದ್ದರು. ಮೊದಲನೇ ರಾಣಿಯ ಮಗನು ವೀರ ನರಸಿಂಹ; 2ನೇಯವಳ ಮಗ ಕೃಷ್ಣದೇವರಾಯ; 3ನೇಯವಳಿಗೆ ರಂಗ ಮತ್ತು ಅಚ್ಯುತರಾಯ ಎಂಬ ಇಬ್ಬರು ಮಕ್ಕಳು. ಕೃಷ್ಣ ದೇವರಾಯನ ಮಗನು ಪಟ್ಟಕ್ಕೆ ಬಂದರೂ ಅಚ್ಯುತರಾಯನು ಅವ ನನ್ನು ಸಿಂಹಾಸನದಿಂದ ತಳ್ಳಿ ತಾನು ಪಟ್ಟಕ್ಕೆ ಬಂದನು. ಕೃಷ್ಣ ದೇವರಾಯನು ಇವನನ್ನೂ ಇನ್ನಿಬ್ಬರು ತಮ್ಮಂದಿರನ್ನೂ ರಾಜ್ಯದಲ್ಲಿ ಕಲಹಗಳು ಉಂಟಾಗದಂತೆ ಸೆರೆಯಲ್ಲಿಟ್ಟಿದ್ದನು. ಅಚ್ಯುತರಾಯನು ಬಲು ಪುಕ್ಕನಿದ್ದನು. ಇವನ ಕಾಲದಿಂದ ಈ ರಾಜ್ಯವು ಬಹಳ ಹೀನ ಸ್ಥಿತಿಗೆ ಬರಲಾರಂಭಿಸಿತು. ಇವನ ಕ್ರೂರತನದಿಂದ ಇವನ ಗೆಳೆಯರೂ ಇವನ ಕೈಬಿಟ್ಟರು. ಇವನ ಸ್ವಭಾವದಿಂದಲೂ ಆಳುವ ರೀತಿಯಿಂದಲೂ ಹಿಂದೂರಾಜರ ಬಲವು ದಕ್ಷಿಣ ಹಿಂದೂಸ್ಥಾನದಲ್ಲಿ ಕಡಿಮೆಯಾಗಿ ಮುಸಲ್ಮಾನರು ಮುಂದೆ ಬರಲಿಕ್ಕೆ ಅನುಕೂಲವಾಯಿತು. ಇವನ ಮಂತ್ರಿಯು ಸಲುವವಂಶದ ಸಾಲುವಣ್ಣ ಎಂಬವನಾಗಿದ್ದನು. ಈ ಕಾಲದಲ್ಲಿ ಪೋರ್ತುಗೀಸರು ಪಶ್ಚಿಮಸಮುದ್ರತೀರದ ಅನೇಕ ಸ್ಥಳಗಳಲ್ಲಿ ತಮ್ಮ ವಸತಿಗಳನ್ನು ಸ್ಥಾಪಿಸಿ ತಮ್ಮ ವ್ಯಾಪಾರದ ರಕ್ಷಣೆ ಗಾಗಿ ಅಲ್ಲಲ್ಲಿ ಕೋಟೆಗಳನ್ನು ಕಟ್ಟಲಾರಂಭಿಸಿದರು. ಅಚ್ಯುತ ರಾಯನು ದಕ್ಷಿಣ ಹಿಂದೂಸ್ಥಾನದಲ್ಲಿ ಅನೇಕ ದೇವಾಲಯಗಳಿಗೆ ಉಂಬಳಿಬಿಟ್ಟಿರುತ್ತಾನೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇವನ ಶಾಸನಗಳು 3 ಸಿಕ್ಕಿಯವೆ. ಬಸರೂರು ಶಾಂತಾರಾಯ ಸ್ವಾಮಿ ದೇವಸ್ಥಾನದಲ್ಲಿರುವ ಶಾಸನ ಪ್ರಕಾರ ಇವನು ಕ್ರಿ. ಶ. 1534ರಲ್ಲಿ ತಿರುಮಲ ದೇವರಿಗೆ ಕುದುರೆ ಗ್ರಾಮವನ್ನು ಉಂಬಳಿಬಿಟ್ಟಿದ್ದಾ ನೆಂತಲೂ, ಬಾರಕೂರು ಮಣಿಗಾರಕೇರಿ ಸೋಮನಾಥೇಶ್ವರ ದೇವ ಸ್ಥಾನದಲ್ಲಿರುವ ಶಾಸನದ ಪ್ರಕಾರ ಕ್ರಿ. ಶ. 1527ರಲ್ಲಿ ಅದೇ ದೇವಸ್ಥಾನಕ್ಕೆ ಉಂಬಳಿಬಿಟ್ಟಿದ್ದಾನೆಂತಲೂ ತಿಳಿಯುತ್ತದೆ. ಈ ಸಮಯದಲ್ಲಿ ತುಳುರಾಜ್ಯವು ಇಕ್ಕೇರಿಯ ಸಂಕಣ್ಣ ನಾಯಕನ ಸ್ವಾಧೀನ

ವಿರಬಹುದೆಂದು ಬಸರೂರು ಶಾಂತಾರಾಯಸ್ವಾಮಿ ದೇವಸ್ಥಾನದ ಶಾಸನದಿಂದ ತಿಳಿಯಬಹುದು. ಆದ್ದರಿಂದ ಕೃಷ್ಣದೇವರಾಯನ ನಂತರ ಆಳಿದ ಅಚ್ಯುತರಾಯ, ಸದಾಶಿವರಾಯ ಮುಂತಾದವರ ಶಾಸನಗಳಲ್ಲಿ ಬಾರಕೂರು ಅಥವಾ ಮಂಗಳೂರು ಒಡೆಯರ ಹೆಸರುಗಳಿಲ್ಲ. ಇವನ ಕಡೇ ಶಾಸನವು ಕ್ರಿ. ಶ. 1542ನೇ ಜನವರಿ 25ನೇ ತಾರೀಕಿನದು. ಅವನ ತರುವಾಯ ಪಟ್ಟಕ್ಕೆ ಬಂದ ಅಣ್ಣ ರಂಗರಾಯನ ಮಗನಾದ ಸದಾಶಿವರಾಯನ ಮೊದಲನೇ ಶಾಸನವು ಕ್ರಿ. ಶ. 1542ನೇ ಇಸವಿಯ ಜುಲಾಯಿ 27ರದ್ದೂ ಇರುತ್ತದೆ.

**ಸದಾಶಿವರಾಯ:—**ಕ್ರಿ ಶ. 1542—1565. ಕ್ರಿ ಶ. 1542ರಲ್ಲಿ ಅಚ್ಯುತರಾಯನು ಕಾಲವಾಗಲು ಪಟ್ಟಕೋಸ್ಕರ ಜಗಳಗಳು ಉಂಟಾಗಿ ಸದಾಶಿವರಾಯನು ಪಟ್ಟಕ್ಕೆ ಬಂದನು. ಆದರೆ ಇವನು ಹೆಸರಿಗೆ ಮಾತ್ರ ಅರಸನಾಗಿದ್ದನು. ನಿಜವಾದ ಅಧಿಕಾರವು ಕೃಷ್ಣದೇವರಾಯನ ಆಳಿಯ ರಾಮರಾಯನ ಮತ್ತು ಅವನ ಇಬ್ಬರು ತಮ್ಮಂದಿರ ಕೈಯಲ್ಲಿತ್ತು. ಸದಾಶಿವರಾಯನು ಕ್ರಿ. ಶ. 1586ರ ವರೆಗೆ ಜೀವಂತನಾಗಿದ್ದನೆಂದು ಬಾರಕೂರು ಮೂಡಕೇರಿ ಸೋಮೇಶ್ವರ ದೇವಸ್ಥಾನದ ಹತ್ತಿರ ಶ್ರೀಧರ ಶಾಸ್ತ್ರಿಗಳ ಮನೆಯ ಹತ್ತಿರ ವಿರುವ ಶಾಸನದಿಂದ ಕಂಡುಬರುತ್ತದೆ. ಈ ಅರಸನು ಪೋರ್ತುಗೀಸರ ಸಂಗಡ ಒಪ್ಪಂದಮಾಡಿದ ಪ್ರಕಾರ ವ್ಯಾಪಾರವೆಲ್ಲವೂ ಪೋರ್ತುಗೀಸರ ಕೈಸೇರಿತು. ಕ್ರಿ. ಶ. 1560ರಲ್ಲಿ ಸದಾಶಿವರಾಯನು ಬಾರಕೂರು ಮಂಗಳೂರು ರಾಜ್ಯಗಳನ್ನು ಇಕ್ಕೇರಿಯ ಸದಾಶಿವ ನಾಯಕನಿಗೆ ಒಪ್ಪಿಸಿ ಕೊಟ್ಟನು. ಕ್ರಿ. ಶ. 1565ರಲ್ಲಿ ಅಹಮದನಗರ, ವಿಜಾಪುರ ಸುಲ್ತಾನರೂ ಕಲ್ಲಿಕೋಟೆಯ ಜಾಮೊರೀನ ಅರಸನೂ ಕೂಡಿ ಪೋರ್ತುಗೀಸರನ್ನು ಮುರಿಯಬೇಕೆಂದು ಒಪ್ಪಂದಮಾಡಿಕೊಂಡರು. ಇದೇ ಸಮಯ ತಾಳಿಕೋಟೆ ಯುದ್ಧದಲ್ಲಿ ರಾಮರಾಯನು ಕೊಲ್ಲಲ್ಪಟ್ಟು ಮುಸಲ್ಮಾನರು ವಿಜಯನಗರ ಪಟ್ಟಣವನ್ನು ಹಾಳುಮಾಡಿದರು. ಅಲ್ಲಿಂದ ಮುಂದೆ ವಿಜಯನಗರವು ಏಳಲೇ ಇಲ್ಲ.

ಸದಾಶಿವರಾಯನ ಕಾಲದ ಶಾಸನಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 9 ಇವೆ; ಬಸರೂರಲ್ಲಿ 3, ಕೋಟೇಶ್ವರದಲ್ಲಿ 2, ಬಾರಕೂರಲ್ಲಿ 4.

**ತಿರುಮಲರಾಯ:**—ಕ್ರಿ. ಶ. 1565—1575. ರಾಮರಾಯನು ತಾಳಿಕೋಟೆಯ ಯುದ್ಧದಲ್ಲಿ ಮಡಿದುಹೋದ ಮೇಲೆ ಅವನ ತಮ್ಮನಾದ 1ನೇ ತಿರುಮಲರಾಯನು ಸದಾಶಿವನ ಹೆಸರಿನಲ್ಲಿ ಕ್ರಿ. ಶ. 1567ರ ವರೆಗೆ ಆಳಿದನು. ಈ ತಿರುಮಲರಾಯನು ಕೃಷ್ಣದೇವರಾಯನ ಮಗಳಾದ ವೆಂಗಲಾದೇವಿಯ ಗಂಡನು. ಇವನು ಪೆನುಕೊಂಡೆಯಲ್ಲಿ ಆಳುತ್ತಿದ್ದನು. ಇವನಿಗೆ ರಘುನಾಥ, 2ನೇ ರಂಗ, 3ನೇ ರಾಮ, 1ನೇ ವೆಂಕಟಪತಿ ಎಂಬ ನಾಲ್ವರು ಮಕ್ಕಳಿದ್ದರು.

**2ನೇ ಶ್ರೀರಂಗರಾಯ:**—1575—1586. ತಿರುಮಲನ ತರುವಾಯ ಅವನ ಮಗನಾದ 2ನೇ ರಂಗನು ಶ್ರೀರಂಗರಾಯನೆಂಬ ಹೆಸರಿನಿಂದ ಪಟ್ಟಕ್ಕೆ ಬಂದನು. ಇವನ ಕಾಲದ ಶಾ. ಶ. 1502 ವಿಜಯ ಸಂ|ರದ ಶಾಸನವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಾರಕೂರು ಮಣೆಗಾರಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿದೆ. ಈ ಅರಸನ ಕಾಲದಲ್ಲಿ ಇಕ್ಕೇರಿ ರಾಜನಾದ ಸಂಕಣ್ಣನಾಯಕನು ಕನ್ನಡ ಜಿಲ್ಲೆಯನ್ನು ಆಳುತ್ತಿದ್ದನು. ಅಚ್ಚಪ್ಪ ಒಡೆಯನು ಬಾರಕೂರಿನಲ್ಲಿ ಅವನ ಕೈಕೆಳಗೆ ಒಡೆಯನಾಗಿದ್ದನು.

**1ನೇ ವೀರವೆಂಕಟಪತಿರಾಯ:**—1586—1614. 2ನೇ ಶ್ರೀರಂಗನ ತರುವಾಯ ಅವನ ತಮ್ಮನಾದ ವೆಂಕಟನು 1ನೇ ವೀರವೆಂಕಟಪತಿರಾಯನೆಂಬ ಹೆಸರಿಂದ ಆಳಲಾರಂಭಿಸಿದನು. ಇವನ ಕಾಲದ 2 ಶಾಸನಗಳು ಉಡುಪಿಯಲ್ಲಿ ಸಿಕ್ಕಿಯುವೆ. ಒಂದು ಕೃಷ್ಣ ಮಠದ ಉತ್ತರ ದಿಕ್ಕಿನ ಗೋಡೆಯಲ್ಲಿದೆ. ಇದರ ಪ್ರಕಾರ ಕ್ರಿ. ಶ. 1614ರಲ್ಲಿ ಹೂವಿನಕೆರೆ ಗ್ರಾಮವನ್ನು ಕೆಳದಿಯ (ಇಕ್ಕೇರಿಯ) ವೆಂಕಟಪ್ಪನಾಯಕನು ವಾದಿರಾಜತೀರ್ಥಸ್ವಾಮಿಗಳ ಶಿಷ್ಯರಾದ

ವೇದವೇದ್ಯತೀರ್ಥಸ್ವಾಮಿಗಳ ಪರ್ಯಾಯವಿರುವ ಸಮಯ ಕೃಷ್ಣದೇವರಿಗೆ ಉಂಬಳಿಬಿಟ್ಟಿರುತ್ತಾನೆಂದು ಕಾಣುತ್ತದೆ. ಇನ್ನೊಂದು ಅದೇ ಕೃಷ್ಣ ಮಠದಲ್ಲಿದೆ. ಇದರ ಪ್ರಕಾರ ಕ್ರಿ. ಶ. 1614ರಲ್ಲಿ ಚಿನ್ನಭಂಡಾರ ರಾಮಕೃಷ್ಣನು 1 ಗ್ರಾಮವನ್ನು ಕೃಷ್ಣದೇವರಿಗೆ ಉಂಬಳಿಬಿಟ್ಟಿರುತ್ತಾನೆಂದು ತಿಳಿಯಬಹುದು.

## ವಿಜಯನಗರ ರಾಜ್ಯಭಾರಕ್ರಮ.

ಹಿಂದಣ ಕಾಲದಲ್ಲಿ ರಾಜನು ಬೆಳಿಗ್ಗೆ ಸಭೆಗೆ ಬಂದು ಅಲ್ಲಿ ಪ್ರಜೆಗಳ ಕಷ್ಟಗಳನ್ನು ತಾನೇ ವಿಚಾರಿಸುವ ವಾಡಿಕೆಯು ಇದ್ದಿತು. ಅರಸನ ಕೈಕೆಳಗೆ ಮಹಾಪ್ರಧಾನ ಅಥವಾ ಸರ್ವಾಧಿಕಾರಿ ಎಂಬ ಹೆಸರಿನಿಂದ ಒಬ್ಬ ಮುಖ್ಯಮಂತ್ರಿ ಇರುತ್ತಿದ್ದನು. ಈ ಮಹಾಪ್ರಧಾನನಲ್ಲದೆ ಇನ್ನೂ ಏಳು ಜನ ಮಂತ್ರಿಗಳಿರುತ್ತಿದ್ದರು. ಸಂಸ್ಥಾನವು ದೊಡ್ಡ ವಿಭಾಗಗಳಾಗಿ ವಿಂಗಡಿಸಲ್ಪಟ್ಟು ಪ್ರತಿ ಒಂದು ಭಾಗಕ್ಕೂ ಒಬ್ಬೊಬ್ಬ ದಂಡನಾಯಕ ಅಥವಾ ಢಣಾಯಕನೆಂಬ ಅಧಿಕಾರಿ ಇರುತ್ತಿದ್ದನು. ಆಯಾ ಭಾಗಗಳಲ್ಲಿ ಸಾಮಂತರಾಜರ ಮೇಲೆ ಢಣಾಯಕನೇ ವಿಚಾರಮಾಡುತ್ತಿದ್ದನು. ಆದುದರಿಂದ ಇವನಿಗೆ ಮಹಾಸಾಮಂತಾಧಿಪತಿ ಅಥವಾ ಮಹಾಮಂಡಲೇಶ್ವರ ಎಂಬದಾಗಿಯೂ ಹೆಸರಿದ್ದಿತು.

ಹತ್ತರಿಂದ 40 ಗ್ರಾಮಗಳಿಗೆ ಒಂದು ಹೋಬಳಿ ಎಂದೂ, 40ರಿಂದ 10 ಹೋಬಳಿಗಳಿಗೆ ಒಂದು ಗಡಿ ಎಂದೂ, 10ರಿಂದ 20 ಗಡಿಗಳಿಗೆ ಒಂದು ಸೀಮೆ ಅಥವಾ ನಾಡು ಎಂದೂ ವಿಭಾಗಗಳಿದ್ದವು. ಸಾಧಾರಣವಾಗಿ ಸೀಮೆಗಳಿಗೆಲ್ಲಾ ಅವುಗಳ ಹುಟ್ಟುವಳಿಯನ್ನು ಅನುಸರಿಸಿ ಹೆಸರುಗಳನ್ನಿಡುತ್ತಿದ್ದರು. ಗಡಿಯ ವಿಚಾರಣೆಯು ಈಗಿನ ಕಾಲದ ತಹಸೀಲದಾರನಿಗೆ ಸಮಾನನಾದ ಪಾರುಪತ್ಯಗಾರನದಾಗಿಯೂ ಗ್ರಾಮದ ವಿಚಾರಣೆಯು ಗೌಡನದಾಗಿಯೂ ಇದ್ದಿತು. ಗ್ರಾಮಗಳಲ್ಲಿ ಗೌಡನೂ ಸೇರಿ ಆಯಗಾರರು (ಪಂಚಾಯತರು) ಎಂಬದಾಗಿ

12 ಜನರು ಕೆಲಸದಲ್ಲಿರುತ್ತಿದ್ದರು. ಗೌಡನು ರೈತರಿಂದ ಬೆಳೆಗಳನ್ನು ಮಾಡಿಸಿ ಸರಕಾರಕ್ಕೆ ಸಲ್ಲಬೇಕಾದ ಭಾಗವನ್ನು ಕೂಡಿಸುತ್ತಿದ್ದನು ಇದಲ್ಲದೆ ಪ್ರತಿವರ್ಷದ ಅಂತ್ಯದಲ್ಲಿ ಮುಂದಿನ ವರ್ಷಕ್ಕೆ ತನ್ನ ಗ್ರಾಮದಿಂದ ಸರಕಾರಕ್ಕೆ ಕೊಡಬೇಕಾದ ಭಾಗವನ್ನು ನಿಶ್ಚಯಿಸುತ್ತಿದ್ದನು.

ಶ್ಯಾನುಭಾಗನು ಗೌಡ (ಪಟೇಲ)ನ ಹೇಳಿಕೆಯ ಪ್ರಕಾರ ಲೆಕ್ಕಗಳನ್ನು ಸಿದ್ಧಪಡಿಸುತ್ತಿದ್ದನು. ಕಮ್ಮಾರನೂ ಬಡಗಿಯೂ ವ್ಯವಸಾಯಕ್ಕೆ ಬೇಕಾದ ಕಬ್ಬಿಣದ ಮತ್ತು ಮರದ ಸಾಮಾನುಗಳನ್ನು ಮಾಡಿಕೊಡುತ್ತಿದ್ದರು. ಜಾಡನು ಗ್ರಾಮದವರಿಗೆ ಬೇಕಾದ ವಸ್ತ್ರಗಳನ್ನು ನೇಯುತ್ತಿದ್ದನು. ಗುಡಿಗಾರನು ಚಿತ್ರದ ಕೆಲಸಗಳನ್ನೂ ಮಕ್ಕಳ ಆಟದ ಸಾಹಿತ್ಯಗಳನ್ನೂ ಮಾಡುತ್ತಿದ್ದನು. ಜೋಯಿಸನು ಪಂಚಾಂಗವನ್ನು ನೋಡಿ ಬೀಜಬಿತ್ತುವದಕ್ಕೂ ಮದುವೆ ಮುಂತಾದ ಕೆಲಸಗಳಿಗೂ ಒಳ್ಳೆಯ ಮುಹೂರ್ತವನ್ನು ಹೇಳುತ್ತಿದ್ದನು. ಸಮಗಾರನು ಗ್ರಾಮಸ್ಥರಿಗೆ ಬೇಕಾದ ಚರ್ಮದ ಸಾಮಾನುಗಳನ್ನೂ ಮಾಡಿಕೊಡುವದಲ್ಲದೆ ಗೌಡನು ಹೇಳಿದ ಇತರ ಕೆಲಸಗಳನ್ನೂ ಮಾಡುತ್ತಿದ್ದನು. ಅಕ್ಕಸಾಲಿಯು ಸರಕಾರಕ್ಕೆ ಸಲ್ಲಬೇಕಾದ ದವಸಗಳನ್ನು ಅಳತೆಮಾಡುವದಲ್ಲದೆ ನಾಣ್ಯಗಳ ಪರೀಕ್ಷೆಯನ್ನು ಮಾಡುತ್ತಿದ್ದನು. ತಳವಾರನು ಗ್ರಾಮದಲ್ಲಿ ಕಳವಾದರೆ ಕಳ್ಳರನ್ನು ಹಿಡಿದು ಕಳೆದುಹೋದ ವಸ್ತುಗಳನ್ನು ಕಂಡುಹಿಡಿಯುತ್ತಿದ್ದನು; ಅದಲ್ಲದೆ ಪರಸ್ಥಳದವರಿಗೆ ಬೇಕಾದ ಸಾಮಾನುಗಳನ್ನು ಒದಗಿಸಿಕೊಡುತ್ತಿದ್ದನು; ಮತ್ತು ಅವರಿಗೆ ದಾರಿಯನ್ನು ತೋರಿಸುತ್ತಿದ್ದನು. ನೀರಗಂಟಿಯು ಕೆರೆಯಿಂದ ಸರಿಯಾಗಿ ನೀರು ಬಿಟ್ಟು ಕೆರೆಯ ಜಾಗ್ರತೆಯನ್ನು ನೋಡಿಕೊಳ್ಳುತ್ತಿದ್ದನು. ಕುಂಬಾರ, ಅಗಸ, ಕ್ಷೌರಿಕ ಇವರು ತಮ್ಮತಮ್ಮ ಕೆಲಸಗಳನ್ನು ಮಾಡುತ್ತಿದ್ದರು. ಕೆಲಸಗಾರರಿಗೆ ನಿಚಾಯ, ಅಧಾರ್ಯ ಎಂಬದಾಗಿ ಪ್ರತಿ ಒಬ್ಬ ರೈತನೂ ಒಂದು ಹೊರೆ ಹುಲ್ಲು ಮತ್ತು ಒಂದು ಹೊರೆ ಭತ್ತವನ್ನು ಕೊಡುತ್ತಿದ್ದನು.

ಗೌಡ ಶ್ಯಾನುಭೊಗ ಮುಂತಾದವರಿಗೆ ಮಾನ್ಯದ ಭೂಮಿಗಳೂ ಇರುತ್ತಿದ್ದವು. ಕಂದಾಯದಿಂದಲೂ, ಮನೆಯತೆರಿಗೆ, ಕಸಬುತೆರಿಗೆ, ಮಾರುವುದಕ್ಕೆ ತಂದ ಪದಾರ್ಥಗಳ ಮೇಲೆ ಹಾಕುವ ಸುಂಕ ಇವುಗಳಿಂದಲೂ ಸರಕಾರಕ್ಕೆ ಹುಟ್ಟುವಳಿಯಾಗುತ್ತಿತ್ತು. ಆ ಕಾಲದ ಸುಂಕದ ಕಟ್ಟೆಗಳು ಕನ್ನಡ ಜಿಲ್ಲೆಯ ಎಲ್ಲಾ ಭಾಗಗಳಲ್ಲಿ ಈಗಲೂ ಇವೆ. ನೀರಿನ ವಸತಿಯು ಚೆನ್ನಾಗಿದ್ದ ಪ್ರದೇಶಗಳಲ್ಲಿ ಕಂದಾಯವನ್ನು ನಾಣ್ಯರೂಪವಾಗಿಯೂ ಬೇರೆ ಕಡೆಗಳಲ್ಲಿ ದವಸದ ರೂಪವಾಗಿಯೂ ಕೊಡುತ್ತಿದ್ದರು.

ವ್ಯವಸಾಯವನ್ನು ಹೆಚ್ಚು ಮಾಡುವದಕ್ಕೋಸರ ಯೋಗ್ಯವಾದ ಭೂಮಿಗಳನ್ನು ಸಾಗುವಳಿಗೆ ತರುವದಕ್ಕೆ ಒಪ್ಪಿಕೊಂಡವರಿಗೆ ಸರಕಾರದಿಂದ ಹಣ ಮುಂಗಡಕೊಡುವ ಪದ್ಧತಿಯಿದ್ದಿತು. ಇದಲ್ಲದೆ ಅರಸರು ದೊಡ್ಡ ದೊಡ್ಡ ಕೆರೆಗಳನ್ನು ಕಟ್ಟಿಸುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯ ಬಸರೂರು, ಬಾರಕೂರು, ಮೂಡಬಿದರೆ, ವೇಣೂರು, ನಂದಾವರ, ಕುಂಬಳೆ ಕಾರ್ಕಳ ಮಂಗಳೂರು ಮುಂತಾದ ಊರುಗಳಲ್ಲಿಯೂ ಹಳ್ಳಿಗಳಲ್ಲಿಯೂ ಈಗಲೂ ಹಾಳು ಸ್ಥಿತಿಯಲ್ಲಿರುವ ಕೆರೆಗಳನ್ನು ನೋಡಿದರೆ ನಿಜಸ್ಥಿತಿಯು ತಿಳಿಯುವದು. ಜನರು ಹೆಚ್ಚಾಗಿ ಇಲ್ಲದ ಸ್ಥಳಗಳಿಗೆ ಇತರ ದೇಶದವರು ಬಂದು ಅಲ್ಲಿ ವಾಸಮಾಡುವಂತೆ ಸಹಾಯಮಾಡುತ್ತಿದ್ದರು. ಇದಲ್ಲದೆ ಅನ್ಯದೇಶದ ಪದಾರ್ಥಗಳು ತಮ್ಮ ದೇಶಕ್ಕೆ ಬರುವುದಕ್ಕೂ ತಮ್ಮ ಪದಾರ್ಥಗಳು ಅನ್ಯದೇಶಕ್ಕೆ ಹೋಗುವುದಕ್ಕೂ ಅನುಕೂಲಿಸುವಂತೆ ಏರ್ಪಾಡುಗಳನ್ನು ಮಾಡುತ್ತಿದ್ದರು. ಕನ್ನಡ ಜಿಲ್ಲೆಯಲ್ಲಿ ಚೀನಾ ದೇಶದವರೂ ಅರಬಿಯವರೂ ಕೃಷ್ಣದೇವರಾಯನ ಕಾಲದಿಂದ ಪೊರ್ತುಗೀಸರೂ ವ್ಯಾಪಾರಮಾಡುತ್ತಿದ್ದರು.

ಈ ಅರಸರು ವಿಸ್ತಾರವಾದ ಕಾಡುಗಳನ್ನು ತಮಗೆ ಬೇಕಾದ ಜನರಿಗೆ ಕೊಡುತ್ತಿದ್ದರು. ಈ ಜನರು ಕಾಡುಗಳನ್ನು ಕಡಿದು ರೈತರನ್ನು ತಂದಿಟ್ಟು ವ್ಯವಸಾಯವನ್ನು ಮಾಡಿಸುತ್ತಿದ್ದರು. ಹೀಗೆ ವ್ಯವಸಾಯ ಪ್ರದೇಶಗಳನ್ನು ಪಾಳೆಯ ಅಥವಾ ಪಾಳೆಯಪಟ್ಟು ಎಂಬದಾಗಿಯೂ ಅವುಗಳನ್ನು ಸಿದ್ಧಪಡಿಸಿದವರನ್ನು ಪಾಳೆಯಗಾರರೆಂಬದಾಗಿಯೂ ಕರೆಯುತ್ತಿದ್ದರು.

# ವಿಜಯನಗರ 1ನೇ ವಂಶದ ಅರಸರ ವಂಶಾವಳಿ.

## ಸಂಗಮನ ವಂಶ.

ಸಂಗಮ = ರಾಣಿ ಕಾಮಾಂಬಿಕಾ.

- 1ನೇ ಹರಿಹರ ಕ್ರಿ. ಶ. 1336-1350
- ಕಂಪಣ್ಣ
  - ಸಂಗಮ
- 1ನೇ ಬುಕ್ಕರಾಯ ರಾಣಿ ಗೌರಾಂಬಿಕಾ 1350-1370
  - 2ನೇ ಹರಿಹರ 1379-1404 ರಾಣಿ ಮಲಾಂಬಿಕಾ
    - 2ನೇ ವಿರೂಪಣ್ಣ ಅಥವಾ 1ನೇ ವಿರೂಪಾಕ್ಷ (ಸ್ವಲ್ಪ ಸಮಯ ಅರಸು)
    - 2ನೇ ಬುಕ್ಕ (ಸ್ವಲ್ಪ ಸಮಯ ಅರಸು)
    - 1ನೇ ದೇವರಾಯ ರಾಣಿ ಹೇಮಾಂಬಿಕಾ 1406-1421
      - ವೀರವಿಜಯ ಅಥವಾ ವಿಜಯಭೂಪತಿ ರಾಣಿ ನಾರಾಯಣಾಂಬಿಕೆ
        - 2ನೇ ದೇವರಾಯ 1419-1451
          - ಮಲ್ಲಿಕಾರ್ಜುನ 1451-1465
          - ವಿರೂಪಾಕ್ಷ 1465-1479
  - 1ನೇ ವಿರುಪಣ್ಣ
  - ಮಲ್ಲಿನಾಥ
  - 2ನೇ ಕಂಪಣ
- ಮಾರಪ್ಪ
- ಮದ್ದಪ

# ವಿಜಯನಗರ 2ನೇ ವಂಶದ ಅರಸರ ವಂಶಾವಳಿ.

## ಸಲುವ ನರಸನ ಮನೆತನ.

ನರಸನಾಯಕ ಅಥವಾ ಸಲುವ ನರಸಿಂಹ.
1486-1493

ತಮ್ಮ
( ಇಮ್ಮಡಿ ನರಸಿಂಹ 1493-1595. )

ಶಿವಪ್ಪಾದೇವಿಯಿಂದ
ವೀರನರಸಿಂಹ (ಭುಜಬಲ
ರಾಯ 1505-09

ನಾಗಲಾದೇವಿಯಿಂದ
ಕೃಷ್ಣದೇವರಾಯ
1509-30

ಓಬಾಂಬಿಕಾದೇವಿಯಿಂದ

ರಂಗ
ಸದಾಶಿವರಾಯ
1542-1565

ಅಚ್ಯುತರಾಯ
(1530-42)
ವೆಂಕಟ
ದೇವರಾಯ

ತಿರುಲಮ್ಮ (ಗಂಡ ರಾಮರಾಯ)

ಮಗಳು = ತಿರುಮಲರಾಯ
ವೆಂಗಲಾದೇವಿ 1565-1575

2ನೇ ಶ್ರೀರಂಗರಾಯ 1575-1586

1ನೇ ವೆಂಕಟಪತಿರಾಯ
1586-1614.

# ವಿಜಯನಗರ 3ನೇ ವಂಶದ ಅರಸರ ವಂಶಾವಳಿ.

## ಡಾಕ್ಟ್ಟರ ಹುಲ್ಟ್ಚನ ಅಭಿಪ್ರಾಯ ಪ್ರಕಾರ.

1ನೇ ರಂಗ, ರಾಣಿ, ತಿಮಲಿ ಲಾಂಬಾ.

- 2ನೇ ರಾಮರಾಯ (ಅಳಿಯ) ರಾಣಿ ಕೃಷ್ಣದೇವರಾಯನ ಮಗಳಾದ ತಿರುಮಲಮ್ಮ
  - 4ನೇ ರಂಗ
    - 3ನೇ ಪೆದ್ದ ವೆಂಕಟ
    - 3ನೇ ಚಿನ್ನ ವೆಂಕಟ
      - 6ನೇ ರಂಗನನ್ನು 1664 ರಲ್ಲಿ, ಗೋಪಾಲನು ದತ್ತಕ್ಕೆ ತೆಕ್ಕೊಂಡನು.
    - ರಾಣಿ ಬಂಗಾರಮ್ಮ
- 1ನೇ ತಿರುಮಲರಾಯ, ರಾಣಿ, ಕೃಷ್ಣದೇವರಾಯನ ಮಗಳಾದ ವೆಂಗಲಾ
  - ರಘುನಾಥ,
  - 2ನೇ ಶ್ರೀರಂಗ, 1575-86
  - 3ನೇ ರಾಮ,
    - 2ನೇ ತಿರುಮಲ
    - 3ನೇ ರಂಗ
      - 4ನೇ ರಾಮ
  - 1ನೇ ವೆಂಕಟ, ಪತಿರಾಯ 1586-1614
- ವೆಂಕಟಾದ್ರಿ
  - 5ನೇ ರಂಗ
    - ಗೋಪಾಲ
      - 6ನೇ ರಂಗ

# 17ನೇ ಅಧ್ಯಾಯ.

## ಮುಹಮ್ಮದೀಯರು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಮುಹಮ್ಮದೀಯರಲ್ಲಿ 4—5 ವಿಧದ ಜನರಿರುತ್ತಾರೆ. 1 ಮುಹಮ್ಮದೀಯರು, 2 ಮೋಮನರು, 3 ನವಾಯತರು, 4 ಮಾಪಿಳ್ಳೆಯರು, 5 ಪುಸಲಾರರು (ಪ್ರದಿಯೆ ಇಸಲಾಮು). ಮುಹಮ್ಮದೀಯರಲ್ಲಿ ಉಂಟಾದ ಈ ಭೇದಗಳನ್ನು ತಿಳಿಯಬೇಕಾದರೆ ಮುಹಮ್ಮದೀಯ ಮತದ ವಿಷಯವಾಗಿ ಸ್ವಲ್ಪ ತಿಳಕೊಳ್ಳಬೇಕಾಗಿದೆ.

ಈ ಮತಸ್ಥಾಪಕನಾದ ಮುಹಮ್ಮದನು ಮಕ್ಕದಲ್ಲಿ ಕ್ರಿ. ಶ. 569ರಲ್ಲಿ ಹುಟ್ಟಿದನು. ಇವನ ಸಣ್ಣಪ್ರಾಯದಲ್ಲಿಯೇ ಇವನ ತಂದೆಯು ಸತ್ತುಹೋದನು. ಆಗ ಇವನು "ಕೊರೇಶ" ಎಂಬ ಒಂದು ಸಣ್ಣ ಅರಬೀ ವಂಶದ ಮುಖ್ಯಸ್ಥನಾದನು. ಆಗ ಇವನ ಹತ್ತರ ಒಬ್ಬ ಗುಲಾಮನೂ 5 ಒಂಟೆಗಳೂ ಇದ್ದವು. ಇವನ ತಾಯಿಯಾದ ಅಮೀನಾ ಎಂಬವಳು ಒಬ್ಬ ಯಹೂದಿಯಾಗಿದ್ದಳು. ಅವಳು "ಸಿರಗ್ವೀಸ್" ಎಂಬ ಒಬ್ಬ ಸೀರಿಯಾನ ಮತೋಪದೇಶಕನ ಬೋಧನೆಯನ್ನು ಕೇಳಿ ಕ್ರೈಸ್ತಳಾದಳು. ಮುಹಮ್ಮದನನ್ನು ಚಿಕ್ಕಪ್ರಾಯದಲ್ಲಿ ಅವನ ಅಜ್ಜನು ಸಾಕಿದನು. ಅಜ್ಜನು ಕಾಲವಾದನಂತರ ಇವನ ಚಿಕ್ಕ ತಂದೆಯು ಇವನನ್ನು ತನ್ನ ಮಗನ ಹಾಗೆಯೇ ಸಾಕಿದನು. ಇವನು 13 ವರ್ಷ ಪ್ರಾಯದವನಾಗಿದ್ದಾಗ ತನ್ನ ಚಿಕ್ಕ ತಂದೆಯ ಸಂಗಡ ಸಿರಿಯಕ್ಕೆ ವ್ಯಾಪಾರಕ್ಕೆ ಹೋಗಿದ್ದಾಗ ಬೊಸ್ರಾದ ಸಂತೆಯಲ್ಲಿ ಸಿರಗ್ವಿಸ್ ಭಹಿರಾ ಅಥವಾ ಫೆಲಿಕ್ಸ ಎಂಬವನು ಸಿಕ್ಕಿದನೆಂದು ಕಾಣುತ್ತದೆ. ಕೊರಾನನ್ನು ಬರಿಯುವುದಕ್ಕೆ ಇವನೇ ಹೆಚ್ಚಾಗಿ ಮುಹಮ್ಮದನಿಗೆ ಸಹಾಯಮಾಡಿದನೆಂದು ನಂಬುತ್ತಾರೆ. ಕೊರಾನ್ ಎಂಬುದು ಕರಾ್ರ ಎಂದರೆ ಓದಲಿಕ್ಕೆ ಎಂದರ್ಥದ ಶಬ್ದವಾಗಿರುತ್ತದೆ. ಇದು ಆ ಸಮಯದಲ್ಲಿ ಅರಬೀ

ದೇಶದಲ್ಲಿಯೂ ಪರ್ಸಿಯಾದೇಶದಲ್ಲಿಯೂ ನಡೆದು ಬರುತ್ತಿದ್ದ ಅನೇಕ ಪದ್ಧತಿಗಳನ್ನೂ ಯಹೂದಿ, ಕ್ರೈಸ್ತಮತದ ಮತಪುಸ್ತಕಗಳ ಸಾರಾಂಶ ವನ್ನೂ ಒಳಕೊಂಡಿದೆ. ಅನೇಕ ಮಹಮ್ಮದೀಯರು ಕೊರಾನು 2 ಹಲಿಗೆಗಳ ಮೇಲೆ ಬರೆಯಲ್ಪಟ್ಟು ಬಹಳ ಪ್ರಾಚೀನ ಕಾಲದಿಂದಲೇ ದೇವರ ಮುಂದೆ ಇತ್ತೆಂದು ನಂಬುತ್ತಾರೆ. ಮುಹಮ್ಮದನು ತನ್ನ ಜೀವ ಕಾಲದಲ್ಲಿ ವರ್ಷಕ್ಕೆ ಒಂದಾವರ್ತಿ ಅದನ್ನು ನೋಡುತ್ತಿದ್ದನೆಂದೂ ಅವನ ಅಂತ್ಯಕಾಲದ ಕಡೆಯ 12 ತಿಂಗಳಲ್ಲಿ ಎರಡಾವರ್ತಿ ನೋಡು ತ್ತಿದ್ದನೆಂದೂ ಹೇಳುತ್ತಾರೆ. ಮುಹಮ್ಮದನು ವ್ಯಾಪಾರ ಮಾಡುತ್ತಿದ್ದಾಗ ಖದಿಜಾ ಎಂಬ ಒಬ್ಬ ಬಹಳ ಐಶ್ವರ್ಯವಂತ ವಿಧವೆಯ ಪಕ್ಷವಾಗಿ ವ್ಯಾಪಾರಮಾಡುತ್ತಿದ್ದನು. ಅವಳು ಇವನ ರೂಪುಲಾವಣ್ಯವನ್ನೂ ಚುರುಕುತನವನ್ನೂ ಗಾಂಭೀರ್ಯವನ್ನೂ ನೋಡಿ ಮುಹಮ್ಮದನಿಗೆ 25 ವರ್ಷ ಪ್ರಾಯದಲ್ಲಿ ಮದುವೆಮಾಡಿಕೊಂಡಳು. ಹೀಗೆ ಬಡವನಾಗಿದ್ದ ಮುಹಮ್ಮದನು ಫಕ್ಕನೇ ಮಕ್ಕದಲ್ಲಿ ದೊಡ್ಡ ಮನುಷ್ಯನಾದನು. ಆ ಸಮಯದ ಅರಬಿಯರು ಆಕಾಶದಲ್ಲಿರುವ ನಕ್ಷತ್ರಗಳನ್ನೂ ಅನೇಕ ಮೂರ್ತಿಗಳನ್ನೂ ಪೂಜಿಸುತ್ತಿದ್ದರು. ಆಗ ಇವನ ದೇಶದಲ್ಲಿ ಕೆಲವು ಯಹೂದ್ಯ ಮತ್ತು ಕ್ರೈಸ್ತ ಕುಟುಂಬಗಳು ವಾಸವಾಡಿಕೊಂಡಿದ್ದವು. ಅವರಿಂದ ಇವನು ತನ್ನ ಜನರ ಅಭಿವೃದ್ಧಿಗೆ ಬೇಕಾದ ಕೆಲವು ಒಳ್ಳೇ ಕ್ರಮಗಳನ್ನು ಕಲಿತುಕೊಂಡನು. ಆ ಪದ್ಧತಿಗಳನ್ನೆ ತನ್ನ ಜನರಲ್ಲಿಯೂ ವಾಡಿಕೆಗೆ ಬರುವ ಹಾಗೆ ಮಾಡಬೇಕೆಂದು ಬಹಳ ಸಾಹಸಪಡು ತ್ತಿದ್ದನು. ಆಗ ಮುಹಮ್ಮದನಿಗೆ ಸಿರಗ್ವಿಸನ ಬೋಧನೆಯು ನೆನಪಿಗೆ ಬಂತು. ಆಗ ಅವನನ್ನು ನೋಡಬೇಕೆಂತಲೂ ಅವನ ಶಾಸ್ತ್ರದ ಗ್ರಂಥ ಗಳನ್ನು ಓದಬೇಕೆಂದೂ ಆಸೆಯಾಯಿತು. ಆಗ ಅವನ ಬಾವನೆಂಟನಾದ ವಾರಕ್ಕಬನ್ ನಫೇಲ್ ಎಂಬವನು ಆ ಪುಸ್ತಕದ ಒಂದು ನಕಲನ್ನು ತಂದು ಅದನ್ನು ಹಿಬ್ರುಭಾಷೆಯಿಂದ ಅರಬಿಭಾಷೆಗೆ ತರ್ಜುಮೆ ಮಾಡಿದನು. ಮುಹಮ್ಮದನು ಯಾವಾಗಲೂ ಆಲೋಚನಾಪರನಾಗಿದ್ದು

ವರ್ಷದ ಒಂದು ತಿಂಗಳು ಹೀರಾಪರ್ವತದಲ್ಲಿ ಯಹೂದಿ ಮತ್ತು ಕ್ರೈಸ್ತಮತದ ತತ್ವಗಳನ್ನು ಪರಿಶೋಧಿಸುತ್ತಾ ಏಕಾಂತದಲ್ಲಿ ಕಾಲಕಳಿಯುತ್ತಿದ್ದನು. ಈ ಎರಡೂ ಮತಗಳ ಪುಸ್ತಕಗಳಲ್ಲಿ ಅನೇಕ ಕಥೆಗಳು ಇದ್ದುದರಿಂದ ಇವನಿಗೆ ಅವುಗಳಲ್ಲಿ ನಂಬಿಕೆಯು ಉಂಟಾಗಲಿಲ್ಲ. ಯಾಕಂದರೆ ಇವರು ದೇವರ ಆಲೋಚನೆಗಳಿಗೆ ಮಿಕ್ಕಿ ತಮ್ಮದೇ ಕೆಲವು ಆಲೋಚನೆಗಳನ್ನು ಅವುಗಳಲ್ಲಿ ಕೂಡಿಸಿದ್ದರು. ಆದ್ದರಿಂದ ಏನು ಮಾಡಬೇಕೆಂದು ತಿಳಿಯದೆ ಕೊನೆಗೆ ಮುಹಮ್ಮದನಿಗೆ ಎರಡು ಉಪಾಯಗಳು ಮಾತ್ರವೇ ಕಂಡುಬಂದವು. (1) ಪೂರಾ ಹುಚ್ಚನಾಗುವದು (2) ಯಾವದಾದರೂ ಒಂದು ಉಪಾಯದಿಂದ ತನ್ನ ಜನರನ್ನು ಕೆಟ್ಟ ದಾರಿಯಿಂದ ತಪ್ಪಿಸುವುದು.

ಹೀಗೆ ಸ್ವಲ್ಪ ದಿವಸಗಳ ನಂತರ, ತನಗೆ ಗಾಬ್ರಿಯೇಲ್ ದೂತನು ಕಾಣಿಸಿಕೊಂಡು ತನ್ನ ದೇಶದ ಜನರನ್ನು ಉದ್ಧರಿಸಬೇಕೆಂದು ಹೇಳಿದ್ದಾನೆಂದು ತನ್ನ ಹೆಂಡತಿಯೊಡನೆ ಹೇಳಿದನು. ಅವಳು ಯೋಗ್ಯ ಹೆಂಗಸಾದ್ದರಿಂದ ಗಂಡನ ಮಾತಿಗೆ ಒಪ್ಪಿಕೊಂಡು ತನ್ನಿಂದಾಗುವ ಪ್ರಯತ್ನವನ್ನು ತಾನು ಮಾಡುತ್ತೇನೆಂದು ಹೇಳಿದಳು. ಅವನು ತನ್ನ 40ನೇ ವರ್ಷ ಪ್ರಾಯದಲ್ಲಿ ಹೀರಾಪರ್ವತದಿಂದ ಇಳಿದು ತನ್ನ ಜನರಿದ್ದಲ್ಲಿಗೆ ಬಂದು ತಾನು ದೇವರ ನಬಿ ಎಂದು ಹೇಳಲಾರಂಭಿಸಿದನು. ನಬಿ ಎಂದರೆ ದೇವರಿಂದ ಕಳುಹಿಸಲ್ಪಟ್ಟವನು. .ಒಂದು ದಿವಸ ತನ್ನ ದೇಶದ ಜನರನ್ನೆಲ್ಲಾ ಒಂದು ಔತಣಕ್ಕೆ ಕರೆದು ಅವರಿಗೆ ತನ್ನ ಮತವನ್ನು ಬೋಧಿಸಿದನು. "ಕಲ್ಲುಗಳಿಂದಲೂ, ಮರಗಳಿಂದಲೂ ಮಾಡಿದ ಮೂರ್ತಿಗಳನ್ನು ಪೂಜಿಸುವದರಿಂದ ಪ್ರಯೋಜನವೇನೂ ಇಲ್ಲ. ದೇವರು ಒಬ್ಬನೇ. ಈ ಸಭೆಯಲ್ಲಿ ಇದಕ್ಕೆ ಎದುರಾಡುವವರು ಯಾರಾದರೂ ಇದ್ದರೆ ಏಳಲಿ ಎಂದನು". ಆಗ ಅವನ ಅಳಿಯನೂ ಸೋದರಳಿಯನೂ ಆದ ಅಲಿಯು ಎದ್ದು ನಿಂತನು. ಈ ಸಂಗತಿಯು ಕ್ರಿ. ಶ. 609ರಲ್ಲಿ ಸಂಭವಿಸಿತು. ಅಂದಿನಿಂದ ಹತ್ತು ವರುಷಗಳ

ವರೆಗೆ ಆಲಿಯು ಕಡೆಯುವರು ಇವನನ್ನು ಬಹಳವಾಗಿ ಪೀಡಿಸಿದರು. ಆ ಸಮಯದಲ್ಲಿ ಇವನ ಚಿಕ್ಕತಂದೆಯು ಕಾಲವಾದನು. ಜನರು ಕೊಡುತ್ತಿರುವ ಪೀಡೆಯೂ ಇಮ್ಮಡಿಯಾಯಿತು.

ಕೊರೇಶವಂಶದ ಅರ್ಚಕರು ಮುಹಮ್ಮದನ ಹೊಸಮತವು ಪ್ರಬಲಕ್ಕೆ ಬಂದರೆ ತಮ್ಮ ದೇವಸ್ಥಾನಗಳೆಲ್ಲಾ ಬಿದ್ದುಹೋಗುವವೆಂದು ತಿಳಿದು ಇವನನ್ನು ಬಹಳವಾಗಿ ಪೀಡಿಸತೊಡಗಿದರು. ಆಗ ಇವನು ಮಕ್ಕವನ್ನು ಬಿಟ್ಟು ಮೂರು ದಿವಸದ ಪಯಣವಿರುವ "ತಾಯಿಫ್" ಎಂಬಲ್ಲಿಗೆ ಓಡಿಹೋದನು. ಆದರೂ ಜನರು ಇವನ ಮತಕ್ಕೆ ಒಪ್ಪ ಲಿಲ್ಲ. ಸ್ವಲ್ಪ ಸಮಯದ ನಂತರ ತಿರಿಗಿ ಮಕ್ಕಕ್ಕೆ ಬಂದು ಅಲ್ಲಿಗೆ ಬರುತ್ತಿದ್ದ ಯಾತ್ರಿಕರಿಗೆ ತನ್ನ ಮತವನ್ನು ಬೋಧಿಸಲಾರಂಭಿಸಿದನು.

ಈ ಸಮಯದಲ್ಲಿ ಯಾತ್ರೀಬ ಪಟ್ಟಣದ ಅನೇಕ ಜನರು ಇವನ ಬೋಧನೆಯನ್ನು ಮನಸ್ಸುಕೊಟ್ಟು ಕೇಳಲಾರಂಭಿಸಿದರು. ಈ ಪಟ್ಟಣ ದಲ್ಲಿ ಯಹೂದ್ಯರೂ ಅರಬಿಯರೂ ತಮ್ಮ ಶ್ರೇಷ್ಠತ್ವದ ವಿಷಯದಲ್ಲಿ ಯಾವಾಗಲೂ ಜಗಳವಾಡುತ್ತಿದ್ದರು. ಕಡೆಗೆ ಯಹೂದ್ಯರು ಸೋತು ಹೋದರು. ಈ ಯಹೂದ್ಯರು ಮೆಸಿಯನು ಬಂದು ತಮ್ಮನ್ನು ಅರಬಿಯರ ಬಾಧೆಯಿಂದ ಬಿಡಿಸುವನೆಂದು ಯಾವಾಗಲೂ ಹೇಳು ತ್ತಿದ್ದರು. ಮುಹಮ್ಮದನು ತಾನೇ ಮೆಸಿಯನೆಂದು ಹೇಳುತ್ತಾ ಬರುವಾಗ ಈ ಜನರು ಇವನನ್ನು ನಂಬಿ ಇವನ ಮತವನ್ನು ಅವಲಂಬಿಸ ಲಿಕ್ಕೆ ಆರಂಭಿಸಿದರು. ಈ ಸಮಯದಲ್ಲಿ ಮುಹಮ್ಮದನ ಹೆಂಡತಿಯೂ ಮಕ್ಕಳಲ್ಲಿ ಹೆಚ್ಚಿನವರೂ ಮಡಿದುಹೋದರು. ಮಕ್ಕದ ಅರಬೀ ಮುಖ್ಯಸ್ಥರು ಇವನನ್ನು ನಾಶಪಡಿಸಲಿಕ್ಕೆ ಪ್ರಯತ್ನಿಸುವಾಗ ಇವನು ಕ್ರಿ. ಶ. 622ರಲ್ಲಿ ಯಾತ್ರೀಬ ಪಟ್ಟಣಕ್ಕೆ ಓಡಿಹೋದನು. ಆಗ ಅಲ್ಲಿಯ ಜನರು ಇವನನ್ನು ಪ್ರೀತಿಯಿಂದ ಅಂಗೀಕರಿಸಿ ಆ ಪಟ್ಟಣದ ಹೆಸರನ್ನು "ಮದಿನತ್ ಅಲ್‌ನಬಿ" ಎಂದರೆ, ಪ್ರವಾದಿಯ ಪಟ್ಟಣ ಎಂದು ಕರೆದರು. ಅಂದಿನಿಂದ ಹಿಜರಾ (ಓಡಿಹೋದ ಸಮಯ) ಎಂಬ ಮುಹಮ್ಮದೀಯ

ಶಕವು ಆರಂಭವಾಯಿತು. ದೇವರ ಆರಾಧನೆಯ ಹೊಸ ಕ್ರಮಗಳನ್ನು ಉಂಟುಮಾಡಿ ಮೊದಲನೆಯ ಮಸೀದಿಯನ್ನು ಯಾತ್ರೇಬ ಪಟ್ಟಣದಲ್ಲಿ ಕಟ್ಟಿಸಿದನು. ಆ ಮೇಲೆ ಸಮಾಧಾನದಿಂದ ಮತಬೋಧನೆಮಾಡುವುದನ್ನು ಬಿಟ್ಟು ಕತ್ತಿಯ ಬಲದಿಂದ ತನ್ನ ಮತವನ್ನು ಬೋಧಿಸಲಾರಂಭಿಸಿದನು. ಮುಹಮ್ಮದೀಯರ ಸಂಖ್ಯೆಯು ಹೆಚ್ಚಾಗುತ್ತಾ ಬಂತು. ಮುಹಮ್ಮದನಿಗೆ ಮರಣಕಾಲವು ಸಮೀಪಿಸಿತು. ಆಗ ಅವನು ತನ್ನ ಶಿಷ್ಯರನ್ನು ಕರೆದು ವಿಗ್ರಹ ಆರಾಧನೆಯನ್ನು ಪೂರ್ಣ ನಾಶಪಡಿಸುವುದು, ಮತಾಂತರಗೊಳಿಸುವುದು, ನಿಶ್ಚಯಿಸಿದ ಸಮಯಗಳಲ್ಲಿ ನಿವಾಜಮಾಡುವುದು ಈ ಮೂರು ತತ್ವಗಳ ವಿಷಯ ಸರಿಯಾಗಿ ಜಾಗ್ರತೆ ಇರಬೇಕೆಂದು ಹೇಳಿದನು. ಸಾಯುವಾಗ ಅಯೆಶ್ಯಾ ಎಂಬ ಒಬ್ಬ ಹೆಂಡತಿಯಲ್ಲದೆ ಮತ್ತೆ ಯಾರೂ ಹತ್ತರವಿರಲಿಲ್ಲ. ಮುಹಮ್ಮದನು ಕ್ರಿ. ಶ. 632ನೇ ಜೂನ್ 8ರಲ್ಲಿ ತನ್ನ 63ನೇ ವರ್ಷ ಪ್ರಾಯದಲ್ಲಿ ಕಾಲವಾದನು. ಅವನ ಅಪೇಕ್ಷೆ ಪ್ರಕಾರ ಅವನು ಜೀವಬಿಟ್ಟ ಸ್ಥಳದಲ್ಲೇ ಹೂಣಿಟ್ಟರು. ಎಂಟು ಮಂದಿ ಮಕ್ಕಳಲ್ಲಿ ಫತಿಮಾ ಎಂಬವಳು ಒಬ್ಬಳಲ್ಲದೆ ಯಾರೂ ಉಳಿಯಲಿಲ್ಲ. ಮುಹಮ್ಮದನು ಕಾಲವಾದ ನಂತರ ಅವನ ಮತವು ಯುರೋಪ ಖಂಡದಲ್ಲಿಯೂ ಅಲ್ಲಿ ಅದಕ್ಕೆ ತೊಂದರೆಗಳುಂಟಾದಾಗ ಆಸ್ಯಾಖಂಡದ ಪಶ್ಚಿಮ ಭಾಗಕ್ಕೂ ಹಬ್ಬಿತು.

ಮುಹಮ್ಮದನ ಉತ್ತರಾಧಿಕಾರಿಯು ಅವನ ಮಗಳ ಗಂಡನಾದ ಆಲಿಯಾಗಿದ್ದನು. ಆದರೆ ಅವನ 2ನೇ ಹೆಂಡತಿಯಾದ ಅಯೆಶ್ಯಾ ಎಂಬವಳು ತನ್ನ ತಂದೆಯಾದ ಅಬ್ಬುಬಕ್ಕರನು ಮೊದಲನೇ ಹಕ್ಕುದಾರನೆಂದು ಹೇಳಲಾರಂಭಿಸಿದಳು. ಇತ್ತಂಡದವರಿಗೂ ಜಗಳಗಳು ಉಂಟಾಗಿ ಅಬ್ಬುಬಕ್ಕರನು ಕಲೀಫನಾದನು. ಇವನಿಗೆ ಲೌಕೀಕ ಮತ್ತು ವೈದಿಕ ಎರಡೂ ಅಧಿಕಾರಗಳಿದ್ದವು. ಇವನ ತರುವಾಯ ಬಹಳ ಕ್ರೂರನಾದ ಓಮರನು ಕಲಿಫನಾಗಿ 11 ವರುಷ ಆಳಿ 36 ಸಾವಿರ ಪಟ್ಟಣಗಳನ್ನೂ ಹಳ್ಳಿಗಳನ್ನೂ ಜಯಿಸಿ 4000 ಕ್ರೈಸ್ತ ಮಾಗಯಾನ ಮತ್ತು ಪಾಗನರ

ದೇವಸ್ಥಾನಗಳನ್ನು ಹಾಳು ಕೆಡವಿ 1400 ಮಸೀದಿಗಳನ್ನು ಕಟ್ಟಿಸಿದನು. ಕೊನೆಗೆ ಒಬ್ಬ ಗುಲಾಮನು ಇವನನ್ನು ತಿವಿದುಕೊಂದನು. ಈ ಕಲಿಫ ಓಮರನ ಕಾಲದಲ್ಲಿ ಪರ್ಷಿಯಾದೇಶದ ಅನೇಕ ಜನರು ಮತಭ್ರಷ್ಟರಾಗಲಿಕ್ಕೆ ಸಂತೋಷವಿಲ್ಲದೆ ಇಂಡಿಯದ ಪಶ್ಚಿಮಕರಾವಳಿಗೆ ಬಂದು ನಿಂತರು. ಇವರೇ ಈಗಿನ ಫಾರ್ಸಿಗಳ ಮೂಲಪುರುಷರು. ಓಮರನು ಸಾಯುವ ಕಾಲದಲ್ಲಿ ತನ್ನ ಉತ್ತರಾಧಿಕಾರಿಯನ್ನು ನೇಮಿಸುವದಕ್ಕೆ 6 ಜನರ ಒಂದು ಸಭೆಯನ್ನು ಮಾಡಿದನು. ಅವರು ಮುಹಮ್ಮದನ ಪ್ರಧಾನಿಯೂ ಅಳಿಯನೂ ಆದ ಒತಮಾನನನ್ನು ಮುಹಮ್ಮದನ ಉತ್ತರಾಧಿಕಾರಿಯಾಗಿ ನೇಮಿಸಿದರು. ಇವನಿಗೆ ಆಗ 80 ವರುಷ ಪ್ರಾಯವಾಗಿದ್ದರೂ ಬಹಳ ಉತ್ತೇಜನದಿಂದ ಕೆಲಸಮಾಡಿದನು. ಇವನ ಕಾಲದಲ್ಲಿ ಮುಹಮ್ಮದಿಮತವು ಇಂಡಿಯದ ಗಡಿಯ ವರೆಗೆ ಹಬ್ಬಿತು. ಇವನು ಕುರಾನನ್ನು ಪುನರಾವರ್ತಿಸಿದನು. ಆಲಿಯ ಕಡೆಯವರು ಬಲಿಷ್ಟರಾಗುತ್ತಾ ಬಂದರು. ಕ್ರಿ. ಶ 661ರಲ್ಲಿ ಇವನು ಶುಕ್ರವಾರ ದಿವಸ ಕುರಾನನ್ನು ಓದುತ್ತಿರುವಾಗ ಆಲಿಯ ಕಡೆಯವರು ಇವನನ್ನು ಕೊಂದುಬಿಟ್ಟರು. ಎರಡೂ ಕಡೆಯವರಿಗೆ ಜಗಳವುಂಟಾಗಿ ಕಡೆಗೆ ಆಲಿಯು ಗೆದ್ದು 4ನೇ ಕಲೀಫನಾದನು. ಇವನು ಮುಂಚಿನ ಅಧಿಕಾರಿಗಳನ್ನೆಲ್ಲಾ ಕೆಲಸದಿಂದ ತೆಗೆದುಹಾಕಿದನು. ಸಿರಿಯದ ಅಧಿಕಾರಿ ಯಾಗಿದ್ದ ಮೂವಾವಿಯಾ ಎಂಬವನು ತಾನು ಖಲೀಫನಾಗಬೇಕೆಂದು ಮುಂದಕ್ಕೆ ಬಂದನು. ಮತಭ್ರಾಂತಿಯುಳ್ಳ ಮೂವರು ಮುಹಮ್ಮದಿಯರು, ಈ ಜಗಳಗಳಿಗೆ ಆಲಿಯೂ, ಮೂವಾವಿಯೂ ಅಮ್ರುವೂ ಕಾರಣರೆಂದು ತಿಳಿದು ಮೂವರನ್ನೂ ಒಂದೇ ಸಲ ಕೊಲ್ಲಲಿಕ್ಕೆ ಆಲೋಚಿಸಿದರು. ಕಡೆಗೆ ಆಲಿಯನ್ನು ಮಾತ್ರವೇ ಕೊಲ್ಲಲಿಕ್ಕೆ ಸಾಧ್ಯವಾಯಿತು. ಲೌಕೀಕ ಅಥವಾ ಖಿಲಾಫತ್ ಅಧಿಕಾರವೂ ಇಮಾಮ್ ಅಥವಾ ಪಾರಮಾರ್ಥಿಕ ಅಧಿ ಕಾರವೂ ಇದ್ದ ಕಡೇ ಖಲಿಫನು ಸತ್ತುಹೋದನು. ಖಿಲಾಫತಿನ ಅಧಿ ಕಾರವು ಮೂವಾವಿಯನಿಗೂ ಇಮಾಮನ ಅಧಿಕಾರವು ಆಲಿಯ ಮಕ್ಕ ಳಿಗೂ ಸಿಕ್ಕಿತು. ಆಲಿಯ ಹಿರೇಮಗನಾದ ಹಸನನಿಗೆ ಕಿಲಾಫತಿನ

ಮತ್ತು ಇಮಾಮ್ ಎಂಬ 2 ಅಧಿಕಾರಗಳೂ ಉಂಟೆಂದು ಅವನ ಕಡೆಯ ವರು ಹೇಳಿದರು. ಮೂವಾವಿಯನು ಖಿಲಾಫತಿನ ಅಧಿಕಾರವು ತನ್ನ ದೆಂದು ಹೇಳಿದನು. ಕ್ರಿ. ಶ. 669ರಲ್ಲಿ ಹಸನನ ಹೆಂಡತಿಯು ಅವನಿಗೆ ವಿಷಕೊಟ್ಟು ಕೊಂದಳು. ಹಸನನ ತಮ್ಮನಾದ ಹುಸ್ಸೇನನು ಇಮಾಮ ನಾದನು. 679ರಲ್ಲಿ ಮುವಾವಿಯನು ಸತ್ತನಂತರ ಅವನ ಮಗನಾದ ಯಜದನು ಕಾಲೀಫನಾದನು. ಹುಸ್ಸೇನನು ಕಾಲಿಫಾತ್ ತನಗೆ ಸಿಕ್ಕ ಬೇಕೆಂದು ಪ್ರಯತ್ನಿಸಿದನು. ಎರಡೂ ಕಡೆಯವರಿಗೂ ಯುದ್ಧ ವಾಯಿತು. ಹುಸ್ಸೇನನಿಗೆ ಗಾಯವಾಗಿ ಅವನು ತನ್ನ ಡೇರೆಯೊಳಗೆ ಹೋಗಿ ತನ್ನ ಮಗುವನ್ನು ಎತ್ತಿಕೊಂಡು ಮುದ್ದಿಡುವಾಗ ಯಾರೋ ಒಬ್ಬರು ಹೊಡದ ಬಾಣವು ತಾಗಿ ಮಗುವು ಅವನ ಕೈಯಲ್ಲಿ ಸತ್ತು ಹೋಗಿ ರಕ್ತವು ಅವನ ಮೈಮೇಲೆ ಇಳಿಯಿತು. ಆಗ ಹುಸ್ಸೇನನಿಗೆ ಬಹಳ ಬೇಸರವಾಗಿ ಹೊರಗೆ ಹೋಗಿ ವೈರಿಗಳ ಮೇಲೆ ಬಿದ್ದು ಸತ್ತು ಹೋದನು. ಈ ಯುದ್ಧದಲ್ಲಿ ಹುಸ್ಸೇನನ 12 ವರ್ಷಪ್ರಾಯದ ಆಲಿ ಎಂಬ ಒಬ್ಬ ಮಗನೂ ಅವನ ಇಬ್ಬರು ಸಹೋದರಿಯರು ಮಾತ್ರವೇ ಉಳಿ ದರು. ಆದರೆ ಹುಸ್ಸೇನನ ಕಡೆಯವರು ವೈರಿಗಳಲ್ಲಿ ಅನೇಕರನ್ನು ಕೊಂದರು. ಹುಸ್ಸೇನನು ಸತ್ತ ದಿವಸವನ್ನು ಈ ದೇಶದಲ್ಲಿಯೂ ಪರ್ಷಿಯಾ ದೇಶದಲ್ಲಿಯೂ ಮೊಹರಮ್'' ಎಂಬ ಹೆಸರಿನಿಂದ ಆಚರಿಸುತ್ತಾರೆ. ಮಹ ಮ್ಮದಿಯರಲ್ಲಿ ಕೆಲವರು 12 ಮಂದಿ ಇಮಾಮರು ಇದ್ದರೆಂದೂ ಕೆಲವರು ಮಹಮ್ಮದನು ತಿರಿಗಿ ಈ ಲೋಕಕ್ಕೆ ಬರುವ ವರೆಗೆ ಇಮಾಮರು ಯಾರೂ ಇಲ್ಲವೆಂದೂ ನಂಬುತ್ತಾರೆ. ಇವರಲ್ಲಿ ಶಿಯಾ ಮತ್ತು ಸುನ್ನಿ ಎಂಬ 2 ಭೇದಗಳು ಇವೆ. ಸುನ್ನಿಗಳು ಮಹಮ್ಮದನು ಕಡೇ ಪ್ರವಾದಿ ಎಂದೂ, ಮೊದಲನೇ 4 ಮಂದಿ ಮಾತ್ರವೇ ಕಲೀಫರೆಂದೂ, ಆಲಿಯು ಮೊದಲನೇ ಫಕೀರನೆಂದೂ ನಂಬುತ್ತಾರೆ. ಕಾಲಿಫ ಓಮರನನ್ನು ಬಹಳವಾಗಿ ಹೊಗಳುತ್ತಾರೆ. ತುರುಕರೂ, ಇಜಿಪ್ಟ ದೇಶದವರೂ ಅರಬಿಗಳೂ ಸುನ್ನಿಗಳು. ಇವರು ನಮಾಜಮಾಡುವಾಗ ಕೈಗಳನ್ನು

ಜೋಡಿಸುತ್ತಾರೆ. ರಮುಜಾನಿನ ಉಪವಾಸವನ್ನು ಆಚರಿಸುತ್ತಾರೆ. ಮಕ್ಕಕ್ಕೆ ಯಾತ್ರೆಗೆ ಹೋಗುತ್ತಾರೆ. ಕೋರಾನನ್ನು ಓದಿ ಮಸೀದಿಗಳಲ್ಲಿ ಪ್ರಾರ್ಥನೆಗಾಗಿ ಒಟ್ಟುಕೂಡುತ್ತಾರೆ. ಮೋಹರಮಿನ ಸಮಯ ತಾಬೂತುಗಳನ್ನು ಮಾಡಿ ಕೈಗಳನ್ನು ಪೂಜಿಸುವದಿಲ್ಲ. ಆದರೆ ಹುಸ್ಸೇನನು ಸತ್ತದ್ದಕ್ಕಾಗಿ ದುಃಖಪಟ್ಟು ಉಪವಾಸಮಾಡುತ್ತಾರೆ. ಮನುಷ್ಯನು ಸತ್ತು ಅವನನ್ನು ಹೂಣಿಟ್ಟ ಕೂಡಲೇ ಮಂಕರ ಮತ್ತು ನಾಕಿರ ಎಂಬ ಇಬ್ಬರು ಸತ್ತವರು, ಜೀವದಿಂದಿರುವಾಗ ಮಾಡಿದ ಎಲ್ಲಾ ಕೆಲಸಗಳ ವಿಷಯ ತನಿಖಿಮಾಡುತ್ತಾರೆಂದೂ, ನರಕವು ಬೆಂಕಿಯಿಂದ ಉರಿಯುತ್ತಿರುವ ಒಂದು ದೊಡ್ಡ ಸ್ಥಳವಾಗಿದೆ ಎಂದೂ, ಭೂಮಿಯಿಂದ ಆಕಾಶಕ್ಕೆ ಇಟ್ಟಿರುವ ಏಣಿಯು ಕೂದಲಿಗಿಂತಲೂ ಸಪೂರವಾಗಿಯೂ ಕ್ಷೌರಕತ್ತಿಯ ಹಾಗೆ ಹರಿತವಾಗಿ ಇದೆ ಎಂದೂ, ಪುಣ್ಯಮಾಡಿದವರ ಕೈಹಿಡಿದು ದೇವದೂತರು ಅವರನ್ನು ಸ್ವರ್ಗಕ್ಕೆ ಕರಕೊಂಡು ಹೋಗುತ್ತಾರೆಂದೂ, ಪಾಪಮಾಡಿದವರು ಏಣಿಯನ್ನು ಹತ್ತಲಾರದೆ ನರಕದ ಬೆಂಕಿಯಲ್ಲಿ ಬೀಳುತ್ತಾರೆಂದೂ, ಲೋಕದ ಅಂತ್ಯದಲ್ಲಿ ಏಣಿಯನ್ನು ನಾಶಮಾಡುತ್ತಾರೆಂದೂ ನರಕದಲ್ಲಿ ಕಷ್ಟಪಟ್ಟ ಮೇಲೆ ಜೀವವು ಸ್ವರ್ಗಕ್ಕೆ ಹೋಗುತ್ತದೆಂದೂ ನಂಬುತ್ತಾರೆ. ಮುಹಮ್ಮದಿಯರು ಉತ್ತರ ಹಿಂದೂದೇಶಕ್ಕೆ ಬಂದು ಅಲ್ಲಿ ರಾಜ್ಯವನ್ನು ಸ್ಥಾಪಿಸಿ ಕ್ರಮೇಣ ದಕ್ಷಿಣ ಹಿಂದೂದೇಶಕ್ಕೂ ಬಂದು ರಾಜ್ಯಸ್ಥಾಪನೆ ಮಾಡಿದರು. ಬಹಮನೀಯ ರಾಜ್ಯದ ಒಂದು ಭಾಗವಾದ ಬಿಜಾಪುರದ ಸುಲ್ತಾನನ ಕೈಕೆಳಗೆ ಕನ್ನಡ ಜಿಲ್ಲೆಯ ಉತ್ತರ ಭಾಗವು ಸ್ವಲ್ಪ ಸಮಯದ ವರೆಗೂ ಇತ್ತು. ಅನಂತರ ಹೈದರಲ್ಲಿ ಟಿಪು ಸುಲ್ತಾನ ಇವರ ಕೈಕೆಳಗೆ ದಕ್ಷಿಣ ಕನ್ನಡ ಜಿಲ್ಲೆಯು ಇತ್ತು. ಆ ಕಾಲದಲ್ಲಿ ಅನೇಕರು ಸೈನಿಕರಾಗಿಯೂ ವ್ಯಾಪಾರಸ್ಥರಾಗಿಯೂ ಕನ್ನಡ ಜಿಲ್ಲೆಯಲ್ಲಿ ಬಂದು ನೆಲೆಸಿದರು.

ಈ ಜಿಲ್ಲೆಯಲ್ಲಿರುವ ಮುಸಲ್ಮಾನರಲ್ಲಿ ಹೆಚ್ಚಿನವರು ಮಾಪಿಳ್ಳೆಯರು. ಇವರು ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಹೆಚ್ಚಾಗಿರುತ್ತಾರೆ.

ಕ್ರಿಸ್ತಶಕದ 7ನೆಯ ಶತಮಾನದಿಂದ ಪರ್ಷಿಯದ ಮತ್ತು ಅರಬಿಯದ ವ್ಯಾಪಾರಸ್ಥರು ಈ ಜಿಲ್ಲೆಯ ಮಂಗಳೂರು, ಉಳ್ಳಾಲ, ಮಂಜೇಶ್ವರ, ಕಾಸರಗೋಡು ಮುಂತಾದ ಬಂದರುಗಳಲ್ಲಿ ನೆಲೆನಿಂತು ಪರದೇಶಗಳ ಸಂಗಡ ವ್ಯಾಪಾರವನ್ನು ನಡಿಸುತ್ತಿದ್ದರು. ಈ ಸಾಹುಕಾರರು ಇಲ್ಲಿಯ ಹಿಂದೂ ಹೆಂಗಸರನ್ನು ಮದುವೆಮಾಡಿಕೊಂಡು ಸುಖದಿಂದ ಇದ್ದರು. ಮಲಬಾರಿನ ಕಡೇ ಅರಸನಾದ ಚೆರುಮಾನ್ ಪೆರುಮಾಳನು ಮಹಮ್ಮದಿ ಮತವನ್ನು ಅವಲಂಬಿಸಿ ಕ್ರಿಸ್ತಶಕ 825ರಲ್ಲಿ ಮಕ್ಕಕ್ಕೆ ಯಾತ್ರಿಕನಾಗಿ ಹೋದನು. ಮಕ್ಕದಿಂದ ಹಿಂತಿರುಗಿ ಬಂದಮೇಲೆ ತನ್ನ ರಾಜ್ಯದಲ್ಲಿ ಮಹಮ್ಮದಿ ಮತವನ್ನು ಬೋಧಿಸಬೇಕೆಂದು ಆಲೋಚನೆಯಲ್ಲಿದ್ದನು. ಆದರೆ ಮಕ್ಕದಿಂದ ಬರುವ ಮುಂಚೆಯೇ ಕಾಲವಾದನು. ಆದರೆ ಈ ಅರಸನು ತನ್ನ ಅರಬೀ ಸ್ನೇಹಿತರಿಗೆ ಮತಪ್ರಚಾರಕ್ಕಾಗಿ ಶಿಫಾರಸು ಪತ್ರಗಳನ್ನು ಕೊಟ್ಟಿದ್ದನು. ಈ ಅರಬೀ ಸಾಹುಕಾರರು ಸ್ವಲ್ಪ ಸಮಯದ ನಂತರ ಇಲ್ಲಿಗೆ ಬಂದು ಮಂಗಳೂರು, ಬಾರಕೂರು, ಕಾಸರಗೋಡು ಮತ್ತು ಮಲಬಾರು ಜಿಲ್ಲೆಯಲ್ಲಿ ಕೆಲವು ಕಡೆಗಳಲ್ಲಿ ಮಸೀದಿಗಳನ್ನು ಕಟ್ಟಿಸಿದರು. ಈ ಮಸೀದಿಗಳಿಗೆ ಚೆರುಮಾನ ಪಳ್ಳಿಗಳೆಂದು ಹೆಸರು. ಮಲಬಾರು ಜಿಲ್ಲೆಯಲ್ಲಿ ಜಾಮೊರೀನ ಅರಸನ ಸಹಾಯದಿಂದ ಅನೇಕರು ಮಹಮ್ಮದಿಯರಾದರು. ಕಣ್ಣಾನೂರಿನ ಚರಕಲ ರಾಜವಂಶದಲ್ಲಿ ಒಬ್ಬನು ಮುಸಲ್ಮಾನನಾಗಿ ತನ್ನ ರಾಜ್ಯದಲ್ಲಿ ಅನೇಕರನ್ನು ತನ್ನ ಮತಕ್ಕೆ ಸೇರಿಸಿದನು. ಈ ಸಮಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅನೇಕ ಮಂದಿ ಮುಸಲ್ಮಾನರಾದರು. ಇವರು ಮಾಪಿಳ್ಳೆಯರು. ಈ ಮಾಪಿಳ್ಳೆಯವರಲ್ಲಿ ಅನೇಕರು ಮಂಗಳೂರಲ್ಲಿ ಆಳುತ್ತಿದ್ದ ಬಂಗರಾಜನ ಸೈನ್ಯದಲ್ಲಿಯೂ ಉಳ್ಳಾಲದಲ್ಲಿ ಆಳುತ್ತಿದ್ದ ಚೌಟರಾಣಿಯ ಸೈನ್ಯದಲ್ಲಿಯೂ ಸೈನಿಕರೂ ಸೇನಾಧಿಪತಿಗಳೂ ನೌಕಾಧಿಪತಿಗಳೂ ಆಗಿದ್ದರು. ಮೊಗೇರರಲ್ಲಿಯೂ ಮುಕ್ಕವರಲ್ಲಿಯೂ ಮುಸಲ್ಮಾನರಾದವರು ಪುದಿಯ ಇಸ್ಲಾಮ (ಹೊಸ ತಾಗಿ ಮುಸಲ್ಮಾನ ಮತಕ್ಕೆ ಸೇರಿದವರು) ಪುಸಲಾರರು. ಕಾಸರಗೋಡು

ತಾಲೂಕಿನ ಜನಸಂಖ್ಯೆಯಲ್ಲಿ $\frac{1}{5}$ ಪಾಲು ಮುಸಲ್ಮಾನರು. ಇವರಲ್ಲಿ ಹೆಚ್ಚಿನವರು ಮಾಪಿಳ್ಳೆಯವರು. ಮಂಗಳೂರು ತಾಲೂಕಿನಲ್ಲಿ $\frac{1}{16}$ ಪಾಲು ಮುಸಲ್ಮಾನರು. ಆದರೆ ಇವರಲ್ಲಿ ಮಹಮ್ಮದಿಯರು ಹೆಚ್ಚು. ಮಾಪಿಳ್ಳೆಯವರು ಕಡಿಮೆ.

ಹದಿನಾಲ್ಕನೇ ಶತಮಾನದ ಮಧ್ಯ ಭಾಗದಲ್ಲಿ ಇಬನ್ ಬತೂತನು ಮಂಗಳೂರಿಗೆ ಬಂದಾಗ ಅಲ್ಲಿ ಪರ್ಶಿಯಾ ಮತ್ತು ಅರಬಸ್ಥಾನದ ಈಮೊನ್ನಿನ 4000 ಮಂದಿ ವ್ಯಾಪಾರಸ್ಥರು ಇದ್ದರೆಂದೂ ಅವನು ಹೇಳುತ್ತಾನೆ. ಕ್ರಿ. ಶ. 1514ರಲ್ಲಿ ಬಾರಬೋಸನು ಈ ಜಿಲ್ಲೆಗೆ ಬಂದಾಗ ಒರಮುಜಿ, ಏಡೆನ್, ಜಹೀರ ದೇಶಗಳ ಸಂಗಡ ವ್ಯಾಪಾರನಡಿಸುವ ಅರಬ ಮೂರರೆಂಬ ವ್ಯಾಪಾರಿಗಳು ಬಸರೂರಿನಲ್ಲಿಯೂ ಮಂಗಳೂರಿನಲ್ಲಿಯೂ ಇದ್ದರೆಂದೂ ಹೇಳುತ್ತಾನೆ. ಕ್ರಿ. ಶ. 1526ರಲ್ಲಿ ಪೋರ್ತುಗೀಸರು ಮಂಗಳೂರನ್ನು ಹಿಡಿದಾಗ ಮುಸಲ್ಮಾನರು ಬಂಗರಾಜನ ಸೈನಿಕರಾಗಿದ್ದು ಪೋರ್ತುಗೀಸರ ಸಂಗಡ ಯುದ್ಧಮಾಡಿ ಬಹಳ ಕಷ್ಟಪಟ್ಟರು. ಪೋರ್ತುಗೀಸರು ಈ ಮಹಮ್ಮದಿಯರ ಕೈಯಲ್ಲಿದ್ದ ವ್ಯಾಪಾರವನ್ನು ಪೂರ್ಣವಾಗಿ ನಾಶಮಾಡಿ ತಾವೇ ವ್ಯಾಪಾರಮಾಡಲು ಸಾಧನೆಮಾಡಿದರು. ಪೋರ್ತುಗೀಸರ ಹಾವಳಿಯಿಂದ ಮಂಗಳೂರು, ಉಳ್ಳಾಲ, ಉದ್ಯಾವರ, ಮಂಜೇಶ್ವರದ ಮಾಪಿಳ್ಳೆಯರ ವ್ಯಾಪಾರವು ಪೂರ್ಣ ನಾಶವಾಯಿತು. ಇಕ್ಕೇರಿ ಅರಸರ ಕಾಲದಲ್ಲಿ ಮುಸಲ್ಮಾನ ಸಾಹುಕಾರರು ಬಹಳ ಐಶ್ವರ್ಯವಂತರಾಗಿದ್ದು, ಕಪ್ಪವನ್ನು ಕೊಡಲಿಕ್ಕೆ ಇಲ್ಲದೆ ಕಷ್ಟದಲ್ಲಿ ಬಿದ್ದಾಗ ಬಂಗರಾಜರಿಗೂ, ಅಜಿಲರಿಗೂ ಜಾಮೀನಾಗಿ ನಿಂತು ಹಣವನ್ನು ಸಲಾಯಿಸುತ್ತಿದ್ದರು. ಹೈದರನ ಕಾಲದಲ್ಲಿ ಪೋರ್ತುಗೀಸರ ಪ್ರಾಬಲ್ಯವು ಕಡಿಮೆಯಾಯಿತು. ಮುಸಲ್ಮಾನ ವ್ಯಾಪಾರಿಗಳು ಸ್ವಲ್ಪ ಏಳಿಗೆಗೆ ಬಂದರು. ಹೈದರ ಮತ್ತು ಟಿಪ್ಪು ಇವರ ಕಾಲದಲ್ಲಿ ಅನೇಕ ಮಹಮ್ಮದಿಯರು ಸರಕಾರ ಹುದ್ದೆದಾರರಾಗಿದ್ದರು. ಕೆಲವರು ಖಿಲ್ಲೆದಾರರೂ ಕೆಲವರು ಅಸೋಪರೂ ಆಗಿದ್ದರು. ಕೆಲವರು ಹೈದರನ ನೌಕಾ ಸೈನ್ಯದಲ್ಲಿದ್ದರು. ಉತ್ತರ

ಭಾಗದಲ್ಲಿಯೂ ದಕ್ಷಿಣ ಭಾಗದ ಮಂಗಳೂರು, ಬಂಟವಾಳ ಪುತ್ತೂರು ಮುಂತಾದ ಊರುಗಳಲ್ಲಿ ಜವುಳಿಯ ವ್ಯಾಪಾರಸ್ಥರಾಗಿ ನವಾಯತರೆಂಬ ಕೊಂಕಣಿ ಭಾಷೆಮಾತನಾಡುವ ಮುಸಲ್ಮಾನರು ಇದ್ದಾರೆ. ಇವರು ಪರ್ಷಿಯಾದೇಶದ ಅಧಿಕಾರಿಯು 7ನೇ ಶತಮಾನದಲ್ಲಿ ಕೊಟ್ಟ ಬಾಧೆಯನ್ನು ತಡಿಯಲಾರದೆ ಪಶ್ಚಿಮ ಕರಾವಳಿಯ ಕನ್ನಡ ಜಿಲ್ಲೆಯ ಮುಖ್ಯ ಬಂದರುಗಳಿಗೆ ಬಂದು ನಿಂತವರ ಸಂತತಿಯವರಂತೆ. ಇನ್ನು ಈ ಜಿಲ್ಲೆಯಲ್ಲಿ ಉತ್ತರ ಕರಾವಳಿಯಿಂದ ಬಂದು ನಿಂತ ದಖನಿಗಳೂ, ಮುಂಬಾಯಿಯಿಂದ ಬಂದು ಮಂಗಳೂರಿನಲ್ಲಿ ವ್ಯಾಪಾರ ಮಾಡುವ ಕಚ್ಛಿಯವರೂ (ಮೇಮನರು) ಇರುತ್ತಾರೆ.

ಮುಸಲ್ಮಾನರ ಮಸೀದಿಗಳು ಈ ಜಿಲ್ಲೆಯಲ್ಲಿ ಸಾವಿರಾರು ಇವೆ. ಆದರೆ ಇವುಗಳ ಕಟ್ಟೋಣದ ಕೆಲಸದ ಚಂದವನ್ನು ನೋಡಬೇಕೆಂದು ಆಸೆ ಇರುವವರು ಮಂಗಳೂರು ಸುಲ್ತಾನ ಪಳ್ಳಿಯನ್ನು ನೋಡಬೇಕಾಗಿದೆ. ಈ ಮಸೀದಿಯಲ್ಲಿ ಕಂಬಗಳಲ್ಲಿಯೂ ಬೋದಿಗೆಗಳಲ್ಲಿಯೂ ಮತ್ತು ಇತರ ಎಲ್ಲಾ ಭಾಗಗಳಲ್ಲಿಯೂ ಮರದಲ್ಲಿ ಕೆತ್ತಿದ ಸೂಕ್ಷ್ಮವಾದ ಕೆತ್ತನೆಯ ಕೆಲಸವು ದಕ್ಷಿಣಕನ್ನಡ ಜಿಲ್ಲೆಯ ಯಾವದೊಂದು ಮಸೀದಿಯಲ್ಲಾಗಲೀ ದೇವಸ್ಥಾನಗಳಲ್ಲಿಯಾಗಲೀ ಬಸದಿಗಳಲ್ಲಿಯಾಗಲೀ ಇರುವದಿಲ್ಲ. ಈ ಮಸೀದಿಯನ್ನು ಚೆರುಮಾನಪೆರುಮಾಳನ ಸ್ನೇಹಿತರು ಮೊದಲು ಕಟ್ಟಿದರು. ಅನಂತರ ಟಿಪುಸುಲ್ತಾನನು ಇದನ್ನು ಬಹಳ ಅಂದವಾಗಿಯೂ ದೊಡ್ಡದಾಗಿಯೂ ಕಟ್ಟಿಸಿದನು. ಈಗಿನ ಮುಸಲ್ಮಾನರು ಆದರ ಮುಂದುಗಡೆಯಲ್ಲಿ ದೊಡ್ಡ ಕಟ್ಟೋಣವನ್ನು ಕಟ್ಟಿಸಿದ್ದಾರೆ. ಇದರಲ್ಲಿ ಕೆತ್ತನೆಯ ಕೆಲಸವು ವಿಶೇಷವಾಗಿರುವದಿಲ್ಲ.

# 18ನೇ ಅಧ್ಯಾಯ.

## ಪೊರ್ತುಗೀಸರು.

ಹದಿನೈದನೇ ಶತಮಾನದ ಮಧ್ಯಭಾಗದಲ್ಲಿ ಯುರೋಪಿಯನರಿಗೆ ಹೊಸ ದೇಶಗಳನ್ನು ಕಂಡುಕೊಂಡು ಅವುಗಳ ಸಂಗಡ ವ್ಯಾಪಾರವನ್ನು ನಡಿಸಿ ಹಣಸಂಪಾದನೆಮಾಡಬೇಕೆಂಬ ಆಸೆಯು ಹುಟ್ಟಿತು. ನವೀನ ದೇಶಗಳನ್ನು ಸಾಹಸಪಟ್ಟು ಕಂಡುಕೊಂಡವರಿಗೆ ಬಹುಮಾನಗಳು ದೊರೆಯಲಾರಂಭಿಸಿದವು. ಈ ಕಾಲದಲ್ಲಿ ಬಹಳ ಐಶ್ವರ್ಯದಿಂದಲೂ, ಬಂಗಾರ, ಬೆಳ್ಳಿ ಮುಂತಾದ ಲೋಹಗಳಿಂದಲೂ, ನವರತ್ನಗಳಿಂದಲೂ, ಕರಿಮೆಣಸು, ಶುಂಠಿ, ಏಲಕ್ಕಿ ಮುಂತಾದ ಉಪಯುಕ್ತಸರಕುಗಳಿಂದಲೂ ತುಂಬಿ ಪ್ರಸಿದ್ಧಿಪಡೆದ ಹಿಂದೂದೇಶವನ್ನು ಕಂಡುಕೊಳ್ಳಬೇಕೆಂಬ ಕುತೂಹಲವು ಯುರೋಪಿನ ಪ್ರತಿಯೊಂದು ಜನಾಂಗದಲ್ಲಿಯೂ ಉಂಟಾಯಿತು. ಕ್ರಿಸ್ತಫರ ಕೊಲುಂಬಸನು ಇಂಡಿಯದ ದಾರಿಹುಡುಕುತ್ತಾ ಹೋಗಿ ದಾರಿ ತಪ್ಪಿ ಅಮೇರಿಕವನ್ನು ಕಂಡುಕೊಂಡನು. ಪೋರ್ತುಗಲ್ಲಿನ ಅರಸನಾದ ಹೆನ್ರಿಯು ಇಂಡಿಯದ ದಾರಿ ಹುಡುಕಲಿಕ್ಕೆ ಹಡಗುಗಳನ್ನು ಕಳುಹಿಸಲು, ಆ ಹಡಗದವರು ಆಫ್ರಿಕಾಖಂಡದ ಕರಾವಳಿಯನ್ನೂ ಕೆಲವು ದ್ವೀಪಗಳನ್ನೂ ಮಾತ್ರವೇ ಕಂಡುಕೊಂಡರು.

ಕ್ರಿ. ಶ. 1486ರಲ್ಲಿ ಪೋರ್ತುಗಲ್ಲಿನ ಅರಸನಾದ 2ನೇ ಜೇಮ್ಸನು ಪೂರ್ವ ದೇಶಗಳ ಸಂಗಡ ವ್ಯಾಪಾರಮಾಡುವ ಹಕ್ಕನ್ನು ಪೋಪರಿಂದ ಪಡೆದನು. ಅದೇ ವರುಷ ಬಾರ್ತಲೊಮ್ಯೂಡಯಾಜ್ ಎಂಬ ನಾವಿಕನು ಆಫ್ರಿಕಾಖಂಡದ ದಕ್ಷಿಣಕ್ಕಿರುವ ಕೇಪ ಒಪ್ ಗುಡ ಹೋಪ್' ಎಂಬ ಭೂಶಿರವನ್ನು ಸುತ್ತಿಬರುವಾಗ ಬಿರುಗಾಳಿಯು ಬೀಸಿದ್ದರಿಂದ ಮುಂದರಿಸದೆ ಹಿಂತಿರುಗಿ ಪೋರ್ತುಗಲ್ಲಿಗೆ ಹೋದನು.



ವಾಸ್ಕೋ ಡಿ ಗಾಮಾ.

ಹತ್ತು ವರ್ಷಗಳ ವರೆಗೆ ಪೋರ್ತುಗಲ್ಲಿನ ಬೇರೆ ಬೇರೆ ಬಂದರುಗಳ ನಾವಿಕರು ಎಷ್ಟು ಪ್ರಯತ್ನಿಸಿದಾಗ್ಯೂ ಯಾರಿಗೂ ಸಾಧ್ಯವಾಗಲಿಲ್ಲ. ಕಡೆಗೆ ಡೋನ್ ವಾಸ್ಕೋ ಡಿ ಗಾಮಾ ಎಂಬ ದೊಡ್ಡ ಕುಟುಂಬದವನೊಬ್ಬನನ್ನು ನೌಕಾಧ್ಯಕ್ಷನಾಗಿಯೂ ಸೇನಾಧಿಪತಿಯಾಗಿಯೂ ನಿಯಮಿಸಿ, ಎಂಜೆಲ್ ಗಾಬ್ರಿಯಲ್, ಸಾನ-ರಾಫೇಲ ಮತ್ತು ಕರವೆಲ ಎಂಬ ಮೂರು ಹಡಗುಗಳನ್ನೂ ಸಾಮಾಗ್ರಿಗಳನ್ನು ತುಂಬಿಸಿದ ಇನ್ನೊಂದು ಹಡಗವನ್ನೂ ಕೊಟ್ಟು ಪ್ರಯಾಣಕ್ಕೆ ಕಳುಹಿಸಲಾಯಿತು. 1497ನೇ ಜೂನ್ 6ರಲ್ಲಿ ವಾಸ್ಕೋ ಡಿ ಗಾಮನು ಹೊರಟನು. ಬಾರ್ತಲೊಮ್ಯೂಡ ಯಾಜನು ಒಗಸ್ಟ 3ರ ವರೆಗೆ ಅವರೊಡನೆ ಬಂದನು. ಅನಂತರ ಅವನು ಹಿಂತಿರುಗಿ ಹೋಗಿ ಎಲ್ಲ ವರ್ತಮಾನವನ್ನು ಅರಸನಿಗೆ ತಿಳಿಸಿದನು. ವಾಸ್ಕೋ ಡಿ ಗಾಮನು ನವಂಬರ 30ರಲ್ಲಿ ಆಫ್ರಿಕಾಖಂಡದ ದಕ್ಷಿಣ ಭಾಗವನ್ನು ಸುತ್ತಿ ಮುಂದರಿಸಿಕೊಂಡನು. 149೮ನೇ ಮಾರ್ಚ ತಿಂಗಳಲ್ಲಿ ಮೊಂಜಾಬಕ ತೀರಕ್ಕೆ ಬಂದು ದಾರಿತೋರಿಸಲಿಕ್ಕೆ ಒಬ್ಬ ಅರಬೀ ಮೂರನನ್ನು ಸಹಾಯಕ್ಕೆ ಕರಕೊಂಡು ಬರುವಾಗ ದಾರಿಯಲ್ಲಿ ಮಲ್ಡೆ ಹತ್ತಿರವಿರುವ ದ್ವೀಪಗಳಲ್ಲಿ ಇಳಿದು ಬೇಕಾದ ವಸ್ತುಗಳನ್ನು ಮೊಗೇರರಿಂದ ಪಡೆದು, ಆ ದ್ವೀಪಗಳಿಗೆ ಸೈಂಟಮೆರಿ ದ್ವೀಪಗಳೆಂದು ಹೆಸರಿಟ್ಟನು. 1498ನೇ ಮೇ ತಿಂಗಳ 20ರಲ್ಲಿ ಕಲ್ಲಿಕೋಟೆ ಬಂದರಿನಲ್ಲಿ ಇಳಿದನು.

ಈ ಸಮಯದಲ್ಲಿ ಇಂಡಿಯದ ಪಶ್ಚಿಮ ಕರಾವಳಿಯ ವ್ಯಾಪಾರವು ಅರಬೀಮೂರರ ಕೈಯಲ್ಲಿತ್ತು. ಪೋರ್ತುಗೀಸರು ಬಂದುದನ್ನು ನೋಡಿ ಇವರಿಗೆ ಬಹಳ ಬೇಸರವಾಯಿತು. ಆದ್ದರಿಂದ ಇವರು ಪೋರ್ತುಗೀಸರಿಗೆ ಉಪದ್ರವನ್ನು ಕೊಡಲಾರಂಭಿಸಿದರು. 1505ರಲ್ಲಿ ಡೋನ್ ಫ್ರಾನ್ಸಿಸ್ಕೋ-ಡಿ-ಆಲ್ಮಿಡನು ಪೋರ್ತುಗೀಸರ ವ್ಯಾಸರೋಯಿಯಾಗಿ ಬಂದನು. ಆಗ ಕನ್ನಡ ಜಿಲ್ಲೆಯು ವಿಜಯನಗರದಲ್ಲಿ ಆಳುತ್ತಿದ್ದ 2ನೇ ವಂಶದ ಇಮ್ಮಡಿ ನರಶಿಂಹರಾಯನ ಕೈಕೆಳಗಿತ್ತು. ಆ ಸಮಯದಲ್ಲಿ ಪಶ್ಚಿಮ ಕರಾವಳಿಯಲ್ಲಿ

ಪೋರ್ತುಗೀಸರು ಬಟ್ಕಲ ಬಂದರ ಒಂದನ್ನು ಬಿಟ್ಟು ಕನ್ನಡ ತೀರದಲ್ಲಿರುವ ಎಲ್ಲಾ ಬಂದರುಗಳಲ್ಲಿಯೂ ಒಂದೊಂದು ಭಂಡಸಾಲೆಯನ್ನೂ ಅದರ ಸುತ್ತಲೂ ಒಂದೊಂದು ಕೋಟೆಯನ್ನೂ ಕಟ್ಟಬಹುದೆಂದು ವಿಜಯ ನಗರದ ಅರಸನು ಅಪ್ಪಣೆಕೊಟ್ಟನು. ಆದರೂ ಈ ಸಮಯದಲ್ಲಿ ಕನ್ನಡ ಜಿಲ್ಲೆಯ ತೀರದಲ್ಲಿ ಕೋಟೆಯನ್ನಾಗಲೀ ಭಂಡಸಾಲೆಯನ್ನಾ ಗಲೀ ಕಟ್ಟಿಸಿದ ಸಂಗತಿ ತಿಳಿದುಬರುವದಿಲ್ಲ. 1514ರಲ್ಲಿ ಈ ಜಿಲ್ಲೆ ಯಲ್ಲಿ ಪ್ರಯಾಣಮಾಡಿದ ದುರ್ತೆಬಾರಬೊಸಾ ಎಂಬ ಪೋರ್ತುಗೀಸ ಪ್ರಯಾಣಿಕನು ಹೇಳುವ ಪ್ರಕಾರ ಈ ಜಿಲ್ಲೆಯ ಯಾವ ಭಾಗ ದಲ್ಲಿಯಾದರೂ ಪೋರ್ತುಗೀಸರು ಇದ್ದರೆಂದು ತಿಳಿದುಬರುವದಿಲ್ಲ. 1509–1530ರ ವರೆಗೆ ವಿಜಯನಗರದಲ್ಲಿ ಆಳುತ್ತಿದ್ದ ಕೃಷ್ಣದೇವ ರಾಯನ ಕಾಲದಲ್ಲಿ ಪೋರ್ತುಗೀಸರಿಗೆ ಹೆಚ್ಚು ಹಕ್ಕು ಸ್ವಾತಂತ್ರ್ಯ ಗಳು ಸಿಕ್ಕಿದವು. ಈ ಅರಸನು ಬಿಜಾಪುರ ಸುಲ್ತಾನರ ಸಂಗಡ ಯುದ್ಧಮಾಡುತ್ತಿದ್ದಾಗ ಪೋರ್ತುಗೀಸರು ಬಹಳ ಸಹಾಯಮಾಡು ತ್ತಿದ್ದರು. ಆಗ ಪೋರ್ತುಗೀಸರಿಗೆ, ಆ ಅರಸನ ಆಶ್ರಯವು ಸಿಕ್ಕಿ ಕನ್ನಡ ಜಿಲ್ಲೆಯ ತೀರದಲ್ಲಿ ವ್ಯಾಪಾರಮಾಡುತ್ತಿದ್ದ ಅರಬೀಯರ ಮತ್ತು ಮಾಪಿಳ್ಳೆಯವರ ವ್ಯಾಪಾರವನ್ನು ಹಾಳುಮಾಡತೊಡಗಿದರು.

ಕ್ರಿ. ಶ. 1524ರಲ್ಲಿ ವಾಸ್ಕೊಡಿ-ಗಾಮನು ತಿರಿಗಿ ಇಂಡಿಯಕ್ಕೆ ಪೋರ್ತುಗೀಸರ ವ್ಯಾಸರೋಯಿಯಾಗಿ ಬಂದನು. ಅರಬೀ ಮೂರರು ಕೊಚ್ಚಿ, ಮಲಬಾರು ತೀರಗಳಲ್ಲಿ ಇವರಿಗೆ ಉಪದ್ರಕೊಡುತ್ತಿದ್ದರು. ಅರಬೀ ಮೂರರ ಭಂಡಸಾಲೆಗಳು ಮಂಗಳೂರಿನಲ್ಲಿಯೂ ಬಸರೂರಿ ನಲ್ಲಿಯೂ ಇದ್ದವು. ವಾಸ್ಕೊಡಿ-ಗಾಮನು ಈ ಬಂದರುಗಳನ್ನು ಹಿಡಿಯಲಿಕ್ಕೆ ಹಡಗುಗಳನ್ನು ಕಳುಹಿಸಿದನು. ಅಷ್ಟರಲ್ಲಿ ವಾಸ್ಕೋ-ಡಿ -ಗಾಮನು ಪೋರ್ತುಗಲ್ಲಿಗೆ ಹೋಗುವಾಗ ದಾರಿಯಲ್ಲಿ ಕಾಲವಾದನು. ಕ್ರಿ. ಶ. 1526ರಲ್ಲಿ ಲೊಪೆಜ್ ಡಿ ಸಂಪಾಯೊ ವ್ಯಾಸರೋಯಿಯಾಗಿದ್ದ ಸಮಯದಲ್ಲಿ ಪೋರ್ತುಗೀಸರು ಏನೂ ಕಷ್ಟವಿಲ್ಲದೆ ಮಂಗಳೂರನ್ನು

ಹಿಡಿದರು. ಮೂರರೂ, ಮಾಪಿಳ್ಳೆಯರೂ ಸೋತುಹೋದರು. ಆ ಸಮಯದಲ್ಲಿ ಫ್ರಾನ್ಸಿಸ್ಕನ್ ಪಾದ್ರಿಗಳು ಕ್ರೈಸ್ತಮತವನ್ನು ಮಂಗಳೂರಿನಲ್ಲಿಯೂ ಅದರ ನೆರೆಹೊರೆಯಲ್ಲಿಯೂ ವಿಜಯನಗರದ ಅರಸರ ಅಪ್ಪಣೆ ಪ್ರಕಾರ ಬೋಧಿಸಲಾರಂಭಿಸಿದರು. ಕನ್ನಡ ಜಿಲ್ಲೆಯ ಕರಾವಳಿಯ ವ್ಯಾಪಾರವೆಲ್ಲ ಅರಬಿ ಮೂರರ ಮತ್ತು ಮಾಪಿಳ್ಳೆಯರ ಕೈಯಿಂದ ತಪ್ಪಿಹೋಯಿತು. ಪೋರ್ತುಗೀಸರು ಪ್ರತಿಯೊಂದು ಬಂದರಿನಿಂದಲೂ ಸುಂಕವನ್ನು ವಸೂಲು ಮಾಡಲಾರಂಭಿಸಿದರು. ಬಾರ್ಸಿಲೋರಿನಿಂದ (ಬಸರೂರು) ೫೦೦ ಮುಡಿ ಅಕ್ಕಿಯನ್ನೂ ಬಾರಕೂರಿನಿಂದ 1000 ಮುಡಿ ಅಕ್ಕಿಯನ್ನೂ ಕಾರ್ನಾಡ ಅರಸನಿಂದ (ಮೂಲ್ಕಿಸಾವಂತ) 800 ಮುಡಿಯನ್ನೂ ಮಂಗಳೂರು ಬಂಗರ ರಾಜನಿಂದ 2400 ಮುಡಿಯನ್ನೂ 1000 ಬುದ್ದಲಿ ಎಣ್ಣೆಯನ್ನೂ ಮಂಜೇಶ್ವರದಿಂದ 700 ಮುಡಿಯನ್ನೂ ಕುಂಬಳೆ ಅರಸನಿಂದ 800 ಮುಡಿಯನ್ನೂ ಪ್ರತಿ ವರ್ಷವೂ ವಸೂಲುಮಾಡುತ್ತಿದ್ದರು.

ಕ್ರಿ. ಶ. 1529ರಲ್ಲಿ ದಿಯೋಗ, ಸಿಲ್ವೆರಾ ಎಂಬ ಪೋರ್ತುಗೀಸ ಹಡಗುಪಡೆಯವನು ಮಂಗಳೂರಿಗೆ ಬಂದನು. ಆಸಮಯದಲ್ಲಿ ಮಂಗಳೂರಿನಲ್ಲಿದ್ದ ಒಬ್ಬ ಮುಹಮ್ಮದಿ ಸಾಹುಕಾರನು ಕಲ್ಲಿಕೋಟೆಯ ಜಾಮೋರೀನನ ಕಡೆಗೆ ಸೇರಿ ಪೋರ್ತುಗೀಸರಿಗೆ ವಿರೋಧವಾಗಿ ನಿಂತಿದ್ದನು. ಅವನನ್ನು ಶಿಕ್ಷಿಸುವುದಕ್ಕಾಗಿ ಈ ಹಡಗು ಪಡೆಯವನು 1530ನೇ ಮಾರ್ಚಿ ತಿಂಗಳಲ್ಲಿ ಮಂಗಳೂರಿಗೆ ಬಂದು ಕೋಟೆಯನ್ನೂ ಸ್ಟೊಕೆಡುಗಳನ್ನೂ(ಕೋಟೆಯ ಸುತ್ತಲೂ ಇರುವ ಮರದ ಬೇಲಿ) ನಾಶಪಡಿಸಲಾರಂಭಿಸಿದನು. ಮಂಗಳೂರಿನಲ್ಲಿದ್ದ 4000 ಸೈನ್ಯವು ಯುದ್ಧಕ್ಕೆ ಸಿದ್ಧವಾಯಿತು. ದಿಯೋಗನ ಹತ್ತಿರ 51 ಹಡಗುಗಳಲ್ಲಿ 800 ಮಂದಿ ಪೋರ್ತುಗೀಸ ಶಿಪಾಯಿಯರು ಇದ್ದರು. ಯುದ್ಧದಲ್ಲಿ ಮಂಗಳೂರು ಕೋಟೆಯು ನಾಶವಾಯಿತು. ಮೂರರು ಸೋತು ಅವರ ಸೇನಾಧಿಪತಿಯಾದ ಚಟಿಮನು ಕೊಲ್ಲಲ್ಪಟ್ಟನು. ಪೋರ್ತುಗೀಸರಿಗೆ

ಮಂಗಳೂರಿನಲ್ಲಿ ತಾಮ್ರವೂ, ಹವಳವೂ ಪಾದರಸವೂ ಸಿಕ್ಕಿತು. ದಿಯೋಗನು ಅರಬೀಯರ ಹಡಗುಗಳನ್ನೆಲ್ಲಾ ಸುಟ್ಟನು. ಕೋಟೆಯಲ್ಲಿದ್ದ ಫಿರಂಗಿಗಳನ್ನೆಲ್ಲಾ ಹಡಗುಗಳಲ್ಲಿ ಕೊಂಡುಹೋಗಿ ಸಮುದ್ರದಲ್ಲಿ ಬಿಸಾಡಿದನು.

ಕ್ರಿ. ಶ. 1547ರಲ್ಲಿ ವಿಜಯನಗರದ ರಾಮರಾಯನ ಆಳಿಕೆಯಲ್ಲಿ ಪೋರ್ತುಗೀಸರಿಗೂ ಈ ಅರಸನಿಗೂ ಆದ ಕರಾರಿನ ಪ್ರಕಾರ ಕನ್ನಡ ಕರಾವಳಿಯ ತೀರದ ವ್ಯಾಪಾರವು ಪೂರ್ಣವಾಗಿ ಪೋರ್ತುಗೀಸರ ಕೈಸೇರಿತು. ಆದರೆ ಕನ್ನಡ ಜಿಲ್ಲೆಯಲ್ಲಿ ಆಳುತ್ತಿದ್ದ ತೋಳಾರ, ಕಂಬಳಿ, ಸಾವಂತ, ಕೂಳೂರು ಬಲ್ಲಾಳ, ಮಂಗಳೂರು ಬಂಗರಾಜ, ಉಳ್ಳಾಲದಲ್ಲಿ ಆಳುತ್ತಿದ್ದ ಚೌಟರಾಣಿ, ಕುಂಬಳೆ ಅರಸು ಮುಂತಾದವರು ಪೋರ್ತುಗೀಸರಿಗೆ ಸರಿಯಾಗಿ ಕಪ್ಪವನ್ನು ಕೊಡುತ್ತಿದ್ದಿಲ್ಲ. ಅದಕ್ಕಾಗಿ ಪೋರ್ತುಗೀಸರು ಬಾರ್ಕೂರು, ಮಂಗಳೂರು, ಉಳ್ಳಾಲ ಮುಂತಾದ ಬಂದರಗಳನ್ನು ಸುಡುತ್ತಾ ಇದ್ದರು. ಕ್ರಿ. ಶ. 1548ನೇ ಸೆಪ್ಟಂಬರ ತಿಂಗಳಲ್ಲಿ ದ್ರೆಸಿಯಾ ಡೇಸನಿಗೂ, ಭಟ್ಕಳದ ರಾಣಿಗೂ ಗೋವೆಯಲ್ಲಿ ಒಂದು ಒಪ್ಪಂದವಾಯಿತು. ಗಂಗೊಳಿಯಿಂದ ಉತ್ತರಕ್ಕಿರುವ ಕನ್ನಡ ಜಿಲ್ಲೆಯ ಭಾಗವು ಭಟ್ಕಳರಾಣಿಯ ವಶದಲ್ಲಿತ್ತು. ಈ ಕರಾರಿನ ಪ್ರಕಾರ ಬೈಂದೂರು, ಶೀರೂರು, ಗಂಗೊಳಿ ಬಂದರುಗಳ ವ್ಯಾಪಾರವೂ ಪೋರ್ತುಗೀಸರ ಕೈಸೇರಿತು.

ಕ್ರಿ. ಶ. 1566—67ರಲ್ಲಿ ಪೋರ್ತುಗೀಸ ವ್ಯಾಸರೋಯಿಯಾದ ಅಂತೋನ್ ಡಿ. ನೂರೆಂಞನೂ, ನೌಕಾ ಸೇನಾಧಿಪತಿಯಾದ ಡೊನ್ ಫ್ರಾನ್ಸಿಸ್ಕ ಮಸ್ಕರೆಂಜನೂ 7 ದೊಡ್ಡ ಹಡಗುಗಳಲ್ಲಿಯೂ 7 ಸಣ್ಣ ಹಡಗುಗಳಲ್ಲಿಯೂ 3000 ಜನರನ್ನು ತೆಗೆದುಕೊಂಡು ಮಂಗಳೂರು ಬಂದರನ್ನು ಹಿಡಿದುಕೊಳ್ಳಲಿಕ್ಕೆ ಬಂದರು. ಉಳ್ಳಾಲದಲ್ಲಿ ಇದ್ದ ಮೂಡಬಿದರೆ ಚೌಟರಾಣಿ ಬುಕ್ಕಾದೇವಿ (ಅಭಯ ದೇವಿ ಅಥವಾ ಅಬ್ಬಕ್ಕಾದೇವಿ)ಯು ಪೋರ್ತುಗೀಸರಿಗೆ ಎದುರು ನಿಂತು ಕಪ್ಪಕೊಡುತ್ತಿದ್ದಿಲ್ಲ.

ಪೋರ್ತುಗೀಸರ ಸೈನ್ಯದ ಹಡಗುಗಳು 6 ಬೆಟೆಲಿಯನ್‌ಗಳು (ಒಂದು ಬೆಟೆಲಿಯನ್ 500 ಸಿಪಾಯಿಗಳ ಸೈನ್ಯ)ಸಹಿತ ಉಳ್ಳಾಲದ ಹತ್ತಿರ ಹೊಳೆಯಲ್ಲಿ 1567ನೇ ಜನವರಿ 4ರಲ್ಲಿ ಬಂದು ನಿಂತವು. ರಾತ್ರಿ ಪೋರ್ತುಗೀಸರು ಊಟಮಾಡುವ ಸಮಯ ಬುಕ್ಕಾ ದೇವಿಯು 500ಮಂದಿ ಸೈನಿಕರು ಪೋರ್ತುಗೀಸರ ಹಡಗಗಳ ಮೇಲೆ ಬಿದ್ದರು ಅವರ ಹಿಂದಿನಿಂದ 1500 ಮಂದಿ ಸೈನಿಕರು ಬಂದು ಹಡಗುಗಳಿಗೆ ಮುತ್ತಿಗೆ ಹಾಕಿದರು. ಪೋರ್ತುಗೀಸರು ದಿಕ್ಕು ದಿಕ್ಕಿಗೆ ಓಡಿಹೋದರು. ಡೊನ ಪ್ರಾನ್ಸಿಸ್ಕ ಮಸ್ಕರೆಂಞಾನು ಸೈನಿಕರನ್ನು ಒಟ್ಟುಗೂಡಿಸಿ ಎದುರು ನಿಂತನು. ಅನೇಕ ಜನರು ಮಡಿದುಬಿದ್ದರು. ಡೊನ್ ಲೂಯಿಜ ಆಲ್ಮಿಡನು ಇಫಿಫೆನಿಯ ದಿನ ಜನವರಿ 6ರಲ್ಲಿ ಸಾಯಂಕಾಲ ಬಹಳ ಸಾಹಸದಿಂದ ಕಾದಾಡಿದನು. ಬುಕ್ಕಾ ದೇವಿಯ ಸೈನಿಕರು ಸೋತುಹೋದರು. ಪೋರ್ತುಗೀಸರು ಉಳ್ಳಾಲವನ್ನು ಹಿಡಿದು ಸುಟ್ಟುಬಿಟ್ಟರು. ಬುಕ್ಕಾದೇವಿಯು ಹತ್ತಿರವಿರುವ ಗುಡ್ಡಕ್ಕೆ ಓಡಿಹೋದಳು. ಈ ಯುದ್ಧದಲ್ಲಿ ಬುಕ್ಕಾದೇವಿಯ 500 ಮಂದಿ ಸೈನಿಕರೂ ಪೋರ್ತುಗೀಸರ 40 ಮಂದಿ ಸೈನಿಕರೂ ಮಡಿದುಬಿದ್ದರು. ಪೋರ್ತುಗೀಸರು ಉಳ್ಳಾಲಕ್ಕೆ ಎದುರಾಗಿ ಮಂಗಳೂರಿನಲ್ಲಿ ಈಗಿನ ರುಜಾರಿಯೊ (ಪೊಯ್ಯೆ) ಇಗರ್ಜಿಯ ಹತ್ತಿರ "ಸೆಂವೊ ಸಿಬಾಸ್ತಿಯನ್'' ಎಂಬ ಕೋಟೆಯನ್ನು ಕಟ್ಟಿದರು. ಬುಕ್ಕಾದೇವಿಗೂ ಪೋರ್ತುಗೀಸರಿಗೂ ಒಪ್ಪಂದವಾಯಿತು.

ಕ್ರಿ. ಶ. 1569ರಲ್ಲಿ ಪೆದ್ರು ಡಿ. ಸಿಲ್ವ ಮಿನೆಜಸನು 13 ಹಡಗಗಳಲ್ಲಿ ಸೈನ್ಯವನ್ನು ತೆಗೆದುಕೊಂಡು ಬಾರ್ಸೆಲೋರ್ (ಬಸರೂರು)ನಲ್ಲಿ ಇಳಿದನು. ಸುರಾಲಿನ ತೋಳಾರ ಅರಸನೂ, ಹುಣಕಂಬಳಿ ಪಂಡೇರಿ ದೇವ ಒಡೆಯನೂ ಪೋರ್ತುಗೀಸರಿಗೆ ತಲೆಬಗ್ಗಿಸಲಿಲ್ಲ. ಇದಕ್ಕೋಸ್ಕರವಾಗಿಯೂ ದೊಡ್ಡ ವ್ಯಾಪಾರಸ್ಥಳವಾದ ಬಾರ್ಸೆಲೋರ್ (ಬಸರೂರು) ಕೋಟೆಯನ್ನು ಹಿಡಿಯುವದಕ್ಕಾಗಿಯೂ ಈ ಹಡಗುಪಡೆಯವನು ಬಾರ್ಸೆಲೋರಿಗೆ ಬಂದನು. ಪೋರ್ತುಗೀಸರ ಈ ಹಡಗುಪಡೆಯವನು ತೋಳಾರ ಅರಸನ

ಬಾರ್ಸೆಲೋರ ಕೋಟೆಯ ಸೇನಾಧಿಪತಿಗೆ ಲಂಚವನ್ನು ಕೊಟ್ಟು ತಾನು ಬಂದ ಒಡನೆಯೇ ಕೋಟೆಯನ್ನು ಬಿಟ್ಟುಕೊಡಬೇಕೆಂದು ಒಳಸಂಚು ನಡಿಸಿದ್ದನು. ಮಿನೆಜಸನು ಹೊಳೆಯ ದಾರಿಯಾಗಿ ಕೋಟೆಯ ಹತ್ತಿರ ಬಂದು ಇಳಿದನು. ಈ ಸಮಯದಲ್ಲಿ ಬಾರ್ಸೆಲೋರಿನಿಂದ ಉತ್ತರ ಭಾಗವು ಬಿಜಾಪುರದ ಅದಿಲ್‌ಶಾಹನ ಸ್ವಾಧೀನವಿತ್ತು. ಮಿನೆಜಸನು ಮೇಲಿನ ಬಾರ್ಸೆಲೋರ (ಬಸರೂರು) ಕೆಳಗಿನ ಬಾರ್ಸೆಲೋರ್ (ಕುಂದಾಪುರ) ಪಟ್ಟಣಗಳನ್ನೂ ಹೊಳೆಯಲ್ಲಿದ್ದ ಅನೇಕ ಹಡಗುಗಳನ್ನೂ ಸುಟ್ಟನು. ಬಾರ್ಸೆಲೋರಿನ ಕೋಟೆಯ ಸೇನಾಧಿಪತಿಯು ಕೋಟೆಯನ್ನು ರಾತ್ರಿಯಲ್ಲಿ ಪೋರ್ತುಗೀಸರಿಗೆ ಬಿಟ್ಟುಕೊಟ್ಟಾಗ ಒಡನೆಯೇ ಅದನ್ನು ಅವರು ಪ್ರವೇಶಿಸಿದರು. ಅನಂತರ ಬಾರ್ಸೆಲೋರ ಪಟ್ಟಣವನ್ನು ಪ್ರವೇಶಿಸಿ 200 ಮಂದಿ ಜನರನ್ನು ಸೆರೆಹಿಡಿದರು. ಅದೇ ದಿನ ರಾತ್ರಿ ಉದಯವಾಗಬೇಕಾದರೆ ತೋಳಾರ ಮತ್ತು ಕಂಬಳಿ ಅರಸರಿಬ್ಬರೂ 1503 ಮಂದಿ ಸೈನಿಕರನ್ನು ತೆಗೆದುಕೊಂಡು ಬಂದರು. ಮರುದಿನ ರಾತ್ರಿ ಇನ್ನೂ 5000 ಮಂದಿ ಸೈನಿಕರು ಬಂದರು. ಪೋರ್ತುಗೀಸರಿಗೂ, ತೋಳಾರ ಅರಸು ಮತ್ತು ಹುಣಕಂಬಳಿ ಪಂಡರಿದೇವ ಒಡೆಯರಿಗೂ, ದೊಡ್ಡ ಯುದ್ಧವಾಯಿತು. ಅರಸರ ಸೈನ್ಯದಲ್ಲಿ ಅನೇಕ ಮಂದಿ ಮಡಿದು ಬಿದ್ದರು. ಆದರೂ ಪೋರ್ತುಗೀಸರಿಗೆ ಜಯವಾಗದೆ ಅವರು 20 ಫಿರಂಗಿಗಳನ್ನೂ ಮದ್ದು ಗುಂಡುಗಳನ್ನೂ, ಉಳಿದ ಸೈನ್ಯವನ್ನೂ ತೆಗೆದುಕೊಂಡು ಹಡಗುಹತ್ತಿ ಓಡಿಹೋದರು. ಪೋರ್ತುಗೀಸರ ವ್ಯಾಸರೊಯಿಯಾದ ಡೊನ್‌ಲುಯಿಜ್ ಡಿ. ಅತ್ರೈಡಿ ಎಂಬವನು ಇನ್ನೊಂದುಸಾರಿ ದೊಡ್ಡ ಹಡಗುಪಡೆಯನ್ನು ತೆಗೆದುಕೊಂಡು ಬಂದನು. ಬಾರ್ಸೆಲೋರಿಗೆ ಇಳಿಯುವದೇ ಅಸಾಧ್ಯವಾಯಿತು. ತೋಳಾರ ಮತ್ತು ಹುಣಕಂಬಳಿ ಪಂಡರಿ ದೇವ ಒಡೆಯ ಇವರ 11000 ಸೈನ್ಯವು ಎದುರು ನಿಂತಿತು. 200 ಮಂದಿ ಮಡಿದುಬಿದ್ದರು. ಆದರೂ ಪೋರ್ತುಗೀಸರು ತಿರಿಗಿ ತಿರಿಗಿ ಬಂದು ಯುದ್ಧಮಾಡಿ ಕೋಟೆಯನ್ನು ಹಿಡಿದರು. ತೋಳಾರ ಅರಸನ ಸೈನ್ಯವು

ಕೋಟೆಯನ್ನು ಬಿಟ್ಟುಹೋಗಿ ಮರುದಿನ ರಾತ್ರಿ ತಿರಿಗಿ ಬಂದು ಕೋಟೆಗೆ ಮುತ್ತಿಗೆ ಹಾಕಿತು. ಕೋಟೆಯ ಸೇನಾಧಿಪತಿಯಾದ ಪೆದ್ರು ಲೊಪೆಜ್ ರೆಬೆಲೊ ಎಂಬವನು 200 ಮಂದಿ ಸೈನಿಕರನ್ನು ಕರದುಕೊಂಡು ಯುದ್ಧ ಮಾಡಿದನು. ಅರಸನ 300 ಮಂದಿ ಸೈನಿಕರು ಮಡಿದುಬಿದ್ದರು. ಕಡೆಗೆ ಪೋರ್ತುಗೀಸರಿಗೂ, ಸುರಾಲ ಕಂಬಳಿ ಅರಸರಿಗೂ ಒಪ್ಪಂದವಾಗಿ ಅದರ ಪ್ರಕಾರ ಸುರಾಲ ಕಂಬಳಿ ಅರಸರು ಮುಂಚಿಗಿಂತಲೂ ಹೆಚ್ಚು ಕಪ್ಪ ವನ್ನು ಪೋರ್ತುಗೀಸರಿಗೆ ಕೊಡಬೇಕಾಯಿತು.

ಪೋರ್ತುಗೀಸ ವ್ಯಾಸರೋಯಿಯಾದ ಡೊನ್ ಲೂಯಿಜ್ ಡಿ. ಅತ್ತೈಡಿಗೂ, ತೋಳಾರ ಕಂಬಳಿ ಅರಸರಿಗೂ, ಕುಸುಮದೇವಿ ತೋಳಾ ರತಿಗೂ ಭೇಟಿಯಾಗಿ ಒಪ್ಪಂದವಾಗಿ ಬಹಳ ಸಂತೋಷದಿಂದ ಎರಡೂ ಕಡೆ ಯವರೂ ಹೊರಟುಹೋದರು. ಇದರ ಪ್ರಕಾರ ಪೋರ್ತುಗೀಸರು ಬಾರ್ಸೆಲೋರಿನಲ್ಲಿ ಇನ್ನೊಂದುಕೋಟೆಯನ್ನು ಕಟ್ಟಿದರು. ಹೈದರಾಲಿಯು ನಂತರ ದುರುಸ್ತಿಮಾಡಿಸಿದ ಕೋಟೆಯು ಇದೇಯಾಗಿರುತ್ತದೆ. ಈಗ ಕುಂದಾಪುರ ಡಿವಿಜನಲ್ ಆಫೀಸು ಈ ಕೋಟೆಯ ಮೇಲೆ ಕಟ್ಟಿಸಿರುತ್ತಾರೆ. ಎಂಟೋನಿಯೊ ಬೊಲೆಹೊ ಎಂಬವನನ್ನು ಕೋಟೆಯ ಸೇನಾಧಿಪತಿಯಾಗಿ ನೇಮಿಸಿದರು.

ಮಂಗಳೂರಿನಲ್ಲಿ ಆಳುತ್ತಿದ್ದ ಬಂಗರಾಜನಾದ ಕಾಮರಾಯನಿಗೂ ಉಳ್ಳಾಲದಲ್ಲಿದ್ದು ಆಳುತ್ತಿದ್ದ ಅವನ ಅತ್ತೆಯೂ ಮೂಡಬಿದರೆ ಚೌಟರಾಣಿಯೂ ಆದ ಅಬ್ಬಕ್ಕ ದೇವಿಗೂ ಉಂಟಾದ ಕಲಹದಲ್ಲಿ ಪೋರ್ತು ಗೀಸರ ವ್ಯಾಪಾರಕ್ಕೆ ಸ್ವಲ್ಪ ತೊಂದರೆಯಾಯಿತು. ಅದಕ್ಕಾಗಿ ಪೋರ್ತು ಗೀಸ ವ್ಯಾಸರೋಯಿಯು, ಇದನ್ನು ವಿಚಾರಿಸುವುದಕ್ಕಾಗಿ ಮಂಗಳೂರಿಗೆ ಬಂದನು. ಕಾಮರಾಯ ಬಂಗನೂ ಅಬ್ಬಕ್ಕ ದೇವಿಯೂ ವ್ಯಾಸರೋಯಿ ಯನ್ನು ಮರ್ಯಾದೆಯಿಂದ ಕಂಡರು. ವ್ಯಾಸರೋಯಿಯು ಮಂಗ ಳೂರಿನಿಂದ ಹೊರಟು ಬಾರ್ಸೆಲೋರಿಗೆ ಹೋಗಿ 600 ಮಂದಿ ಸೈನಿಕರನ್ನು ಆ ಕೋಟೆಯಲ್ಲಿ ನಿಲ್ಲಿಸಿ ಗೋವೆಗೆ ಹೋದನು. ಹೋಗುವಾಗ ಅಂತೋ

ನಿಯೊ ಕೆಬ್ರಾಲನ ವಶದಲ್ಲಿ 3 ಯುದ್ಧದ ಹಡಗುಗಳನ್ನು ಬಾರ್ಸಿಲೋರ ಹೊಳೆಯಲ್ಲಿ ನಿಲ್ಲಿಸಿಹೋದನು. 1569ರಲ್ಲಿ ವಿನಸೆಂಟ ಸಾಲ್ಡಾಞನು ಬಾರ್ಸಿಲೋರಿನ ಹತ್ತಿರ ಜಾಮೋರಿನನ ವ್ಯಾಪಾರ ತುಂಬಿದ ಒಂದು ದೊಡ್ಡ ಹಡಗವನ್ನು ಸೆರೆಹಿಡಿದನು.

ಕ್ರಿ. ಶ 1570ರಲ್ಲಿ ಬಿಜಾಪುರದ ಆದಿಲ್‌ಶಾಯಿ ಅರಸನಿಗೂ ನೈ ಜಾಮಲ್ ಮುಲ್ಕನಿಗೂ, ಕಲ್ಲಿಕೋಟೆಯ ಜಾಮೋರಿನ್ ಅರಸನಿಗೂ ಒಂದು ಗುಟ್ಟಿನ ಕರಾರು ನಡಿಯಿತು. ಅದರ ಪ್ರಕಾರ ಬಾರ್ಸಿಲೋರಿನಿಂದ ಉತ್ತರಕ್ಕಿರುವ ಭಾಗವು ಅದಿಲ್‌ಶಾಹನಿಗೂ, ದಕ್ಷಿಣಕ್ಕಿರುವ ಭಾಗವು ಜಾಮೋರಿನನಿಗೂ ಸಿಕ್ಕಬೇಕೆಂದಾಯಿತು. ಈ ಸಮಯದಲ್ಲಿ ಉಳ್ಳಾಲದ ರಾಣಿಯಾದ ಅಬ್ಬಕ್ಕದೇವಿಯು ಮಂಗಳೂರಿನಿಂದ ಪೋರ್ತುಗೀಸರನ್ನು ಓಡಿಸಿಬಿಡಬೇಕೆಂಬ ಆಸೆಯಿಂದ ಮಂಗಳೂರಿನ ಹತ್ತಿರ ಸಮುದ್ರ ಸಂಚಾರ ಮಾಡುತ್ತಿದ್ದ ಜಾಮೋರಿನನ ಸೇನಾಧಿಪತಿಯಾದ ಕುಟ್ಟಿ ಪೊಕ್ರೆಗೆ ಹೇಳಿಕಳುಹಿಸಿದಳು. ಯುದ್ಧದ ಖರ್ಚನ್ನೆಲ್ಲಾ ತಾನು ಕೊಡು ತ್ತೇನೆಂದು ಒಪ್ಪಿದಳು. ಕುಟ್ಟಿಪೊಕ್ರೆಯು ಸೈನ್ಯವನ್ನು ಮಧ್ಯರಾತ್ರಿ ಮಂಗಳೂರಿನಲ್ಲಿ ಇಳಿಸಿದನು. ಆಗ ಮಂಗಳೂರು ಕೋಟೆಯ ಅಧಿಪತಿ ಯಾಗಿದ್ದ ಡೊನ್ ಎಂಟೋನಿಯೊ ಪೆರೀರನು ನಿದ್ರೆಮಾಡುತ್ತಿದ್ದನು. ಕತ್ತಲೆಯು ಕವಿದಿತ್ತು. ಆಗ ಜಾಮೊರೀನನ ಸೈನಿಕರು ಏಣಿಗಳನ್ನಿಟ್ಟು ಕೋಟೆಯ ಗೋಡೆಯ ಮೇಲಕ್ಕೆ ಹತ್ತಿದರು. ಆಗ ಎಂಟೋನಿಯುನ ಸೇವಕರು ಮನೆಯೊಳಗಿದ್ದ ಬೆಳ್ಳಿ ತುಂಬಿದ ಒಂದು ಪೆಟ್ಟಿಗೆಯನ್ನು ಕಿಟಕಿ ಯಿಂದ ಕೆಳಗೆ ಹಾಕಿದರು. ಅದು ಏಣಿಯ ಮೇಲಿದ್ದವರ ಮೇಲೆ ಬಿದ್ದು ಎಲ್ಲರೂ ಕೆಳಗೆ ಬಿದ್ದರು. ಸೇನಾಧಿಪತಿಗೆ ಈ ಗೌಜಿಯಿಂದ ಎಚ್ಚರಿಕೆ ಯಾಗಿ ಸೈನ್ಯವನ್ನು ಕೂಡಿಸಿ ಜಾಮೋರಿನ ಸೈನಿಕರನ್ನು ಓಡಿಸಿದನು. ಆದರೆ ಅವರು ಓಡಿಹೋಗುವಾಗ ಬೆಳ್ಳಿ ತುಂಬಿದ ಪೆಟ್ಟಿಗೆಯನ್ನು ಹೊತ್ತು ಕೊಂಡು ಹೋದರು.

ಕ್ರಿ. ಶ. 1571ರಲ್ಲಿ ಪೋರ್ತುಗೀಸರಿಗೆ ಬಾರ್ಸೆಲೋರಿನಲ್ಲಿ ಕೋಟೆಯನ್ನು ಕಟ್ಟಲಿಕ್ಕೆ ತೋಳಾರ ಅರಸನು ಒಪ್ಪಿಗೆ ಕೊಟ್ಟಿದ್ದರೂ ಪೋರ್ತುಗೀಸರ ಹಾವಳಿಯು ಕಡಿಮೆಯಾಗಲಿಲ್ಲ. ತೋಳಾರ ಅರಸನು ಇದಕ್ಕಾಗಿ ಸಿಟ್ಟುಗೊಂಡು 6000 ಸೈನಿಕರೊಡನೆ ಬಂದು ಬಾರ್ಸೆಲೋರ ಕೋಟೆಗೆ ಮುತ್ತಿಗೆಹಾಕಿದನು. ಕೋಟೆಯ ಸೇನಾಧಿಪತಿಯಾಗಿದ್ದ ಲ್ಯಾ. ಗೊನಸಾಲ್ವಿಸ ಡಾ. ಕೆಮರನು, ಗೋವೆಯಿಂದ ಸೈನ್ಯ ಕಳುಹಿಸಿಕೊಡ ಬೇಕಾಗಿ ಹೇಳಿಕಳುಹಿಸಿದನು. ಮತ್ತು ಇವನು ಸೈನ್ಯ ಬರುವ ಮೊದಲೇ ಧೈರ್ಯದಿಂದ 5 ಹಡಗುಗಳಲ್ಲಿರುವ ಸೈನ್ಯದೊಡನೆ ತೋಳಾರ ಅರಸನ ಸಂಗಡ ಯುದ್ಧಕ್ಕೆ ನಿಂತನು. ತೋಳಾರ ಅರಸನು ಯುದ್ಧದಲ್ಲಿ ಸೋತು ಓಡಿಹೋದನು. ಅಷ್ಟರಲ್ಲಿ ಡೊನ್-ಜೊರ್ಗ-ಡಿ-ಮಿನೆಜಸನು 12 ಹಡಗುಗಳಲ್ಲಿ ಸೈನ್ಯವನ್ನು ತೆಗೆದುಕೊಂಡು ಗೋವೆಯಿಂದ ಬಂದನು. ಬರುವಾಗ ಯುದ್ಧವು ನಿಂತಿತ್ತು. ಇವನು ಬಾರ್ಸೆಲೋರಿಗೆ ಮಕ್ಕದಿಂದ ಬಂದಿದ್ದ ಅರಬೀಯರ ಒಂದು ಹಡಗವನ್ನು ಹಿಡಿದನು.

ಕ್ರಿ. ಶ. 1581ರಲ್ಲಿ ಉಳ್ಳಾಲದ ರಾಣಿಯು ಕಪ್ಪಕೊಡದೆ ಇದ್ದುದಕ್ಕಾಗಿ ಪೋರ್ತುಗೀಸರು ಉಳ್ಳಾಲವನ್ನು ಸುಟ್ಟು ಅದರ ಸುತ್ತಲೂ ಇರುವ ಕಾಡುಗಳನ್ನೆಲ್ಲಾ ಕಡಿದುಹಾಕಿದರು. ರಾಣಿಯು ಕಪ್ಪಕೊಡು ವದಕ್ಕೆ ಒಪ್ಪಿದಳು. ಪಣಂಬೂರಿನ ಬಲ್ಲಾಳನೂ ಕಪ್ಪ ಕೊಡದೆ ಇದ್ದುದರಿಂದ ಅಲ್ಲಿಗೂ ಹೋಗಿ ಅವನಿಂದ ಕಪ್ಪವನ್ನು ವಸೂಲು ಮಾಡಿದರು.

ಕ್ರಿ. ಶ. 1617-18ರಲ್ಲಿ ಮಂಗಳೂರನ್ನು ಆಳುತ್ತಿದ್ದ ಬಂಗರಾಜ ನಾದ ಕಾಮರಾಯನು ಪೋರ್ತುಗೀಸರ ಸ್ನೇಹಿತನಾಗಿದ್ದನು. ಆದರೆ ಈ ಸಮಯದಲ್ಲಿ ಕನ್ನಡ ಜಿಲ್ಲೆಯು ಇಕ್ಕೇರಿ ಅರಸರ ಕೈಕೆಳಗಿತ್ತು. ಇಕ್ಕೇರಿ ಅರಸನಾದ ಹಿರಿಯ ವೆಂಕಟಪ್ಪನಾಯಕನು ಪೋರ್ತುಗೀಸರು ತನ್ನ ರಾಜ್ಯದ ಕರಾವಳಿಯ ಪಟ್ಟಣಗಳನ್ನು ಸುಟ್ಟು ನಾಶಮಾಡುತ್ತಾರೆಂದು ಸಿಟ್ಟುಗೊಂಡು, ದೊಡ್ಡ ಸೈನ್ಯದೊಡನೆ ಪೋರ್ತುಗೀಸರ ಸಂಗಡ ಯುದ್ಧಕ್ಕೆ

ಹೊರಟನು. ಸಾಲ್ವದೋರ ರೆಬೆಲೊ ಎಂಬವನು ಪೋರ್ತುಗೀಸರ ಮಂಗಳೂರು ಕೋಟೆಯ ಸೇನಾಧಿಪತಿಯಾಗಿದ್ದನು. ಇಕ್ಕೇರಿಯವರ 11000 ಸೈನ್ಯಕ್ಕೂ ಪೋರ್ತುಗೀಸರಿಗೂ ಮಂಗಳೂರಿನಲ್ಲಿ ಯುದ್ಧವಾಗಿ ವೆಂಕಟಪ್ಪನಾಯಕನು ಸೋತುಹೋದನು. ಪೋರ್ತುಗೀಸರ ಸೈನ್ಯದಲ್ಲಿ 6 ಮಂದಿ ಮಾತ್ರವೇ ಮಡಿದರು. ಬಂಗರಾಜನು ವೆಂಕಟಪ್ಪನಾಯಕನಿಗೆ ಹೆದರಿ ಕಾಸರಗೋಡಿಗೆ ಓಡಿಹೋಗಿ ಕುಂಬಳೆ ಅರಸನ ಮರೆಹೊಕ್ಕಿದ್ದನು. ವೆಂಕಟಪ್ಪನಾಯಕನು ತಿರಿಗಿ ಸೈನ್ಯ ಕೂಡಿಸಿ ಬಂದನು. ಅಂತೋಣಿಯೋ ಡಿ ಸಾಲ್ದಾಂಞನಿಗೂ ಇವನಿಗೂ ಯುದ್ಧವಾಯಿತು. ಡೊನ್ ಫ್ರಾನ್ಸಿಸ-ಡಿ- ಮಿನೆಜಸನು ಹಡಗು ಸೈನ್ಯವನ್ನು ತೆಗೆದುಕೊಂಡು ಗೋವೆಯಿಂದ ಬಂದನು. ಅರಬೀ ಮೂರರು ಬಹಳ ಧೈರ್ಯದಿಂದ ಕಾದಿದರೂ ಸೋತುಹೋದರು. ಈ ನೌಕಾಧಿಪತಿಯು 300 ಮಂದಿ ಪೋರ್ತುಗೀಸ ಸಿಪಾಯಿಗಳನ್ನೂ 1000 ತೊಪಾಸಿ (ಕ್ರೈಸ್ತ ಮತಕ್ಕೆ ಸೇರಿದ ಹಿಂದುಗಳನ್ನು) ಮಂಗಳೂರಲ್ಲಿ ಬಿಟ್ಟು ಗೋವೆಗೆ ಹೋದನು. ಸ್ವಲ್ಪ ಸಮಯದ ನಂತರ ವೆಂಕಟಪ್ಪನಾಯಕನು ಇನ್ನೊಮ್ಮೆ ಸೈನ್ಯ ತೆಗೆದುಕೊಂಡು ಬಂದನು. ಆಗ ಪೋರ್ತುಗೀಸರ ವ್ಯಾಸರೋಯಿಯಾಗಿದ್ದ ಡೊನ್-ಜುವಾನ್ ಕುತ್ತಿಂಞನು ಫ್ರಾನ್ಸಿಸ್-ಡಿ-ಮಿರಾಂದಾ ಒರಿಕ್ಸಿಸ್ ಎಂಬ ಹಡಗುಪಡೆಯವನನ್ನು 8 ಹಡಗಗಳಲ್ಲಿ ಸೈನ್ಯ ಸಹಿತ ಗೋವೆಯಿಂದ ಮಂಗಳೂರಿಗೆ ಕಳುಹಿಸಿದನು. ಎರಡೂ ಕಡೆಯವರಿಗೂ ಕಠಿಣ ಯುದ್ಧವಾಯಿತು. ಪೋರ್ತುಗೀಸರು 800 ಮಂದಿ ಸೈನಿಕರನ್ನೂ ಇಕ್ಕೇರಿ ವೆಂಕಟಪ್ಪನಾಯಕನು 4000 ಮಂದಿಯನ್ನೂ ಕಳಕೊಂಡರು. ಒರಿಕ್ಸಿಸನು ಉಳ್ಳಾಲದ ರಾಣಿಯ ಸರಕು ತುಂಬಿದ ಒಂದು ದೊಡ್ಡ ಹಡಗವನ್ನು ಹಿಡಿದನು. ಇದಕ್ಕಾಗಿ ಸಿಟ್ಟುಗೊಂಡು ರಾಣಿಯು ಇಕ್ಕೇರಿಯವರ ಸಹಾಯಕ್ಕೆ ಮಂಗಳೂರಿಗೆ ದೊಡ್ಡ ಸೈನ್ಯ ಕಳುಹಿಸಿದಳು. ಯುದ್ಧವಾಗಿ ಇಕ್ಕಡೆಯವರಿಗೂ ಬಹಳ ನಷ್ಟವಾಯಿತು.

ಪೋರ್ತುಗೀಸರಿಗೆ ಜಯವಾಗಿ ಅವರು ಮಂಗಳೂರನ್ನು ಸುಟ್ಟರು. ಒರಿಕ್ಷಿಸನು ನಂತರ ಉಳ್ಳಾಲಕ್ಕೆ ಮುತ್ತಿಗೆ ಹಾಕಿದನು; ಆದರೆ ಸೋತು ಹೋದನು. ವೆಂಕಟಪ್ಪನಾಯಕನು 1618ರಲ್ಲಿ ತಿರಿಗಿ 12,000 ಸೈನ್ಯವನ್ನು ತೆಗೆದುಕೊಂಡು ಬಂದು ಮಂಗಳೂರು ಕೋಟೆಗೆ ಮುತ್ತಿಗೆ ಹಾಕಿದನು. ಈ ಯುದ್ಧದಲ್ಲಿ ಪೋರ್ತುಗೀಸರ ಸೇನಾಧಿಪತಿಗಳಾಗಿದ್ದ ಲೂಯಿಜ್ ಡಿ. ಬ್ರಿಟೊ-ಇಮೆಲ್ಲೊ ಮತ್ತು ಡೊನ್ ಪ್ರಾನ್ಸಿಸ್ಕ-ಡಿ ಮಿರಾಂದಾ ಎಂಬವರು ಸತ್ತುಹೋದರು. 180 ಮಂದಿ ಪೋರ್ತುಗೀಸ ಸಿಪಾಯಿಗಳೂ 60 ಮಂದಿ ತೊಪಾಸಿಗಳೂ ಸತ್ತುಹೋದರು. ಕ್ರಿ. ಶ. 1652-53—ಇಕ್ಕೇರಿ ಅರಸನಾದ ಪ್ರಸಿದ್ಧಿಪಡೆದ ಶಿವಪ್ಪನಾಯಕನಿಗೂ ಪೋರ್ತುಗೀಸರಿಗೂ ಯುದ್ಧವು ಪ್ರಾರಂಭವಾಯಿತು. ಶಿವಪ್ಪನಾಯಕನು 1652ರ ಜೂನ್ 14ರಲ್ಲಿ ಕಂಬೊಳಿಯಮ್ ಮತ್ತು ಬಾರ್ಸೆಲೋರ ಪಟ್ಟಣಗಳನ್ನು ಹಿಡಿಯಲಿಕ್ಕೆ 8000 ಸೈನ್ಯವನ್ನೂ 20 ಫಿರಂಗಿಗಳನ್ನೂ ಕಂಬೊಳಿಯಮಿಗೆ ಕಳುಹಿಸಿದನು. ಸೆಪ್ಟಂಬರ 6ರಲ್ಲಿ ಮಂಗಳೂರನ್ನು ಹಿಡಿದನು. 1653ರ ಜನವರಿ 15ಕ್ಕೆ ಪೋರ್ತುಗೀಸರು ಕಂಬೊಳಿಯಮ್ ಹಿಡಿಯಲಿಕ್ಕೆ ಬಂದು ಸೋತುಹೋದರು. ಕೋಟೆಯು ಹಾಳಾಯಿತು. ಪೋರ್ತುಗೀಸರು ಫಿರಂಗಿಗಳನ್ನು ಉಪಾಯದಿಂದ ಕೊಂಡುಹೋದರು. ಕ್ರಿ. ಶ. 1671ನೇ ಫೆಬ್ರುವರಿ 14ರಲ್ಲಿ ಇಕ್ಕೇರಿಯವರಿಗೂ ಪೋರ್ತುಗೀಸರಿಗೂ ಒಂದು ಕರಾರಾಯಿತು. ಶರ್ತಗಳು: (1) ಪೋರ್ತುಗೀಸರು ಮಂಗಳೂರಿನಲ್ಲಿಯೂ ಬಾರ್ಕೂರಿನಲ್ಲಿಯೂ ಭಂಡಸಾಲೆಗಳನ್ನು ಕಟ್ಟಬಹುದು. (2) ಭಂಡಸಾಲೆಯ ಸುತ್ತಲೂ ಜೋಡು ಗೋಡೆಗಳನ್ನು ಕಟ್ಟಬಾರದು. (3) ಎಣ್ಣೆಯ ಗಾಣಗಳನ್ನು ಇಡಕೂಡದು. (4) ಊರಿನ ಅಳತೆ ತೂಕಗಳನ್ನು ಉಪಯೋಗಿಸಬೇಕು. (5) ಪೋರ್ತುಗೀಸರ ಅಳತೆ ತೂಕಗಳನ್ನು ಉಪಯೋಗಿಸಬಾರದು. (6) ಊರಿನ ಜನರನ್ನು ಕ್ರೈಸ್ತಮತಕ್ಕೆ ಸೇರಿಸ

ಕೂಡದು. (7) ಬ್ರಾಹ್ಮಣರನ್ನೂ ದನಗಳನ್ನೂ ಕೊಲ್ಲಬಾರದು. (8) ವ್ಯಾಪಾರದ ಮೇಲೆ ಸುಂಕ ಕೊಡತಕ್ಕದ್ದು. (9) ಇಕ್ಕೇರಿಯವರಿಗೆ ಮದ್ದು ಗುಂಡುಗಳನ್ನು ಕ್ರಯಕ್ಕೆ ಒದಗಿಸಿ ಕೊಡತಕ್ಕದ್ದು. (10) ಇಕ್ಕೇರಿಯವರ ಶತ್ರುಗಳಿಗೆ ಪೋರ್ತುಗೀಸರು ಸಹಾಯ ಮಾಡಬಾರದು. ಕ್ರಿ. ಶ. 1678ರ ಡಿಸೆಂಬರ 15ರಲ್ಲಿ ಇಕ್ಕೇರಿಯವರಿಗೂ ಪೋರ್ತುಗೀಸರಿಗೂ ಯುದ್ಧವಾಗಿ ಇಕ್ಕೇರಿಯವರು ಸೋತು ಒಂದು ಕರಾರಾಯಿತು. ಶರ್ತಗಳು: (1) ಇಕ್ಕೇರಿಯವರು ಪೋರ್ತುಗೀಸರಿಗೆ ಯುದ್ಧದ ಖರ್ಚಿಗಾಗಿ 30 ಸಾವಿರ 'ಸಿರಾಫಿನು'ಗಳನ್ನು ಕೊಡಬೇಕು (2) 1500 ಚೀಲ ಅಕ್ಕಿ ಕೊಡತಕ್ಕದ್ದು (3) ಅರಬಿಯವರ ಭಂಡಸಾಲೆಗಳನ್ನು ಕೆಡವಿಹಾಕಬೇಕು. (4) ಇಗರ್ಜಿಗಳನ್ನು ಕಟ್ಟಲಿಕ್ಕೆ ಬಿಡತಕ್ಕದ್ದು. (5) ಭಟ್ಕಲ ಮತ್ತು ಕಲ್ಯಾಣಪುರ ಊರುಗಳಲ್ಲಿ ವ್ಯಾಪಾರ ಮಾಡುವ ಪೂರ್ಣ ಹಕ್ಕನ್ನು ಪೋರ್ತುಗೀಸರಿಗೆ ಕೊಡತಕ್ಕದ್ದು. ಕ್ರಿ. ಶ. 1705ರ ಜನವರಿ 19ರಲ್ಲಿ ಇಕ್ಕೇರಿಯವರಿಗೂ ಇವರಿಗೂ ಒಂದು ಕರಾರಾಯಿತು. ಶರ್ತಗಳು: ಯಾವವೆಂದರೆ, ಇಕ್ಕೇರಿಯವರು 1500 ಚೀಲ ಅಕ್ಕಿಯನ್ನೂ ಭಂಡಸಾಲೆ ಕಟ್ಟಲಿಕ್ಕೆ ಕಲ್ಲುಗಳನ್ನೂ ಕೊಡಬೇಕು. ಕ್ರಿ. ಶ. 1713ರಲ್ಲಿ ಪೋರ್ತುಗೀಸರು ಕಲ್ಯಾಣಪುರವನ್ನೂ ಬಾರ್ಕೂರನ್ನೂ ಸುಟ್ಟರು. ಕ್ರಿ. ಶ. 1714ರಲ್ಲಿ ಇಕ್ಕೇರಿ ಬಸವಪ್ಪನಾಯಕನಿಗೂ ಪೋರ್ತುಗೀಸರಿಗೂ ಒಂದು ಕರಾರಾಯಿತು. ಅದರ ಪ್ರಕಾರ (1) ಇಕ್ಕೇರಿಯವರು 1500 ವರಹಗಳನ್ನೂ 3150 ಚೀಲ ಅಕ್ಕಿಯನ್ನೂ ಕೊಡಬೇಕು. (2) ಪ್ರತಿ ವರ್ಷವೂ 2900 ಮುಡಿ ಕಜೆ ಅಕ್ಕಿಯನ್ನೂ 400 ಮುಡಿ ಮಸ್ಕತಿ ಅಕ್ಕಿಯನ್ನೂ ಪೋರ್ತುಗೀಸರಿಗೆ ಇಕ್ಕೇರಿಯವರು ಕ್ರಯಕ್ಕೆ ಕೊಡಬೇಕು. (3) ಅರಬಿ ಸಾಹುಕಾರರು ಕನ್ನಡ ಜಿಲ್ಲೆಯ ಯಾವದೊಂದು ಬಂದರದಲ್ಲಿಯಾಗಲಿ ಭಂಡಸಾಲೆಗಳನ್ನು ಕಟ್ಟಿ ವ್ಯಾಪಾರ ಮಾಡಕೂಡದು. (4) ಪೋರ್ತುಗೀಸರು ಕನ್ನಡ ಜಿಲ್ಲೆಯ ಯಾವ

ಬಂದರದಲ್ಲಿಯಾದರೂ ಇಗರ್ಜಿಗಳನ್ನು ಕಟ್ಟಬಹುದು. (5) ಪೋರ್ತುಗೀಸರು ಹಿಂದೂ ಹೆಂಗಸರನ್ನು ಮದುವೆಮಾಡಿಕೊಳ್ಳಕೂಡದು. (6) ಜನರನ್ನು ಗುಲಾಮರಾಗಿ ಮಾಡಿಕೊಳ್ಳಕೂಡದು. (8) ಹಿಂದೂಗಳನ್ನು ಕ್ರೈಸ್ತ ಮತಕ್ಕೆ ಸೇರಿಸಕೂಡದು. (8) ಇಕ್ಕೇರಿಯವರು ವರುಷಕ್ಕೆ ಒಂದಾವರ್ತಿ 2 ಹಡಗುಗಳನ್ನು ಪಾರ್ಸಿಕೊಲ್ಲಿಯಲ್ಲಿರುವ ಒರ್ಮುಜಿಗೆ ಕಳುಹಿಸಿ ಕುದುರೆಗಳನ್ನು ಅಲ್ಲಿಂದ ತರಿಸಬಹುದು. ಕ್ರಿ. ಶ. 1714ರ ನಂತರ ಇಂಗ್ಲೀಷರೂ ಫ್ರೆಂಚರೂ ವ್ಯಾಪಾರದಲ್ಲಿ ಮುಂದೊತ್ತಿ ಬಂದುದರಿಂದ ಪೋರ್ತುಗೀಸರ ಪ್ರಾಬಲ್ಯವು ಕಡಿಮೆಯಾಯಿತು. ಈಗ ದಕ್ಷಿಣ ಕನ್ನಡ ಜಿಲ್ಲೆಯಲಿ ಪೋರ್ತುಗೀಸರಿಗೆ ಒಂದೇ ಒಂದು ಸ್ಥಳವಾದರೂ ಇಲ್ಲ. ಗೋವೆಯಲ್ಲಿರುವ ಪೋರ್ತುಗೀಸ ವ್ಯಾಸರೋಯಿಗೆ ಸಹ ಇಲ್ಲಿಯ ರೋಮನ್ ಕಥೋಲಿಕರ ಮೇಲೆ ಏನೊಂದು ಅಧಿಕಾರವೂ ಇಲ್ಲ.

# 19ನೇ ಅಧ್ಯಾಯ.

## ಇಕ್ಕೇರಿ ಅರಸರು.

ವಿಜಯನಗರದ ರಾಜ್ಯಭಾರದ ಕಡೆಯ ಭಾಗದಲ್ಲಿ ಕೆಳದಿ ಗ್ರಾಮದ ಗ್ರಾಮಾಧಿಪತಿಯೂ, ವೀರಶೈವಮತಾವಲಂಬಿಯೂ ಆದ ಬಸವಪ್ಪನೆಂಬವನು ಒಂದು ಸಣ್ಣ ರಾಜ್ಯವನ್ನು ಸ್ಥಾಪಿಸಿದನು. ಇವನ ಹೆಂಡತಿಯಾದ ಬಸವಾಂಬೆ ಎಂಬವಳಲ್ಲಿ ಇವನಿಗೆ ಚೌಡಪ, ಭದ್ರಪ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಬಸವಪ್ಪನು ಕಾಲವಾದ ನಂತರ ಚೌಡಪನಿಗೆ ಒಂದು ನಿಕ್ಷೇಪ ಕಟಾಹವೂ ನಾಗಮುರಿ ಎಂಬ ಕತ್ತಿಯೂ ಸಿಕ್ಕಿದವು. ಗ್ರಾಮಸ್ಥರು ಇವನನ್ನು ಆಶ್ರಯಿಸಿಕೊಳ್ಳಲಾರಂಭಿಸಿದರು. ವಿಜಯನಗರದಲ್ಲಿ ಆಳುತ್ತಿದ್ದ ಇಮ್ಮಡಿ

ನರಸಿಂಗರಾಯನು ಈ ಅಣ್ಣ ತಮ್ಮಂದಿಯರನ್ನು ತನ್ನ ಸಹಾಯ ಕರಾಗಿ ಮಾಡಿಕೊಂಡು ಇವರಿಗೆ ಕೆಳದಿ, ಇಕ್ಕೇರಿ, ಚಂದ್ರಗುತ್ತಿ, ಪೆರ್ಬಯಲು, ಎಲಗಳ, ಮೊದುಕ, ಕಲಸೆ, ಲಾತವಡಿ ಎಂಬ ಎಂಟು ಮಾಗಣೆಗಳನ್ನು ಕೊಟ್ಟು ಚೌಡಪನಿಗೆ ಶಾ. ಶ. 1422ನೇ ಸಿದ್ಧಾರ್ಥಿ ಸಂ|ರದ ಮಾಘ ಶು| ೩ರಲ್ಲಿ ಕೆಳದಿಪುರದಲ್ಲಿ ಪಟ್ಟಾಭಿಷೇಕ ಮಾಡಿಸಿದನು. ಚೌಡಪನು ತನ್ನ ಕುಲದೇವರಾದ ಕೆಳದಿ ರಾಮೇಶ್ವರ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿಸಿ ತಾನು ವಾಸವಾಗಿದ್ದ ಪಳ್ಳಿಬಯಲು ಗ್ರಾಮವನ್ನು ಅದಕ್ಕೆ ಉಂಬಳಿಯಾಗಿ ಬಿಟ್ಟನು. ಅನಂತರ ಇಕ್ಕೇರಿಯಲ್ಲಿ ಒಂದು ಅರಮನೆಯನ್ನೂ, ಕೋಟೆಯನ್ನೂ ಕಟ್ಟಿಸಿ, ಪ್ರಜೋತ್ಪತ್ತಿ ಸಂ|ರದ ಮಾಘ ಶುದ್ಧ ೫ರಲ್ಲಿ ಇಕ್ಕೇರಿ ಅರಮನೆಯನ್ನು ಪ್ರವೇಶಿಸಿ ಕೆಳದಿ ಚೌಡಪನಾಯಕನೆಂಬ ಹೆಸರಿನಿಂದ ಶ್ರೀಮುಖ ಸಂ|ರದ ಶ್ರಾವಣ ಶುದ್ಧ ೨ರ ವರೆಗೆ ರಾಜ್ಯವಾಳಿ ಶಿವಸಾಯುಜ್ಯವನ್ನು ಪಡೆದನು.

2. **ಸದಾಶಿವರಾಯನಾಯಕ:**— ಕ್ರಿ. ಶ. 1514—1546. ಚೌಡಪನ ತರುವಾಯ ಅವನ ಮಗನಾದ ಸದಾಶಿವರಾಯನಾಯಕ ನಿಗೆ ಶಾ. ಶ. 1436ನೇ ಶ್ರೀಮುಖ ಸಂ|ರದ ಶ್ರಾವಣ ಶು| ೩ರಲ್ಲಿ ಇಕ್ಕೇರಿ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ಇವನಿಗೆ ದೊಡ್ಡ ಸಂಕಣ್ಣನಾಯಕ ಚಿಕ್ಕ ಸಂಕಣ್ಣನಾಯಕ ಎಂಬ ಇಬ್ಬರು ಮಕ್ಕಳಿದ್ದರು. ಇವನು ಕೃಷ್ಣದೇವರಾಯನಿಗೆ ಅನೇಕ ವಿಧಗಳಲ್ಲಿ ಸಹಾಯಮಾಡು ತ್ತಿದ್ದನು. ಚಂದ್ರಗುತ್ತಿಯ ಸಾಳುವನಾಯಕನನ್ನೂ ಬಂಕಾಪುರದ ಮಾದಣ ಒಡೆಯನನ್ನೂ ಕಾಸರಗೋಡು ವರೆಗೆ ಇರುವ ಎಲ್ಲಾ ತುಳು ಅರಸರನ್ನೂ ತಲೆ ಎತ್ತದಂತೆ ಮಾಡಿ ವಿಜಯನಗರಕ್ಕೆ ಸಲ್ಲುವ ಕಪ್ಪವು ಸರಿಯಾಗಿ ಸಿಕ್ಕುವ ಹಾಗೆ ಮಾಡಿದನು. ಕಲ್ಯಾಣದುರ್ಗ, ಕಲ್ಬುರ್ಗೆಯ ಕೋಟೆಯ ನಾಯಕರನ್ನೂ ಜಯಿಸಿದುದಕ್ಕಾಗಿ

ಕೃಷ್ಣದೇವರಾಯನು ಇವನಿಗೆ ಇಮ್ಮಡಿ ಸದಾಶಿವ, ಕೋಟಿಕೋಲಾಹಲ ಮುಂತಾದ ಬಿರುದುಗಳನ್ನು ಕೊಟ್ಟನು.

ಇವನು ಕೆಳದಿ ರಾಮೇಶ್ವರ ದೇವಸ್ಥಾನದ ನಂದಿ ಮಂಟಪವನ್ನು ಪೂರ್ಣ ಶಿಲೆಯಿಂದಲೇ ಕಟ್ಟಿಸಿ, ರಾಮೇಶ್ವರನ ಎಡಭಾಗದಲ್ಲಿ ಪಾರ್ವತಿಯ ಪ್ರತಿಮೆಯನ್ನು ಪ್ರತಿಷ್ಠಿಸಿದನು. ಕೆಳದಿಯಲ್ಲಿ ಒಂದು ಜಂಗಮ ಮಠವನ್ನೂ, ಅರಗದ ಕುಶಾವತೀ ನದೀತೀರದಲ್ಲಿ ಬ್ರಾಹ್ಮಣರಿಗಾಗಿ ಸದಾಶಿವಪುರವೆಂಬ ಅಗ್ರಹಾರವನ್ನೂ, ಸದಾಶಿವ ದೇವಸ್ಥಾನವನ್ನೂ ಕಟ್ಟಿಸಿ ಅವುಗಳಿಗೆ ಭೂಮಿ ಉಂಬಳಿ ಬಿಟ್ಟನು. ಇವನು ಜಿಗ್ನಿಪಾಳ್ಯಕ್ಕೆ ಹೋದಾಗ ದೇಹಾಲಸ್ಯದಿಂದ ವಿಶ್ವಾವಸು ಸಂ|ರದ ವೈಶಾಖ ಶು| ೪ರಲ್ಲಿ ಕಾಲವಾಗಲು, ಅಲ್ಲಿಯೇ ಸಮಾಧಿಯಾಯಿತು.

**3. ದೊಡ್ಡ ಸಂಕಣ್ಣನಾಯಕ:—ಕ್ರಿ. ಶ. 1546—1559.** ಇವನಿಗೆ ಶಾ. ಶ. 1486ನೇ ವಿಶ್ವಾವಸು ಸಂ|ರದ ವೈಶಾಖ ಶು| ೫ರಲ್ಲಿ ಇಕ್ಕೇರಿ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ಇವನಿಗೆ ರಾಮರಾಜನಾಯಕ ಮತ್ತು ವೆಂಕಟಪ್ಪನಾಯಕರೆಂಬ ಇಬ್ಬರು ಮಕ್ಕಳಿದ್ದರು. ವಿಜಯನಗರದ ರಾಮರಾಯನು ಈ ಮಕ್ಕಳಿಗೆ ಹಾಲು ಬೆಣ್ಣೆಗಾಗಿ ಮಾಸೂರು, ಮಾಲೂರು, ಹೊಳೆಹೊನ್ನೂರು ಸೀಮೆಗಳನ್ನೂ ಗೋವೆಯ ಕೋಟೆಯನ್ನೂ ಹಿಡಿದುದಕ್ಕಾಗಿ ಮಾಳೇನ ಹಳ್ಳಿ ಹೋಬಳಿಯನ್ನೂ ಉಂಬಳಿಯಾಗಿ ಬಿಟ್ಟು ಭುಜಕೀರ್ತಿ ಎಂಬ ಬಿರುದನ್ನು ಕೊಟ್ಟನು. ಸ್ವಲ್ಪ ಸಮಯದ ನಂತರ ರಾಜ್ಯಭಾರದ ಕೆಲಸವನ್ನು ತಮ್ಮನಾದ ಚಿಕ್ಕ ಸಂಕಣ್ಣನಾಯಕನಿಗೆ ಒಪ್ಪಿಸಿ ಜಂಗಮ ವೇಷ ಧಾರಣೆಮಾಡಿ, ನಾಗರಮುರಿ ಎಂಬ ಪಟ್ಟದ ಕತ್ತಿಯನ್ನೂ ನಾಲ್ಕು ಮಂದಿ ಊಳಿಗದವರನ್ನೂ ಕರಕೊಂಡು ಹೊರಟು ಶಿವಗಂಗಾ, ಚಿದಂಬರ, ಕುಂಭಕೋಣ, ರಾಮೇಶ್ವರ ಮುಂತಾದ ಯಾತ್ರಾಸ್ಥಳಗಳಲ್ಲಿ ಸಂಚರಿಸಿ ಡಿಲ್ಲಿಗೆ ಬಂದು ಅಂಕುಶಖಾನನನ್ನು ಮಲ್ಲಯುದ್ಧದಲ್ಲಿ ಗೆದ್ದು ಡಿಲ್ಲಿಯ ಅರಸನಿಂದ ಭೂಮಿ ಉಂಬಳಿ ಪಡೆದು, ಡಿಲ್ಲಿ,

ಆಗ್ರಾ, ಮಾಣಿಕ್ಯಪುರ, ಪ್ರಯಾಗ ಮುಂತಾದ ಊರುಗಳಲ್ಲಿ ಜಂಗಮ ಮಠಗಳನ್ನೂ ಕಾಶಿಯಲ್ಲಿ ದಶಾಶ್ವಮೇಧಗಟ್ಟದ ಹತ್ತಿರ ಜಂಗಮ ಘಾಟಿಯನ್ನೂ ಕಟ್ಟಿಸಿದನು. ಅಲ್ಲಿಂದ ಹೊರಟು ಗಯಾ, ನೀಲಕಂಠ, ನೇಪಾಳ, ಕೇತಾರವನ, ಹರಿದ್ವಾರ, ಕಾಶ್ಮೀರ, ಕುರುಕ್ಷೇತ್ರ, ಪೈಟಣ, ಪಂಪಾಕ್ಷೇತ್ರಗಳನ್ನು ನೋಡಿ ಇಕ್ಕೇರಿಗೆ ಬಂದನು. ಅನಂತರ ರಾಜ್ಯಭಾರದ ಕೆಲಸವನ್ನು ವಹಿಸಿಕೊಂಡು ಆಲುವಳ್ಳಿ ಗ್ರಾಮದ ಕೆರೆಯಲ್ಲಿದ್ದ ವೀರ ಭದ್ರಮೂರ್ತಿಯನ್ನು ಕೆಳದಿ ರಾಮೇಶ್ವರ ದೇವಸ್ಥಾನದ ದಕ್ಷಿಣ ದಿಕ್ಕಿಗೆ ಪ್ರತಿಷ್ಠಿಸಿ, ಅಘೋರೇಶ್ವರ ದೇವಸ್ಥಾನವನ್ನೂ ಕಟ್ಟಿಸಿದನು. ಬಳಿಕ ಭಟ್ಕಲದ ಭೈರಾದೇವಿಯನ್ನೂ, ಜಿಂಬೂರ ವಿರೂಪಣನನ್ನೂ, ಕಾರ್ಕಳ ಬೈರರಸ ಒಡೆಯನನ್ನೂ ಜಯಿಸಿದನು. ಇವನು ಕಾಳಯುಕ್ತಿ ಸಂ|ರದ ಆಶ್ವೀಜ ಶು| ೪ರಲ್ಲಿ ಇಕ್ಕೇರಿ ಅರಮನೆಯಲ್ಲಿ ಕಾಲವಾದನು.

4. **ಚಿಕ್ಕ ಸಂಕಣ್ಣನಾಯಕ:**—ಕ್ರಿ. ಶ. 1559-1571. ಇವನಿಗೆ ಶಾ. ಶ. 1481ನೇ ಕಾಳಯುಕ್ತಿ ಸಂ|ರದ ಆಶ್ವೀಜ ಶು| ೫ರಲ್ಲಿ ಇಕ್ಕೇರಿ ಅರಮನೆಯಲ್ಲಿ ಪಟ್ಟವಾಯಿತು. ಇವನಿಗೆ 2ನೇ ಹೆಂಡತಿಯಲ್ಲಿ ಸಿದ್ಧಪ್ಪನಾಯಕನೆಂಬ ಮಗನು ಹುಟ್ಟಿದನು. ಸೋದೆಯ ಹಿರಿಯ ಅರಸಪನಾಯಕನೂ ಭೈರಾದೇವಿಯೂ ತನಗೆ ಸರಿಯಾಗಿ ಕಪ್ಪ ಕೊಡುವ ಹಾಗೆ ಮಾಡಿದನು. ವಿಜಯನಗರದ ಸದಾಶಿವ ರಾಯನು ಇವನಿಗೆ ಕನ್ನಡ ಜಿಲ್ಲೆಯನ್ನು ಬಿಟ್ಟುಕೊಟ್ಟನು ತಾಳಿಕೋಟೆಯ ಯುದ್ಧದ ನಂತರ ವಿಜಯನಗರದ ಕೋಶಾಧ್ಯಕ್ಷನಾದ ಚಿನ್ನಭಂಡಾರದ ನಾರ್ಣಪ್ಪಯ್ಯನನ್ನು ತನ್ನ ಕೋಶಾಧ್ಯಕ್ಷನಾಗಿ ನಿಯಮಿಸಿ ಕ್ರಿ ಶ. 1565ರಿಂದ ಸ್ವತಂತ್ರವಾಗಿ ಆಳಲಾರಂಭಿಸಿದನು. ಪ್ರಮೋದೂತ ಸಂ|ರದ ಕಾರ್ತಿಕ ಶು| ೪ರಲ್ಲಿ ರಾಮರಾಜನಾಯಕನು ಇವನನ್ನು ತಿವಿದುಕೊಂದನು.

**5. ರಾಮರಾಜನಾಯಕ:—ಕ್ರಿ. ಶ. 1571—1583.** ವನಿಗೆ ಶಾ. ಶ. 1493ನೇ ಪ್ರಮೋದೂತ ಸಂ|ರದ ಕಾರ್ತಿಕ ಶು| ರಲ್ಲಿ ಇಕ್ಕೇರಿ ಅರಮನೆಯಲ್ಲಿ ಪಟ್ಟವಾಯಿತು. ಇವನಿಗೆ ವೀರ ಡೆಯ ಮತ್ತು ಬಸವಲಿಂಗನಾಯಕ ಎಂಬ ಇಬ್ಬರು ಮಕ್ಕಳಿದ್ದರು. ವನು ಚಿತ್ರಭಾನು ಸಂ|ರದ ಮಾರ್ಗಶಿರ ಶು| ೪ರಲ್ಲಿ ಗೆರಸಪ್ಪೆಯಲ್ಲಿ ಾಲವಾದನು. ಅಲ್ಲಿಯೇ ಸಮಾಧಿಯಾಯಿತು.

**6. ಹಿರಿಯ ವೆಂಕಟಪ್ಪನಾಯಕ:—ಕ್ರಿ. ಶ. 1583—** 630. ಇವನಿಗೆ ಶಾ. ಶ. 1505ನೇ ಚಿತ್ರಭಾನು ಸಂ|ರದ ಾರ್ಗಶಿರ ಶು| ೫ರಲ್ಲಿ ಇಕ್ಕೇರಿ ಅರಮನೆಯಲ್ಲಿ ಪಟ್ಟಾಭಿಷೇಕ ಾಯಿತು. ಇವನಿಗೆ ಭದ್ರಪನೆಂಬ ಮಗನೂ ಹಿರಿಯಮ್ಮನೆಂಬ ಗಳೂ ಇದ್ದರು. ಭದ್ರಪನಿಗೆ ರಾಮಲಿಂಗನಾಯಕ ಮತ್ತು ವೀರ ದ್ರಪ ಎಂಬ ಇಬ್ಬರು ಮಕ್ಕಳಿದ್ದರು. ವೆಂಕಟಪ್ಪನಾಯಕನು ಡಹಳ್ಳಿಯನ್ನು ಹಿಡಿದು ಅಲ್ಲಿ ಒಂದು ಅರಮನೆಯನ್ನೂ ಕೋಟೆಯನ್ನೂ ಂಡೇಶ್ವರ ದೇವಸ್ಥಾನವನ್ನೂ ಕಟ್ಟಿಸಿ, ಆ ಊರಿಗೆ ಆನಂದಪುರ ಂಬ ಹೆಸರನ್ನಿಟ್ಟನು. ಇಕ್ಕೇರಿ ಅರಮನೆಯಲ್ಲಿ ವಿಚಿತ್ರ ತರದ ಾಟಕ ಶಾಲೆಯನ್ನು ಕಟ್ಟಿಸಿದನು. ಆ ಮೇಲೆ ಹೊಳೆಯ ಪಟ್ಟಣ, ಾತಳ, ಬೆಳವಂದೂರು, ಹೆಬ್ಬೆ, ಮುಂಡುಗಡ್ಡೆ, ಹೊಸ್ನೂರು, ಹಾರನ ಳ್ಳಿ ಸೀಮೆಯ ನಾಯಕರನ್ನು ಜಯಿಸಿ ತನ್ನ ಸಾಮಂತರಾಜರಾಗಿ ಾಡಿ ಆ ಸ್ಥಳಗಳಲ್ಲಿ ಬಲವಾದ ಕೋಟೆಗಳನ್ನು ಕಟ್ಟಿಸಿ ತನ್ನ ಸೈನ್ಯವನ್ನು ವುಗಳಲ್ಲಿ ಇಟ್ಟನು. ತುಳು ಜೈನರಾಜರೊಡನೆ ಕೌಲುಮಾಡಿಕೊಂಡು ಾಜ್ಯದ ಭದ್ರತೆಗಾಗಿ ಕ್ರಿ. ಶ. 1608ರಲ್ಲಿ ಬಾರಕೂರು, ಕಲ್ಯಾಣಪುರ, ುಲ್ಲಿಕಾರ್ಜುನಗಿರಿ, ಕಂಡಲೂರು, ಕಾರ್ಕಳ, ಮೂಲಿಕೆ, ಕೊಡೆ ಾಲ, ಮೂಡಬಿದರೆ, ಉಳ್ಳಾಲ, ಮಂಜೇಶ್ವರ, ಕುಂಬಳೆ, ಕಾಸರ ೋಡು, ಚಂದ್ರಗಿರಿ, ಫಣಿಯಾಲ, ಕುಂಡಂಕುಯಿ, ಬಂದ್ಯಡ್ಕ, ಕಾಂತ ುಂಗಲ, ಬೆಳ್ಳಾರೆ, ಮೂಡುಕೊಡೆಯಾಲ (ಬೆಳ್ಳಾರೆಯ ಹತ್ತಿರ)

ಶಿಶಿಲ, ಪುದುಬೆಟ್ಟು, ಕೊಲ್ಲೂರುಬಾಚಿ, ಕಿದೂಟು ಈ ಸ್ಥಳಗಳಲ್ಲಿ ಬಲವಾದ ಕೋಟೆಗಳನ್ನು ಕಟ್ಟಿಸಿ ರಾಮರಾಜಕ್ಷತ್ರಿಯರೆಂಬ ಜನರನ್ನು ಈ ಕೋಟೆಗಳಲ್ಲಿ ಸೈನಿಕರಾಗಿ ನಿಯಮಿಸಿದನು.

ಕ್ರಿ. ಶ. 1614ರಲ್ಲಿ ಹೂವಿನ ಕೆರೆಗ್ರಾಮವನ್ನು ಉಡುಪಿ ಕೃಷ್ಣದೇವಸ್ಥಾನಕ್ಕೆ ಉಂಬಳಿಬಿಟ್ಟನು. ಕ್ರಿ. ಶ. 1616ರಲ್ಲಿ ಕೊಲ್ಲೂರು ಮುಕಾಂಬಿಕೆಯ ದೇವಸ್ಥಾನವನ್ನು ವಿಸ್ತಾರವಾಗಿ ಶಿಲಾಮಯವಾಗಿ ಕಟ್ಟಿಸಿ ಅದಕ್ಕೆ ಉಂಬಳಿ ಉತ್ತಾರ ಬಿಟ್ಟನು. ಕ್ರಿ. ಶ. 1618ರಲ್ಲಿ ತುಳು ಜೈನರಾಜರು ಕೊಡಬೇಕಾದ ಕಪ್ಪವನ್ನು ಸೇಕಡಾ 50ರಂತೆ ಏರಿಸಿದನು. ಫಲಮರಗಳ ಮೇಲೂ, ತೆಂಗಿನ ಮರಗಳ ಮೇಲೂ ಕಂದಾಯವನ್ನು ಹೊರಿಸಿದನು.

ಕ್ರಿ. ಶ. 1620ರಲ್ಲಿ ಕೌಲಿಯದುರ್ಗವನ್ನು ಹಿಡಿದು ಅದಕ್ಕೆ ಭುವನಗಿರಿಯ ದುರ್ಗವೆಂದು ಹೆಸರಿಟ್ಟು ಅದರ ಒಳಗಡೆ ಒಂದು ದೊಡ್ಡ ಅರಮನೆಯನ್ನೂ ಅದರ ಹೊರಗಡೆ ಕಲ್ಯಾಣಮಹಲು ಎಂಬ ಬೆಟ್ಟದರಮನೆಯನ್ನೂ, ಅಗ್ರಹಾರವನ್ನೂ ಕಟ್ಟಿಸಿದನು. ಶ್ರಂಗೇರಿಯ ಮಠವನ್ನು ಶಿಲೆಯಿಂದಲೇ ಕಟ್ಟಿಸಿ ಜೀರ್ಣೋದ್ಧಾರ ಮಾಡಿಸಿದನು. ಕ್ರಿ. ಶ. 1622ರಲ್ಲಿ ಕಳಸದ ಭೈರವರಾಯನು ಭೈರವನ ಬೆಟ್ಟದಲ್ಲಿ ಕೋಟೆಯನ್ನು ಕಟ್ಟಿಸಿ ಶ್ರಂಗೇರಿ ಮಠವನ್ನು ಫಿರಂಗಿ ಹಾರಿಸಿ ಹಾಳುಮಾಡುತ್ತಿರಲು ಅವನನ್ನು ಜಯಿಸಿ ಅವನು ವಶಮಾಡಿಕೊಂಡ ಮಠದ ಭೂಮಿಯನ್ನು ತಿರಿಗಿ ಮಠಕ್ಕೆ ಕೊಡಿಸಿದನು. ಕ್ರಿ. ಶ. 1623ರಲ್ಲಿ ಇಂಡಿಯದ ಪಶ್ಚಿಮ ಕರಾವಳಿಯಲ್ಲಿ ಪ್ರಯಾಣಮಾಡಿದ ಡೆಲ್ಲಾವೆಲ್ಲಿ ಎಂಬವನು ಕನ್ನಡ ಜಿಲ್ಲೆಯಲ್ಲಿ ಸಂಚರಿಸಿ ರಾಜ್ಯಭಾರವು ಒಳ್ಳೇ ರೀತಿಯಲ್ಲಿ ನಡಿಯುತ್ತಿತ್ತೆಂದು ಬರೆದಿರುತ್ತಾನೆ.

ವೆಂಕಟಪ್ಪ ನಾಯಕನು ಭದ್ರರಾಜಪುರವನ್ನೂ, ಸದಾಶಿವ ಸಾಗರವನ್ನೂ ಒಂದು ಗಣಪತಿ ದೇವಸ್ಥಾನವನ್ನೂ ಕಟ್ಟಿಸಿದನು.

ವರದಾನದೀ ತೀರದಲ್ಲಿ ವಿಶ್ವೇಶ್ವರ ದೇವಸ್ಥಾನವನ್ನೂ ವಿಶ್ವನಾಥ ಪುರವೆಂಬ ಅಗ್ರಹಾರವನ್ನೂ ಕಟ್ಟಿಸಿದನು. ಗಣೇಶಧೀಕ್ಷಿತರಿಂದ ವಾಜಿಪೇಯಯಾಗವನ್ನು ಮಾಡಿಸಿದನು. ಕೆಳದಿಗೂ ಸದಾಶಿವ ಸಾಗರಕ್ಕೂ ಮಧ್ಯದಲ್ಲಿ ಒಂದು ಅರಮನೆಯನ್ನೂ ಒಂದು ಕೆರೆ ಯನ್ನೂ ಕಟ್ಟಿಸಿ, ಅದರ ಸುತ್ತಲೂ ಹೂದೋಟಗಳನ್ನೂ ಮಾಡಿಸಿದನು. ತುಂಗಭದ್ರಾ ನದೀತೀರದಲ್ಲಿ ಭೀಮನಕಟ್ಟೆ ಎಂಬಲ್ಲಿ ತನ್ನ ತಾಯಿಯ ಹೆಸರಲ್ಲಿ ವೀರಾಂಬಾಪುರವೆಂಬ ಅಗ್ರಹಾರವನ್ನೂ, ಶರಾವತೀ ನದೀ ತೀರದಲ್ಲಿ ಭಾರಂಗಿಯಲ್ಲಿ ತನ್ನ ಪತ್ನಿಯ ಹೆಸರಲ್ಲಿ ಅಭಿನವ ವೀರಾಂಬಾಪುರವೆಂಬ ಅಗ್ರಹಾರವನ್ನೂ ಕಟ್ಟಿಸಿ ಆ ಬ್ರಾಹ್ಮಣರಿಗೆ ಉಂಬಳಿಬಿಟ್ಟನು. ಆ ಬಳಿಕ ಬಾರಕೂರು, ಬೆಣ್ಣೆಕುದುರು, ಮಾರಗ, ಶಂಕರನಾರಾಯಣ, ಸಾಗರ, ಕಾರ್ಕಳ, ಮೂಡಬಿದರೆ, ಗುರುಪುರ, ಬಂಟವಾಳ, ಬೋಳೂರು, ಕೊಡೆಯಾಲ ಈ ಊರುಗಳಲ್ಲಿ ದೊಡ್ಡದಾದ ಜಂಗಮ ಮಠಗಳನ್ನು ಕಟ್ಟಿಸಿ ಅವುಗಳಿಗೆ ಭೂಮಿ ಉಂಬಳಿಬಿಟ್ಟನು.

ಚಿಕ್ಕ ಸಂಕಣ್ಣನಾಯಕನ ಮಗನಾದ ಸಿದ್ದಪ್ಪನಾಯಕನು ಕಾಲ ವಾಗಲು ಸ್ವಲ್ಪ ಸಮಯ ವೈರಾಗ್ಯವನ್ನು ತಾಳಿ ಅಧ್ಯಾತ್ಮಿಕ ನೀತಿ ಶಾಸ್ತ್ರಗಳನ್ನು ಓದಿಸಿ ಕೇಳುತ್ತಾ ಇದ್ದನು. ಸಂಸ್ಕೃತ ಶಿವಗೀತೆ ಯನ್ನು ಕವಿ ತಿರುಮಲ ಭಟ್ಟನಿಂದ ವಾರ್ಧಿಕ್ಯಷಟ್ಪದಿಯಲ್ಲಿ ಕರ್ಣಾಟಕ ಕಾವ್ಯವಾಗಿಯೂ, ಶಿವಾಷ್ಟಪದಿ, ಗೀತಗೌರಿವರ ಗ್ರಂಥಗಳನ್ನೂ ಬರೆಸಿ ದನು. ರಂಗನಾಥಧೀಕ್ಷಿತನಿಂದ ತಂತ್ರಸಾರವೆಂಬ ಗ್ರಂಥದ ವ್ಯಾಖ್ಯಾನ ವನ್ನೂ, ಅಶ್ವಪಂಡಿತನಿಂದ **ಮಾಪ್ರಿಯ** ಎಂಬ ಅಶ್ವಶಾಸ್ತ್ರವನ್ನೂ ಬರೆಸಿದನು ರಾಮಾನುಜಶೃಂಗಿಗೂ, ಭಟ್ಟೋಜಧೀಕ್ಷಿತನಿಗೂ ರಾಜ ಸಭೆಯಲ್ಲಿ ತರ್ಕವು ನಡೆದು ರಾಮಾನುಜಶೃಂಗಿಯು ಸೋತುಹೋಗಲು ಅವನಿಗಿರುವ ವಿಶಿಷ್ಟಾದ್ವೈತ ಸ್ಥಾಪನಾಚಾರ್ಯ ಎಂಬ ಬಿರುದನ್ನು ತಾನೇ ಧರಿಸಿಕೊಂಡನು. ಅನಂತರ ತನ್ನ ರಾಜ್ಯದಲ್ಲಿರುವ ಎಲ್ಲಾ ಸೀಮೆದೇವಸ್ಥಾನಗಳಲ್ಲಿಯೂ ರಥೋತ್ಸವಗಳೂ, ಶ್ರಾವಣಮಾಸದಲ್ಲಿ ಹೂಪೂಜೆಗಳೂ, ಕಾರ್ತಿಕಮಾಸದಲ್ಲಿ ಲಕ್ಷದೀಪಾರಾಧನೆಯೂ ಸರಿ ಯಾಗಿ ನಡೆಯುವಂತೆ ನಿಯಮಿಸಿ, ಗುರುಲಿಂಗ, ಜಂಗಮಾದಿ ಪೂಜಾ ನಿರತನಾಗಿ, ಶೃಂಗೇರಿಯ ಧರ್ಮ, ಬಾಳೆಹಳ್ಳಿ ಗುರುಗಳ ಧರ್ಮ,

ಎಲ್ಲಾ ಮರಗಳ ಉಂಬಳಿ ಉತ್ತಾರ, ಹಳ್ಳಿದಾಸರ ಧರ್ಮ ಮುಂತಾದು ಸರಿಯಾಗಿ ನಡೆಯುವಂತೆ ನಿಯಮಿಸಿ ರಾಜ್ಯಭಾರಮಾಡುತ್ತಾ ಇದ್ದು ಶುಕ್ಲ ಸಂ|ರದ ಕಾರ್ತಿಕ ಬ| ೩೦ರಲ್ಲಿ ಕಾಲವಾದನು

7. **ವೀರಭದ್ರಪ್ಪನಾಯಕ:**—ಕ್ರಿ. ಶ. 1630—1646 ಇವನು ವೆಂಕಟಪ್ಪನಾಯಕನ ಮಗನಾದ ಭದ್ರಪ್ಪನ 2ನೇ ಮಗನು. ಇವನಿಗೆ ಶಾ. ಶ. 1552ನೇ ಶುಕ್ಲ ಸಂ|ರದ ಮಾರ್ಗಶಿರ ಶು| ೧೧ರಲ್ಲಿ ಇಕ್ಕೇರಿ ಅರಮನೆಯಲ್ಲಿ ಪಟ್ಟವಾಯಿತು. ಕ್ರಿ. ಶ. 1631ರಲ್ಲಿ ಪೋರ್ತುಗೀಸರಿಗೂ ಇವನಿಗೂ ಒಂದು ಕರಾರಾಗಿ ಪೋರ್ತುಗೀಸರು ಬಸುರೂರಲ್ಲಿ ಒಂದು ಕೋಟೆಯನ್ನು ಕಟ್ಟಿಸಿದರು. ಶಿವಾಜಿಯು ಗೋವೆಯನ್ನು ಸುಲಿಗೆಮಾಡಲು ಅನೇಕ ಮಂದಿ ಕ್ರೈಸ್ತರು ಬಸುರೂರಿಗೆ ಓಡಿಬಂದರು. ಶಿವಾಜಿಯು ಬಸುರೂರನ್ನು ಸುಲಿಗೆಮಾಡಿದನು. ಈ ರೀತಿಯಲ್ಲಿ ಸುಲಿಗೆಯಾಗಲಿಕ್ಕೆ ಪೋರ್ತುಗೀಸ ಪಾದರಿಗಳೇ ಕಾರಣರೆಂದು ತಿಳಿದು ಕ್ರೈಸ್ತ ದೇವಾಲಯಗಳಲ್ಲಿ ಊರಿನ ಪಾದರಿಗಳನ್ನೆ ನೇಮಿಸಬೇಕೆಂದು ಅಪ್ಪಣೆಕೊಟ್ಟನು. ಇವನು ಶಾ. ಶ. 1560ನೆ ಈಶ್ವರ ಸಂ|ರದ ಪುಷ್ಯ ಬ| ೧೧ರ ವರೆಗೆ ಇಕ್ಕೇರಿಯಲ್ಲಿ ರಾಜ್ಯವಾ... ಅರಮನೆಯಲ್ಲಿ ಕಲಹಗಳುಂಟಾಗಲು ಭುವನಗಿರಿಯ ದುರ್ಗದ ಅರಮನೆಯಲ್ಲಿ ಬಂದು ನಿಂತನು. ಲಕ್ಷ್ಮೀಪತಿಯೂ, ರಾಣದಾರ ತಿಮ್ಮಣ್ಣನು ಕೂಡಿ ರಾಮರಾಜನಾಯಕನ ಮಗನಾದ ವೀರಬಡೆಯನಿಗೆ ಇಕ್ಕೇರಿಯಲ್ಲಿ ಪಟ್ಟಗಟ್ಟಿದರು. ವೀರಭದ್ರಪ್ಪನಾಯಕನು ಕೌಲಿಯ ದುರ್ಗವನ್ನೂ ಆನಂದಪುರವನ್ನೂ ಹಿಡಿದು 3 ತಿಂಗಳ ವರೆಗೆ ಅಲ್ಲಿಯೆ ಇದ್ದನು ಅಷ್ಟರಲ್ಲಿ ವೀರಬಡೆಯನು ಕಾಲವಾಗಲು ಸದಾಶಿವನಾಯಕನು ಪಟ್ಟದಲ್ಲಿ ಕೂತುಕೊಳ್ಳುವಷ್ಟರಲ್ಲಿ ವೀರಭದ್ರಪ್ಪನಾಯಕನ ಇಕ್ಕೇರಿಗೆ ಬಂದನು. ಸದಾಶಿವನಾಯಕನು ಸೋದೆಗೆ ಓಡಿಹೋಗಲ ಅಲ್ಲಿಯೇ ಕಾಲವಾದನು. ಅನಂತರ ಚಿಕ್ಕಪ್ಪನಾದ ವೆಂಕಟಪ್ಪ ನಾಯಕನಿಗೆ ಬೊಕ್ಕಸದ ಅಧಿಕಾರವನ್ನೂ ಶಿವಪ್ಪನಾಯಕನಿಗೆ ಚಂದಾವರ ಸೀಮೆಯ ಅಧಿಕಾರವನ್ನೂ ಕೊಟ್ಟನು. ತನ್ನ ಮೊದಲನೇ ಹೆಂಡತಿಯಾದ ವೀರಮ್ಮಾಜಿಯು ಕಾಲವಾಗಲು ವೈರಾಗ್ಯವನ್ನು ತಾಳಿ, 2ನೆ

ಯಲ್ಲಿಯೆ ಇದ್ದನು. ಆಗ ಮಂತ್ರಿಗಳು ಶಿವಪ್ಪನಾಯಕನನ್ನು ಚಂದಾವರದಿಂದ ಕರಸಿ ರಾಜ್ಯಭಾರವನ್ನು ಅವನಿಗೆ ಒಪ್ಪಿಸಿದರು. ಸೇನೆಯ ದಿವಾನ ಪುಟ್ಟಣ್ಣನು ಶಿವಪ್ಪನಾಯಕನನ್ನು ಕೊಲ್ಲಿಸಬೇಕೆಂದು ಸಾಧಿಸುತ್ತಿದ್ದನು. ವೀರಭದ್ರಪ್ಪನಾಯಕನನ್ನು ತಿರಿಗಿ ಇಕ್ಕೇರಿಗೆ ಕರಕೊಂಡು ಹೋಗಬೇಕೆಂದು ಶಿವಪ್ಪನಾಯಕನು ಗುಲವಾಡಿಗೆ ಬಂದನು. ದಿವಾನ ಪುಟ್ಟಣ್ಣನು ದಡಪೆಗಟ್ಟೆಯ ಹತ್ತರ ಸೈನ್ಯದೊಡನೆ ಯುದ್ಧಕ್ಕೆ ಸಿದ್ಧನಾಗಿದ್ದನು. ವೀರಭದ್ರಪ್ಪನಾಯಕನು ಇದನ್ನು ತಿಳಿದು ಗುಲವಾಡಿಗೆ ಬಂದು ಇಬ್ಬರನ್ನೂ ಸಮಾಧಾನಪಡಿಸಿ ಬಿದನೂರಿಗೆ ಕಳುಹಿಸಿದನು.

ಇವನು ಶಾ. ಶ 1554ರಲ್ಲಿ ಉಪ್ಪಾರಗೇರಿ ಮಠಕ್ಕೂ ಶಾ. ಶ 1561ರಲ್ಲಿ ಉಡುಪಿ ಕೃಷ್ಣದೇವಸ್ಥಾನಕ್ಕೂ ಶಾ. ಶ. 1563ರಲ್ಲಿ ಕೊಲ್ಲೂರು ಮುಕಾಂಬಿಕೆ ದೇವಸ್ಥಾನಕ್ಕೂ ಉಂಬಳಿ, ಉತ್ತಾರಬಿಟ್ಟಿದ್ದಾನೆಂದೂ ಕೆಲವು ತಾಮ್ರ ಶಾಸನಗಳಿಂದ ಕಾಣುತ್ತದೆ.

ವೀರಭದ್ರಪ್ಪನಾಯಕನು ಶಾ. ಶ. 1568ನೇ ಪಾರ್ಥಿವ ಸಂ|ರದ ಮಾರ್ಗಶಿರ ಶು| ೧೧ರಲ್ಲಿ ಕಂಡಲೂರಿನಲ್ಲಿ ಕಾಲವಾಗಲು ಕೊಲ್ಲೂರಮ್ಮಾಜಿಗೂ ಇವನೊಡನೆ ಅಲ್ಲಿಯೇ ಸಮಾಧಿಯಾಯಿತು.

8. **ಶಿವಪ್ಪನಾಯಕ:**—ಕ್ರಿ. ಶ. 1646—1661. ಇವನು ಚಿಕ್ಕ ಸಂಕಣ್ಣನಾಯಕನ ಮಗ ಸಿದ್ಧಪ್ಪನಾಯಕನ ಮಗನು. ಇವನಿಗೆ ಶಾ. ಶ. 1568ನೇ ಪಾರ್ಥಿವ ಸಂ|ರದ ಮಾರ್ಗಶಿರ ಶು| ೧೨ರಲ್ಲಿ ವೇಣುಪುರದ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ಇವನಿಗೆ ಲಿಂಗಮ್ಮಾಜಿ, ಶಾಂತಮ್ಮಾಜಿ, ಭದ್ರಮ್ಮಾಜಿ, ನಾಗಮ್ಮಾಜಿ, ಬಸವ ಲಿಂಗಮ್ಮಾಜಿ ಎಂಬ 5 ಮಂದಿ ಪತ್ನಿಯರೂ, ಸಿದ್ಧಮ್ಮಾಜಿ, ಭದ್ರಪ್ಪನಾಯಕ, ಬಸವ ಲಿಂಗಮ್ಮಾಜಿ, ಸೋಮಶೇಖರನಾಯಕ ಎಂಬ ನಾಲ್ವರು ಮಕ್ಕಳೂ ಇದ್ದರು.

ಶಿವಪ್ಪನಾಯಕನು ಬೇರೆ ಬೇರೆ ದೇಶಗಳಿಂದ ವರ್ತಕರನ್ನೂ, ಬೇಸಾಯಗಾರರನ್ನೂ, ಗಂಧಿಗರನ್ನೂ, ಕೊಂಕಣಸ್ಥ ಮುಂತಾದ ಮಹಾನಾಡವರನ್ನೂ, ಚಿತ್ರಕ, ಶಿಲ್ಪಕ, ವರ್ಣಕ, ಕಾಂಸಗಾರ, ತೈಲಯಂತ್ರಿಕ,

ಕುಂಭಕಾರ, ಸ್ವರ್ಣಕಾರ, ವಸ್ತ್ರಶೋಧಕ ಮುಂತಾದ ಕೈವಾಡ ಕರಣ ಚಮತ್ಕಾರ, ವಿಶಾರದರಾದ ನಾನಾ ಜಾತಿಯವರನ್ನು ಕರೆತರಿಸಿ ವೇಣು ಪುರದಲ್ಲಿ ಅವರಿಗೆ ಮನೆಗಳನ್ನು ಕಟ್ಟಿಸಿಕೊಟ್ಟನು.

ಕ್ರಿ. ಶ. 1647—1651ರ ವರೆಗಿನ ಕಾಲವನ್ನು ಅಲ್ಲಲ್ಲಿ ದಂಗೆ ಎಬ್ಬಿಸಿದ ವಸುಧಾರೆಯ ಕೋಟೆಯ ನಾಯಕನನ್ನೂ ಸಕ್ಕರೆ ಪಟ್ಟಣದ ನಾಯಕನನ್ನೂ ಜಯಿಸುವುದರಲ್ಲಿ ಕಳೆದನು. ಕ್ರಿ. ಶ. 1657ರಲ್ಲಿ ಹಾಸನ ಮತ್ತು ಬೇಲೂರು ಕೋಟೆಗಳನ್ನು ಸ್ವಾಧೀನಪಡಿಸಿಕೊಂಡನು. ಕ್ರಿ ಶ. 1651ರಲ್ಲಿ ಅರ್ಕಳವನ್ನು ಪೋರ್ತುಗೀಸರಿಗೆ ಬಿಟ್ಟುಕೊಟ್ಟನು. ಕ್ರಿ ಶ. 1657ರಲ್ಲಿ ಪೋರ್ತುಗೀಸರ ಬಾಧೆಯು ಹೆಚ್ಚಾಗಲು ಅವರ ಸ್ವಾಧೀನವಿದ್ದ ಕುಂದಾಪುರ, ಗಂಗೊಳ್ಳಿ, ಹೊನ್ನಾವರ, ಮಂಗಳೂರು ಕೋಟೆಗಳನ್ನು ಸ್ವಾಧೀನಪಡಿಸಿಕೊಂಡನು. ಕಟ್ಟೆಕೀಲೂರನ್ನೂ (ಉಳ್ಳಾ ಲದ ಹತ್ತರ) ಸ್ವಾಧೀನಪಡಿಸಿಕೊಂಡು ಬೇಕಲ, ಚಿತ್ತಾರಿ, ಚಂದ್ರ ಗಿರಿಯ ಕೋಟೆಗಳನ್ನು ಬಲಪಡಿಸಿದನು. ಕೊಲತನಾಡು ಅರಸನ ಸ್ವಾಧೀನವಿದ್ದ ಅಲವತ್ತುನಾಡನ್ನೂ ಪಡುವನ್ನಾಡನ್ನೂ ಸ್ವಾಧೀನಪಡಿಸಿ ಕೊಂಡು ಅವನಿಂದ ಕಪ್ಪಕಾಣಿಕೆಯನ್ನು ಪಡೆದನು. ಕ್ರಿ. ಶ. 1656 ರಲ್ಲಿ ಬಿಜಾಪುರದ ಸುಲ್ತಾನನು ಕಾಲವಾಗಲು ಅವನು ತನ್ನ ರಾಜ್ಯ ದಿಂದ ವಶಮಾಡಿಕೊಂಡ ಇಕ್ಕೇರಿ, ಸೊರಬ, ಉಡುಗಣಿ, ಮಹಾದೇವ ಪುರ, ಅಂಬಲಿಗೊಳ್ಳ ಮುಂತಾದ ಕೋಟೆಗಳನ್ನು ಸ್ವಾಧೀನಪಡಿಸಿ ಕೊಂಡನು. ಸೋದೆಯ ಅರಸನಾದ ಮದುಲಿಂಗ ನಾಯಕನನ್ನು ಶರಣಾ ಗತನನ್ನಾಗಿ ಮಾಡಿದನು.

ಅನಂತರ ತುಂಗಭದ್ರಾನದೀ ತೀರದಲ್ಲಿ ತೀರ್ಥರಾಜಪುರಿ ಕ್ಷೇತ್ರ ದಲ್ಲಿ ಶ್ರೋತ್ರಿಯ ಬ್ರಾಹ್ಮಣರಿಗೆ ಕಾಲಪುರುಷ, ತುಲಾಪುರುಷದಾನ, ಗೋದಾನಗಳನ್ನು ಕೊಟ್ಟು, ಕಾಶಿಯಲ್ಲಿ ವಿಶ್ವೇಶ್ವರ ಪೂಜೆಗೆ ಉಂಬಳಿ ಉತ್ತಾರಬಿಟ್ಟು ಸೋಮವಾರ ವ್ರತವನ್ನು ಆಚರಿಸುತ್ತಾ ಇದ್ದನು. ತನ್ನ ರಾಜ್ಯದಲ್ಲಿ ಧಾನ್ಯದ ಕಣಜಗಳನ್ನು ಅಲ್ಲಲ್ಲಿ ಉಂಟುಮಾಡಿ ಬೇಸಾಯಗಾರರಿಗೆ ಬೀಜವನ್ನೂ ಎತ್ತುಗಳನ್ನೂ ಹಣವನ್ನೂ ಸಾಲ ವಾಗಿ ಕೊಟ್ಟು ಬೇಸಾಯವು ಒಳ್ಳೇ ರೀತಿಯಲ್ಲಿ ನಡೆಯುವ ಹಾಗೆ

ಮಾಡಿ ಧಾನ್ಯವು ಪರದೇಶಕ್ಕೆ ಹೋಗಿ ಊರಿನಲ್ಲಿ ಬರಗಾಲವು ಬಾರದ ಹಾಗೆ ಮಾಡಿದನು. ಸರಕಾರಕ್ಕೆ ರೈತರಿಂದ ಬರಬೇಕಾದ ಹಣಕ್ಕಿಂತಲೂ ಹೆಚ್ಚು ಹಣವನ್ನು ತನ್ನ ಕೈಕೆಳಗಿನ ಅಧಿಕಾರಿಗಳು ಕೂಡಿಸದ ಹಾಗೂ ಭಂಡಾರದ ಹಣವು ದುರ್ವ್ಯಯವಾಗದ ಹಾಗೂ ನಿಯಮಿಸಿದನು.

ಕ್ರಿ. ಶ. 1659ರಲ್ಲಿ ಸೋದೆ, ಬಿಳಿಗಿ, ತರಿಕೆರೆ ನಾಯಕರನ್ನು ಸಹಾಯಕ್ಕೆ ಕರೆದು ಮೈಸೂರಿನವರು ವಶಮಾಡಿಕೊಂಡ ರಾಯಬೇಲೂರನ್ನು ಸ್ವಾಧೀನಪಡಿಸಿ ಅದನ್ನು ಅದರ ಅರಸನಿಗೆ ಬಿಟ್ಟುಕೊಟ್ಟನು. ಅನಂತರ ಕಾವೇರಿ ನದಿಗೆ ಸೇತುವೆಯನ್ನು ಕಟ್ಟಿಸಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆಹಾಕುವಷ್ಟರಲ್ಲಿ ದೇಹಾಲಸ್ಯ ಉಂಟಾದ್ದರಿಂದ ವೇಣುಪುರಕ್ಕೆ ಹಿಂತಿರಿಗಿ ಬಂದು ಶಾರ್ವರಿ ಸಂ|ರದ ಆಶ್ವೀಜ ಶು| ೧ರಲ್ಲಿ ಶಿವ ಸಾಯುಜ್ಯವನ್ನು ಪಡೆದನು.

**9. ಕಿರಿಯ ವೆಂಕಟಪ್ಪನಾಯಕ:**—ಕ್ರಿ. ಶ. 1661-1662. ಶಿವಪ್ಪನಾಯಕನ ತರುವಾಯ ಅವನ ತಮ್ಮನಾದ ವೆಂಕಟಪ್ಪನಾಯಕನಿಗೆ ಶಾ. ಶ. 1583ನೇ ಶಾರ್ವರಿ ಸಂ|ರದ ಆಶ್ವೀಜ ಶು| ೧ರಲ್ಲಿ ವೇಣುಪುರದ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ಬೇಲೂರು ಶ್ರೀರಂಗರಾಯನ ರಾಜ್ಯದ ರಕ್ಷಣೆಗಾಗಿ ದಳವಾಯಿ ಶಿವಲಿಂಗನಾಯಕನನ್ನು ಸೈನ್ಯ ಸಹಿತ ಬೇಲೂರಿನಲ್ಲಿ ನಿಲ್ಲಿಸಿದನು. ಭದ್ರಪ್ಪನಾಯಕನ ಅಳಿಯ ಶಿವಲಿಂಗನಾಯಕನು ವೆಂಕಟಪ್ಪನಾಯಕನನ್ನು ಚಟ್ಟೋಜಟ್ಟಿ ಎಂಬವನಿಂದ ಪ್ಲವ ಸಂ|ರದ ಭಾದ್ರಪದ ಶು| ೧೪ರಲ್ಲಿ ಕೊಲ್ಲಿಸಿದನು. ಇವನಿಗೂ ಇವನ ಪತ್ನಿ ಮುಲ್ಲಮ್ಮಾಜಿಗೂ ಬಿದರೂರು ಹಳೆಯ ಮಠದ ಸ್ಥಳದಲ್ಲಿ ಸಮಾಧಿಯಾಯಿತು.

**10. ಭದ್ರಪ್ಪನಾಯಕ:**—ಕ್ರಿ. ಶ. 1662—1664. ಇವನು ಶಿವಪ್ಪನಾಯಕನ ಹಿರಿಯ ಮಗನು. ಇವನಿಗೆ ಶಾ ಶ. 1584ನೇ ಪ್ಲವ ಸಂ|ರದ ಭಾದ್ರಪದ ಶು| ೧೫ರಲ್ಲಿ ವೇಣುಪುರದ ಅರಮನೆಯಲ್ಲಿ ಪಟ್ಟವಾಯಿತು.

ಮೈಸೂರಿನವರು ಹೆಬ್ಬಾಳೆಯ ಕೋಟೆಯನ್ನೂ, ನರಸಿಂಹಪುರವನ್ನೂ, ಕೊಣನೂರು ಕೋಟೆಯನ್ನೂ ಹಿಡಿಯಲು ದಳವಾಯಿ ಶಿವಲಿಂಗನಾಯಕನು ಅವುಗಳನ್ನು ಪುನಃ ಹಿಡಿದನು. ಆದರೆ ಯುದ್ಧದಲ್ಲಿ ಮಡಿದುಹೋದನು. ಭದ್ರಪ್ಪನಾಯಕನು ತಾನೆ ಯುದ್ಧರಂಗಕ್ಕೆ ಹೋಗಿ ಮೈಸೂರಿಗೆ ಸೇರಿದ ಹೊನವಳ್ಳಿ, ಚಿಕ್ಕನಾಯಕನ ಹಳ್ಳಿ, ಕಂದುಗೆರೆ, ಬೂದಿವಾಳ ಸೀಮೆಗಳನ್ನು ಹಿಡಿದನು ವಸುಧಾರೆಯ ಸೀಮೆಯನ್ನು ಇವನು ಹಿಡಿಯಲು ಆ ಅರಸನು ಬಿಜಾಪುರಕ್ಕೆ ದೂರು ಕೊಟ್ಟನು. ಆ ಸುಲ್ತಾನನ ಸೈನ್ಯವು ಬಂದು ವೇಣುಪುರದ ಕೋಟೆಯನ್ನೂ ಭುವನಗಿರಿಯ ಅರಮನೆಯನ್ನೂ ಹಿಡಿಯಲು ಹೂವಯ್ಯನೆಂಬ ನಿಯೋಗಿಯನ್ನು ಕಳುಹಿಸಿ ಸುಲ್ತಾನನೊಡನೆ ಒಪ್ಪಂದವನ್ನು ಮಾಡಿದನು.

ಅನಂತರ ತೀರ್ಥಹಳ್ಳಿಯಲ್ಲಿ ತುಲಾಪುರುಷದಾನ ಮುಂತಾದ ಧರ್ಮಕಾರ್ಯಗಳನ್ನು ಮಾಡಿ ತಂದೆಯಾದ ಶಿವಪ್ಪನಾಯಕನ ಹೆಸರಲ್ಲಿ ಶಿವರಾಜಪುರವೆಂಬ ಅಗ್ರಹಾರವನ್ನೂ ಚಿಕ್ಕತಂದೆ ವೆಂಕಟಪ್ಪನಾಯಕನ ಹೆಸರಲ್ಲಿ ವೆಂಕಟಪುರವೆಂಬ ಅಗ್ರಹಾರವನ್ನೂ ತನ್ನ ಹೆಸರಲ್ಲಿ ಭದ್ರರಾಜಪುರವೆಂಬ ಅಗ್ರಹಾರವನ್ನೂ ಕಟ್ಟಿಸಿ ಬ್ರಾಹ್ಮಣರಿಗೆ ಧಾರೆಯೆರೆದು ಕೊಟ್ಟನು. ಮುಳುವಾಗಿಲ ಕೃಷ್ಣಾನಂದ ಸ್ವಾಮಿಗಳ ಮಠಕ್ಕೆ ಹೆಚ್ಚು ಭೂಮಿ ಉಂಬಳಿಬಿಟ್ಟನು. ತನ್ನ ರಾಜ್ಯದಲ್ಲಿ ಹೆಚ್ಚು ಜಂಗಮ ಮಠಗಳನ್ನು ಕಟ್ಟಿಸಿ ಅವುಗಳಿಗೆ ಉಂಬಳಿ ಬಿಟ್ಟನು. ಭಂಡಾರದಿಂದ ಕಾಶಿಯಲ್ಲಿ ನಡಿಯುವ ಧರ್ಮ ಸರಿಯಾಗಿ ನಡಿಯುವ ಹಾಗೆ ನಿಯಮಿಸಿದನು. ಕೊಲ್ಲೂರಿಗೆ ಬಂದು ದೇವರ ದರುಶನಮಾಡಿ ದೇವರಿಗೆ ಭೂಮಿ ಉಂಬಳಿಬಿಟ್ಟು ಬಸರೂರು, ಕೋಟ, ಕೋಟೇಶ್ವರ ದೇವರ ದರುಶನಮಾಡಿ ಶೃಂಗೇರಿಗೆ ಹೋಗಿ ಕಿಗ್ಗದಲ್ಲಿ ಸ್ವಾಮಿಗಳ ದರುಶನ ಮಾಡಿ ಮಠಕ್ಕೆ ಭೂಮಿ ಉಂಬಳಿಬಿಟ್ಟು ವೇಣುಪುರಕ್ಕೆ ಬಂದು ಶೋಭಕೃತು ಸಂ|ರದ ಫಾಲ್ಗುಣ ಶು| ೯ರಲ್ಲಿ ಶಿವಸಾಯುಜ್ಯವನ್ನು ಪಡೆದನು. ಇವನಿಗೂ ಇವನ ಇಬ್ಬರು ಪತ್ನಿಯರಿಗೂ ಬಿದರೂರು ಹಳೆಯ ಮಠದ ಕೊಪ್ಪಲದಲ್ಲಿ ಸಮಾಧಿಯಾಯಿತು.

**11. ಹಿರಿಯ ಸೋಮಶೇಖರ ನಾಯಕ:**—ಕ್ರಿ ಶ 1664-1672. ಇವನು ಶಿವಪ್ಪನಾಯಕನ 5ನೇ ಹೆಂಡತಿ ಬಸವಲಿಂಗಮ್ಮಾಜಿಯ ಮಗನು. ಇವನಿಗೆ ಶಾ. ಶ. 1586ನೇ ಶೋಭಕೃತು ಸಂ|ರದ ಫಾಲ್ಗುಣ ಶು| ೧೦ರಲ್ಲಿ ವೇಣುಪುರದ ಅರಮನೆಯಲ್ಲಿ ಪಟ್ಟವಾಯಿತು. ಇವನು ಕೋಟಪುರದ ಶಿದ್ದಪ್ಪಶೆಟ್ಟಿಯ ಮಗಳು ಚೆನ್ನಮ್ಮಾಜಿಯನ್ನು ಮದುವೆಯಾದನು.

ತರಿಕೆರೆಯ ಹನುಮಪ್ಪನಾಯಕನು ತನ್ನ ಪತ್ನಿಯನ್ನು ಕೊಂದು ಹುಚ್ಚನಂತೆ ನಟಿಸುತ್ತಿರಲು ಅವನನ್ನು ಸೆರೆಯಲ್ಲಿಟ್ಟು ಆವನ ಮಗ ಸೀತಾರಾಮಪ್ಪನಾಯಕನಿಗೆ ಪಟ್ಟಕಟ್ಟಿದನು. ಕನ್ನಡ ಜಿಲ್ಲೆಯಲ್ಲಿ ತುಳುಅರಸರು ಕಪ್ಪಕೊಡದೆ ಇರಲು ಅವರನ್ನು ಸೆರೆಹಿಡಿದು ವೇಣುಪುರಕ್ಕೆ ತರಿಸಿ ಸರಿಯಾಗಿ ಕಪ್ಪಕೊಡುವ ಹಾಗೆ ಕರಾರುಮಾಡಿದನು. ಬರಮನಾಯಕನ ಮಾತನ್ನು ನಂಬಿ ಆನೆಯ ಮದವನ್ನು ಸೇವಿಸಿ ಉನ್ಮದಾವಸ್ಥೆಯುಂಟಾಗಿ ಹೆಂಗಸರನ್ನು ಬಹಳ ಪೀಡಿಸುತ್ತಿದ್ದನು ಸಣ್ಣಯ್ಯನೆಂಬ ಬ್ರಾಹ್ಮಣನು ತನ್ನ ಮಗಳನ್ನು ಕೆಡಿಸಿದ್ದಕ್ಕಾಗಿ ಇವನನ್ನು ಕೊಂದನು. ಇದನ್ನು ಕೇಳಿ ಬಿಜಾಪುರದ ಸುಲ್ತಾನನು ಇಕ್ಕೇರಿ ಸಂಸ್ಥಾನವನ್ನು ಹಿಡಿಯಲು ಬಂದಾಗ ರಾಣಿ ಚೆನ್ನಮ್ಮಾಜಿಯು ಅವನೊಡನೆ ಒಪ್ಪಂದವಮಾಡಿದಳು. ಚೆನ್ನಮ್ಮಾಜಿಯು ಬರಮನಾಯಕನನ್ನು ಕೊಲ್ಲಿಸಿದಳು. ಮೈದುನನಾದ ಬಸವಲಿಂಗನಾಯಕನನ್ನು ಸ್ಥಳಾಂತರಮಾಡಿಸಿ ಅಂಗವಿಕಲಗೊಸಿದಳು. ಈ ಸಮಯದಲ್ಲಿ ಮಲೆಬೋವಿ ಕಂದಾಚಾರದ ಲಕ್ಷ್ಮಯ್ಯ, ವೀರಭದ್ರಯ್ಯ ಮುಂತಾದವರು ಚೆನ್ನಮ್ಮಾಜಿಯನ್ನು ಲಕ್ಷಿಸದೆ ಹೊಸಂಗಡಿ ಕೋಟೆಯಲ್ಲಿ ಸೆರೆಯಲ್ಲಿದ್ದ ಅಂಧಕ ವೆಂಕಟಪ್ಪನ ದಾಸಿಯ ಮಗನಿಗೆ ಶಿವಪ್ಪನಾಯಕನೆಂಬ ಹೆಸರಿಟ್ಟು ವೇಣುಪುರಕ್ಕೆ ಕರತಂದು ರಾಜ್ಯಭಾರವಮಾಡತೊಡಗಿದರು. ಚೆನ್ನಮ್ಮಾಜಿಯು ಭುವನಗಿರಿಯ ಅರಮನೆಯಲ್ಲಿದ್ದು ಕಾಸರಗೋಡು ತಿಮ್ಮಣ್ಣನಾಯಕ, ಸುಬ್ಬನಿಸ ಕೃಷ್ಣಯ್ಯ ಇವರ ಸಹಾಯದಿಂದ ಕುತ್ಸಿತ ಶಿವಪ್ಪನಾಯಕನನ್ನು ಸೆರೆಹಿಡಿದು ಹೊಸಂಗಡಿ ಕೋಟೆಗೆ ಕಳುಹಿಸಿದಳು. ಅನಂತರ ಶಾ. ಶ. 1598ನೆ ವಿರೋಧಿಕೃತು ಸಂ|ರದ ಫಾಲ್ಗುಣ ಶು| ೧೦ರಲ್ಲಿ ಭುವನಗಿರಿಯ ಅರಮನೆಯಲ್ಲಿ ಚೆನ್ನಮ್ಮಾಜಿಗೆ ಪಟ್ಟಾಭಿಷೇಕವಾಯಿತು.

12. **ಚೆನ್ನಮ್ಮಾಜಿ:**—ಕ್ರಿ. ಶ. 1672—1698. ಚೆನ್ನಮ್ಮಾಜಿಯು ಪಟ್ಟವಾದ ಮೇಲೆ ವೇಣೂಪುರದ ಅರಮನೆಗೆ ಬಂದು ಮರಿಯಪ್ಪಶೆಟ್ಟಿಯ ಮಗ ಬಸವಪ್ಪನನ್ನು ಶಾ. ಶ. ೧೫೯೪ನೇ ಪರಿಧಾವಿ ಸಂ|ದ ಶ್ರಾವಣ ಶು| ೧೪ರಲ್ಲಿ ದತ್ತಕ್ಕೆ ತೆಗೆದುಕೊಂಡು ಅವನ ಹೆಸರಿನಲ್ಲಿ ತಾನೇ ರಾಜ್ಯಭಾರಮಾಡುತ್ತಿದ್ದಳು. ಕನ್ನಡ ಜಿಲ್ಲೆಯ ಕಲ್ಯಾಣಪುರದ ಕೋಟೆ (ತೊನಸೆ ಕೋಟೆ)ಯಲ್ಲಿ ಸೆರೆಯಲ್ಲಿದ್ದ ಕುತ್ಸಿತ ಶಿವಪ್ಪನಾಯಕನು ಕೋಟೆಯಿಂದ ತಪ್ಪಿಸಿಕೊಂಡು, ಘಟ್ಟದ ಕೆಳಗಣ ರಾಜ್ಯಕ್ಕೆ ತಾನು ಅಧಿಕಾರಿಯಾಗಬೇಕೆಂದು ಅಪೇಕ್ಷಿಸಿ, ಚೌಟ, ಬಂಗ, ಅಜಿಲ, ಸಾವಂತ ಮುಂತಾದ ಜೈನರಾಜರನ್ನು ಬೋಧಿಸಿ, ಕಾರ್ಕಳ, ಮಲ್ಲಿಕಾರ್ಜುನಗಿರಿ ಮುಂತಾದ ಕೋಟೆಗಳನ್ನು ಸ್ವಾಧೀನಪಡಿಸಿಕೊಂಡಿರಲು, ಚೆನ್ನಮ್ಮಾಜಿಯು ಗಳವಾಯಿ ಭದ್ರಪ್ಪನೊಡನೆ ಸೈನ್ಯವನ್ನು ಕಳುಹಿಸಿ ತುಳುರಾಜ್ಯವನ್ನು ಸ್ವಾಧೀನಪಡಿಸಿ ಕುತ್ಸಿತ ಶಿವಪ್ಪನಾಯಕನನ್ನೂ ಅವನ ಮಕ್ಕಳನ್ನೂ ಕೊಲ್ಲಿಸಿದಳು. ತನ್ನ ಕೈಯಿಂದ ತಪ್ಪಿಹೋದ ವಸುಧಾರೆಯ ಮತ್ತು ಮಿಡಿಜೆಯ ಕೋಟೆಗಳನ್ನು ಕಾಸರಗೋಡು ತಿಮ್ಮನಾಯಕನನ್ನು ಕಳುಹಿಸಿ ಸ್ವಾಧೀನಪಡಿಸಿಕೊಂಡಳು. ಸಿರಸೆ ಮತ್ತು ಸೋದೆಯ ಅರಸರು ದಂಗೆ ಎಬ್ಬಿಸಲು ಅವರನ್ನು ಶರಣಾಗತರನ್ನಾಗಿ ಮಾಡಿದಳು. ಕ್ರಿ. ಶ. 1678ರಲ್ಲಿ ಚೆನ್ನಮ್ಮಾಜಿ ಮತ್ತು ಬಸವಮ್ಮಾಜಿ ಎಂಬ ಇಬ್ಬರು ಕನ್ಯೆಯರನ್ನು ಬಸವಪ್ಪನಾಯಕನಿಗೆ ವಿವಾಹಮಾಡಿಸಿದಳು. ಕ್ರಿ. ಶ. 1680ರಲ್ಲಿ ಬಾಣಾವರ ಕೋಟೆಯನ್ನೂ ಸ್ವಾಧೀನಪಡಿಸಿಕೊಂಡಳು. ಅನಂತರ ಬಸವಪ್ಪನನ್ನು ಕರಕೊಂಡು ಗೋಕರ್ಣ, ಸುಬ್ರಮಣ್ಯ ಯಾತ್ರೆಗಳನ್ನು ಮಾಡಿದಳು. ತನ್ನ ನಾಥನ ಹೆಸರಲ್ಲಿ ತುಂಗಭದ್ರಾ ನದೀತೀರದಲ್ಲಿ ಸೋಮಶೇಖರಪುರವೆಂಬ ಅಗ್ರಹಾರವನ್ನು ಕಟ್ಟಿಸಿ ಅದಕ್ಕೆ ಉಂಬಳಿಬಿಟ್ಟಳು. ಹುಲಿಕೆರೆಯ ಕೋಟೆಯನ್ನು ಹಿಡಿದು ಅದಕ್ಕೆ ತನ್ನ ಹೆಸರಿನಿಂದ ಚೆನ್ನಗಿರಿಯ ಕೋಟೆ ಎಂದು ಹೆಸರಿಟ್ಟಳು. ಕೆಳದಿವೀರಭದ್ರದೇವಸ್ಥಾನವನ್ನು ಜೀರ್ಣೋದ್ಧಾರಮಾಡಿಸಿ ಭೋಗಮಂಟಪದ ಮುಂದುಗಡೆ ಧ್ವಜಸ್ತಂಭ ಸ್ಥಾಪನೆಮಾಡಿಸಿದಳು. ವೇಣೂಪುರದ ಅರಮನೆಯ ಭದ್ರಚಾವಡಿಯನ್ನು ಹೊಸದಾಗಿ ಕಟ್ಟಿಸಿದಳು. ಇವಳು ಗಂಗೊಳ್ಳಿ, ವೆಂಕಟೇಶ ದೇವರಿಗೂ, ಸೇನಾಪುರ ವಿಷ್ಣುದೇವರಿಗೂ, ಉಡುಪಿ

ಕೃಷ್ಣಾಪುರ ಮಠಕ್ಕೂ, ಉಡುಪಿ ಕೃಷ್ಣದೇವರಿಗೂ, ಕೊಲ್ಲೂರು ಮೂಕಾಂಬಿಕೆ ದೇವಸ್ಥಾನಕ್ಕೂ ಉಂಬಳಿ ಉತ್ತಾರಬಿಟ್ಟಿರುತ್ತಾಳೆ. ಕ್ರಿ. ಶ. 1676ರಲ್ಲಿ ಪೊಳಲಿ ರಥವನ್ನು ಕಟ್ಟಿಸಿ, 2 ದಿವಸ ಚಂಡಿನ ಉತ್ಸವವು ಹೆಚ್ಚಿಗೆ ಆಗುವ ಹಾಗೆ ಉಂಬಳಿಬಿಟ್ಟಿರುತ್ತಾಳೆ. ಮಂಗಳೂರು ಮಿಲಾಗ್ರಿ ಇಗರ್ಜಿಯನ್ನು ಕಟ್ಟಲಿಕ್ಕೂ ಸ್ವಲ್ಪ ಸ್ಥಳ ಉಂಬಳಿ ಬಿಟ್ಟಿರುತ್ತಾಳೆ. ಇವಳು ಶಾ. ಶ. ೧೬೨೦ನೇ ಈಶ್ವರ ಸಂ|ದ ಶ್ರಾವಣ ಶು| ೧೪ರಲ್ಲಿ ಕಾಲವಾಗಲು ಕೊಪ್ಪಲದಲ್ಲಿ ಸಮಾಧಿಯಾಯಿತು.

**13. ಹಿರಿಯ ಬಸವಪ್ಪನಾಯಕ:— 1698—1715.** ಇವನು ಚೆನ್ನಾಮ್ಮಾಜಿಯ ಸಾಕಣೆಮಗನು. ಇವನಿಗೆ ಶಾ. ಶ. ೧೬೨೦ನೇ ಈಶ್ವರ ಸಂ|ದ ಶ್ರಾವಣ ಶು| ೧೪ರಲ್ಲಿ ವೇಣುಪುರದ ಅರಮನೆಯಲ್ಲಿ ಪಟ್ಟವಾಯಿತು. ಇವನಿಗೆ ಚೆನ್ನಮ್ಮಾಜಿ, ಚೆನ್ನಬಸವಮ್ಮಾಜಿ, ಚೆನ್ನಮ್ಮಾಜಿ, ವೀರಮ್ಮಾಜಿ ಎಂಬ ನಾಲ್ವರು ಪತ್ನಿಯರು. ಸೋಮಶೇಖರ ಮತ್ತು ಭದ್ರಪ್ಪ ಎಂಬ ಇಬ್ಬರು ಮಕ್ಕಳು. ಮರಾಟೆಯವರ ಹಾವಳಿಯು ಹೆಚ್ಚಾಗಲು ಸಮುದ್ರತೀರದಲ್ಲಿದ್ದ ನವಿಲೆಯ ದುರ್ಗವನ್ನು ಹಿಡಿದು, ಅದಕ್ಕೆ ಬಸವರಾಜ ದುರ್ಗವೆಂದು ಹೆಸರಿಟ್ಟನು. ಮೈಸೂರಿನವರ ವಶವಾಗಿದ್ದ ಅರ್ಕಲಗೋಡು ಕೋಟೆಯನ್ನೂ, ಬಿಜಾಪುರದ ವಶವಾಗಿದ್ದ ಪೆಬ್ರೊಳೆ, ಹೊನ್ನೂರು ಕೋಟೆಯನ್ನೂ ಹಿಡಿದನು. ಕೊಲತ್ತರಸನು ಮೈಸೂರಿನವರ ಸಹಾಯದಿಂದ ಚಂದ್ರಗಿರಿಯ ಕೋಟೆಗೆ ಮುತ್ತಿಗೆ ಹಾಕಲು ಗರಜಿನ ಬಸವಪ್ಪನನ್ನು ಕಳುಹಿಸಿ ಅದನ್ನು ಸ್ವಾಧೀನಪಡಿಸಿಕೊಂಡನು. ಸವಣೂರು ನವಾಬನೊಡನೆ ಒಪ್ಪಂದವನ್ನು ಮಾಡಿದನು. ಮಂತ್ರಿಷಡಕ್ಷರಯ್ಯನಿಂಗ **ಶಿವತತ್ವ ರತ್ನಾಕರ ಸುಭಾಷಿತಸುರದ್ರುಮ** ಎಂಬ ಗ್ರಂಥವನ್ನು ಕರ್ಣಾಟಕ ಸಂಸ್ಕೃತ ಮಿಶ್ರ ಭಾಷೆಯಲ್ಲಿ ಬರೆಸಿದನು. ಇನ್ನೊಬ್ಬರಿಂದ ವೀರಶೈವ ಸಂಜೀವಿನಿ, ವೀರಶೈವ ಧರ್ಮಶಿರೋಮಣಿ ಬರೆಸಿದನು. ಮತ್ತು ಸಂಗಮೇಶ್ವರನಿಂದ ಶಿವಸಹಸ್ರನಾಮ ವ್ಯಾಕ್ಯಾ, ಮರಿತೊಂಟರಾಯನಿಂದ ವೀರಶೈವಾನಂದಚಂದ್ರಿಕೆ ಮುಂತಾದ ಗ್ರಂಥಗಳನ್ನು ಬರೆಸಿದನು. **ಸೂಕ್ತಿಸುಧಾಕರ ಸುಭಾಷಿತ ಸುರದ್ರುಮ** ಎಂಬ ಕಾವ್ಯವನ್ನು ತಾನೆ ಬರೆದು ಸೂರಿನಿಕರಕಲ್ಪದ್ರುಮ

ಎಂಬ ಬಿರುದನ್ನು ಪಡೆದನು. ಇವನು ವೇಣುಪುರದ ನದಿಗೆ ಸೇತುವೆಯನ್ನು ಕಟ್ಟಿಸಿದನು. ಹಾಗು ಹಸಿದು ಬಂದವರಿಗೆ ಅನ್ನವನ್ನು ಕೊಡುವದಕ್ಕಾಗಿ ತನ್ನ ರಾಜ್ಯದಲ್ಲೆಲ್ಲಾ ಗಂಜೀ ಮಠಗಳನ್ನು ಇಡಿಸಿದನು. ತಾಯಿ ಚೆನ್ನಮ್ಮಾ ಜಿಯ ದಿವಸ ವಿಶೇಷ ಕರದಲ್ಲಿ ಅನ್ನದಾನ ವಸ್ತ್ರದಾನಗಳು ನಡೆಯುವ ಹಾಗೆ ಕಟ್ಟಳೆಯನ್ನು ಮಾಡಿ ವೀರಭದ್ರ ದೇವಸ್ಥಾನದ ಕೆಲಸ ಸಂಪೂರ್ಣಮಾಡಿಸಿ ಶಾ. ಶ. 1637ನೇ ಜಯ ಸಂ|ರದ ಆಶ್ವೀಜ ಶು| ೧೦ರಲ್ಲಿ ಕಾಲವಾದನು.

14. **ಸೋಮಶೇಖರನಾಯಕ:—** ಕ್ರಿ. ಶ 1715-1740. ಇವನಿಗೆ ಶಾ. 1637ನೇ ಜಯ ಸಂ|ರದ ಪುಷ್ಯ ಬ| ೧೦ರಲ್ಲಿ ವೇಣು ಪುರದ ಅರಮನೆಯಲ್ಲಿ ಪಟ್ಟವಾಯಿತು. ರಾಜ್ಯಭಾರದ ಸರ್ವಾಧಿಕಾರ ವನ್ನು ಮೋಟಿಗೆ ಮೋನಪ್ಪಶೆಟ್ಟಿಯ ಮಗನೂ, ತನ್ನ ಮಾವನೂ ಆದ ನಿರ್ವಾಣಯ್ಯನಿಗೂ, ಘಟ್ಟದ ಕೆಳಗಣ ರಾಜ್ಯದ ಅಧಿಕಾರವನ್ನು ಬಾರ ಕೂರು ಸೂರಪಯ್ಯನಿಗೂ ಒಪ್ಪಿಸಿಕೊಟ್ಟನು. ಕ್ರಿ. ಶ. 1721ರಲ್ಲಿ ಶೃಂಗೇರಿ ಮಠಕ್ಕೆ ಹೆಚ್ಚು ಸಾಲವಾಗಿರಲು ಅದನ್ನು ತಾನೇ ಕೊಟ್ಟು ತೀರಿಸಿದನು. ಕ್ರಿ. ಶ. 1721ರಲ್ಲಿ ನಿರ್ವಾಣಯ್ಯನ ಕುಮಾರಿ ನೀಲಮ್ಮಾಜಿಯನ್ನು ಮದುವೆಯಾದನು. ಕ್ರಿ. ಶ. 1722ರಲ್ಲಿ ಕೊಲ್ಲೂರು, ಕೆಳದಿಪುರ, ತೀರ್ಥರಾಜಪುರ, ಶೃಂಗೇರಿ, ಸುಬ್ರಮಣ್ಯ, ಕೋಟೇಶ್ವರ, ಬಸರೂರು, ಗೋಕರ್ಣ ಮುಂತಾದ ಊರುಗಳಲ್ಲಿ ಸಂಚರಿಸಿ ದೇವರ ದರುಶನಮಾಡಿ ವೇಣುಪುರಕ್ಕೆ ಬಂದನು. ಕನ್ನಡ ಜಿಲ್ಲೆಯಿಂದ ಇಬ್ಬರು ಬ್ರಾಹ್ಮಣ ಹುಡುಗರನ್ನೂ, ಅವರ ತಾಯಿಯನ್ನೂ ವೇಣುಪುರಕ್ಕೆ ಕರೆತರಿಸಿ ಆ ಹುಡುಗರಲ್ಲಿ ಒಬ್ಬನಿಗೆ ಷಡಕ್ಷರಿ, ಇನ್ನೊಬ್ಬನಿಗೆ ಪಂಚಾ ಕ್ಷರಿ ಎಂಬ ಹೆಸರನ್ನಿಟ್ಟು ಲಿಂಗ ಧಾರಣಮಾಡಿಸಿ, ವಿದ್ಯಾಭ್ಯಾಸಮಾಡಿಸಿ ದನು. ಕ್ರಿ. ಶ. 1734ರಲ್ಲಿ ರಾಣೋಜಿಘೋರಪಡೆಯು ದಂಡೆತ್ತಿಕೊಂಡು ಬರಲು ಅವನೊಡನೆ ಒಪ್ಪಂದಮಾಡಿದನು. ತರಿಕೆರೆ ಮತ್ತು ಹರಪ ನಳ್ಳಿಯ ನಾಯಕರ ಸಾಲವನ್ನು ತಾನೇ ಕೊಟ್ಟು ತೀರಿಸಿದನು. ಕುಂಬ ಳೆಯ ಅರಸನೂ ಕೊಲತ್ತರಸನೂ ಕನ್ನಡ ಜಿಲ್ಲೆಯ ದಕ್ಷಿಣ ಭಾಗವನ್ನು ಸುಲಿಗೆಮಾಡುತ್ತಿರಲು ಕುಂಬಳೆ ಅರಸನನ್ನು ಸೆರೆಹಿಡಿದು ವೇಣುಪುರದ

ಕೋಟೆಯಲ್ಲಿಟ್ಟನು. ಬಿಜಾಪುರದ ವಶವಾಗಿದ್ದ ಅಜ್ಜಂಪುರ ಹೊಳೆಯ ಹೊನ್ನೂರು, ಸಾಸುವೆಹಳ್ಳಿ ಕೋಟೆಗಳನ್ನು ತಿರಿಗಿ ಹಿಡಿದನು. 1735ರಲ್ಲಿ ಮಹಾನವಮಿಯ ಉತ್ಸವಗಳಿಗೆ ಎಲ್ಲಾ ಸಾಮಂತರಾಜರನ್ನು ವೇಣುಪುರಕ್ಕೆ ಕರಸಿ ಸತ್ಕರಿಸಿದನು. ವೇಣುಪುರದ ಪಶ್ಚಿಮದಲ್ಲಿ ಚಂದ್ರಶೇಖರಪುರವನ್ನು ಕಟ್ಟಿಸಿದನು. ಕ್ರಿ. ಶ. 1736ರಲ್ಲಿ ತನ್ನ ಪ್ರಧಾನಿಯಾದ ಕೊಳಾಲದ ವೆಂಕಟಯ್ಯನಿಂದ ಶಂಬೂರಲ್ಲಿ ಸೋಮಶೇಖರಪುರವೆಂಬ ಅಗ್ರಹಾರವನ್ನು ಕಟ್ಟಿಸಿದನು. ಬಂಟವಾಳ, ನಾವೂರು ಗ್ರಾಮದಲ್ಲಿ ತನ್ನ ಪತ್ನಿ ಬಸವಮ್ಮಾಜಿಯ ಹೆಸರಲ್ಲಿ ಬಸವಾಂಬಾಪುರವೆಂಬ ಅಗ್ರಹಾರವನ್ನು ಕಟ್ಟಿಸಿದನು. ವೇಣುಪುರದ ಅರಮನೆಯ ರಾಜಭವಂತಿ, ಹೊಸಭವಂತಿ, ಐದಂಕಣದುಪ್ಪರಿಗೆ, ವಸಂತಮಹಾಲ, ಚಂದ್ರಮಹಾಲುಗಳನ್ನು ದೊಡ್ಡದಾಗಿ ಕಟ್ಟಿಸಿದನು. ವೇಣುಪುರದ ಹತ್ತರ ನಾಗಪಟ್ಟಣವನ್ನೂ, ಭುವನಗಿರಿದುರ್ಗದ ಅರಮನೆಯಲ್ಲಿ ಗಾಳಿ ಉಪ್ಪರಿಗೆಯನ್ನೂ ಕಟ್ಟಿಸಿದನು. ಕ್ರಿ. ಶ. 1737ರಲ್ಲಿ ಶೃಂಗೇರಿ, ಮೇಲ್ಬಂಗಾಡಿ, ಸುಬ್ರಮಣ್ಯ, ಮಂಗಳೂರು, ಕೊಡೆಯಾಲ, ಬಸರೂರು, ಹೊಸಂಗಡಿ, ಶಂಕರನಾರಾಯಣ, ಕುಂದಾಪುರ, ಬೈಂದೂರು, ಗೋಕರ್ಣ, ಕೊಲ್ಲೂರು, ಸಾಗರ, ಆನಂದಪುರ, ಮರಾಪುರ ಊರುಗಳನ್ನು ಸಂಚರಿಸಿ ಶಿವಮೊಗ್ಗಕ್ಕೆ ಬಂದು ಅಲ್ಲಿ ದೇಹಾಲಸ್ಯದಿಂದ ಶಾ. ಶ. 1662ನೇ ಸಿದ್ಧಾರ್ಥಿ ಸಂ|ದ ವೈಶಾಖ ಶು. ೩ರಲ್ಲಿ ಕಾಲವಾದನು. ಅಲ್ಲಿಂದ ಮೃತದೇಹವನ್ನು ಬಿದರೂರಿಗೆ ತಂದು ಅದೇ ಪಂಚಮಿ ಗುರುವಾರ ಕೊಪ್ಪಲಮಠದಲ್ಲಿ ಸಮಾಧಿಯಾಯಿತು.

**15. ಬಸವಪ್ಪನಾಯಕ:**—ಕ್ರಿ. ಶ. 1740—1755. ಇವನು ವೀರಭದ್ರನಾಯಕನ ಮಗನು. ಇವನಿಗೆ ಶಾ. ಶ. 1662ನೇ ಸಿದ್ಧಾರ್ಥಿ ಸಂ|ರದ ಜ್ಯೇಷ್ಠ ಬ| ೫ರಲ್ಲಿ ವೇಣುಪುರದ ಅರಮನೆಯಲ್ಲಿ ಪಟ್ಟವಾಯಿತು. ಇವನಿಗೆ ಚೆನ್ನಮ್ಮಾಜಿ ಮತ್ತು ವೀರಮ್ಮಾಜಿ ಎಂಬ ಇಬ್ಬರು ಪತ್ನಿಯರಿದ್ದರು. ಬಾಳೆಯಕೊಪ್ಪದ ಹತ್ತರ ಭದ್ರರಾಜಪುರವನ್ನೂ ಒಂದು ಮಠವನ್ನೂ ಕಟ್ಟಿಸಿ, ಆ ಮಠವನ್ನು ಸಿದ್ಧೇಶ್ವರ ದೇವರ ಗದ್ದುಗೆ ತೋಟದ ಸ್ವಾಮಿಗಳಿಗೆ ಒಪ್ಪಿಸಿದನು. ಕ್ರಿ. ಶ. 1743ರಲ್ಲಿ ಮಲಪೆಯ ಹತ್ತರ ಬಂಡೆಯ ಕಲ್ಲಿನ ಮೇಲೆ ದರಿಯಾಬಹಾದುರಗಡ ಎಂಬ

ಕೋಟೆಯನ್ನೂ, ಕಾಪಿನಲ್ಲಿ ಮನೋಹರಗಡ ಎಂಬಕೋಟೆಯನ್ನೂ, ಮುಲ್ಕಿರಿನಲ್ಲಿ ಒಂದು ಕೋಟೆಯನ್ನೂ, ತೋನ್ಸೆಯಲ್ಲಿ ಒಂದು ಕೋಟೆಯನ್ನೂ, ಕುಂದಾಪುರ ಕೋಟೆಯನ್ನೂ, ಬೆಣ್ಣೆಗೆರೆಯಲ್ಲಿ ಒಂದು ಅರಮನೆಯನ್ನೂ, ಮಂಗಳೂರಿನ ಹಳೆ ಕೋಟೆಯನ್ನು ಮುರಿದು ಶಿವರಾಜೇಂದ್ರ ಗಿರಿ ಎಂಬ ಹೊಸ ಕೋಟೆಯನ್ನೂ ಕಟ್ಟಿಸಿದನು. ಕುಂದಾಪುರ ತಾಲೂಕಿನ ಸಿದ್ಧಾಪುರ ದಲ್ಲಿ ಒಂದು ಪಟ್ಟಣ ಕಟ್ಟಿಸಿ ಅದಕ್ಕೆ ಮಂತ್ರರಾಜಪುರವೆಂಬ ಹೆಸರಿಟ್ಟು ಅಲ್ಲಿ ದೊಡ್ಡ ಮಠ ಕಟ್ಟಿಸಿ ಗುರುನಂಜುಂಡಸ್ವಾಮಿಗಳಿಗೆ ಒಪ್ಪಿಸಿದನು. ಅನಂತರ ಸಿದ್ಧೇಶ್ವರ, ಮಂತ್ರರಾಜಪುರ, ಆನಂದಪುರ, ಮರಿಗೆ, ದಂಬಳ ಮತ್ತು ಸುಬ್ರಹ್ಮಣ್ಯದಲ್ಲಿ ರಥೋತ್ಸವಗಳು ಸರಿಯಾಗಿ ನಡೆಯುವ ಹಾಗೆ ಉಂಬಳಿಬಿಟ್ಟನು. ಕುಂಭಸೆಯ ಪ್ರಾಂತ್ಯವನ್ನು ಸುಲಿಗೆಮಾಡುತ್ತಿದ್ದ ಮರಾಟೆಯರ ವಜೀರ, ವೆಂಕಟರಾಯನನ್ನೂ ಬಾಪುರಾಯನನ್ನೂ ಹಣ ಕೊಟ್ಟು ಹಿಂದಕ್ಕೆ ಕಳುಹಿಸಿದನು. 1753ರಲ್ಲಿ ಕೋಲತ್ತರಸನು ಚಂದ್ರಗಿರಿಯ ಕೋಟೆಯನ್ನು ಹಿಡಿಯಲು ಇಕ್ಕೇರಿಯಿಂದ ಮುರಿಯಪ್ಪನನ್ನು ಕಳುಹಿಸಿ ಅದನ್ನು ತಿರಿಗಿ ಸ್ವಾಧೀನಪಡಿಸಿಕೊಂಡನು. ಅದೇ ವರುಷ ಬಿದರೂರಿನಲ್ಲಿ ಗ್ರಾಮಶಾಂತಿಯನ್ನು ಮಾಡಿಸಿದನು. ಕ್ರಿ. ಶ. 1754ರಲ್ಲಿ ನಿರ್ವಾಣಯ್ಯನ ಮೊಮ್ಮಗ ಚನ್ನಬಸವಪ್ಪನನ್ನು ದತ್ತಕ್ಕೆ ತೆಗೆದುಕೊಂಡನು. ಶಾ. ಶ. 1677ನೇ ಭಾವ ಸಂ|ರದ ಕಾರ್ತಿಕ ಶು|೫ರಲ್ಲಿ ಕಾಲವಾದನು. ಬಿದರೂರು ಭದ್ರರಾಜಪುರ ಪಟ್ಟದೇವರ ಭೂಮಿಯಲ್ಲಿ ಸಮಾಧಿಯಾಯಿತು.

**16. ಚೆನ್ನಬಸವಪ್ಪನಾಯಕ:—ಕ್ರಿ. ಶ. 1755—1758.** ಇವನಿಗೆ ಶಾ. ಶ. 1677ನೇ ಭಾವ ಸಂ|ರದ ಕಾರ್ತಿಕ ಶು| ೫ರಲ್ಲಿ ವೇಣುಪುರದ ಅರಮನೆಯಲ್ಲಿ ಪಟ್ಟವಾಯಿತು. ಇವನ ಹೆಸರಲ್ಲಿ ವೀರಮ್ಮಾಜಿಯು ತಾನೇ ಆಳುತ್ತಿದ್ದಳು. ರಾಜ್ಯದ ಸರ್ವಾಧಿಕಾರವನ್ನು ಬಸವಲಿಂಗಪ್ಪನು ನಡಿಸುತ್ತಿದ್ದನು. ನಾನಾರಾಯನ ವಜೀರನಾದ ಮಧೋಜಿ ಪುರಂಧರನೆಂಬವನು ಇಕ್ಕೇರಿ ಕೋಟೆಗೆ ಮುತ್ತಿಗೆಹಾಕಲು ಅವನೊಡನೆ ಒಪ್ಪಂದಮಾಡಿ ಹಿಂದಕ್ಕೆ ಕಳುಹಿಸಿದಳು. ಚೆನ್ನಬಸವಪ್ಪನು ತನ್ನ 14ನೇ ವರುಷ ಪ್ರಾಯದಲ್ಲಿ ರೋಗಪೀಡಿತನಾಗಿ ಕಾಲವಾದನು.

**17. ಸೋಮಶೇಖರನಾಯಕ:**—ಕ್ರಿ. ಶ. 1758-1763. ರಾಜ್ಯವಾಳಲು ಪುತ್ರಸಂತಾನವಿಲ್ಲದ್ದರಿಂದ ವೀರಮ್ಮಾಜಿಯು ತನ್ನ ಸೋದರಮಾವನಾದ ಬಂಕಾಪುರದ ಪಟ್ಟಣಶೆಟ್ಟಿ ವೀರಪ್ಪನ ಕನಿಷ್ಠ ಪುತ್ರನನ್ನು ಈಶ್ವರ ಸಂ|ರದ ಶ್ರಾವಣ ಬ| ೫ ಗುರುವಾರ ದಿವಸ ದತ್ತಕ್ಕೆ ತೆಗೆದುಕೊಂಡಳು. ಗಗನಮಹಲಚಾವಡಿಯಲ್ಲಿ ಪಟ್ಟಾಭಿಷೇಕವಾಯಿತು. ಶೃಂಗೇರಿಮಠಕ್ಕೆ ಸಾಲವಾಗಲು ಸಚ್ಚಿದಾನಂದ ಭಾರತಿ ಸ್ವಾಮಿಗಳನ್ನು ವೇಣುಪುರಕ್ಕೆ ಕರಸಿ, ಭಿಕ್ಷಾದ್ಯುಪಚಾರಗಳನ್ನು ಮಾಡಿಸಿ, ಬಣ್ಣದ ಚಾವಡಿಯಲ್ಲಿ ಅವರಿಗೆ ಭೇಟಿಕೊಟ್ಟು ಒಂದು ಸ್ಫಟಿಕಲಿಂಗವನ್ನೂ ರತ್ನಖಚಿತ ಗೋಪಾಲಕೃಷ್ಣನ ಪ್ರತಿಮೆಯನ್ನೂ ಪದಕ, ತಾಳಿ, ಸರಪಳಿ ಮುಂತಾದ ಆಭರಣಗಳನ್ನೂ ಕೊಟ್ಟು ಅದೇ ದೇವರಿಗೆ 74 ವರಹದ ಭೂಸ್ವಾಸ್ತಿಯನ್ನೂ ಶೃಂಗೇರಿಮಠಕ್ಕೆ 300 ವರಹದ ಭೂಸ್ವಾಸ್ತಿಯನ್ನೂ ಬಿಟ್ಟಳು. ಮಠದ ಸಾಲವನ್ನು ತೀರಿಸಿದಳು.

ಕ್ರಿ. ಶ. 1755ನೇ ಸೆಪ್ಟಂಬರ ತಿಂಗಳಲ್ಲಿ ಮರಾಟೆಯ ಆಂಗ್ರಿಯ ರಾಜನೂ ಕಣ್ಣಾನೂರಿನ ಸುಲ್ತಾನ ಆಲಿರಾಜನೂ 3000 ಸೈನ್ಯವನ್ನು 70 ಮಂಜಿಗಳಲ್ಲಿ ತೆಗೆದುಕೊಂಡು ಬಂದು, ಮಂಜೇಶ್ವರ ಬಂದರದಲ್ಲಿ ಇಳಿದು, ಊರಿನವರಿಂದ 4000 ಇಕ್ಕೇರಿ ವರಹವನ್ನೂ ಮುಮ್ಮ ಸೂಪಿ ಎಂಬ ಮಾಪಿಳ್ಳೆ ಸಾಹುಕಾರನಿಂದ 10 ಲಕ್ಷ ವರಹವನ್ನೂ ಸುಲಿದುಕೊಂಡರು. ಅಲ್ಲಿಂದ ಕೊಲ್ಲೂರು ಮೂಕಾಂಬಿಕೆ ದೇವಸ್ಥಾನಕ್ಕೆ ಬಂದು 4 ಲಕ್ಷ ವರಹ ಕ್ರಯಬಾಳುವ ನಗನಾಣ್ಯಗಳನ್ನೂ ಒಯ್ದರು. ಅರ್ಚಕರು ವೇಣುಪುರಕ್ಕೆ ದೂರುಕೊಟ್ಟರು. ಮಲಬಾರಿಗೆ ಅಕ್ಕಿಯನ್ನು ಕೊಡಕೂಡದೆಂದು ವೀರಮ್ಮಾಜಿಯು ಅಪ್ಪಣೆಕೊಟ್ಟಳು. ಶಾ. ಶ. 1685ನೇ ಚಿತ್ರಭಾನು ಸಂ|ರದ ಮಾಘ ಶು| ೯ರಲ್ಲಿ ಇಕ್ಕೇರಿ ಸಂಸ್ಥಾನವು ಹೈದರಾಲಿಯ ಸ್ವಾಧೀನವಾಯಿತು. ಶಿವಭಕ್ತರ ಸಂಸ್ಥಾನ ಸಮಾಪ್ತಿಯಾಯಿತು.

# 20ನೇ ಅಧ್ಯಾಯ.

## ಕ್ರೈಸ್ತರು.

ಈ ಜಿಲ್ಲೆಯಲ್ಲಿರುವ ಕ್ರೈಸ್ತರಲ್ಲಿ ಹೆಚ್ಚಿನವರು ರೋಮನ್ ಕೆಥೋಲಿಕರು. ಉಳಿದವರು ಲುಥರನ್ ಮತಕ್ಕೆ ಸೇರಿದ ಪ್ರೊಟೆಸ್ಟಾಂಟ ಕ್ರೈಸ್ತರು.

### ರೋಮನ್ ಕೆಥೋಲಿಕ ಕ್ರೈಸ್ತರು.

ಪೋರ್ತುಗೀಸರು ಪಶ್ಚಿಮ ಕರಾವಳಿಗೆ ಬರುವದಕ್ಕಿಂತ ಮೊದಲು ಕ್ರೈಸ್ತಮತವು ಕನ್ನಡ ಜಿಲ್ಲೆಗೆ ಯಾವಾಗ ಬಂತೆಂಬುದು ತಿಳಿಯುವದಿಲ್ಲ. ಕ್ರಿ. ಶ. 1ನೇ ಶತಮಾನದಲ್ಲಿಯೇ ಕ್ರೈಸ್ತಮತವು ಈ ಕರಾವಳಿಗೆ ಹಬ್ಬಿತೆಂದು ತಿಳಿಯುತ್ತದೆ. ರೋಮ್ ಸಾಮ್ರಾಜ್ಯದ ಅರಸನಾದ ಒಗಸ್ಟಸನ ಕಾಲದಿಂದ ರೋಮ್ ಸಾಮ್ರಾಜ್ಯವು ಬಿದ್ದುಹೋಗುವವರೆಗೆ ವರ್ಷಕ್ಕೆ ಒಂದಾವರ್ತಿ ರೋಮನರ ನಾವೆಗಳು ಪಶ್ಚಿಮಕರಾವಳಿಗೆ ಬಂದು ವ್ಯಾಪಾರವನ್ನು ಕೊಂಡುಹೋಗುತ್ತಿದ್ದವು. ಕ್ರೈಸ್ತಮತವು ಹುಟ್ಟಿದ ಕೂಡಲೇ ಅದನ್ನು ಭೂಲೋಕದ ಎಲ್ಲಾ ಭಾಗಗಳಿಗೂ ಬೋಧಿಸಬೇಕೆಂಬ ಭಾವನೆಯು ಆಗಿನ ಕ್ರೈಸ್ತರಲ್ಲಿ ವಿಶೇಷವಾಗಿತ್ತು. ಆದ್ದರಿಂದ ಅಪೋಸ್ತಲರ ಕಾಲದಲ್ಲಿಯೇ ಕ್ರೈಸ್ತಮತವು ಇಲ್ಲಿ ಬೋಧಿಸಲ್ಪಟ್ಟಿತೆಂದು ಊಹಿಸಬಹುದು. ಕನ್ನಡ ಜಿಲ್ಲೆಯಲ್ಲಿ ಮಾತ್ರವೆ ಅದು ಎಷ್ಟರ ಮಟ್ಟಿಗೆ ಬೋಧಿಸಲ್ಪಟ್ಟಿತೆಂಬುದು ತಿಳಿದುಬರುವುದಿಲ್ಲ. ಕಲ್ಯಾಣಪುರದಲ್ಲಿ ಆರನೇ ಶತಮಾನದಲ್ಲಿ ಒಬ್ಬ ಕ್ರೈಸ್ತಪಾದ್ರಿಯು ಇದ್ದನೆಂದು ತಿಳಿದುಬರುತ್ತದೆ. ಆದರೆ ಇದು ಕನ್ನಡ ಜಿಲ್ಲೆಯ ಕಲ್ಯಾಣಪುರವಲ್ಲ, ಮುಂಬಯಿ ಸಂಸ್ಥಾನದ ಥಾನಾ ಜಿಲ್ಲೆಯಲ್ಲಿರುವ ಕಲ್ಯಾಣ ಎಂಬ ಕಾಲಚೂರಿ ಅರಸರ ರಾಜಧಾನಿಯಾಗಿದೆ. ಕ್ರೈಸ್ತಮತವು ಕನ್ನಡ ಜಿಲ್ಲೆಗೆ ಬಂದ ವಿಷಯ ಒಂದು ಸಣ್ಣ ಕಥೆ ಹೀಗೆ ಇದೆ. ಕ್ರಿ. ಶ. 1493 ರಲ್ಲಿ ಕೆಲವು ಮೊಗೇರರು ಮಂಗಳೂರಿನ ಹತ್ತರ ಸಮುದ್ರದಲ್ಲಿ

ಒಂದು ದಿವಸ ಸಾಯಂಕಾಲ ಮೀನುಹಿಡಿಯುಲಿಕ್ಕೆ ಹೋದರು. ಮರುದಿವಸ ಬೆಳಿಗ್ಯೆ ಅವರು ತಮ್ಮ ಬಲೆಗಳನ್ನು ಮೇಲಕ್ಕೆ ಎಳೆದಾಗ ಒಂದೇ ಒಂದು ಮೀನಾದರೂ ಅದರಲ್ಲಿ ಇರಲಿಲ್ಲ. ಒಂದು ಮರದ ಕ್ರೂಜೆ (Cross) ಮಾತ್ರವೇ ಸಿಕ್ಕಿತ. ಇದು ಏನೆಂಬದಾಗಲೀ ಅಥವಾ ಅದರ ಮಹತ್ವವೇನೆಂಬದಾಗಲೀ ಅವರಿಗೆ ಗೊತ್ತಾಗಲಿಲ್ಲ. ಆದರೆ ಅದು ಸಿಕ್ಕಿದ ಸ್ಥಳದಲ್ಲಿ ಸಮುದ್ರವು ಉಕ್ಕುತ್ತಿತ್ತು. ಸುತ್ತಲೂ ಮೀನುಗಳ ಹಿಂಡು ಹಿಂಡುಗಳು ಇದ್ದವು. ಅವರು ತಿರುಗಿ ಬಲೆಗಳನ್ನು ಬೀಸಿದಾಗ ಬೇರೆ ಬೇರೆ ವಿಧದ ಮೀನುಗಳು ಬಲೆಗಳಲ್ಲಿ ತುಂಬಾ ಸಿಕ್ಕಿದವು. ಈ ಆಶ್ಚರ್ಯವನ್ನು ನೋಡಿ ಅವರು ಆ ಕ್ರೂಜೆಯನ್ನು ತಮ್ಮ ದೇಶದ ರಾಜನಾದ ಕಾಮರಾಯ ಬಂಗರಾಜನಿಗೆ ತೆಗೆದುಕೊಂಡು ಹೋಗಿ ಕೊಟ್ಟರು. ಈ ರಾಜನು ಬಹಳ ಸಂತೋಷಪಟ್ಟು ಅದನ್ನು ತನ್ನ ವಿಚಿತ್ರವಾದ ವಸ್ತುಗಳಿರುವ ಮಂದಿರದಲ್ಲಿ ಇಟ್ಟನು. ಇದು ಒಲಿವ್ (ಇಪ್ಪೆಯ ಮರ) ಮರದಿಂದ ಮಾಡಲ್ಪಟ್ಟು, ಒಂದುವರೆ ಗೇಣು ಉದ್ದವಾಗಿತ್ತು. ಕಾನಾನ ದೇಶದ ಅನೇಕ ಸಂಗತಿಗಳು ಅದರಲ್ಲಿ ಕೆತ್ತಲ್ಪಟ್ಟಿದ್ದವು. ಕ್ರಿ. ಶ. 1611ರಲ್ಲಿ ಗೋವೆಯ ಒಬ್ಬ ಶ್ರೀಮಂತ ಪುರುಷನಾದ ಮಿಕಾಯೇಲ್ ಡಿ. ಅಲ್ಮಿಡಾ ಎಂಬವನು ವೀರ ನರಸಿಂಹ ಕಾಮರಾಯ ಬಂಗರಾಜನ ಸ್ನೇಹವನ್ನು ಬೆಳಸಿಕೊಂಡಿರಲು ರಾಜನು ಒಂದು ದಿವಸ ತನ್ನ ಅರಮನೆಯ ವಿಚಿತ್ರವಾದ ವಸ್ತುಗಳನ್ನು ತೋರಿಸುವಾಗ ಅದರಲ್ಲಿರುವ ಈ ಕ್ರೂಜೆಯನ್ನು ಆ ಸಾಹುಕಾರನು ನೋಡಿ ಅದು ತನಗೆ ಕೊಡಬೇಕೆಂದು ಬೇಡಿಕೊಂಡನು. ಆದರೆ ಬಂಗರಾಜನು ಅದು ತನಗೆ ಸಂತಾನ ಪಾರಂಪರ್ಯವಾಗಿ ಬಂದ ಒಂದು ವಸ್ತು ಎಂದು ಹೇಳಿ, ಕೊಡಲಿಕ್ಕೆ ಒಪ್ಪಲಿಲ್ಲ. ಹೇಗಾದರೂ ಬೇರೆ ಹೆಚ್ಚು ಬೆಲೆಯುಳ್ಳ ವಸ್ತುಗಳನ್ನು ಕೊಟ್ಟು ಆ ಸಾಹುಕಾರನು ಅದನ್ನು ಪಡಕೊಂಡನು. ಪೋರ್ತುಗೀಸರಿಗಿಂತಲೂ ಮೊದಲು ಈ ಕರಾವಳಿಯಲ್ಲಿ ಸಂಚಾರಮಾಡುತ್ತಿದ್ದ ಯಾವದೋ ಒಂದು ಆರ್ಮೇನಿಯರ ಹಡಗಿನಿಂದ ಈ ಕ್ರೂಜೆಯು ಬಿದ್ದು ಹೋದದ್ದಾಗಿರಬೇಕೆಂದು ಊಹಿಸಬೇಕಾಗುತ್ತದೆ.

ಕ್ರಿ. ಶ. 1505ರಲ್ಲಿ ಪೋರ್ತುಗಲ್ಲಿನ ಅರಸನು ಹಿಂದೂಸ್ಥಾನದಲ್ಲಿ ಪೋರ್ತುಗೀಸರಿಗಿರುವ ಸ್ಥಳಗಳಿಗೆ ಆಲ್ಮಿಡನನ್ನು ಗವರ್ನರ ಜನರಲನಾಗಿ ಕಳುಹಿಸುವಾಗ ಅವನ ಸಂಗಡ ಫ್ರಾ. ಲೂಯಿಜ್ ಎಂಬವನು ಬಂದು ವಿಜಯನಗರದಲ್ಲಿ ಆಗ ಆಳುತ್ತಿದ್ದ ನರಸಿಂಗನ ರಾಜಧಾನಿಯಾದ ವಿಜಯನಗರಕ್ಕೆ ಹೋಗಿ ಅವನ ರಾಜ್ಯದ ಕರಾವಳಿಯಲ್ಲಿ ವ್ಯಾಪಾರ ಮಾಡುವುದಕ್ಕೂ ತಮ್ಮ ಮತವನ್ನು ಬೋಧಿಸುವುದಕ್ಕೂ ಅನುಮತಿಯನ್ನು ಪಡೆದನು. ಕ್ರಿ. ಶ. 1510ರಲ್ಲಿ ಗೋವೆಯನ್ನು ಅಲ್ಬುಕರ್ಕನು ಹಿಡಿದ ಬಳಿಕ ಪೋರ್ತುಗೀಸರ ಪ್ರಾಬಲ್ಯವು ಹೆಚ್ಚಾಯಿತು. ಈ ನೌಕಾಸೇನಾಧಿಪತಿಯು ಮಂಗಳೂರಿನಲ್ಲಿಯೂ ಇರುತ್ತಿದ್ದನು. ಕ್ರಿ. ಶ. 1526ರಲ್ಲಿ ಲೊಪೆಜ್ ಡಿ. ಸಂಪಾಯೋ ಗವರ್ನರ ಜನರಲ್ ಆಗಿದ್ದ ಸಮಯದಲ್ಲಿ ಕೆಲವು ಪ್ರಾನ್ಸಿಸ್ಕನ್ ಮತಬೋಧಕರು ಗೋವೆಯಿಂದ ಬಂದು ತಮ್ಮ ಮತವನ್ನು ಬೋಧಿಸಲಾರಂಭಿಸಿದರು. ಆ ಸಮಯದಲ್ಲಿ (1) ಅವರ್ ಲೆಡಿ ಒಫ್ ರುಜೆರಿಯೋ (2) ಅವರ್ ಲೇಡಿ ಒಫ್ ಮರ್‍ಸಿ, (3) ಸೈಂಟ್, ಪ್ರಾನ್ಸಿಸ್ ಹೀಗೆ 3 ಇಗರ್ಜಿಗಳು ಸ್ಥಾಪಿಸಲ್ಪಟ್ಟವು. ಕ್ರಿ. ಶ. 1623ರಲ್ಲಿ ಈ ಇಗರ್ಜಿಗಳು ಇದ್ದವೆಂದು ಆ ಸಮಯದಲ್ಲಿ ಈ ಜಿಲ್ಲೆಯನ್ನು ಸಂದರ್ಶಿಸಿದ ಪಿಟ್ರೊ ಡೆಲ್ಲಾ ವೆಲ್ಲಿಯು ಹೇಳುತ್ತಾನೆ. ವಿಜಯನಗರದ ನರಸಿಂಗ ರಾಜನ ಆಳಿಕೆಯಲ್ಲಿ ಈ ಇಗರ್ಜಿಗಳಿಗೆ ಬಹಳ ಕಷ್ಟ ಸಂಭವಿಸಿತ್ತೆಂದು ತಿಳಿಯುತ್ತದೆ. ಕ್ರಿ. ಶ. 1529ರಲ್ಲಿ ಪೋರ್ತುಗೀಸರು ಮಂಗಳೂರನ್ನು ಹಿಡಕೊಂಡರು. ಸೆಂಟ್ ಫ್ರಾನ್ಸಿಸ್ ಝೇವಿಯರನು ಮತಬೋಧನೆಗಾಗಿ ಈ ಜಿಲ್ಲೆಗೆ ಬರಲಿಲ್ಲ. 16ನೇ ಶತಮಾನದಲ್ಲಿ ಪೋರ್ತುಗೀಸರು ಈ ಜಿಲ್ಲೆಯ ಅನೇಕ ಸ್ಥಳಗಳನ್ನು ವಶಮಾಡಿಕೊಂಡಿದ್ದರು. ಆಗ ಗೋವೆಯ ಅನೇಕ ಕ್ರೈಸ್ತ ಕುಟುಂಬಗಳು ಇಲ್ಲಿಗೆ ಬಂದು ನಿಂತವು. ವಿಯಜನಗರ ಮತ್ತು ಬಿದನೂರು ಅರಸರ ಕಾಲದಲ್ಲಿ ಕ್ರೈಸ್ತರು ಗುಂಪು ಗುಂಪಾಗಿ ಗೋವೆಯಿಂದ ಬಂದು ನಿಂತರು. ಈ ಕ್ರೈಸ್ತರು ವ್ಯವಸಾಯ

ಮಾಡುವುದರಲ್ಲಿ ಬಹಳ ಪ್ರವೀಣರಾದ್ದರಿಂದ ಈ ಅರಸರು ಇವರಿಗೆ ಹೆಚ್ಚು ಹಕ್ಕು ಸ್ವಾತಂತ್ರ್ಯಗಳನ್ನು ಕೊಟ್ಟಿದ್ದರು. ಕ್ರಿ. ಶ. 1574 ರಲ್ಲಿ ಅನೇಕರು ಗೋವೆಯಿಂದ ಬಂದು ಬಸರೂರಿ (ಬಾರ್ಸಿಲೋರ) ನಲ್ಲಿ ನಿಂತರು. 1560ರಲ್ಲಿ ಡೊನ್ ಕೊನ್ಸಟೆಂಟ್ಯಾನ ಡಿ ಬ್ರಿಗಾನ್ಜಾ ಎಂಬವನು ವೈಸರೊಯಿಯಾಗಿದ್ದ ಸಮಯದಲ್ಲಿ ಗೋವಾ ಸಾಲ್ಸಿಟ್ ದ್ವೀಪಗಳಲ್ಲಿರುವ ಹಿಂದೂಗಳನ್ನೆಲ್ಲಾ ಕ್ರೈಸ್ತಮತಕ್ಕೆ ಬಲಾತ್ಕಾರ ದಿಂದ ಸೇರಿಸಿ ದೇವಸ್ಥಾನಗಳನ್ನೆಲ್ಲಾ ನಾಶಮಾಡಿ ಬಹಳ ಪೀಡಿಸುತ್ತಿದ್ದಾಗ ಅನೇಕ ಹಿಂದುಗಳು ಈ ಜಿಲ್ಲೆಗೆ ಬಂದು ನಿಂತರು.

1558—1576ರ ವರೆಗೆ ಗಾಸ್ಪರ್ ಡಿ ಲಿಯೊ ಪೆರಿರಾ ಎಂಬವರು ಗೋವೆಯ ಅರ್ಚಬೀಶೋಪಾಗಿದ್ದಾಗ ಕೆಲವು ಮತಬೋಧಕರು ಮಂಗ ಳೂರಿಗೂ ಬಸರೂರಿಗೂ ಬಂದು ಆಸ್ಪತ್ರೆಗಳನ್ನು ಸ್ಥಾಪಿಸಿದರು. ಈ ಸಮ ಯದಲ್ಲಿ ಕೆಲವು ಕ್ರೈಸ್ತರ ಕುಟುಂಬಗಳು ಗೋವೆಯಿಂದ ಈ ಜಿಲ್ಲೆಗೆ ಬಂದವು. ಕ್ರಿ. ಶ. 1567ನೇ ಜನವರಿ 4ನೇ ತಾರೀಕಿಗೆ ಪೋರ್ತುಗೀಸ ವ್ಯಾಸರೊಯಿಯಾಗಿದ್ದ ಡೊನ್ ಅಂಟಾವೊ-ಡಿ-ನೊರೆಂಞಾ ಮತ್ತು ಕೆಲವು ಮತಬೋಧಕರು ಉಳ್ಳಾಲದ ಚೌಟರ ಸಂತತಿಯ ರಾಣಿಯಾದ ಅಭಯ ದೇವಿ, ಅಬ್ಬಕ್ಕಾ ದೇವಿ ಅಥವಾ ಬುಕ್ಕಾ ದೇವಿಯಿಂದ ಕಪ್ಪವನ್ನು ಪಡ ಕೊಳ್ಳಲಿಕ್ಕಾಗಿ ಒಂದು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದು ರಾಣಿಯನ್ನು ಸೋಲಿಸಿ ಉಳ್ಳಾಲದಲ್ಲಿಯೂ ಕ್ರೈಸ್ತಮತವನ್ನು ಬೋಧಿಸಲಾರಂಭಿಸಿದರು.

17ನೇ ಶತಮಾನದ ಆದಿಯ ಭಾಗದಲ್ಲಿ ಪೋರ್ತುಗೀಸರ ಪ್ರಾಬಲ್ಯವು ಕ್ಷೀಣಗತಿಗೆ ಬಂತು. ಇಂಗ್ಲೀಷರೂ, ಡಚ್ಚರೂ, ಮರಾಠಿಯವರೂ ಪ್ರಬಲಕ್ಕೆ ಬಂದರು. ಪೋರ್ತುಗೀಸ ಮತಬೋದಕ ರಿಗೆ ಕಷ್ಟಗಳು ಬಂದೊದಗಿದವು. ಆಮದರಿಂದ ಇವರನ್ನು ಅಲ್ಲಲ್ಲಿಂದ ಭದ್ರವಾದ ಸ್ಥಳಗಳಿಗೆ ಕೊಂಡುಹೋದರು. ಈ ಜಿಲ್ಲೆಯಲ್ಲಿ ಮಂಗ ಳೂರು ಮತ್ತು ಬಸರೂರಲ್ಲಿ ಮಾತ್ರವೇ ಇಗರ್ಜಿಗಳಿದ್ದವು.

ಇವುಗಳಿಗೆ ಕಾಯಂ ಮತೋಪದೇಶಕರೂ ಇರಲಿಲ್ಲ. ಕಡೆಗೆ ಬಿದನೂರು ಅರಸನಾದ ಶಿವಪ್ಪನಾಯಕನ ಅಪ್ಪಣೆಯನ್ನು ಪಡೆದು ಊರಿನ ಮತೋಪದೇಶಕರನ್ನು ನೇಮಿಸಬಹುದೆಂದು ಅಪ್ಪಣೆ ಸಿಕ್ಕಿತು. ವೀರಪಳ್ಳಿ ಮಿಶನಿನ ಫಾದರ ವಿನಸೆಂಟ ಮೇರಿ ಎಂಬ ಮತೋಪದೇಶಕನು 1658ರಲ್ಲಿ ಮಂಗಳೂರಿಗೆ ಬಂದಾಗ ಅನೇಕ ಪೋರ್ತುಗೀಸ ಸಾಹುಕಾರರು ಇದ್ದರೆಂದೂ, ಬಸರೂರಿನಲ್ಲಿ ಅನೇಕ ಕ್ರೈಸ್ತರಿದ್ದರೆಂದೂ ತಿಳಿದುಬರುತ್ತದೆ. ಇಲ್ಲಿಯ ಕ್ರೈಸ್ತರು ಬಹಳ ಹೀನ ಸ್ಥಿತಿಯಲ್ಲಿದ್ದದರಿಂದ ಫಾದರ್ ಥೋಮಸ್ ಡಿ. ಕಾಸ್ಟ್ರೋ ಎಂಬ ಪಾದ್ರಿಯನ್ನು 1677ರಲ್ಲಿ ರೋಮಿನಿಂದ ಕಳುಹಿಸಿದರು. 1681ರಲ್ಲಿ ಫಾದರವಾಸ್ ಎಂಬ ಪಾದರಿಯನ್ನು ಮಂಗಳೂರಿಗೆ ಕಳುಹಿಸಿದರು. ಇವನು ಬರೆ ಕಾಲಿನಿಂದ ನಡಿಯುತ್ತಾ ಮಕ್ಕಳಿಗೆ ಬೋಧನೆಯನ್ನು ಕೊಡುತ್ತಾ, ಅಲ್ಲಲ್ಲಿ ಶಾಲೆಗಳನ್ನು ತೆರಿಯುತ್ತಾ, ಅಸ್ವಸ್ಥದವರನ್ನು ಉಪಚರಿಸುತ್ತಾ, ಬಡವರಿಗೆ ಸಹಾಯವಮಾಡುತ್ತಾ ದಿವಸಗಳನ್ನು ಕಳೆದನು. ಇವನು ಮಂಗಳೂರಿಗೆ ಬರುವಾಗ ರುಜೇರಿಯೊ ಇಗರ್ಜಿಯು ಒಂದು ಫೆಕ್ಟರಿ ಇಗರ್ಜಿಯಾಗಿತ್ತು. ಇದಕ್ಕೆ ಮುಳಿಹುಲ್ಲಿನ ಮಾಡು ಇತ್ತು. ಇವನು ಉಳ್ಳಾಲದಲ್ಲಿಯೂ ಕುಂದಾಪುರದಲ್ಲಿಯೂ ಗಂಗೋಳಿಯಲ್ಲಿಯೂ ಹೊಸ ಇಗರ್ಜಿಗಳನ್ನು ಕಟ್ಟಿಸಿದನು. 1698ರಲ್ಲಿ ರಾಣಿ ಚೆನ್ನಮ್ಮಾಜಿಗೂ ಪೋರ್ತುಗೀಸರಿಗೂ ಆದ ಕರಾರಿನ ಪ್ರಕಾರ ಫೆಕ್ಟರಿಗಳನ್ನೂ ಇಗರ್ಜಿಗಳನ್ನೂ ಕಟ್ಟಲಿಕ್ಕೆ ಅಪ್ಪಣೆ ಸಿಕ್ಕಿತು. ಅದರ ಪ್ರಕಾರ ಮಂಗಳೂರಿನ ಹಂಪನಕಟ್ಟೆ ಮಿಲಾಗ್ರಿ ಇಗರ್ಜಿಯನ್ನು ಕಟ್ಟಲಿಕ್ಕೆ ಅಪ್ಪಣೆಯೂ, ಅದು ಇದ್ದ ಸ್ಥಳವು ಉಂಬಳಿಯಾಗಿಯೂ ಸಿಕ್ಕಿತು. 1702ರಲ್ಲಿ ಫಾದರ್ ಮಿಗ್ವೆಲ್ ಡೊಮೆಲ್ಲೊ ಎಂಬ ಪ್ರಾದಿಯು ಬಂಟವಾಳದ ಇಗರ್ಜಿಯನ್ನು ಕಟ್ಟಿಸಿದನು. ಬಿಶೋಪ ಕೆಸ್ಟ್ರೋವಿನ ಮರಣಾನಂತರ ರಾಣಿ ಚೆನ್ನಮ್ಮಾಜಿಯು ಮಿಲಾಗ್ರಿ ಇಗರ್ಜಿಯು ಇರುವ ಸ್ಥಳವನ್ನು ಸ್ವಾಧೀನ

ಪಡಿಸಿಕೊಂಡಳು. ಕಡೆಗೆ ರಾಣಿಯನ್ನು ಸಮಾಧಾನಪಡಿಸಿದ ಮೇಲೆ ಸ್ಥಳವು ತಿರಿಗಿ ಸಿಕ್ಕಿತು. 1698—1714ರ ವರೆಗೆ ಆಳಿದ ಬಿದನೂರಿನ ಬಸವಪ್ಪ ನಾಯಕನು ಅದೇ ಸ್ಥಳವನ್ನು ತಿರಿಗೆ ಸ್ವಾಧೀನಪಡಿಸಿಕೊಂಡನು. 1714—1740ರ ವರೆಗೆ ಆಳಿದ 2ನೇ ಸೋಮಶೇಖರನು ಅದೇ ಸ್ಥಳವನ್ನು 1715ರಲ್ಲಿ ಹಿಂತಿರುಗಿ ಬಿಟ್ಟುಕೊಟ್ಟನು. 1756ರಲ್ಲಿ ಮಿಲಾಗ್ರಿ ಇಗರ್ಜಿಯು ಕಟ್ಟಿಸಲ್ಪಟ್ಟಿತು.

ಬಿದನೂರಿನ ಅರಸರ ಕೈಕೆಳಗೆ ಕ್ರೈಸ್ತರು ಬಹಳ ಅಭಿವೃದ್ಧಿ ಹೊಂದಿದರು. ಆ ಸಮಯದಲ್ಲಿ ಬಿದನೂರು ರಾಜ್ಯದಲ್ಲಿ ಸುಮಾರು 80,000 ಮಂದಿ ಕ್ರೈಸ್ತರಿದ್ದರು. ಅನೇಕರು ಬಿದನೂರಿನ ಸೈನಿಕರಾಗಿದ್ದರು. 1763ರಲ್ಲಿ ಈ ಜಿಲ್ಲೆಯು ನವಾಬ ಹೈದರಲ್ಲಿಯ ಸ್ವಾಧೀನಕ್ಕೆ ಬಂತು. ಸುಮಾರು 5 ವರ್ಷಗಳ ವರೆಗೆ ಇವರಿಗೆ ಅದೆ ತರದ ಹಕ್ಕು ಸ್ವಾತಂತ್ರ್ಯಗಳು ಸಿಕ್ಕಿದವು. ಅರ್ಕುಳದಲ್ಲಿರುವ ಮೊಂಟೆ ಮೆರಿಯಾನೋ ಗುಡ್ಡದ ಮೇಲಿರುವ ಇಗರ್ಜಿಯಲ್ಲಿ ಪೋರ್ತುಗೀಸರ ಧ್ವಜವನ್ನು ಏರಿಸಲಿಕ್ಕೆ ಫಾದರ ಮಿರಂದನಿಗೆ ಹೈದರಲ್ಲಿಯ ಅಪ್ಪಣೆ ಇತ್ತು.

1768ರಲ್ಲಿ ಇಂಗ್ಲೀಷ ಎಡಮಿರಲ್ ವಾಟ್ಸನನು ಮಂಗಳೂರು ಕೋಟೆಯನ್ನು ಹಿಡಿದಾಗ ಕ್ರೈಸ್ತರು ಇಂಗ್ಲೀಷರ ಕಡೆಗೆ ಸೇರಿರಬಹುದೆಂದು ಹೈದರನಿಗೆ ಸಂಶಯ ಹುಟ್ಟಿತು. ಅವರು ತಾವು ಅದಕ್ಕೆ ಸೇರಲಿಲ್ಲವೆಂದು ಹೇಳಿದರು. ಕಡೆಗೆ ಹೈದರನು ಯುರೋಪಿಯನರು ಇನ್ನೊಂದು ಸರ್ತಿ ಇಲ್ಲಿಗೆ ಬಂದರೆ ನೀವು ಬಿದನೂರಿಗೆ ಬಂದು ನಿಲ್ಲಿರಿ ಎಂದು ಹೇಳಿ ಹೊರಟುಹೋದನು. ಹೈದರನ ಕಾಲದಲ್ಲಿಯೂ ಕ್ರೈಸ್ತರಿಗೆ ಕಷ್ಟಗಳು ಬರಲಿಲ್ಲ. 1782ರಲ್ಲಿ ಹೈದರನು ಸತ್ತು ಟಿಪ್ಪುವು ಪಟ್ಟಕ್ಕೆ ಬಂದನು. 1784—1799ರ ವರೆಗೆ ಪಟ್ಟ ಕಷ್ಟಗಳ ವಿಷಯವನ್ನು ಹೇಳಿ ತೀರದು. 1783ರಲ್ಲಿ ಟಿಪ್ಪುವು ಮಂಗಳೂರನ್ನು ಹಿಡಿದಾಗ ಕ್ರೈಸ್ತರು ಇಂಗ್ಲೀಷರ ಕಡೆಗೆ ಸೇರಿದರೆಂಬ

ಸಂಶಯದ ಮೇಲೆ 1784ನೆಯ ಫೆಬ್ರುವರಿ ತಿಂಗಳ 24ನೇ ದಿವಸ ಕನ್ನಡ ಜಿಲ್ಲೆಯಲ್ಲಿರುವ ಎಲ್ಲಾ ಕ್ರೈಸ್ತರನ್ನು ಸೆರೆ ಹಿಡಿಯಬೇಕೆಂದು ರಾಜಮುದ್ರೆ ಇರುವ ಪರವಾನೆಗಳು ಜಿಲ್ಲೆಯಲ್ಲಿರುವ ಎಲ್ಲಾ ಸೇನಾಧಿಪತಿಗಳಿಗೆ ಕಳುಹಿಸಲ್ಪಟ್ಟವು. ಪರವಾನೆ ಏನಂದರೆ:—"ಕನ್ನಡ ಜಿಲ್ಲೆಯಲ್ಲಿರುವ ಎಲ್ಲಾ ಪಾದ್ರಿಗಳನ್ನೂ ಕುಲಿಸ್ಥಾನರನ್ನೂ (ಕ್ರೈಸ್ತರನ್ನೂ) ಹಿಡಿದು ಬಂದೋಬಸ್ತಿನಿಂದ ಹಜೂರಿಗೆ ಕಳುಹಿಸತಕ್ಕದ್ದು. ಪ್ರತಿಒಬ್ಬರ ಚರಸೊತ್ತು, ಧಾನ್ಯ, ದನಕರುಗಳು, ಭೂಮಿ, ಬಾಗ್ಯಾತುಗಳು ಎಲ್ಲಾ ಎಷ್ಟು ಉಂಟೆಂದು ತನಖಿಮಾಡಿ ಎಲ್ಲವನ್ನೂ ಸರಕಾರ ಸ್ವಾಧೀನಮಾಡಿಕೊಂಡು ಭೂಮಿಯನ್ನೂ ಬಾಗ್ಯಾತುಗಳನ್ನೂ ಬೇರೆಯವರಿಗೆ ಕೊಟ್ಟು ಬೇಸಾಯಮಾಡಿಸತಕ್ಕದ್ದು. ಅವರು ಬೇಸಾಯಮಾಡದಿದ್ದರೆ ಹುಟ್ಟುವಳಿಯ ಬೆಲೆಯನ್ನು ಅವರಿಂದ ತೆಗೆದುಕೊಳ್ಳತಕ್ಕದ್ದು. ಇನ್ನು ಮುಂದೆ ಯಾವ ಕುಲಿಸ್ಥಾನನಾದರೂ ನಿಮ್ಮ ಜಿಲ್ಲೆಯಲ್ಲಿ ಬಂದು ವಾಸಮಾಡಿದರೆ ಇದೆ ಪರವಾನೆ ಪ್ರಕಾರ ಅವನನ್ನೂ ಅವನ ಹೆಂಡತಿ ಮಕ್ಕಳನ್ನೂ ಸೆರೆಹಿಡಿದು ಹಜೂರಿಗೆ ಕಳುಹಿಸಿಕೊಡತಕ್ಕದ್ದು." ಈ ಪರವಾನೆ ಪ್ರಕಾರ ಒಂದು ಲಕ್ಷ ಕ್ರೈಸ್ತರನ್ನೂ ಸೆರೆಹಿಡಿದರು. ಸುಮಾರು 5 ಲಕ್ಷ ರೂಪಾಯಿ ಕ್ರಯ ಬಾಳುವ ಆಸ್ತಿಯನ್ನು ಸರಕಾರ ಸ್ವಾಧೀನಪಡಿಸಿಕೊಂಡು ಹರಾಜು ಮಾಡಿದರು. ಕೆಲವು ಮಂದಿ ಕ್ರೈಸ್ತರಿಗೆ ಈ ಸಂಗತಿಗಳು ಗುಟ್ಟಿನಿಂದ ತಿಳಿದುಬಂದು ಸೆರೆಹಿಡಿಯಲ್ಪಡುವ ಮುಂಚೆಯೆ ತಮ್ಮ ಆಸ್ತಿಯನ್ನು ನೆರೆಯವರಾದ ಹಿಂದೂಗಳಿಗೆ ಕೊಟ್ಟಿದ್ದರು. ಇವರನ್ನು ಶ್ರೀರಂಗಪಟ್ಟಣಕ್ಕೆ ನೈದ ಕೂಡಲೆ ಇವರ ಇಗರ್ಜಿಗಳನ್ನು ನಾಶಪಡಿಸಲಿಕ್ಕೆ ಪ್ರತಿ ಒಬ್ಬ ಪಠೇಲರಿಗೆ ಪರವಾನೆಯು ಬಂತು. ಕೆಲವನ್ನು ಪೂರ್ಣ ನೆಲಸಮಮಾಡಿದರು. ಕೆಲವುಗಳ ಮಾಡುಗಳನ್ನು ಮಾತ್ರವೇ ತೆಗೆದರು. ಹೊಸಬೆಟ್ಟು (ಮೂಡಬಿದರೆ) ಇಗರ್ಜಿಯು ಮಾತ್ರ ಚಿಕ್ಕರಾಯ ಚೌಟರಾಜನ ಸಹಾಯದಿಂದ ಹಾಳಾಗದೆ ಉಳಿಯಿತು. 27 ಇಗರ್ಜಿಗಳನ್ನು

ಪೂರ್ಣವಾಗಿ ನಾಶವಮಾಡಿದರು. ಅವುಗಳಲ್ಲಿ ಮಂಗಳೂರಲ್ಲಿದ್ದ ರುಜೆರಿಯೊ, ಮಿಲಾಗ್ರಿ, ಬೋಳಾರ ಎಂಬ ಮೂರು ಇಗರ್ಜಿಗಳೂ ಸೇರಿದವು. ಮಿಲಾಗ್ರಿ ಇಗರ್ಜಿಯು ಕಲ್ಲುಗಳಿಂದ ಬಾವುಟಿಗುಡ್ಡದ ಮೇಲೆ ಮುಹಮ್ಮದಿಯರಿಗೆ ನಿವಾಜಮಾಡಲಿಕ್ಕೆ ಒಂದು



ಕಟ್ಟೋಣವನ್ನು ಮಕ್ಕದ ಕಡೆಗೆ ಮುಖಮಾಡಿ ಕಟ್ಟಿದರು. ಇದಕ್ಕೆ 2 ಮೂಲೆಗಳಲ್ಲಿ 2 ಶಿಖರಗಳು ಇವೆ. ಇಲ್ಲಿ ಮುಸಲ್ಮಾನರು ಬಕ್ರಿದ ಮತ್ತು ರಮಜಾನ ಸಮಯ ಒಟ್ಟುಕೂಡಿ ಅದರಲ್ಲಿರುವ ಮಿನಿಬಾರಿ (Pulpit)ನಿಂದ ಓದುವ ಕುತುಬವನ್ನು ಕೇಳುತ್ತಾರೆ. ಹಾಳು ಮಾಡಲ್ಪಟ್ಟ ಬೇರೆ ಇಗರ್ಜಿಗಳು ಯಾವವೆಂದರೆ:—ಮೊಂಟೆಮರಿಯಾನೊ (ಫರಂಗಿಪೇಟೆ) ಉಮಜೂರು, ಉಳ್ಳಾಲ, ಬಂಟವಾಳ, ಅಗ್ರಹಾರ, ಮೊಗರನಾಡು, ಪೇಜಾವರ, ಮುಲ್ಕಿ ಕೀರೆಂ (ಮುಲ್ಕಿಯ ಹತ್ತಿರ) ಸಿರ್ವ, ಕಾರ್ಕಳ, ಕಲ್ಯಾಣಪುರ, ಸುರಾಲ, ಕುಂದಾಪುರ, ಗೊಂಗೊಳ್ಳಿ, ಬಾರ್ಸೆಲೋರ, (ಬಸರೂರು) ನಗರ, ಬೈಂದೂರು.

ಟಿಪ್ಪುವು ಕ್ರೈಸ್ತರಿಗೆ ಶ್ರೀರಂಗಪಟ್ಟಣಕ್ಕೆ ತೆಗೆದುಕೊಂಡು ಹೋದ ವೃತ್ತಾಂತವನ್ನು ಬಾರ್ಕೂರಿನ ಕ್ರೈಸ್ತರೊಬ್ಬರು ಹೀಗೆ ಬರೆದಿಟ್ಟಿರುತ್ತಾರೆ:— ಮೂಾಯಿ ತಿಂಗಳ (ಫೇಬ್ರುವರಿ, ಮಾರ್ಚಿ) ಒಂದೆ ರಾತ್ರಿ ಕನ್ನಡ ಜಿಲ್ಲೆಯಲ್ಲಿರುವ ಎಲ್ಲಾ ಕ್ರೈಸ್ತರನ್ನೂ ಸೆರೆಹಿಡಿದರು. ಅವರವರಿರುವ ಗ್ರಾಮಗಳಲ್ಲಿ ಅವರವರನ್ನು ಕೂಡಿಸಿದರು. ಬಾರ್ಕೂರು ತಾಲೂಕಿನವರನ್ನು ಮರುದಿವಸ ಬ್ರಹ್ಮಾವರದಲ್ಲಿರುವ ಕಚೇರಿಗೆ ಕೊಂಡುಹೋಗಿ 8 ದಿವಸ ನಿಲ್ಲಿಸಿದರು. ಅಲ್ಲಿಂದ ಕುಂದಾಪುರ ತಾಲೂಕಿನಲ್ಲಿರುವ ಕೋಟೇಶ್ವರಕ್ಕೆ ಕೊಂಡುಹೋದರು. ಅಲ್ಲಿ ಆ ತಾಲೂಕಿನವರು ಸಹ ಬಂದು ಸೇರಿದರು. ಅವರನ್ನೆಲ್ಲಾ ಕೋಟೇಶ್ವರ ನಿರಾಗಿಯ ಹತ್ತಿರ ಹಂಗರ ಎಂಬ ಗುಡ್ಡ ಸ್ಥಳದಲ್ಲಿ ಕೂಡಿಸಿದರು. ಇಲ್ಲಿ 2 ತಿಂಗಳ ವರೆಗೆ ನಿಲ್ಲಿಸಿದರು. ಅಲ್ಲಿಂದ ಕೊಲ್ಲೂರು ಗಾಟಿಯ ದಾರಿಯಾಗಿ ಶ್ರೀರಂಗಪಟ್ಟಣಕ್ಕೆ ಕೊಂಡುಹೋದರು.

ಎರಡು ತಾಲೂಕುಗಳ ಜನರು 20,000 ಇದ್ದರು. ಪ್ರಯಾಣ ಮಾಡುವಾಗ ಈ ಜನರನ್ನು 2 ಭಾಗಗಳಾಗಿ ವಿಂಗಡಿಸಿದ್ದರು. ಒಂದು ಭಾಗದಲ್ಲಿ ಕೂಲಿಯವರು, ಇನ್ನೊಂದು ಭಾಗದಲ್ಲಿ ಬೇಸಾಯಗಾರರು. ಬೇಸಾಯಗಾರರು ಮುಂದಿನಿಂದಲೂ ಕೂಲಿಯವರು ಹಿಂದಿನಿಂದಲೂ ಹೋಗುವಾಗ ಸುಮಾರು 1 ಹರದಾರಿ ವರೆಗೆ ಮಾರ್ಗದಲ್ಲಿ ಎಡೆ ಇರಲಿಲ್ಲ. ದಿವಸಕ್ಕೆ 2 ಹರದಾರಿ ಪ್ರಕಾರ ಪ್ರಯಾಣಮಾಡುತ್ತಿದ್ದರು. ಕೂಲಿಯವರಿಗೆ ಬತ್ತ ಸಿಕ್ಕುತ್ತಿತ್ತು. ಬೇಸಾಯಗಾರರಿಗೆ ಭತ್ತೆ ಇರಲಿಲ್ಲ. ಹೆಂಗಸರು ಮಾರ್ಗದ ಬಳಿಯಲ್ಲಿ ಹೆತ್ತು ಮಕ್ಕಳನ್ನು ವಸ್ತ್ರದಲ್ಲಿ ಕಟ್ಟಿಕೊಂಡು ಹೋಗಬೇಕಾಯಿತು. ಮರದ ಕೊಂಬೆಗಳಿಗೆ ವಸ್ತ್ರಗಳನ್ನು ಕಟ್ಟಿ ಆ ತೊಟ್ಟಿಲಲ್ಲಿ ಮಕ್ಕಳನ್ನು ಹಾಕಿ ತೂಗುತ್ತಿದ್ದರು. ಯಾರಾದರೂ ಸತ್ತರೆ ಅಲ್ಲಿಯೇ ಹೂಣಿಡುತ್ತಿದ್ದರು. ಅಡಿಗೆಯು ಪೂರ್ಣ ಆಗುವಷ್ಟರಲ್ಲಿ ಹೊರಡಲಿಕ್ಕೆ ಅಪ್ಪಣೆಯಾದರೆ ತಕ್ಷಣವೇ ಅನ್ನವನ್ನು ಅಲ್ಲಿಯೇ ಬಿಟ್ಟು ಹೋಗಬೇಕಿತ್ತು.

ಇಷ್ಟು ಕಷ್ಟಪಟ್ಟು ಉಳಿದವರು ಶ್ರೀರಂಗಪಟ್ಟಣಕ್ಕೆ ಎರಡು ಹರ ದಾರಿ ದೂರಕ್ಕಿರುವ **ಮೊನೆ ಹೊಳೆಯು** ದಡದ ಮೇಲೆ **ಕರಿಕಟ್ಟೆ** ಎಂಬಲ್ಲಿ 8 ಯಾ 10 ದಿವಸಗಳ ವರೆಗೆ ನಿಲ್ಲಬೇಕಾಯಿತು. ಅಲ್ಲಿಂದ ಹೊಳೆಯ ಇನ್ನೊಂದು ಪಡದಲ್ಲಿರುವ ಶಹಾರ ಗಂಜಾಮಿನ ಮೈದಾನಿನಲ್ಲಿ ನಿಲ್ಲಿಸಿದರು. ನೂರು ನೂರು ಜನರಿಗೆ ನಿಲ್ಲಲಿಕ್ಕೆ ಒಂದೊಂದು ಡೇರೆಯು ಇತ್ತು. ಮಂಗಳೂರು, ಬಂಟವಾಳ ತಾಲೂಕಿನವರು ಬಾರ್ಕೂರು, ಕುಂದಾಪುರ ತಾಲೂಕಿನವರು ಬರುವುದಕ್ಕಿಂತ ಮೊದಲೇ ಬಂದಿದ್ದರು. ಅನಂತರ ಹೊನ್ನಾವರ ತಾಲೂಕಿನವರೂ ಬಂದು ತಲ್ಪಿದರು. ಒಟ್ಟಾರೆ ಸುಮಾರು 80,000 ಜನರು ಇರಬಹುದೆಂದು ಹೇಳಬಹುದು. ಅಲ್ಲಿ ನಿಂತ ಒಂದು ತಿಂಗಳಲ್ಲಿ ಶಿಡುಬು, ರಕ್ತಾತಿಸಾರ, ಜ್ವರ, ವಾಂತಿ ಭೇದಿ, ಮುಂತಾದ ಬೇರೆ ಬೇರೆ ರೋಗಗಳು ಹಬ್ಬಿ ಸುಮಾರು $\frac{1}{4}$ ಪಾಲು ಜನರು ಸತ್ತುಹೋದರು. ಒಬ್ಬನು ಸತ್ತ ವರ್ತಮಾನ ಇನ್ನೊಬ್ಬನಿಗೆ ತಿಳಿದ ಕೂಡಲೇ ಅವನೂ ಪ್ರಾಣಬಿಟ್ಟನು. ಕಡೆಗೆ ತಂದೆಯು ಸತ್ತ ಸಂಗತಿಯು ಮಗನಿಗೆ ತಿಳಿಸಲಿಲ್ಲ ತಾಯಿಯು ಸತ್ತ ವರ್ತಮಾನ ವನ್ನು ಮಗನಿಗೆ ತಿಳಿಸಲಿಲ್ಲ. ಹೆಣವನ್ನು ಹುಗಿದು ಬಂದ ಕೂಡಲೇ ಹೂಣಿಟ್ಟವರೂ ಬಿದ್ದು ಪ್ರಾಣವನ್ನು ಬಿಟ್ಟರು. ಕೆಲವರು ಹೊಂಡ ತೆಗಿಯುಲಿಕ್ಕೆ ಶಕ್ತಿ ಇಲ್ಲದೆ, ನೆಲದ ಮೇಲೆಯೇ ಹೆಣವನ್ನು ಇಟ್ಟು ಮಣ್ಣನ್ನು ಅದರ ಮೇಲೆ ಹಾಕಿದರು. ಕೆಲವರು ಹೆಣಗಳನ್ನು ಹಾಳು ಭಾವಿಗಳಿಗೂ ಹೊಂಡಗಳಿಗೂ ಬಿಸಾಡಿದರು. ಹೆಣದ ವಸ್ತ್ರಗಳನ್ನು ಕಳ್ಳರು ಕೊಂಡುಹೋದರು. ಹೆಣಗಳನ್ನು ನರಿನಾಯಿಗಳು ತಿಂದವು. ಸುಲ್ತಾನನು ಮೈಸೂರಿಗೆ ಬಂದ ಕೂಡಲೇ ಶಹಾರ ಗಂಜಾಮಿಗೆ ಬಂದನು. ಆಗ ಚೌಪದಾರರು ಕ್ರೈಸ್ತರಲ್ಲಿ ಮುಖ್ಯಸ್ಥರನ್ನು ಕರ ಕೊಂಡುಹೋದಾಗ ಅವರ ಕಷ್ಟಗಳನ್ನು ಕೇಳಿ ಬಹಳ ಬೇಸರಪಟ್ಟು ಉಡಿಗೆ ಉಚಿತಗಳನ್ನು ಕೊಟ್ಟನು. ಆ ಮೇಲೆ ಜೆನೆಹೊಳೆ, ಪಡುಳಿ ಮುಂತಾದ ಗ್ರಾಮಗಳನ್ನು ಬೇಸಾಯ ಮಾಡಲಿಕ್ಕೆ ಕೊಟ್ಟನು

ಅದರಲ್ಲಿ ಬೆಳೆದ ಅಕ್ಕಿಯು ಊಟಕ್ಕೆ ಸರಿಯಾಗದೆ ಅನೇಕರು ಅಸ್ವಸ್ಥ ದಲ್ಲಿ ಬಿದ್ದರು. ಆಗ ಬೇರೆ ಬೀಜವನ್ನು ಕೊಟ್ಟರು. ಆ ಸಮಯ ದಲ್ಲಿ ಹರಕಾರಿಯು (ಸೈನ್ಯಕ್ಕೆ ಜನ ಕೂಡಿಸುವವನು) ಬಂದು ಪ್ರಾಯ ಭರಿತರಾದವರನ್ನು ಸೈನ್ಯಕ್ಕೆ ಕೂಡಿಸಲಿಕ್ಕೆ ಬಂದನು. ಇದರ ಉದ್ದಿಶ್ಯವನ್ನು ತಿಳಿಯದೆ ಅನೇಕರು ತಿಳಿಯದ ಹಾಗೆ ಓಡಿಹೋದರು. ಹೀಗೆಯೇ ನಾಲ್ಕು ನೂರು ಜನರನ್ನು ಸೈನ್ಯಕ್ಕೆ ಕೂಡಿಸಿದರು ಇವರಿಗೆ ನಿಲ್ಲ ಲಿಕ್ಕೆ ಶಹಾರ ಗಂಜಾಮಿನಲ್ಲಿ ಮನೆಗಳನ್ನು ಕೊಟ್ಟರು. ಶಿಪಾಯಿ ಗಳಿಗೆ ತಿಂಗಳಿಗೆ ಒಂದು ವರಹ, ಅವರ ಹೆಂಡತಿ ಮಕ್ಕಳಿಗೆ ತಿಂಗಳಿಗೆ ಒಂದು ರೂಪಾಯಿ ಸಂಬಳವಾಗಿ ಕೊಟ್ಟರು. ಕೆಲವರಿಗೆ ಜಮಾದಾರ, ಸುಭಾದಾರ, ಹವಾಲದಾರರ ಕೆಲಸ ಸಿಕ್ಕಿತು. ಇವರಿಗೆ ತುಪ್ಪ, ಬೆಣ್ಣೆ, ಮಜ್ಜಿಗೆ, ಕಟ್ಟಿಗೆ ಮುಂತಾದ್ದನ್ನು ಸರಕಾರದ ಖರ್ಚಿನಿಂದಲೇ ಕೊಡು ತ್ತಿದ್ದರು. ನೂರು ಜನ ಒಂದು ಕಂಪೆನಿ, ನಾಲ್ಕು ಕಂಪೆನಿಗಳ ಒಂದು ರಿಸಾಲಾ, ನಾಲ್ಕು ರಿಸಾಲಾಗಳಿಗೆ ಒಬ್ಬ ಸುಭೆದಾರ, ನಾಲ್ಕು ಸುಭೆ ದಾರರಿಗೆ ಒಬ್ಬ ಭಕ್ಷಿ ಈ ತರದಲ್ಲಿ ಸೈನ್ಯವು ವಿಭಾಗಿಸಲ್ಪಟ್ಟಿತ್ತು. ಈ ಸೈನಿಕರಲ್ಲಿ ಒಂದೊಂದು ತಿಂಗಳಿಗೆ 20 ಜನರ ಪ್ರಕಾರ ಎಲ್ಲಾ ಜನರನ್ನು ಮಹಮ್ಮದಿ ಮತಕ್ಕೆ ಸೇರಿಸಿದರು. ಸುಮಾರು 200 ಮಂದಿ ಪ್ರಾಯ ಭರಿತೆಯರಾದ ಹೆಂಗಸರನ್ನು ಹೆರೆಮಿಗೆ ಕೊಂಡು ಹೋದರು. ಒಬ್ಬ ಖಾಜಿಯು ಪ್ರತಿ ದಿನ ಬೆಳಿಗ್ಯೆ ಇವರಿಗೆ ಖಲಂ ಕಲಿಸುತ್ತಿದ್ದನು. ಪ್ರತಿ ಶುಕ್ರವಾರ ಇವರನ್ನು ಮಸೀದಿಗೆ ಕರಕೊಂಡು ಹೋಗಿ ನಮಾಜ ಮಾಡಲಿಕ್ಕೆ ಕಲಿಸುತ್ತಿದ್ದನು. ಹೀಗೆಯೇ ಅನೇಕ ತರದ ಉಪದ್ರುವಗಳನ್ನು ಕೊಡುತ್ತಿದ್ದರು !!

**1799**ನೇ ಇಸವಿಯಲ್ಲಿ ಶ್ರೀರಂಗಪಟ್ಟಣದ ಯುದ್ಧದಲ್ಲಿ ಟಿಪ್ಪುವು ಮಡಿದುಹೋದ ಮೇಲೆ ಉಳಿದ ಕ್ರೈಸ್ತರು ಹಿಂತಿರುಗಿ ಬಂದರು. ಇಲ್ಲಿ ಅವರ ಆಸ್ತಿಗಳು ಬೇರೆಯವರ ಸ್ವಾಧೀನ ಇದ್ದವು. ಸ್ವಲ್ಪ ಸಮಯದ ವರೆಗೆ ಸಿಕ್ಕದ ಸ್ಥಳದಲ್ಲಿ ಬೇಸಾಯ ಮಾಡಿ ಜೀವನ

ಮಾಡಿದರು. ಕಡೆಗೆ 145 ಕುಟುಂಬಗಳು ದಸ್ಕತುಮಾಡಿ ಆ ಸಮಯ ಜಿಲ್ಲೆಯ ಕಲೆಕ್ಟರನಾಗಿದ್ದ ಮೆಜರ ಮನ್ರೊವಿಗೆ ಅರ್ಜಿ ಮಾಡಿದರು. ಕೆಲವರಿಗೆ ಸ್ಥಳ ಸಿಕ್ಕಿತು. 1800ರಲ್ಲಿ ಈ ಉದ್ಯೋಗಸ್ಥನು ಮದರಾಸಿಗೆ ಹೋದನು. ಅನಂತರ ಬಂದ ಶೇವಣಶೊ ಕಲೆಕ್ಟರನು ಇವರ ಅರ್ಜಿಗಳನ್ನು ತೆಗೆದುಕೊಂಡು ಸಾಧ್ಯವಿದ್ದಷ್ಟು ಸ್ಥಳವನ್ನು ಅವರಿಗೆ ಕೊಡಿಸಿದನು. ಬಂದ ಕ್ರೈಸ್ತರು, ಮಿಲಾಗ್ರಿ ರುಜೆರಿಯಾ ಎಂಬ 2 ಇಗರ್ಜಿಗಳನ್ನು ಜೀರ್ಣೋದ್ಧಾರ ಮಾಡಿದ್ದಲ್ಲದೆ ವಂತಿಗೆಯಿಂದ 21 ಹೊಸ ಇಗರ್ಜಿಗಳನ್ನು ಅಲ್ಲಲ್ಲಿ ಕಟ್ಟಿಸಿದರು. ಮಂಗಳೂರು ಮತ್ತು ಬಂಟವಾಳದ ಸುತ್ತಮುತ್ತಲು 9, ಮೂಲ್ಕಿಯ ಸುತ್ತಮುತ್ತಲೂ 4, ಕುಂದಾಪುರದ ಸುತ್ತಲೂ 4, ಬಾರಕೂರಿನ ಸುತ್ತಮುತ್ತಲೂ 4. 1821ರಲ್ಲಿ ಕನ್ನಡ ಜಿಲ್ಲೆಯ ಕಲೆಕ್ಟರನಾಗಿದ್ದ ಒನರೆಬಲ್ ಥೊಮಸ್ ದೊರೆಯ ಕಾಲದಲ್ಲಿ ಇಗರ್ಜಿಯ ಸ್ಥಳಗಳಿಗೆ ತೀರ್ವೆ ಮಾಫಿಮಾಡಬೇಕೆಂದು ಅರ್ಜಿಮಾಡಿದರು. ಆಗ ಮದರಾಸು ಗವರ್ನರನಾಗಿದ್ದ ಸರ್ ಥೊಮಸ್ ಮನ್ರೊವು ಮಾಫಿಮಾಡಬೇಕೆಂದು ಅಪ್ಪಣೆಕೊಟ್ಟನು. ಆದ್ದರಿಂದ ಮಿಲಾಗ್ರಿ, ಕುಂದಾಪುರ, ವಾಮಂಜೂರು, ಪೇಜಾವರ, ಕಲ್ಯಾಣಪುರ ಇಗರ್ಜಿಗಳಿಗೆ ತೀರ್ವೆ ತೆರಲಿಕ್ಕಿಲ್ಲ. ಅಂದಿನಿಂದ ಕ್ರೈಸ್ತರು ಬಹಳ ಅಭಿವೃದ್ಧಿಯನ್ನು ಹೊಂದುತ್ತಾ ಬರುತ್ತಾರೆ. 1879ರಲ್ಲಿ ಸೆಂಟ ಎಲೊಸಿಯಃಸ್ ಕೊಲೇಜನ್ನು ಸ್ಥಾಪಿಸಿದರು. ಇದ್ಯ ಗುಡ್ಡದ ಮೇಲೆ ಲೊರೆನ್ಸ್ ಲೋಬೊ ಪ್ರಭುವಿನಿಂದ ಕೊಲೇಜಿನ ಕಟ್ಟೋಣವಿರುವ ಸ್ಥಳವನ್ನು ಪಡೆದು 1882ರಲ್ಲಿ ಬುನಾದಿ ಕಲ್ಲನ್ನು ಹಾಕಿ 1885ನೇ ಫೇಬ್ರುವರಿ 15ರಲ್ಲಿ ಕ್ಲಾಸುಗಳನ್ನು ತೆರೆದರು. 1880ರಲ್ಲಿ ಕೆಥೋಲಿಕ್ ಕ್ಲಬ್ಬನ್ನೂ 1882ರಲ್ಲಿ ಕೊಡಿಯಾಲಬೈಲ ಛಾಪಖಾನೆಯನ್ನೂ 1883ರಲ್ಲಿ ಜಪ್ಪಿನಲ್ಲಿ ಒಂದು ಸೆಮಿನೆರಿಯನ್ನೂ ಕೊನ್ವೆಂಟ ಹ್ಯಾಸ್ಕೂಲನ್ನೂ ಜಪ್ಪು ನನ್ನೆರಿಯನ್ನೂ ಸ್ಥಾಪಿಸಿದರು. 1887ರಲ್ಲಿ ಕನ್ನಡ ಜಿಲ್ಲೆಗೆ ಒಬ್ಬ ಪ್ರತ್ಯೇಕ ಬಿಶೋಪರನ್ನು ನಿಯಮಿಸಿದರು.

1888ರಲ್ಲಿ ಕೆಥೋಲಿಕ ಪ್ರೊವಿಡೆಂಟ್ ಫಂಡನ್ನೂ ಸ್ಥಾಪಿಸಿದರು. 1891ರಲ್ಲಿ ಹೊಮಿಯೊಪೆತಿಕ್ ಆಸ್ಪತ್ರೆಯನ್ನು ಕಂಕನಾಡಿಯಲ್ಲಿ ಫಾದರಮ್ಯುಲ್ಲರ ಎಂಬವರು ಸ್ಥಾಪಿಸಿದರು.

ಕ್ರೈಸ್ತರು ಮತಸಂಬಂಧದ ಕೆಲಸಗಳನ್ನು ಮಾಡುವ ಕ್ರಮಃ— 1888ನೇ ಇಸವಿಯಲ್ಲಿ ಕನ್ನಡ ಜಿಲ್ಲೆಯನ್ನು 3 ವಂಾಡಗಳಾಗಿ ಮಾಡಿದ್ದಾರೆ. 1. ಕಲ್ಯಾಣಪುರ 2. ಪೇಜಾವರ, 3. ಬಂಟವಾಳ. ಇವುಗಳಿಗೆ ಮೂವರು ವಿಗಾರು ಇದ್ದಾರೆ. ಕುಂದಾಪುರ, ಗಂಗೊಳ್ಳಿ ಬಾಕರ್ೂರು, ಕಲ್ಯಾಣಪುರ, ಕಾರ್ಕಳ, ಉಡುಪಿ, ಉದಿಯಾವರ, ಸಿರ್ವ ಈ ಇಗರ್ಜಿಗಳು ಉತ್ತರ ವಂಾಡದ ಕಲ್ಯಾಣಪುರದ ವಿಗಾರನ ಕೈಕೆಳಗೂ, ಪೇಜಾವರ, ಕಿರೆಂ ಮುಲ್ಕಿ, ಬಜಪೆ, ಹೊಸಬೆಟ್ಟು, ತಾಕೊಡೆ, ಕೂಳೂರು ಇವುಗಳು ಪೇಜಾವರ ವಿಗಾರನ ಕೈಕೆಳಗೂ, ಬಂಟವಾಳ, ವಾಮಂಜೂರು, ಮುಡಂತ್ಯಾರ, ಬೆಳತಂಗಡಿ, ಅಗ್ರಹಾರ (ಬಂಟ್ವಾಳ) ಮೊಗರನಾಡ, ಪುತ್ತೂರು, ಫಜೀರ, ಬೇಳ, ಉಳ್ಳಾಲ, ಬರಿಮಾರ ಇವುಗಳು ಬಂಟವಾಳ ವಂಾಡದ ವಿಗಾರನ ಕೈಕೆಳಗೂ ಇವೆ. 1915ರಲ್ಲಿ ರುಜೆರಿಯೊ ಮತ್ತು ಮಿಲಾಗ್ರಿ ಇಗರ್ಜಿಗಳನ್ನು ಬಹಳ ಅಂದವಾದ ನಮೂನೆಯಲ್ಲಿ ಕಟ್ಟಲಿಕ್ಕೆ ಆರಂಭಿಸಿ 1920ರಲ್ಲಿ ಇದರ ಕೆಲಸವು ಸಂಪೂರ್ಣವಾಯಿತು.

## ಪ್ರೊಟೆಸ್ಟಾಂಟ ಕ್ರೈಸ್ತರು.

ಬಾಸೆಲ್ ನಗರದ ಕೆಲವು ಭಕ್ತ ಜನರು ಲುಥರನ್ ಕ್ರೈಸ್ತ ಮತವನ್ನು ಪರದೇಶಗಳಲ್ಲಿ ಬೋಧಿಸುವುದಕ್ಕಾಗಿ ಬಾಸೆಲ್ ನಗರದಲ್ಲಿ ಒಂದು ಮಂಡಲಿಯನ್ನು ಸ್ಥಾಪಿಸಿ, ಮತಬೋಧಕರಿಗೋಸ್ಕರ ಒಂದು ವಿದ್ಯಾಮಠವನ್ನು ಸ್ಥಾಪಿಸಿ, ಅಲ್ಲಿಂದ ಸುಶಿಕ್ಷಿತರಾದ ಮತಬೋಧಕರನ್ನು ಬೇರೆ ಬೇರೆ ದೇಶಗಳಿಗೆ ಕಳುಹಿಸಲಾರಂಭಿಸಿದರು. ಆಗ ಹಿಂದೂಸ್ಥಾನದ ಪಶ್ಚಿಮ ಕರಾವಳಿಯಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ

ಮಂಗಳೂರಿನಲ್ಲಿ ಮತಬೋಧನೆಗಾಗಿ ಹೇಬಿಕ್, ಗ್ರೈನರ್, ಲೇನರ್ ಎಂಬ ಮೂವರು ಮತಬೋಧಕರನ್ನು ಕಳುಹಿಸಿದರು. ಈ ಮೂವರು ಬೋಧಕರು 1834ನೇ ವರ್ಷದ ಒಕ್ಟೋಬರ 14ರಲ್ಲಿ ಕಲ್ಲಿಕೋಟೆಯಲ್ಲಿ ಹಡಗದಿಂದ ಇಳಿದರು. ಮಲೆಯಾಳದ ಕಲೆಕ್ಟರ್ ನೆಲ್ಸನ್ ದೊರೆ ಅವರನ್ನು ಕಂಡು ಸ್ವಾಗತಮಾಡಿ, ಮನೆಗೆ ಕರಕೊಂಡು ಹೋಗಿ ಮಾತಾಡಿಸಿ ಅವರು ಬಂದ ಕಾರ್ಯವನ್ನು ಅರಿತು ಮಲೆಯಾಳದಲ್ಲಿಯೇ ಈ ಕೆಲಸವನ್ನು ಪ್ರಾರಂಭಿಸಬೇಕೆಂದು ಹೇಳಿದರೂ ಅವರು ಅದಕ್ಕೆ ಒಪ್ಪಲಿಲ್ಲ. ಇವರು ಕಲ್ಲಿಕೋಟೆಯಲ್ಲಿ ಕೆಲವು ದಿವಸಗಳಿದ್ದು ಪ್ರಯಾಣದ ಶ್ರಮವನ್ನು ಪರಿಹರಿಸಿ ಪುನಃ ಹಡಗವನ್ನು ಹತ್ತಿ ಒಕ್ಟೋಬರ 30ರಲ್ಲಿ ಮಂಗಳೂರಿನಲ್ಲಿ ಇಳಿದರು. ಕಲ್ಲಿಕೋಟೆಯಿಂದ ಹೊರಡುವಾಗ ಕಲೆಕ್ಟರ ದೊರೆ ಕೊಟ್ಟ ಕೈಕಾಗದವನ್ನು ಕನ್ನಡ ಜಿಲ್ಲೆಯ ಕಲೆಕ್ಟರ ಫಿಂಡ್ಲೆ ಅಡರ್ಸನ್ ದೊರೆಗೆ ಕೊಟ್ಟಾಗ ಅವರು ಇವರ ವಸತಿ ಬಗ್ಗೆ ಒಂದು ಮನೆಯನ್ನು ಕೊಟ್ಟು ಎಲ್ಲಾ ವಿಧದಲ್ಲಿಯೂ ಇವರಿಗೆ ಹಿತಚಿಂತಕರಾಗಿದ್ದರು. ಇವರು ತಮ್ಮ ಮತ ಬೋಧನೆಯನ್ನು ಮಾಡುತ್ತಾ ಬಂದರು. ಈಗ ಈ ಮತದವರು ಸುಮಾರು 7½ ಸಾವಿರ ಇರುತ್ತಾರೆ. ಈಗ ಈ ಮಿಶನಿನವರು, ಮಂಗಳೂರು, ಜಪ್ಪು, ಬೊಕ್ಕಪಟ್ಣ, ಕಾಸರಗೋಡು, ಉಡುಪಿ ಮುಂತಾದ ಕಡೆಗಳಲ್ಲಿ ಇಗರ್ಜಿಗಳನ್ನು ಕಟ್ಟಿಸಿದ್ದಾರೆ. ಇಲ್ಲಿಯ ಹಿಂದೂಗಳಲ್ಲಿ ಅನೇಕರು ಇವರ ಲುಥರನ್ ಕ್ರೈಸ್ತ ಮತವನ್ನು ಅವಲಂಬಿಸಿದರು. ಮತಾಂತರ ಹೊಂದಿದ ಈ ಜನರಿಗೆ ಕೆಲಸಕೊಡುವುದಕ್ಕಾಗಿ ಹಂಚಿನ ಕಾರ್ಖಾನೆಗಳನ್ನೂ, ನೇಯಿಗೆ ಕಾರ್ಖಾನೆಗಳನ್ನೂ, ಛಾಪಖಾನೆಯನ್ನೂ ಸ್ಥಾಪಿಸಿರುತ್ತಾರೆ. ಈ ಮಿಶನಿನವರು ಈ ಜಿಲ್ಲೆಯಲ್ಲಿ ಸುಮಾರು 100 ಶಾಲೆಗಳನ್ನು ಸ್ಥಾಪಿಸಿರುತ್ತಾರೆ.

# 21ನೇ ಅಧ್ಯಾಯ

## ಹೈ ದ ರಾ ಲಿ .

ಹೈದರನ ತಂದೆ ಪತ್ತೆಮುಹಮ್ಮದನಿಗೆ ಸೀರ್ಯದ ನವಾಬನಿಂದ ಕೋಲಾರದ ಫೌಜುದಾರ ಕೆಲಸವಾಗಿ, ಬೂದಿಕೋಟೆಯು ಜಹಗೀರಿಯಾಗಿ ಸಿಕ್ಕಿತು. ಈ ಬೂದಿಕೋಟೆಯಲ್ಲಿ ಕ್ರಿ. ಶ. 1721ರಲ್ಲಿ ಹೈದರನು ಹುಟ್ಟಿದನು. ಕ್ರಿ. ಶ. 1728ರಲ್ಲಿ ಪತ್ತೆಮುಹಮ್ಮದನು ಕಾಲವಾದನು. ದೊಡ್ಡಬಳ್ಳಾಪುರದ ಜಹಗೀರುದಾರನಾದ ಅಬ್ಬಾಸ್ ಕೂಲಿಖಾನನೆಂಬವನು ತನಗೆ ಬರಬೇಕಾದ ಹಣಕ್ಕಾಗಿ ಪತ್ತೇಮುಹಮ್ಮದನ ಹೆಂಡತಿಗೆ ಬಹಳವಾಗಿ ಪರಾತವಮಾಡಿದನು. ಇದಲ್ಲದೆ ಚಿಕ್ಕ ಮಕ್ಕಳಾದ ಹೈದರನನ್ನೂ ಅವನ ಅಣ್ಣನನ್ನೂ ಹಿಡಿದು ದೊಡ್ಡದೊಂದು ನಗಾರಿಯ ಕೆಳಗೆ ಕುಳ್ಳಿರಿಸಿ ಮೇಲೆ ನಗಾರಿಯನ್ನು ಬಡಿಸಿ ಕ್ರೂರ ತರದಲ್ಲಿ ಹಿಂಸೆಮಾಡುತ್ತಿದ್ದನು. ಪತ್ತೆ ಮುಹಮ್ಮದನ ಹೆಂಡತಿಯು ಇದನ್ನು ಸಹಿಸಲಾರದೆ ಬೆಂಗಳೂರಿನಲ್ಲಿದ್ದ ತನ್ನ ತಮ್ಮನ ಮೂಲಕ ಮಹಿಸೂರು ಸಂಸ್ಥಾನದಿಂದ ಹಣವನ್ನು ತೆಗೆದುಕೊಂಡು ಅಬ್ಬಾಸ ಕೂಲಿಖಾನನ ಸಾಲವನ್ನು ತೀರಿಸಿ ಮಕ್ಕಳೊಡನೆ ಬೆಂಗಳೂರಿಗೆ ಬಂದಳು. ಹೈದರನು ದೊಡ್ಡವನಾದ ಮೇಲೆ ಸೈನ್ಯಕ್ಕೆ ಸೇರಿಕೊಂಡನು.

ಮೈಸೂರು ಅರಸನ ಸರ್ವಾಧಿಕಾರಿಯಾಗಿದ್ದ ಕರಾಚೂರಿ ನಂಜರಾಜಯ್ಯನು ದೇವನಹಳ್ಳಿಗೆ ಮುತ್ತಿಗೆಹಾಕಿ ಅದನ್ನು ಸ್ವಾಧೀನಪಡಿಸಿಕೊಳ್ಳುವಾಗ ಹೈದರನು ಮೊದಲು ತನ್ನ ಶಕ್ತಿಯನ್ನು ಹೊರಪಡಿಸಿದನು. ಇದಕ್ಕಾಗಿ ಇವನು 50 ಕುದುರೆಸವಾರರ ಮತ್ತು 200 ಕಾಲಾಳುಗಳ ಸೈನ್ಯದ ಅಧಿಕಾರಿಯಾದನು. ಹೈದರನು ತಿರುಚಿನಾಪಳ್ಳಿಯ ಹತ್ತರ ತೋರಿಸಿದ ಶೌರ್ಯಕ್ಕೆ ಮೆಚ್ಚಿ ನಂಜರಾಜಯ್ಯನು ಇವನಿಗೆ ಡಿಂಡಿಗಲ್ಲಿನಲ್ಲಿ ಫೌಜುದಾರನ ಕೆಲಸವನ್ನು ಕೊಟ್ಟನು.

ಕ್ರಿ. ಶ. 1758ರಲ್ಲಿ ಮೈಸೂರು ಅರಸರ ಸೈನ್ಯದವರಿಗೆ ಸಂಬಳವು ಸಿಕ್ಕದೆ ಇದ್ದುದರಿಂದ ಅವರು ದಂಗೆ ಎಬ್ಬಿಸಿದರು. ಆ ದಂಗೆಯನ್ನಡ

ಗಿಸುವ ಕೆಲಸವನ್ನು ಹೈದರನಿಗೂ ಅವನ ಕಡೆಯುವನಾದ ಖಂಡೆರಾಯ ನಿಗೂ ಒಪ್ಪಿಸಿದರು. ಇವರು ಉಪಾಯದಿಂದ ದಂಗೆಯನ್ನು ಅಡಗಿಸಿ ದರು. ಇದಕ್ಕಾಗಿ ಬೆಂಗಳೂರು ಕೋಟೆಯೂ ಅದಕ್ಕೆ ಸೇರಿದ ಸೀಮೆಯೂ ಹೈದರನಿಗೆ ಜಹಗೀರಾಗಿ ಕೊಡಲ್ಪಟ್ಟವು.

ಕ್ರಿ. ಶ. 1759ರಲ್ಲಿ ಮರಾಟೆಯವರು ದಂಡೆತ್ತಿಕೊಂಡು ಬಂದಾಗ ಹೈದರನು ಉಪಾಯದಿಂದ ಅವರು ಹಿಂತಿರುಗಿಹೋಗುವ ಹಾಗೆ ಮಾಡಿದನು. ನಂಜರಾಜಯ್ಯನು ಇವನ ಸಾಹಸಕ್ಕೆ ಮೆಚ್ಚಿ ಇವನಿಗೆ ಬಹದ್ದೂರ ಎಂಬ ಬಿರುದನ್ನು ಕೊಟ್ಟು, ಆನೆ, ಕುದುರೆ, ನವಪತ್ತು, ತಾಸಿಂ (ಅಂದರೆ ಹೈದರನು ಸಭೆಗೆ ಬಂದಾಗ ಎಲ್ಲರೂ ಎದ್ದುನಿಂತು, ಕೂಡ್ರಿಸಿಕೊಳ್ಳುವದು) ಈ ಮರ್ಯಾದೆಗಳನ್ನು ಕೊಟ್ಟನು.

ಹೈದರನ ಪ್ರಾಬಲ್ಯವು ನಂಜರಾಜಯ್ಯನಿಗೆ ಕೇಡನ್ನು ತಂದಿತು. ದೊಡ್ಡ ಕೃಷ್ಣರಾಜ ಒಡೆಯನ ಹೆಂಡತಿ ದೇವರಾಜಮ್ಮಣಿಯು ಹೈದರನು ಬಲಿಷ್ಠನೆಂದು ತಿಳಿದು, ಅವನ ಮೂಲಕ ನಂಜರಾಜಯ್ಯನ ಕೈಯಿಂದ ತಪ್ಪಿಸಿಕೊಳ್ಳಬೇಕೆಂದು ಯೋಚಿಸಿ ಖಂಡೇರಾಯನ ಸಹಾಯದಿಂದ ಹೈದರನನ್ನು ತನ್ನ ಕಡೆಗೆ ತಿರುಗಿಸಿದಳು. ಇದರಿಂದ ಇನ್ನೂ ಕೆಲವು ಸೀಮೆಗಳು ಹೈದರನ ಕೈಸೇರಿದವು. ಖಂಡೇರಾಯನು ಪ್ರಧಾನಿಯಾದನು. ನಂತರ ಖಂಡೆರಾಯನು ಹೈದರನ ಮೇಲೆ ಒಳಸಂಚುನಡಿಸಿದ್ದಕ್ಕಾಗಿ ಹೈದರನು ಅವನನ್ನು ಸೆರೆಯಲ್ಲಿಟ್ಟನು.

ಹೈದರನು ಇಷ್ಟು ಅಧಿಕಾರವು ಸಿಕ್ಕಿದ ಮೇಲೆ ದಕ್ಷಿಣದ ಸುಭೆದಾರ ಸಲಬತ್‌ಜಂಗನ ತಮ್ಮನಾದ ಬಸಾಲತ್ ಜಂಗನೊಡನೆ ಸ್ನೇಹವನ್ನು ಬೆಳಸಿದನು. ಬಳಿಕ “ನವಾಬ ಹೈದರಲ್ಲಿ ಖಾನ ಬಹದ್ದೂರ” ಎಂಬ ಹೆಸರಿನಿಂದ ಸೀರ್ಯದ ನವಾಬಗಿರಿಗೆ ಅವನಿಂದ ಸನ್ನದನ್ನು ಪಡೆದನು. ಸೀರ್ಯವು 1761ರಲ್ಲಿ ಸ್ವಾಧೀನವಾಯಿತು. ಅನಂತರ ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ ಹರಪನಹಳ್ಳಿ, ರಾಯದುರ್ಗ,

ಚಿತ್ರದುರ್ಗ, ಪಾಳೆಯಗಾರರಿಂದ ಪಾಡಿಕೆಯಾಗಿ ಬರಬೇಕಾಗಿದ್ದ ಹಣವನ್ನು ತೆಗೆದುಕೊಂಡನು. ಹೈದರನು ಚಿತ್ರದುರ್ಗದ ಬಳಿಯಲ್ಲಿರುವಾಗ ಬಿದನೂರು ಸಂಸ್ಥಾನವನ್ನು ಜಯಿಸುವುದಕ್ಕೆ ಕಾರಣವು ದೊರೆಯಿತು.

ಬಿದನೂರು ಸಂಸ್ಥಾನವು ಈ ಸಮಯದಲ್ಲಿ ಬೂದಿಬಸವಪ್ಪ ನಾಯಕನ ರಾಣಿಯಾಗಿದ್ದ ವೀರಮ್ಮಾಜಿಯ ಆಳಿಕೆಯಲ್ಲಿತ್ತು. ವೀರಮ್ಮಾಜಿಯು ಚನ್ನಬಸವಪ್ಪನೆಂಬವನನ್ನು ದತ್ತಕ್ಕೆ ತೆಗೆದುಕೊಂಡಿದ್ದಳು. ಬಸವಪ್ಪನಾಯಕನು ಸತ್ತಮೇಲೆ ವೀರಮ್ಮಾಜಿಯು ಕೆಟ್ಟನಡತೆಗೆ ಬಿದ್ದಳು. ಚನ್ನಬಸವಪ್ಪನು ಇದನ್ನು ನೋಡಿ ಸಹಿಸಲಾರದಿರಲು ವೀರಮ್ಮಾಜಿಯು ಅವನಿಗೆ ಎಣ್ಣೆಯನ್ನೊತ್ತುತ್ತಿದ್ದ ಜಟ್ಟಿಯೊಬ್ಬನನ್ನು ಪ್ರೇರೇಪಿಸಿ ಅವನ ಕುತ್ತಿಗೆಯನ್ನು ಮುರಿಸಿದಳು. ಕ್ರಿ. ಶ. 1755ರಲ್ಲಿ ವೀರಮ್ಮಾಜಿಯು ಸೋಮಶೇಖರ ಎಂಬ ಇನ್ನೊಬ್ಬನನ್ನು ದತ್ತಕ್ಕೆ ತೆಗೆದುಕೊಂಡಳು. ಇವನೂ ವೀರಮ್ಮಾಜಿಯ ಕೆಟ್ಟ ನಡತೆಯನ್ನು ಸಹಿಸಲಾರದೆ ಇವಳನ್ನು ಮುರಿಯಬೇಕೆಂದು ಚಿತ್ರದುರ್ಗದಲ್ಲಿದ್ದ ಹೈದರನೊಡನೆ ದೂರುಕೊಟ್ಟನು. ಆಗ ಹೈದರನು ರಾಣಿ ವೀರಮ್ಮಾಜಿಯನ್ನು ತನ್ನ ರಾಜಾಸ್ಥಾನಕ್ಕೆ ಬರಲಿಕ್ಕೆ ಒಬ್ಬ ರಾಯಸದವನೊಡನೆ ಹೇಳಿಕಳುಹಿಸಿದನು. ವೀರಮ್ಮಾಜಿಯು ಬಹಳ ಧೀರೆಯಾಗಿದ್ದಳು. ಅವಳು, ತಾನು ರಾಣಿಯಾಗಿದ್ದೇನೆಂದೂ, ತನಗೆ ಮೇಲಾಧಿಕಾರಿಗಳು ಯಾರೂ ಇಲ್ಲವೆಂದೂ ತಾನು ಬರುವದಿಲ್ಲವೆಂದೂ ರಾಯಸದವನೊಡನೆ ಹೇಳಿಕಳುಹಿಸಿದಳು. ಹೈದರನು ಯುದ್ಧಕ್ಕೆ ಸಿದ್ಧನಾದನು. ಬಿದನೂರಿನ ದಾರಿಯು ಸುಲಭಸಾಧ್ಯವಾಗಿರಲಿಲ್ಲ.

ಬಿದನೂರು ರಾಜ್ಯದ ರಾಜಧಾನಿಯಾಗಿದ್ದ ರಾಣಾಬಿದನೂರು ಬಹಳ ದೊಡ್ಡದೂ ಜನಭರಿತವಾದದ್ದೂ ಆಗಿತ್ತು. ಅದರಲ್ಲಿ 60 ಸಾವಿರ ಜನರಿದ್ದರು. 30 ಸಾವಿರ ಕ್ರೈಸ್ತರೇ ಇದ್ದರು. ಇವರಿಗೆ ಇಲ್ಲಿ ಹೆಚ್ಚು ಸ್ವಾತಂತ್ರ್ಯವಿತ್ತು. ಇದರ ಹೊರವಲಯವು 3 ಹರದಾರಿ ಸುತ್ತಳತೆಯುಳ್ಳದ್ದಾಗಿತ್ತು. ಮಾರ್ಗಗಳೆಲ್ಲಾ ಪಗಡೆ ಸಾಲಿನಲ್ಲಿ

ನೇರಾಗಿಯೂ ಉದ್ದವಾಗಿಯೂ ಇದ್ದವು. ಹೆಚ್ಚಾದ ಮಾರ್ಗ ಗಳಲ್ಲಿ ಐಶ್ವರ್ಯವಂತರ ಮನೆಗಳೂ, ದೊಡ್ಡ ಹುದ್ದೇದಾರರ ಮನೆಗಳೂ ಇದ್ದವು. ಪ್ರತಿ ಒಂದು ಮನೆಯು ಹಿತ್ತಲ ಮಧ್ಯದಲ್ಲಿತ್ತು. ದೊಡ್ಡ ದೊಡ್ಡ ಕೆರೆಗಳೂ ಇದ್ದವು. ಮಾರ್ಗದ ಇಕ್ಕಡೆಗಳಲ್ಲಿಯೂ ಸಾಲು ಮರಗಳಿದ್ದವು. ಈ ಪಟ್ಟಣದ ಹತ್ತಿರ ಒಂದು ಗುಡ್ಡವಿದ್ದು ಅದರ ಮೇಲೆ ಪಟ್ಟಣದ ರಕ್ಷಣೆಗಾಗಿ ಒಂದು ಬಲವಾದ ಕೋಟೆ ಇತ್ತು. ಈ ಪರ್ವತದಿಂದ 20 ಹರದಾರಿ ದೂರಕ್ಕೆ ಸುತ್ತಲೂ ಕಾಡುಗಳಿಂದ ತುಂಬಿದ್ದು, ಒಂದೇ ಒಂದು ದಾರಿಯಾದರೂ ಇಲ್ಲದ ಪರ್ವತಗಳೂ ಇದ್ದವು. ಇವುಗಳ ಮೇಲೆಲ್ಲಾ ಕೋಟೆಗಳಿದ್ದವು, ಒಂದು ಕಡೆಯಲ್ಲಿ ಮಾತ್ರವೇ ದಾರಿ ಇತ್ತು. ಇಲ್ಲಿ ಬಹಳ ಬಲವಾದ ಕೋಟೆಯೂ, ದೊಡ್ಡ ಸೈನ್ಯವೂ ಇತ್ತು. ಕಾಡುಗಳಲ್ಲಿ ಹೆಬ್ಬುಲಿಗಳೂ, ಕರಡಿಗಳೂ, ಆನೆಗಳೂ, ಹೆಬ್ಬಾವುಗಳೂ ಇದ್ದುದರಿಂದ ಕಾಡುಗಳನ್ನು ದಾಟಿ ಕೊಂಡು ಬರುವದೂ ಅಸಾಧ್ಯವಾಗಿತ್ತು.

ಹೈದರನೇ ಬಿದನೂರನ್ನು ಹಿಡಿಯುವದಾದರೆ ಸಾಧ್ಯವಾಗಿರಲಿಲ್ಲ. ಆದರೆ ಸೋಮಶೇಖರನೂ ವೀರಮ್ಮಾಜಿಯ ಹಗೆಗಳಾದ ಪ್ರಜೆಗಳೂ, ಬೂದಿಬಸವಪ್ಪ ನಾಯಕನ ಕಾಲದಲ್ಲಿ ಸರ್ವಾಧಿಕಾರಿಯಾಗಿದ್ದ ಲಿಂಗಣ್ಣ ನೆಂಬವನೂ ಹೈದರನ ಕಡೆಗೆ ಸೇರಿಕೊಂಡು ಬಂದುದರಿಂದ ಸಾಧ್ಯ ವಾಯಿತು. ಕ್ರಿ ಶ. 1763ರಲ್ಲಿ ಹೈದರನು 6 ಸಾವಿರ ಕುದುರೆ ಸವಾರರನ್ನೂ ಪರ್ವತಗಳಲ್ಲಿಯೂ ಕಾಡುಗಳಲ್ಲಿ ಸಂಚರಿಸಲಿಕ್ಕೆ ಪ್ರವೀಣ ರಾದ "ಕೆಲೆರೊ" ಎಂಬ ಅನೇಕ ಜನರನ್ನೂ ಕರಕೊಂಡು ಸೋಮ ಶೇಖರನೊಡನೆ ಹೊರಟನು. ಸೈನ್ಯದವರಿಗೋಸ್ಕರ ಅಕ್ಕಿಯನ್ನೂ ಇತರ ಸಾಮಗ್ರಿಗಳನ್ನೂ ಎತ್ತುಗಳ ಮೇಲೆಯೂ, ಕತ್ತೆಗಳ ಮೇಲೆಯೂ ಹೊರಿಸಿಕೊಂಡು ಬಂದಿದ್ದನು. ವೀರಮ್ಮಾಜಿಗೆ, ಹೈದರನು ಬರುವ ವರ್ತಮಾನವು ತಿಳಿಯುವ ಮೊದಲೇ ಹೈದರನು ಬಿದನೂರಿನ ಸುತ್ತಲೂ ಇರುವ ಪರ್ವತಗಳನ್ನು ಕಳ್ಳದಾರಿಯಿಂದ ದಾಟಿ ಪಟ್ಟಣದ ಸುತ್ತಲೂ

ಇರುವ ವೈದಾನಿಗೆ ಬಂದು ಇಳಿದನು. ವೀರವಮ್ಮಾಜಿಯು ತಲೆತಪ್ಪಿಸಿ ಕೊಂಡು ಓಡಿಹೋಗಿದ್ದಳು. ಆದರೆ ಹೈದರನು ಸೈನಿಕರನ್ನು ಕಳುಹಿಸಿ ಅವಳನ್ನು ಹಿಡಿಸಿ ತನ್ನ ಪಾಳಯಕ್ಕೆ ತರಿಸಿದನು.

ಹೈದರನು ವೀರಮ್ಮಾಜಿಗೆ ಬುದ್ಧಿಹೇಳಿ ರಾಜ್ಯವನ್ನು ಸೋಮ ಶೇಖರನಿಗೆ ಬಿಡಿಸಿಕೊಟ್ಟು, ಅವಳಿಗೆ ಜೀವನಕ್ಕೆ ಹಣವನ್ನೂ ನಿಲ್ಲು ವುದಕ್ಕೆ ಬೇರೆ ಅರಮನೆಯನ್ನೂ ಕೊಡುವ ಹಾಗೆ ನಿಶ್ಚಯಿಸಿದನು. ಸೋಮಶೇಖರನಿಗೆ ಬಹಳ ವೈಭವದಿಂದ ಪಟ್ಟವಾಯಿತು. ಇದಕ್ಕಾಗಿ ಸೋಮಶೇಖರ ನಾಯಕನು ಹೈದರನಿಗೆ ಕಪ್ಪ ಕೊಡುತ್ತೇನೆಂದೂ, ಮಂಗಳೂರು ಬಂದರವನ್ನು ಕೊಡುತ್ತೇನೆಂದೂ ಕರಾರುಮಾಡಿದನು. ವೀರಮ್ಮಾಜಿಯೂ ಸೋಮಶೇಖರ ನಾಯಕನೂ ಇದಕ್ಕೆ ಸಹಿಹಾಕಿ ದರು. ಹೈದರನು ತನ್ನ ಸೈನ್ಯವನ್ನು ಬಿದನೂರಿನ ಸುತ್ತಲೂ ಇರುವ ಕೆಲವು ಕೋಟೆಗಳಲ್ಲಿ ಇಟ್ಟು ಬಿದನೂರು ಕೋಟೆಯಲ್ಲಿಯೂ ಸ್ವಲ್ಪ ಸೈನ್ಯವಿಟ್ಟು ಒಂದು ಸೈನ್ಯವನ್ನು ತೆಗೆದುಕೊಂಡು ಮಂಗಳೂರಿಗೆ ಬಂದನು.

ರಾಣಿ ವೀರಮ್ಮಾಜಿಯು ತನ್ನ ಕೈಯಿಂದ ರಾಜ್ಯಭಾರವು ತಪ್ಪಿದ್ದ ಕ್ಕಾಗಿ ಬಹಳ ಸಿಟ್ಟುಗೊಂಡು ತನ್ನ ಸಾಕಣೆಮಗನಾದ ಸೋಮಶೇಖರ ನೊಡನೆ ದ್ವೇಷವನ್ನು ತೋರಿಸಿಕೊಳ್ಳದೆ ಯಾವ ಉಪಾಯದಿಂದ ಲಾದರೂ ಹೈದರನನ್ನು ನಾಶಮಾಡಬೇಕೆಂದು ಒಂದು ಉಪಾಯವನ್ನು ಹುಡುಕಿದಳು. ಅವಳು ತನ್ನ ಸ್ವತಂತ್ರವಾದ ರಾಜ್ಯವನ್ನು ಹೈದರನಿಗೆ ಒಪ್ಪಿಸಿದ್ದು ಬರೀ ಹುಚ್ಚುತನವೆಂದೂ, ತಮ್ಮಂಥಾ ರಾಜಕುಟುಂಬದವ ರಿಗೆ ಮಾನಹಾನಿಕರವೆಂದೂ ಸಾಕಣೆ ಮಗನಿಗೆ ಬುದ್ಧಿಹೇಳಿ, ತಾವಿಬ್ಬರೂ ಕೂಡಿ ಹೈದರನು ಮಂಗಳೂರಿನಿಂದ ಹಿಂತಿರುಗಿ ಬಂದು ಅರಮನೆ ಯಲ್ಲಿರುವಾಗ ಅರಮನೆಯಿಂದ ಗುರುಮನೆಗೆ ಇರುವ ಸುರಂಗದಲ್ಲಿ ಮದ್ದು ತುಂಬಿಸಿ ಹೈದರನು ರಾತ್ರಿ ಊಟಕ್ಕೆ ಕೂತ ಸಮಯ ಮದ್ದಿಗೆ ಬೆಂಕಿಕೊಟ್ಟು ಅರಮನೆಯನ್ನೇ ಹಾರಿಸಿಬಿಡಬೇಕೆಂದು ಮಗನೊಡನೆ ಹೇಳಿದಳು. ಸೋಮಶೇಖರನು ಈ ಮಾತಿಗೆ ಒಪ್ಪಿ, ಹೈದರನು ತನಗೆ

ಮಾಡಿದ ಉಪಕಾರವನ್ನು ಮರೆತು ತನ್ನ ತಾಯಿಯ ದುರಾಲೋಚನೆಯನ್ನು ತಿಳಿಯದೆ ಎಲ್ಲಾ ಸಂಗತಿಗಳಿಗೆ ಒಪ್ಪಿ ಎಲ್ಲವನ್ನೂ ಸಿದ್ಧಪಡಿಸಿದನು. ಅರಮನೆಯು ಬಿದ್ದು ಹೈದರನು ಸತ್ತುಹೋದ ಕೂಡಲೇ ಬಿದನೂರಿನ ಸೈನ್ಯದವರು, ಹೈದರನ ಸೈನ್ಯದಮೇಲೆ ಬೀಳುವ ಹಾಗೆ ಸೈನ್ಯವು ಸಿದ್ಧವಾಗಿತ್ತು. ವೀರಮ್ಮಾಜಿಗೆ ಈ ಆಲೋಚನೆಗಳನ್ನು ಕಲಿಸಿಕೊಟ್ಟವನು ಅವಳ ಸ್ನೇಹಿತನಾದ ನಿಂಬಿಯನೆಂಬ ಒಬ್ಬ ಬ್ರಾಹ್ಮಣನು. ಈ ಬ್ರಾಹ್ಮಣನಿಗೂ ದೇವಸ್ಥಾನದ ಅರ್ಚಕನಿಗೂ ಬಹಳ ದ್ವೇಷವಿದ್ದಿತು. ಈ ಅರ್ಚಕನು ಈ ಒಳಸಂಚನ್ನು ತಿಳಿದು, ವೀರಮ್ಮಾಜಿಯನ್ನೂ ನಿಂಬಿಯನೆಂಬ ಈ ಬ್ರಾಹ್ಮಣನನ್ನೂ ಕೊಲ್ಲಿಸುವುದಕ್ಕೆ ಇದೇ ತಕ್ಕ ಸಮಯವೆಂದು ತಿಳಿದು, ಹೈದರನು ಮಂಗಳೂರಿನಿಂದ ಹಿಂತಿರುಗಿ ಬಂದು ಅರಮನೆಯೊಳಗೆ ಹೋಗಿ, ಹೈದರನೂ, ವೀರಮ್ಮಾಜಿಯೂ, ಸೋಮಶೇಖರನೂ ಕುಳಿತಿರುವಾಗಲೇ ನಡೆದ ಒಳಸಂಚನ್ನೆಲ್ಲ ಹೈದರನಿಗೆ ಧೈರ್ಯದಿಂದ ತಿಳಿಸಿದನು. ಹೈದರನು ಈ ಸಂಗತಿಯನ್ನು ವಿಚಾರಿಸಲು ಎಲ್ಲವೂ ಅರ್ಚಕನು ಹೇಳಿದ ರೀತಿಯಲ್ಲಿಯೇ ಸಿದ್ಧವಾಗಿತ್ತು. ಹೈದರನು ವೀರಮ್ಮಾಜಿಯನ್ನೂ ಸೋಮಶೇಖರ ನಾಯಕನನ್ನೂ ಸೆರೆಹಿಡಿದು ಮದ್ದಗಿರಿಗೆ ಕಳುಹಿಸಿದನು.

ಬಳಿಕ ಬಿದನೂರಿಗೆ "ಹೈದರನಗರ"ವೆಂದು ಹೆಸರನ್ನಿಟ್ಟು ಅಲ್ಲಿ ಒಂದು ಟಂಕಸಾಲೆಯನ್ನು ಇಡಿಸಿ "ಹೈದರಿ" ಅಥವಾ "ಬಹದ್ದರಿ" ಗಳೆಂಬ (3½ ರೂ. ಕ್ರಯದ) ಚಿನ್ನದ ನಾಣ್ಯಗಳನ್ನು ಮಾಡಿಸಿ ಸೀಮೆಯಲ್ಲೆಲ್ಲಾ ಅವುಗಳನ್ನು ಉಪಯೋಗಿಸುವಂತೆ ಮಾಡಿದನು.

ಕನ್ನಡ ಜಿಲ್ಲೆಯು ಸಿಕ್ಕಿ ಹೈದರನು ಬಹಳ ಹಿಗ್ಗಿಕೊಂಡನು. ಎಲ್ಲಾ ತರದ ವಸ್ತುಗಳೂ ಇಲ್ಲಿ ಸಿಕ್ಕುತ್ತಿದ್ದವು. ಅಕ್ಕಿ, ಒಳ್ಳೇಮೆಣಸು, ದಾಲಚೀನಿ, ಏಲಕ್ಕಿ, ಗಂಧ, ಜಂತ ಇವು ಬಹಳವಾಗಿ ಸಿಕ್ಕುತ್ತಿದ್ದವು. ಪೋರ್ತುಗೀಸರೂ ಇತರ ಯುರೋಪೀಯ ಜನಾಂಗದವರೂ ಕನ್ನಡ ಜಿಲ್ಲೆಗೆ ಇಂಡಿಯದ ಕಣಜವೆಂದೂ, ಮಳಿಗೆಯೆಂದೂ ಕರೆಯುತ್ತಿದ್ದರು.

ಪರ್ವತಗಳಲ್ಲಿ ಚಿನ್ನ, ಕೆಂಪು, ವಜ್ರ ಮತ್ತು ಅಮೂಲ್ಯರತ್ನಗಳ ಗನಿಗಳಿದ್ದುವು. ಬಿದನೂರು ಕೋಟೆಯಲ್ಲಿಯೇ ಚಿನ್ನದ ಗನಿ ಇದ್ದಿತು. ಕನ್ನಡ ಜಿಲ್ಲೆಯ ಕರಾವಳಿಯಲ್ಲಿ ಬಂದರುಗಳು ಅನೇಕ ಇದ್ದವು. ಹೈದರನಿಗೆ ನೌಕಾಸೈನ್ಯವಿಡಬೇಕೆಂಬ ಆಸೆ ಬಹಳವಾಗಿತ್ತು. ಅದೂ ಪೂರೈಸಿದ ಹಾಗಾಯಿತು. ಹೈದರನಿಗೆ ಬಿದನೂರಿನಲ್ಲಿ ಹೆಚ್ಚು ಹಣವು ಸಿಕ್ಕಿತು. ಇದಕ್ಕಾಗಿ ಹೈದರನು ಸಂತೋಷಪಟ್ಟು ತನ್ನ ಸೈನಿಕರಿಗೆಲ್ಲಾ ಅರ್ಧ ವರುಷದ ಸಂಬಳವನ್ನು ಉಚಿತಾರ್ಥವಾಗಿ ಕೊಟ್ಟನು. ಮಂಗಳೂರಿಗೆ ಕೊಡಿಯಾಲ ಬಂದರ ಅಥವಾ ರಾಜಬಂದರ (Royal Port) ಎಂದು ಹೆಸರಿಟ್ಟನು.

ಚಿತ್ರಭಾನು ಸಂವತ್ಸರದಲ್ಲಿ (ಕ್ರಿ. ಶ. 1763ರಲ್ಲಿ) ಹೈದರಲ್ಲಿಯು ನಗರವನ್ನು ಸ್ವಾಧೀನಮಾಡಿಕೊಂಡು ಕನ್ನಡ ಜಿಲ್ಲೆಯಲ್ಲಿರುವ ಒಳಅರಸುಗಳಿಂದ ಕೌಲುಮಾಡಿಸಿಕೊಳ್ಳುವುದಕ್ಕಾಗಿ ಹೊಸಂಗಡಿಗಟ್ಟದ ದಾರಿಯಾಗಿ ಕಾರ್ಕಳಕ್ಕೆ ಬಂದನು. ಆಗ ಮೂಡಬಿದರೆ ಅರಸು ಚಂದ್ರಶೇಖರ ಚಿಕ್ಕರಾಯ ಚೌಟನು ಅಲ್ಲಿಗೆ ಹೋಗಿ ಕಾಣಿಸಿಕೊಂಡಲ್ಲಿ ಹೈದರನು ಎದ್ದು ಚಿಕ್ಕರಾಯನನ್ನು ಕುಳ್ಳಿರಿಸಿಕೊಂಡು ಸನ್ಮಾನ ಬಹುಮಾನಗಳಾಗಿ ಇಬ್ಬರೂ ಮೂಡಬಿದರೆಗೆ ಸಂಗಡಲೇ ಬಂದರು. ಹೈದರಾಲಿಯು ಪೊನ್ನಚಾರು ಮಠದಲ್ಲಿ ಉಳಕೊಂಡನು. ಚಂದ್ರಶೇಖರ ಚಿಕ್ಕರಾಯ ಚೌಟನು ರಾಜವೈಭವಗಳಿಂದ ಭೇಟಿಕೊಟ್ಟನು. ಆಗ ಹೈದರನು ಚೌಟರ ಸೀಮೆಯ ಲೆಖ್ಖಪತ್ರಗಳನ್ನು ತನಖಿಮಾಡಿ ವರುಷಕ್ಕೆ 14,000 ವರಹ ಕಪ್ಪಕೊಡಬೇಕೆಂದು ನಿಶ್ಚಯಿಸಿದನು. ಅಲ್ಲಿಂದ ಮಂಗಳೂರಿಗೆ ಹೋಗಲು ಲಕ್ಷ್ಮಪ್ಪರಸ ಬಂಗರಾಜನು ಹೈದರನ ಭೇಟಿ ಮಾಡಿದನು. ಆಗ ಬಂಗರ ಸಂಸ್ಥಾನದಿಂದ 14,000 ವರಹ ಕಪ್ಪ ಕೊಡಬೇಕೆಂದು ನಿಶ್ಚಯಿಸಿದನು. ವೇಣೂರು, ಅಳದಂಗಡಿ ರಾಜ್ಯದ ಅರಸು ತಿಮ್ಮಣ್ಣಾಜಿಲನು ಮಂಗಳೂರಿಗೆ ಬಂದು ಹೈದರನ ಭೇಟಿ ಮಾಡಿ ವೇಣೂರು ಸೀಮೆಯಿಂದ 7000 ವರಹ ಕಪ್ಪಕೊಡಬೇಕೆಂದು

ನಿಗದಿಮಾಡಿದನು. ಈ ಸಮಯದಲ್ಲಿ ಬಿದನೂರು ಅರಸನ ಕಡೆಯಿಂದ ದಾಮಾಜಿಪಂತನು ಮಂಗಳೂರು ಹೋಬಳಿಯ ಗವರ್ನರನಾಗಿದ್ದನು. ಹೈದರನು ಇವನನ್ನೇ ತನ್ನ ಕಡೆಯ ಅಧಿಕಾರಿಯಾಗಿ ನೇಮಿಸಿದನು. ಮಂಗಳೂರಿನಲ್ಲಿ ಯುದ್ಧದ ಹಡಗುಗಳು ನಿಲ್ಲುವುದಕ್ಕೆ ಒಂದು ರೇವನ್ನು ಕಟ್ಟಿಸಿ ಮದ್ದು ಗುಂಡು ಇಡುವುದಕ್ಕೆ ಒಂದು ಕಟ್ಟೋಣವನ್ನು ಕಟ್ಟಿಸಿದನು. ಹೈದರನು ಕಾರವಾರ ಮುಂತಾದ ಬಂದರುಗಳನ್ನು ತನ್ನ ಸ್ವಾಧೀನವಮಾಡಿಕೊಂಡು ಬಿದನೂರಿಗೆ ತೆರಳಿದನು.

ಮಂಗಳೂರಿನಲ್ಲಿದ್ದಾಗ ಕನ್ನಡ ರಾಜ್ಯದಲ್ಲಿ, ಅರಬಸ್ಥಾನದಿಂದ ಬಂದು ನೆಲೆನಿಂತ ಅರಬಿಮೂರರೂ, ಮಾಪಿಳ್ಳೆಯರೂ ರಾಜ್ಯವು ತಮ್ಮ ಮತದ ಅರಸನ ಸ್ವಾಧೀನವಾಯಿತೆಂದು ಸಂತೋಷಪಟ್ಟು ಕಣ್ಣಾನೂರಿನ ರಾಜನಾದ ಸುಲ್ತಾನಅಲಿ ರಾಜನನ್ನು ಮುಂದಾಳಾಗಿಟ್ಟುಕೊಂಡು ಹೈದರನಿಗೆ ಭೇಟಿಕೊಟ್ಟರು. ವ್ಯಾಪಾರಸ್ಥರಾದ್ದರಿಂದಲೂ ಸಮುದ್ರದ ವ್ಯಾಪಾರವು ಇವರ ಕೈಯಲ್ಲಿಯೇ ಇದ್ದುದರಿಂದಲೂ ಇವರು ಬಹಳ ಐಶ್ವರ್ಯವಂತರಾಗಿದ್ದರು. ಇಲ್ಲಿಯ ಒಳಅರಸುಗಳಿಗೂ ಹಿಂದೂ ಸಾಹುಕಾರರಿಗೂ ಹಣವನ್ನು ಹೆಚ್ಚಿನ ದರದ ಬಡ್ಡಿಗೆ ಕೊಟ್ಟು ವ್ಯಾಪಾರಕ್ಕೆ ಸಹಾಯಮಾಡುತ್ತಿದ್ದರು. ಹೈದರನು ಅವರ ನಜರುಕಾಣಿಕೆಗಳನ್ನು ಸ್ವೀಕರಿಸಿ ಅವರನ್ನು ಪೂರ್ಣ ಪ್ರೀತಿಯಿಂದ ನಡಿಸುತ್ತೇನೆಂಬದಾಗಿ ನಂಬಿಕೆಕೊಟ್ಟನು. ಮಾಪಿಳ್ಳೆಯರು ಒಳ್ಳೇ ನಾವಿಕರಾಗಿದ್ದರು. ಸುಲ್ತಾನ ಆಲಿರಾಜನೊಡನೆ ದೊಡ್ಡ ಹಡಗುಪಡೆಯೂ ಇತ್ತು. ಹೈದರನಿಗೆ ತನಗೊಂದು ಹಡಗುಪಡೆ ಇರಬೇಕೆಂದು ಬಹಳ ಆಸೆಯಿತ್ತು. ಏಕೆಂದರೆ, ಈ ಸಮಯದಲ್ಲಿ ಮರಾಟೆಯವರೂ ಪೋರ್ತುಗೀಸರೂ ಬಂದು ಕರಾವಳಿಯ ಜನರಿಗೆ ಬಹಳ ಹಾವಳಿಮಾಡುತ್ತಿದ್ದರು. ಇಕ್ಕೇರಿ ನಾಯಕರು ಇದಕ್ಕಾಗಿ ಪ್ರತಿಯೊಂದು ಹೊಳೆಯ ದ್ವಾರದ ಇದಿರಿಗಾಗಲೀ, ಹತ್ತಿರವಾಗಲೀ ಬಲವಾದ ಕೋಟೆಗಳನ್ನು ಕಟ್ಟಿಸಿ ಸೈನ್ಯವನ್ನಿಟ್ಟಿದ್ದರು. ಹೈದರನು ಮಲ್ಪೆಯಲ್ಲಿ ಬಂಡೆಕಲ್ಲಿನ ಮೇಲೆ

"ದರಿಯಾ ಬಹದ್ದೂರಗಡ" ಎಂಬ ಕೋಟೆಯನ್ನೂ ಕುಂದಾಪುರದಲ್ಲಿ ಒಂದು ಕೋಟೆಯನ್ನೂ, ಕಾಪುವಿನಲ್ಲಿ ಒಂದು ಕೋಟೆಯನ್ನೂ ಕಟ್ಟಿಸಿದನು. ಸುಲ್ತಾನ ಆಲಿರಾಜನನ್ನು ತನ್ನ ಹಡಗುಪಡೆಯ ನೌಕಾಧಿಪತಿಯಾಗಿ ನೇಮಿಸಿದನು. ಅವನ ತಮ್ಮನಾದ ಸೇಕಾಲಿಯನ್ನು 2ನೇ ನೌಕಾಧಿ ಪತಿಯಾಗಿಯೂ ನೇಮಿಸಿದನು. ಅನಂತರ ಹೈದರನು ನಗರಕ್ಕೆ ಹೋಗಿ ಬಿಶನಗರದಲ್ಲಿದ್ದ ತನ್ನ ಕುಟುಂಬವನ್ನು ನಗರಕ್ಕೆ ತರಿಸಿ ಅಲ್ಲಿಯೇ ಉಳಕೊಂಡನು.

ಸುಲ್ತಾನ ಆಲಿರಾಜನು ಮಳೆಗಾಲವು ಕಳೆಯುತ್ತಲೇ ಹಡಗುಗಳ ಮೇಲೆ ಹೈದರನ ಧ್ವಜವನ್ನು ಏರಿಸಿ ಮಾಲ್ದೀವಿಗಳಿಗೆ ಹೋಗಿ ಅಲ್ಲಿಯ ರಾಜನನ್ನು ಯುದ್ಧದಲ್ಲಿ ಸೋಲಿಸಿ ಅವನ ಕಣ್ಣುಗಳೆರಡನ್ನೂ ಕಿತ್ತು, ಅವನನ್ನು ಸೆರೆಹಿಡಿದು, ಮಂಗಳೂರಿಗೆ ತಂದು ಅಲ್ಲಿಂದ ನಗರಕ್ಕೆ ಹೋಗಿ, ಆ ಅರಸನನ್ನು ಹೈದರನಿಗೆ ಒಪ್ಪಿಸಿದನು. ಆಗ ಹೈದರನು ಆಲಿರಾಜನು ಮಾಡಿದ ಕ್ರೂರತನಕ್ಕೆ ಬಹಳ ಸಿಟ್ಟುಗೊಂಡು ಅವನ ನೌಕಾಧಿಪತಿಯ ಕೆಲಸವನ್ನು ತೆಗೆದು, ಸ್ಟೆನೆಟ್ ಎಂಬ ಇಂಗ್ಲೀಷ ಅಧಿ ಕಾರಿಯನ್ನು ನೌಕಾಧಿಪತಿಯ ಕೆಲಸಕ್ಕೆ ನೇಮಿಸಿದನು. ಹೈದರನು ಮಾಲ್ದೀವಿಗಳ ಅರಸನಿಗೆ ಬಹಳ ಸಮಾಧಾನಪಡಿಸಿ ಅವನಿಗೆ ನಿಲ್ಲುವುದಕ್ಕೆ ಒಂದು ಅರಮನೆಯನ್ನೂ, ಖರ್ಚಿಗೆ ಬೇಕಾದಷ್ಟು ಹಣವನ್ನೂ ಕೊಟ್ಟು ಸುಖದಿಂದ ಇರುವಹಾಗೆ ಏರ್ಪಾಡುಮಾಡಿದನು. ಮೊಗಲಾಯಿ ಚಕ್ರವರ್ತಿಗಳಲ್ಲಿ ಪ್ರಸಿದ್ಧಿಪಡೆದ ಔರಂಗಜೇಬನಿಗೂ ವಶವಾಗದ ಕನ್ನಡ ರಾಜ್ಯವೂ, ಮಾಲ್ದೀವಿಗಳೂ ಹೈದರನ ವಶವಾದವೆಂದು ತಿಳಿದು ಹಿಂದೂಸ್ಥಾನದ ಅನೇಕ ರಾಜರು ಉಚಿತಗಳ ಸಹಿತ ಹೈದರನ ಬಳಿಗೆ ರಾಯಭಾರಿಗಳನ್ನು ಕಳುಹಿಸಿದರು.

ಕ್ರಿ. ಶ. 1765ರಲ್ಲಿ ಹೈದರನು ನಗರದಲ್ಲಿಯೆ ಇದ್ದು ಕನ್ನಡ ರಾಜ್ಯವನ್ನು ವ್ಯವಸ್ಥೆಪಡಿಸುವುದರಲ್ಲಿದ್ದನು. ಕನ್ನಡ ಜಿಲ್ಲೆಯ ಕಂದಾ ಯದ ವಿಷಯ ವಿಚಾರಿಸಿ ಬಂಜರುಸ್ಥಳವೆಂಬ ನೆವನದಿಂದ ಬಿದನೂರಿನ

ರಾಜ್ಯಭಾರದಲ್ಲಿ ಕಳಿಯುತ್ತಿದ್ದ 30 ಸಾವಿರ ವರಹ ಭೂಕಂದಾಯವನ್ನು ವಸೂಲುಮಾಡಬೇಕೆಂದು ಅಧಿಕಾರಿಗಳಿಗೆ ತಿಳಿಸಿದನು. ಅನಂತರ ನಿಜವಾಗಿಯೂ ಆ ಸ್ಥಳಗಳಲ್ಲಿ ಬೇಸಾಯುವಾಗುವದಿಲ್ಲವೆಂದು ತಿಳಿದು ಆ 30 ಸಾವಿರ ವರಹವನ್ನು ಸರಿಯಾಗಿ ಬೇಸಾಯುಮಾಡುವ ಭೂಮಿಯ ಮೇಲೆ ಹೊರಿಸಿದನು. ಕ್ರಿ. ಶ. 1711ರಲ್ಲಿ ಇಕ್ಕೇರಿ ಅರಸನಾದ ಬಸವಪ್ಪನಾಯಕನ ಮದುವೆಗಾಗಿ ವಸೂಲುಮಾಡಿದ "ಪಗದಿಯು"ನ್ನು ಪಠೇಲರ ಮೇಲೆಯೂ ದೊಡ್ಡ ರೈತರ ಮೇಲೆಯೂ ಹೊರಿಸಿರಲಿಲ್ಲ. ಹೈದರನು ಈ ಪಗದಿಯನ್ನು ಅವರ ಮೇಲೆಯೂ ಹೊರಿಸಿದನು. ಕ್ರಿ. ಶ. 1618ರಲ್ಲಿ ಇಕ್ಕೇರಿ ಅರಸರು ಶೇಕಡಾ 50ರಷ್ಟು ಭೂಕಂದಾಯವನ್ನು ರೈತರ ಮೇಲೆ ಮಾತ್ರವೆ ಹೊರಿಸಿದ್ದಲ್ಲದೆ ಪಾಳೆಯಗಾರರಾದ ಬಂಗ, ಚೌಟ, ಅಜಿಲ, ಸಾವಂತ, ಮೂಲ, ತೋಳಾರ, ವಿಟ್ಲ, ಕುಂಬಳೆ ಅರಸರ ಮೇಲೆ ವಿಧಿಸಿರಲಿಲ್ಲ. ಹೈದರನು ಇವರು ಕೊಡುವ ಕಪ್ಪವನ್ನು ಶೇಕಡಾ 50ರಷ್ಟು ಹೆಚ್ಚಿಸಿದನು.

ಹೈದರನು ನಗರದಲ್ಲಿರುವಾಗ ಕ್ರಿ. ಶ. 1765ರಲ್ಲಿ ಮಲಬಾರಿನ ನಾಯರ ಅರಸರು ತಮಗೆ ಬಹಳವಾಗಿ ಪೀಡಿಸುತ್ತಾರೆಂದು ಮಾಪಿಳ್ಳೆಯರ ದೂರು ಬಂತು. ಕೂಡಲೇ ಹೈದರನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಮಂಗಳೂರಿಗೆ ಬಂದು ತನ್ನ ಹಡಗುಪಡೆಯನ್ನು ಸಮುದ್ರ ಮಾರ್ಗವಾಗಿ ಕಣ್ಣಾನೂರಿಗೆ ಕಳುಹಿಸಿ ತಾನು ನೆಲದಾರಿಯಾಗಿ ಕಣ್ಣಾನೂರಿಗೆ ಹೋದನು. ಕಾಂಞಂಗಾಡು, ನೀಲೇಶ್ವರ ಹೊಳೆಗಳನ್ನೂ ಬಲಿಯಾಪಟ್ಟಣ ಹೊಳೆಯನ್ನೂ ಕೂಡಿಸುವ ಸುಲ್ತಾನತೋಡನ್ನು ಕಣ್ಣಾನೂರಿನ ಸುಲ್ತಾನ ಆಲಿರಾಜನು ಈ ಸಮಯದಲ್ಲಿ (ಕ್ರಿ ಶ. 1766) ಮಾಡಿಸಿದನು. ಹೈದರನು ನಾಯರ ರಾಜರನ್ನೂ ಕಲ್ಲಿಕೋಟೆಯ ಜಾಮೋರಿನ (ಸಾಮುದಿರಿ) ಅರಸನನ್ನೂ ಯುದ್ಧದಲ್ಲಿ ಸೋಲಿಸಿ ಮಾಪಿಳ್ಳೆಯರ ಕಷ್ಟಗಳನ್ನು ಪರಿಹರಿಸಿ, ಕೊಯಮುತ್ತೂರಿಗೆ ಹೋಗಿ ಅಲ್ಲಿಯೇ ಮಳೆಗಾಲವನ್ನು ಕಳೆದನು.

ಕ್ರಿ. ಶ. 1766ರಲ್ಲಿ ಹೈದರನಿಗೂ ಇಂಗ್ಲೀಷರಿಗೂ ಯುದ್ಧವು ಪ್ರಾರಂಭವಾಯಿತು. 1768ರ ಫೆಬ್ರುವರಿ ತಿಂಗಳಲ್ಲಿ ಹೈದರನು ತಿರುವನ್ನಾಮಲೆಯಲ್ಲಿ ಸೋತು ಬೆಂಗಳೂರಿನಲ್ಲಿರುವಾಗ ಇಂಗ್ಲೀಷರ 8 ಸಾವಿರ ಸೈನ್ಯವು ಮುಂಬಯಿಯಿಂದ ಬಂದು ಮಂಗಳೂರನ್ನು ವಶ ಮಾಡಿಕೊಂಡಿತೆಂಬ ವರ್ತಮಾನವು ಹೈದರನಿಗೆ ಸಿಕ್ಕಿತು. ಆಗ ಬಿಶ ನಗರದಲ್ಲಿಯೂ, ಸೀಯರ್ದದಲ್ಲಿಯೂ, ಶ್ರೀರಂಗಪಟ್ಟಣದಲ್ಲಿಯೂ ಇರುವ ಸೈನ್ಯಕ್ಕೆಲ್ಲಾ ಕನ್ನಡ ರಾಜ್ಯಕ್ಕೆ ಕೂಡಲೇ ಹೊರಡಬೇಕೆಂದು ಅಪ್ಪಣೆ ಯಾಯಿತು. ಈ ಸೈನ್ಯದಲ್ಲಿ 3 ಸಾವಿರ ಸವಾರರನ್ನು ಮಾತ್ರವೇ ತೆಗೆದುಕೊಂಡು ಟಿಪ್ಪುವು ಮಂಗಳೂರಿಗೆ ಬಂದನು. ಹೈದರನು ಬುದ್ಧಿ ವಂತರಾದ ತನ್ನ 3 ಸಾವಿರ ಸೈನಿಕರನ್ನೂ ಫಿರಂಗಿಸೈನ್ಯವನ್ನೂ 1200 ಮಂದಿ ಕುದುರೆ ಸವಾರರನ್ನೂ ತೆಗೆದುಕೊಂಡು ಅವನ ಹಿಂದೆಯೇ ಮಂಗಳೂರಿಗೆ ಬಂದನು. ಮುಂಬಯಿಯಿಂದ ಬಂದ ಇಂಗ್ಲೀಷ ಸೇನಾಧಿ ಪತಿಯು ಮಂಗಳೂರನ್ನು ಹಿಡಿದ ನಂತರ ತಾನು ಹೈದರನಗರಕ್ಕೆ ಮುಂದುವರಿಯಲಿಕ್ಕೆ ಏನೂ ಅಡ್ಡಿಯಿಲ್ಲವೆಂದು ಮದರಾಸು ಗವರ್ನರ ನಿಗೆ ಕಾಗದ ಬರೆದಿದ್ದನು. ಹೈದರನಗರಕ್ಕೆ ಮುಟ್ಟಬೇಕಾದರೆ 60 ಹರದಾರಿ ದೂರವೂ, ದಾರಿಯಲ್ಲಿ ಕಾಡುಗಳೂ, ಪರ್ವತಗಳೂ, ನದಿ ಗಳೂ ಇರುವವೆಂದು ಈ ಸೇನಾಧಿಪತಿಯು ಸ್ವಲ್ಪವಾದರೂ ಎಣಿಸದೆ ಮಂಗಳೂರು ಗೇಟಿನ ಹೊರಗೆ ಹೊರಡುವುದಕ್ಕೆ ಸೈನ್ಯವನ್ನು ತಯಾರಿ ಸಿದ್ದನು.

ಯೌವನಪ್ರಾಯದವನಾದ ಟಿಪ್ಪುವು ಬೆಂಗಳೂರಿನಿಂದ ಹೊರಟು ಬಹಳ ಬೇಗನೇ ಕನ್ನಡ ರಾಜ್ಯಕ್ಕೆ ಬಂದನು. ಪ್ರಜೆಗಳೆಲ್ಲಾ ಅವನನ್ನು ಬಹಳ ಸಂತೋಷದಿಂದ ಕಂಡರು. ಎಲ್ಲಾ ಕಡೆಗಳಿಂದಲೂ ಸೈನ್ಯವು ಬಂದು ಕೂಡುತ್ತಾ ಇತ್ತು. ಟಿಪ್ಪುವು ಬರುವ ವರ್ತಮಾನವು ಮಂಗಳೂರಿ ನಲ್ಲಿದ್ದ ಇಂಗ್ಲೀಷರ ಸೈನ್ಯಕ್ಕೆ ಸಿಕ್ಕುವ ಮೊದಲು ಟಿಪ್ಪುವು ಮಂಗಳೂರಿಗೆ ಬಂದನು. ಸ್ವಲ್ಪವೂ ವಿಶ್ರಾಂತಿ ತೆಗೆದುಕೊಳ್ಳದೆ ಇಂಗ್ಲೀಷ ಸೈನ್ಯದ

ಮೇಲೆ ಬಿದ್ದನು. ಕುದುರೆಸವಾರರು ಮಂಗಳೂರಿನ ಗೇಟಿನ ಬಳಿ (ಉರ್ವದ ಗೇಟಾಗಿರಬೇಕು) ಇದ್ದ ಇಂಗ್ಲೀಷರನ್ನು ಓಡಿಸಿಬಿಟ್ಟರು. ಸಿಪಾಯಿಯರ 3 ಸಾವಿರ ಸೈನ್ಯ ಬರುವಾಗ ಇಂಗ್ಲೀಷರು ತಮ್ಮ ಠಾಣ್ಯವನ್ನು ಬಿಟ್ಟು ಓಡಿಹೋಗಿದ್ದರು. ಇಂಗ್ಲೀಷ ಸೈನ್ಯವು ಹಡಗ ಹತ್ತುವದರೊಳಗಾಗಿ (ಅಳಿವೆಯು ಬೋಳೂರಲ್ಲಿತ್ತು.) ಹೈದರನು (1768ನೇ ಮೇ ತಿಂಗಳು) ಮಂಗಳೂರಿಗೆ ತಲ್ಪಿದನು. ಹೈದರನ ಯುರೋಪಿಯ ಸೈನಿಕರೂ, ಸಿಪಾಯಿಗಳೂ ಕೂಡಿ ಇಂಗ್ಲೀಷ ಸೇನಾಧಿಪತಿಯನ್ನೂ 46 ಆಫೀಸರರನ್ನೂ, 680 ಯುರೋಪಿಯನ್ ಸೈನಿಕರನ್ನೂ 6000ಕ್ಕಿಂತಲೂ ಹೆಚ್ಚು ಸಿಪಾಯಿಗಳನ್ನೂ ಸೆರೆಹಿಡಿದನು. ಅದಲ್ಲದೆ ಮದ್ದು ಗುಂಡೂ ಆಯುಧಗಳೂ ಇತರ ಸಾಮಾನುಗಳೂ ಇವರಿಗೆ ಸಿಕ್ಕಿದವು. ಇದೆಲ್ಲಾ ಇಂಗ್ಲೀಷರು ಮಂಗಳೂರನ್ನು ಹಿಡಿದ 8 ದಿವಸಗಳಲ್ಲಿ ಸಂಭವಿಸಿತು. ಯೌವನ ಪ್ರಾಯದವನಾದ ಟಿಪುವಿನ ಸಾಹಸವನ್ನು ನೋಡಿ ಹೈದರನಿಗೆ ಆನಂದವಾಯಿತು. ಹೈದರನು ಮಂಗಳೂರಿನಿಂದ ಹೊರಡಬೇಕಾದರೆ ತನ್ನ ನೌಕಾಸೈನ್ಯಕ್ಕಾಗಿ 2 ಹಾಯಿ ಹಡಗಗಳನ್ನೂ 2 ಕುವೆಮರಗಳಿರುವ 2 ಬಗಲೆ (ಗಾರ್ಬ) ಗಳನ್ನೂ 10 ಗಲಿವೇಟ್ ಎಂಬ ಹಡಗುಗಳನ್ನೂ ಕಟ್ಟಿಸಲಿಕ್ಕೆ ಅಧಿಕಾರಿಗೆ ಅಪ್ಪಣೆಕೊಟ್ಟು, ಲಟೀಫ್ ಅಲಿಬೇಗ ಎಂಬ ತನ್ನ ಸೇನಾಧಿಪತಿಯನ್ನು ನೌಕಾ ಸೇನಾಧಿಪತಿಯಾಗಿ ನೇಮಿಸಿದನು.

ಹೈದರನು ಮಂಗಳೂರಿನಿಂದ ಸುಬ್ರಹ್ಮಣ್ಯದ ದಾರಿಯಾಗಿ ಮೈಸೂರಿಗೆ ಹೋಗುವಾಗ ಕೊಡಗು ಅರಸನು ತನಗೆ ಸಹಾಯ ಮಾಡಿದ್ದಕ್ಕಾಗಿ ಘಟ್ಟದ ಮೇಲಿನ ಉಚ್ಚಂಗಿ ಎಂಬ ಸೀಮೆಯು ಬದಲಾಗಿ ಉಪ್ಪಿನಂಗಡಿ ತಾಲೂಕಿನ ಪಂಜ, ಬೆಳ್ಳಾರೆ ಮಾಗಣೆಗಳನ್ನು ಕೊಡಗು ಅರಸನಾದ ಮುದ್ದಯ್ಯ ಮತ್ತು ಮುದ್ದ ಒಡೆಯರಿಗೆ ಕೊಟ್ಟನು.

ಕ್ರಿ. ಶ. 1774ರಲ್ಲಿ ಪೋರ್ತುಗೀಸರು ಹೈದರನೊಡನೆ ದ್ವೇಷವನ್ನು ಬೆಳೆಸಲು, ಅವನು ಮಂಗಳೂರಿನ (ಪ್ರೊಯ್ಯೆ) ರುಜಾರಿಯೊ ಇಗರ್ಜಿಯ ಸುತ್ತಲೂ ಇದ್ದ ಪೋರ್ತುಗೀಸರ ಕೋಟೆಯನ್ನು ಮುರಿದು ತೆಗೆದು

ಈಗ ಹಜೂರು ಕಚೇರಿ ಇದ್ದ ಸ್ಥಳದಲ್ಲಿರುವ ಬಂಗರರಸನು ಕಟ್ಟಿಸಿ ಬಸವಪ್ಪನಾಯಕನು ದುರುಸ್ತಿಪಡಿಸಿದ ಕೋಟೆಯನ್ನ ಜೀರ್ಣೋದ್ಧಾರ ಮಾಡಿಸಿ ಭದ್ರಪಡಿಸಿದನು. ಇದನ್ನೂ ಬೋಳೂರು ಬತ್ತೇರಿಯನ್ನೂ ಹೈದರನ ಇಂಜಿನಿಯರ್ ಕೆಟನಿ ಎಂಬವನು ಕಟ್ಟಿಸಿದನು.

ಕ್ರಿ. ಶ. 1775ರಲ್ಲಿ ಕೊಡಗಿನ ದೇವಪ್ಪ ರಾಜನು ಪಟ್ಟಕ್ಕೆ ಬಂದಾಗ ಪಟ್ಟಕ್ಕೆ ಹಕ್ಕುದಾರನಾದ ಮುದ್ದರಾಜನ ತಮ್ಮನಾದ ಲಿಂಗ ರಾಜನು ಹೈದರನ ಮರೆಹೋಗಲು ಹೈದರನು ಕೊಡಗಿಗೆ ಹೋಗಿ ದೇವಪ್ಪರಾಜನನ್ನು ಸೋಲಿಸಿ, ಕೊಂದು, ಲಿಂಗರಾಜನಿಗೆ ಪಟ್ಟಕಟ್ಟಿ, ಅವನಿಗೆ ವೈನಾಡನ್ನು ಬಿಟ್ಟುಕೊಟ್ಟನು. ಇದಕ್ಕೆ ಬದಲಾಗಿ ಲಿಂಗ ರಾಜನು ಹೈದರನಿಗೆ 40 ವರ್ಷಕ್ಕೆ ಹಿಂದೆ ಇಕ್ಕೇರಿ ಸೋಮಶೇಖರ ನಾಯಕನು ಕೊಡಗಿನ ದೊಡ್ಡವೀರಪ್ಪನು ಯುದ್ಧದಲ್ಲಿ ಸಹಾಯ ಮಾಡಿದ್ದಕ್ಕಾಗಿ ಬಿಟ್ಟುಕೊಟ್ಟ ಅಮರ ಮತ್ತು ಸುಳ್ಯ ಮಾಗಣೆಗಳನ್ನೂ ಪಂಜ, ಬೆಳ್ಳಾರೆ ಮಾಗಣೆಗಳನ್ನೂ ಹೈದರನಿಗೆ ಬಿಟ್ಟುಕೊಟ್ಟನು.

ಇಂಗ್ಲೀಷರು ಮಂಗಳೂರನ್ನು ಹಿಡಿದಾಗ ಪೋರ್ತುಗೀಸರು ಹೈದರ ನಿಗೆ ಸಹಾಯಮಾಡುವುದರ ಬದಲಾಗಿ ಇಂಗ್ಲೀಷರ ಕಡೆಗೆ ಸೇರಿದರು. ಇನ್ನು ಇಂಗ್ಲೀಷರೇ ತಮಗೆ ಅರಸರಾಗುವರೆಂದು ಆಲೋಚಿಸಿ ಹೀಗೆ ಮಾಡಲು ಕಾರಣವಾಯಿತು. ಇಂಗ್ಲೀಷರಿಗೆ ಬೇಕಾದ ವಸ್ತುಗಳನ್ನು ಪೋರ್ತುಗೀಸ ಸಾಹುಕಾರರು ಒದಗಿಸಿಕೊಟ್ಟರು. ಈ ಸಮಾಚಾರವು ಹೈದರನಿಗೆ ತಿಳಿದ ಕೂಡಲೇ ಅವನು ಈ ಪೋರ್ತುಗೀಸ ಸಾಹುಕಾರ ರನ್ನೂ, ಮಂಗಳೂರಿನ ಇಗರ್ಜಿಯ ಗುರುಗಳನ್ನೂ ಕರೆತರಿಸಿ "ನಿಮ್ಮ ರಾಜ್ಯದಲ್ಲಿ ಈ ತರದ ರಾಜದ್ರೋಹ ಮಾಡಿದರೆ ಯಾವ ತರದ ಶಿಕ್ಷೆ ಯನ್ನು ವಿಧಿಸುವರು" ಎಂದು ಕೇಳಿದನು. ಅದಕ್ಕವರು "ನಮ್ಮ ರಾಜ್ಯದಲ್ಲಿ ಮರಣದಂಡನೆಯೇ ಇದಕ್ಕೆ ತಕ್ಕ ಶಿಕ್ಷೆ" ಎಂದು ಹೇಳಿದರು. ಆಗ ಹೈದರನು ನಾನು ಆ ಶಿಕ್ಷೆಯನ್ನು ಕೊಡುವುದಿಲ್ಲ. ನನಗೂ

ಂಗ್ಲೀಷರಿಗೂ ಒಪ್ಪಂದವಾಗುವ ವರೆಗೆ ನೀವು ಸೆರೆಮನೆಯಲ್ಲಿರಬೇಕು. ುತ್ತು ನಿಮ್ಮ ಆಸ್ತಿ ಎಲ್ಲವೂ ಸರಕಾರದ ಸ್ವಾಧೀನ ಇರತಕ್ಕದ್ದು'' ಂದು ಹೇಳಿದನು.

ಕ್ರಿ. ಶ. 1779ರಲ್ಲಿ ಕನ್ನಡ ಜಿಲ್ಲೆಯಲ್ಲಿ ಒಂದು ಹೊಸ ತೆರಿಗೆ ಕ್ಯಾಮಿಲು) ಯನ್ನು ವಿಧಿಸಿದನು. ಇದು 1782ರ ವರೆಗೂ ವಸೂ ಾಗುತ್ತಿತ್ತು. ಈ ಕ್ಯಾಮಿಲು, ಭೂಕಂದಾಯ ಅಥವಾ ಶಿಸ್ತಿನಷ್ಟೆ ಗುತ್ತಿತ್ತು.

ಕ್ರಿ. ಶ. 1780ರಲ್ಲಿ ಇಂಗ್ಲೀಷರಿಗೂ ಹೈದರನಿಗೂ ಯುದ್ಧವು ುರುವಾಯಿತು. ಕ್ರಿ. ಶ. 1781ರಲ್ಲಿ ಸರ್ ಎಡ್ವರ್ಡ್ ಹ್ಯೂಸ್ ಂಬ ಇಂಗ್ಲೀಷ ಹಡಗುಪಡೆಯವನು ಹೈದರನ ಸಣ್ಣ ನೌಕಾಸೈನ್ಯ ನ್ನೂ ಯುದ್ಧದ ಹಡಗುಗಳನ್ನೂ ಮಂಗಳೂರು ಬಂದರದಲ್ಲಿ ನಾಶ ಡಿಸಿದನು. ಕ್ರಿ. ಶ. 1782ರಲ್ಲಿ ಹೈದರನು ಆರ್ಕಾಡು ಸಮೀಪದ ್ದದ್ದಾಗ 'ಬೆನ್ನುಫಣಿ' ಎಂಬ ರಾಜಕುರುವಿನಿಂದ ಕಾಲವಾದನು. ಾಯುವಾಗ್ಗೆ ಹೈದರನಿಗೆ 60 ವರುಷ ವಯಸ್ಸಾಗಿತ್ತು.

ಈ ಕಾಲದಲ್ಲಿ ಪೂರ್ಣಯ್ಯ, ಮೀರಸಾದಕ್, ಅಬ್ಬು ಮಹಮ್ಮದ ುರ್ದೆ, ತೋಷಿಖಾನೆ ಕೃಷ್ಣರಾಯ ಮತ್ತು ಅಂಚೆ ಶಾಮಯ್ಯ ಇವರು ುಖ್ಯ ಅಧಿಕಾರಿಗಳಾಗಿದ್ದರು. ಇವರು ಹೈದರನು ಕಾಲವಾದ ರ್ತಮಾನವನ್ನು ತಲಚೇರಿಯ ಹತ್ತಿರವಿದ್ದ ಟೀಪುವಿಗೆ ಗೂಢಚಾರ ೊಡನೆ ಹೇಳಿಕಳುಹಿಸಿ ಅವನು ಬರುವ ವರೆಗೆ ಹೈದರನು ಜೀವದಿಂದ ಿದ್ದ ಹಾಗೆಯೇ ಎಲ್ಲಾ ಕೆಲಸಗಳನ್ನೂ ತಾವೇ ನೆರವೇರಿಸುತ್ತಿದ್ದರು.

---

## ಹೈದರನ ಗುಣದೋಷಗಳು.

ಮೈಸೂರುರಾಜ್ಯವು ಮುಸಲ್ಮಾನರ ವಶವಾದರೂ ರಾಜ್ಯವು ಮೊದಲಿಗಿಂತಲೂ ಹೆಚ್ಚು ಪ್ರಸಿದ್ಧಿಯನ್ನು ಪಡೆಯಿತು. ಕನ್ನಡ ಜಿಲ್ಲೆಯ ಚೌಟ, ಬಂಗ, ಅಜಿಲ, ಸಾವಂತ, ಕುಂಬಳೆ, ವಿಟ್ಲ ಅರಸುಗಳು ತಮ್ಮ ರಾಜ್ಯದಾಡಳಿತೆಯನ್ನು ಕಳಕೊಂಡು ಜೀವನಕ್ಕೋಸ್ಕರ ಹೈದರನಿಂದ ಮಲ್ಲಿಖಾನೆಯನ್ನು ಪಡಿಯುತ್ತಿದ್ದರು. ಪೋರ್ತುಗೀಸರ ಹಾವಳಿಯು ನಿಂತುಹೋಯಿತು. ವ್ಯಾಪಾರವು ಇಂಗ್ಲೀಷರ ಸ್ವಾಧೀನವಾಯಿತು.

ಹೈದರನು ಸಾಯುವಾಗ ಬೊಕ್ಕಸದಲ್ಲಿ 3 ಕೋಟಿ ರೂಪಾಯಿ ಬೆಲೆಯ ನಾಣ್ಯಗಳೂ ಜವಾಹೀರಿಗಳೂ ಇದ್ದವು. ಸೈನ್ಯದಲ್ಲಿ 38,000 ಜನರಿದ್ದರು. ಹೈದರನಿಗೆ ಸರಿಯಾಗಿ ರುಜುಮಾಡುವ ಮಟ್ಟಿಗಾದರೂ ಬರವಣಿಗೆ ಬರುತ್ತಿರಲಿಲ್ಲ. ಹಿಂದೂಸ್ಥಾನಿ ಭಾಷೆಯಲ್ಲಿ ತನ್ನ ಹೆಸರಿನ ಮೊದಲನೆಯ ಅಕ್ಷರವನ್ನು ತಲೆಕೆಳಗಾಗಿ ಬರೆದು ರುಜುಮಾಡುತ್ತಿದ್ದನು. "ರಾಜ್ಯದಾಡಳಿತೆಯನ್ನು ನಡಿಸುವುದಕ್ಕೆ ಒಬ್ಬನ ಸ್ವಂತ ಸಾಮರ್ಥ್ಯವೆ ಕಾರಣವಲ್ಲದೆ, ಓದುಬರಹ ಕಾರಣವಲ್ಲ" ಎಂದು ಈತನು ಹೇಳುತ್ತಿದ್ದನು. ಓದುವುದಕ್ಕೂ ಬರೆಯುವುದಕ್ಕೂ ಬಾರದಿದ್ದರೂ ಹೈದರನು ಹಿಂದೂಸ್ಥಾನಿ, ಕನ್ನಡ, ಮಹಾರಾಷ್ಟ್ರ, ತೆಲುಗು, ತಮಿಳು ಭಾಷೆಗಳಲ್ಲಿ ಚನ್ನಾಗಿ ಮಾತನಾಡುತ್ತಿದ್ದನು. ಅವನಿಗೆ ಜ್ಞಾಪಕಶಕ್ತಿಯು ಚೆನ್ನಾಗಿತ್ತು. ತಾನು ನೋಡಿದ ಜನರನ್ನೂ ಕೇಳಿದ ಸಂಗತಿಗಳನ್ನೂ ಎಷ್ಟು ದಿನಗಳಾದರೂ ಮರೆಯುತ್ತಿರಲಿಲ್ಲ. ಪ್ರತಿದಿನವೂ ಬೆಳಗ್ಗೆ ಮುಖವನ್ನು ತೊಳೆಯುವಾಗ ಕಳ್ಳಭಂಟರೇ (ಗೂಢಚಾರರು) ಮೊದಲಾದವರು ತಿಳಿದುಕೊಂಡು ಬಂದ ಸಂಗತಿಗಳನ್ನು ಕೇಳುತ್ತಿದ್ದನು. ಅನಂತರ ದರ್ಬಾರಿನಲ್ಲಿ ಕುಳಿತುಕೊಂಡು ಬಂದ ಕಾಗದಗಳನ್ನು ಓದಿಸಿ ಕೇಳಿ, ಹಿಂದೆ ನಡೆದ ಸಂಗತಿಗಳನ್ನು ನೆನಪಿನಲ್ಲಿಟ್ಟುಕೊಂಡು ತಕ್ಕ ಉತ್ತರ

ಗಳನ್ನು ರಾಯಸದವರಿಂದ ಬರೆಯಿಸುತ್ತಿದ್ದನು. ಅವರು ಬರೆದುದನ್ನು ಮತ್ತೊಬ್ಬನಿಂದ ಓದಿಸಿ ಕೇಳಿ ತಾನು ಹೇಳಿದಂತೆ ಇರುವುದನ್ನೂ ಇಲ್ಲದುದನ್ನೂ ತಿಳಕೊಳ್ಳುತ್ತಿದ್ದನು.

ಹೈದರನಿಗೆ ಮತ ವೈರವಿರಲಿಲ್ಲ. ಹಿಂದೂ ದೇವಸ್ಥಾನಗಳಿಗೂ ಬಸದಿಗಳಿಗೂ ವಿಜಯನಗರ, ಇಕ್ಕೇರಿ ಮುಂತಾದ ಅರಸರು ಬಿಟ್ಟ ಉಂಬಳಿಗಳು ಅವುಗಳಿಗೆ ಸಲ್ಲುತ್ತಿದ್ದವು. ಕನ್ನಡ ಜಿಲ್ಲೆಯ ಯಾವದಾದರೊಂದು ದೇವಸ್ಥಾನವನ್ನಾದರೂ ಹಾಳುಮಾಡಿದ ಸಂಗತಿಯು ಕಂಡು ಬರುವುದಿಲ್ಲ. ಸೈನ್ಯದಲ್ಲಿ ಎಲ್ಲಾ ಜಾತಿಮತದವರೂ ಕೆಲಸಕ್ಕಿದ್ದರು. ರೋಮನ್ ಕೆಥೋಲಿಕ ಕ್ರೈಸ್ತರಿಗೆ ಹೆಚ್ಚು ಹಕ್ಕು ಸ್ವಾತಂತ್ರ್ಯಗಳು ಇದ್ದವು. ಅರ್ಕುಳ (ಫರಂಗಿಪೇಟೆ)ದಲ್ಲಿರುವ ಮೊಂಟೆಮೆರಿಯಾನೊ ಗುಡ್ಡದ ಮೇಲಿರುವ ಇಗರ್ಜಿಯಲ್ಲಿ ತನ್ನ ಪೋರ್ತುಗೀಸ ಧ್ವಜವನ್ನು ಏರಿಸಲಿಕ್ಕೆ ಫಾದರ ಮಿರಾಂದನಿಗೆ ಹೈದರನ ಅಪ್ಪಣೆ ಇತ್ತು.

## ಟೀಪು ಸುಲ್ತಾನ.

ಹೈದರನು ಮೃತಪಟ್ಟ ಸಂಗತಿಯು ಟೀಪುವಿಗೆ ತಿಳಿಯುತ್ತಲೇ ತಲಚೇರಿಯ ಹತ್ತಿರವಿರುವ ಪಣಿಯಾಣಿಯಿಂದ ಹೊರಟು ಕೋಲಾರವನ್ನು ಸೇರಿ ತನ್ನ ತಂದೆಯ ಶರೀರವನ್ನು ಶ್ರೀರಂಗಪಟ್ಟಣದ ಹತ್ತಿರವಿರುವ ಗುಂಬಸಿಯ ಲಾಲಭಾಗದಲ್ಲಿ ಹೈದರನು ಶಿಲೆಕಲ್ಲುಗಳಿಂದ ಮೊದಲೇ ತಯಾರಿಸಿದ ಸಮಾಧಿಯಲ್ಲಿ ಗೋರಿಮಾಡುವಂತೆ ಕಳುಹಿಸಿ ಅನಂತರ ಆರ್ಕಾಡು ಬಳಿ ಇಳಿದಿದ್ದ ಮೈಸೂರು ಸೈನ್ಯವನ್ನು ಸೇರಿ ತಂದೆಯ ಅಧಿಕಾರವನ್ನು ವಹಿಸಿದನು.

ಕ್ರಿ. ಶ. 1783ನೇ ಜನವರಿ ತಿಂಗಳಲ್ಲಿ ಮುಂಬಾಯಿಂದ ಇಂಗ್ಲೀಷರ ಒಂದು ಸೈನ್ಯವು ಜನರಲ್ ಮೆಥ್ಯೂಸನ ಕೈಕೆಳಗೆ ಕುಂದಾಪುರದಲ್ಲಿ ಇಳಿಯಿತು. ಕುಂದಾಪುರದಲ್ಲಿದ್ದ ಟೀಪುವಿನ 500 ಮಂದಿ ಕುದುರೆ

ಸವಾರರೂ 2,500 ಮಂದಿ ಕಾಲಾಳುಗಳೂ ಬಹಳ ಧೈರ್ಯದಿಂದ ಕಾದಿದರು. ಆದರೆ ಇಂಗ್ಲಿಷ್ ಸೇನಾಧಿಪತಿಯೇ ಗೆದ್ದನು. ಇಂಗ್ಲಿಷ ಸೇನಾಧಿಪತಿಯು, ಸರಿಯಾದ ಆಹಾರಸಾಮಗ್ರಿಗಳು ಮತ್ತು ಸರಂಜಾಮು ವೈಯಲಿಕ್ಕೆ ಅನುಕೂಲತೆಗಳು ಶಿಕ್ಕದಿದ್ದರೂ ಮೂರೇ ದಿವಸಗಳಲ್ಲಿ ಕುಂದಾಪುರದಿಂದ 25 ಮೈಲು ದೂರವಿರುವ ಹೊಸಂಗಡಿಗಟ್ಟದ ಬುಡಕ್ಕೆ ಬಂದನು. ಹೊಸಂಗಡಿಗಟ್ಟಕ್ಕೆ ಹೋಗುವ ದಾರಿಯಲ್ಲಿ ಟೀಪುವಿನ ಸೈನಿಕರು 3 ಮೈಲುಗಳವರೆಗೆ ಮರಗಳನ್ನು ಕಡಿದುಹಾಕಿ ದಾರಿಯನ್ನು ತಡೆಗಟ್ಟಿದ್ದರು. ಮಾರ್ಗದ ಎರಡೂ ಬದಿಗಳಲ್ಲಿ ದೊಡ್ಡ ಕಾಡುಗಳಿದ್ದವು. ಅಲ್ಲಿ ಎತ್ತರವಾದ ಗೋಡೆಯನ್ನು ಎಬ್ಬಿಸಿ ಸೈನಿಕರು ಕಾದುವುದಕ್ಕೆ ಸಿದ್ಧರಾಗಿದ್ದರು. ಕರ್ನಲ ಮೆಕ್‌ಲಿಯೋಡನ ಕೈಕೆಳ ಗಿರುವ '4ನೇ ಹ್ಯಾಲೆಂಡರ್ಸ್' ಎಂಬ ಇಂಗ್ಲಿಷ ಶಿಪಾಯಿಗಳ ಸೈನ್ಯವು ಬಾಯನೇಟುಗಳನ್ನು ಉಪಯೋಗಿಸಿ ಈ ಸೈನ್ಯವನ್ನು ಸೋಲಿಸಿ ಓಡಿಸಿತು. ಮರುದಿವಸ ಇಂಗ್ಲೀಷರಿಗೆ ಆ ಕೋಟೆಯಲ್ಲಿ 15 ಫಿರಂಗಿಗಳು ಮಾತ್ರವೇ ಸಿಕ್ಕಿದವು. ಸೈನಿಕರು ಯಾರೂ ಇರಲಿಲ್ಲ. ಸ್ವಲ್ಪ ಮುಂದೆ ಹೋಗು ವಾಗ ಇನ್ನೊಂದು ಗೋಡೆಯನ್ನು ಎಬ್ಬಿಸಿ ಅದರಲ್ಲಿ ನಿಂತು ಇಂಗ್ಲಿಷರ ಸೈನ್ಯವನ್ನು ಕಾಯುತ್ತಿದ್ದರು. ಇಂಗ್ಲಿಷ್ ಸೈನ್ಯವು ಅಲ್ಲಿಂದಲೂ ಅವರನ್ನು ಓಡಿಸಿತು. ಓಡುವಾಗ 11 ಫಿರಂಗಿಗಳನ್ನು ಬಿಟ್ಟು ಓಡಿದರು. ಅಲ್ಲಿಂದ ಮುಂದಕ್ಕೆ ಹೋಗುವಾಗ ಇನ್ನೊಂದು ಕೋಟೆಯು ಇತ್ತು. ಇಂಗ್ಲೀಷರು ಬಾಯನೇಟುಗಳಿಂದ ಅದನ್ನೂ ಹಿಡಿದರು. ಇನ್ನು ಬೆಟ್ಟದ ತುದಿಯಲ್ಲಿರುವ ಹೈದರಗಡ ಕೋಟೆಗೆ ಹೋಗಲಿಕ್ಕೆ ಅನೇಕ ಸಣ್ಣ ದೊಡ್ಡ ಬತ್ತೇರಿಗಳು ದಾರಿಯಲ್ಲಿದ್ದವು. ಹೈದರಗಡ ಕೋಟೆಯಲ್ಲಿ 17,000 ಸೈನಿಕರಿದ್ದರು. ಹೈದರಗಡಕ್ಕೆ ಮುಟ್ಟಬೇಕಾದರೆ ಇಂಗ್ಲೀಷರ ಸೈನ್ಯದಲ್ಲಿ 50 ಮಂದಿ ಮಡಿದುಬಿದ್ದರು. ಕೆಲವರಿಗೆ ಗಾಯವಾಯಿತು. ಹೇಗೂ ಹೈದರಗಡವನ್ನು ಹಿಡಿದು ಬಿದನೂರು ಕೋಟೆಗೆ ತಲ್ಪಿದರು. ಬಿದನೂರು ಕೋಟೆಯ ಖಿಲ್ಲೆದಾರನು ಹೈದರನ ಪ್ರೀತಿಯ ಸೇನಾಧಿಪತಿಯಾಗಿದ್ದನು.

ಟೀಪುವು ಇವನ ಅಧಿಕಾರವನ್ನು ಕಡಿಮೆ ಮಾಡುವುದರಲ್ಲಿದ್ದಾನೆಂದು ಯಾರೋ ಇವನಿಗೆ ಹೇಳಿದ್ದರು. ಅದಕ್ಕಾಗಿ ಬೇಸರಪಟ್ಟು ಈ ಉದ್ಯೋಗಸ್ಥನು ಇಂಗ್ಲಿಷ ಸೈನ್ಯವು ಬಂದಕೂಡಲೇ ಜನವರಿ 27ನೇ ತಾರೀಕಿಗೆ ಕೋಟೆಯುನ್ನು ಬಿಟ್ಟುಕೊಟ್ಟನು.

ಈ ವರ್ತಮಾನವು ಟೀಪುಸಾಹೇಬನಿಗೆ ತಿಳಿದ ಕೂಡಲೇ ಕರ್ಣಾಟಿಕ್‌ದಲ್ಲಿದ್ದ ಎಲ್ಲಾ ಸೈನ್ಯವನ್ನು ಒಟ್ಟುಕೂಡಿಸಿ ಕ್ರಿ. ಶ. 1783ನೇ ಏಪ್ರಿಲ್ ತಿಂಗಳ ಶುರುವಿಗೆ ಬಲವಾದ ಸೈನ್ಯವನ್ನು ತೆಗೆದುಕೊಂಡು ಬಿದನೂರುರಾಜ್ಯಕ್ಕೆ ಬಂದನು. ಜನರಲ್ ಮೆಥ್ಯೂಸನು ಬಿದನೂರಿನ ಹೊರವಲಯುದಲ್ಲಿರುವ ಕೋಟೆಗಳಲ್ಲಿ ನಿಂತಿದ್ದರೆ ಸುಲಭವಾಗಿ ತಪ್ಪಿಸಿಕೊಂಡು ಕುಂದಾಪುರ ಅಥವಾ ಹೊನ್ನಾವರ ಬಂದರಕ್ಕೆ ಹೋಗಬಹುದಿತ್ತು. ಇಂಗ್ಲೀಷ ಸೈನ್ಯದಲ್ಲಿ 600 ಯುರೋಪಿಯನ್ ಸಿಪಾಯಿಗಳೂ 1600 ಹಿಂದೂ ಸಿಪಾಯಿಗಳೂ ಇದ್ದರು. ಟೀಪುವಿನ ಸೈನ್ಯದಲ್ಲಿ ಒಂದು ಲಕ್ಷ ಜನರಿದ್ದರು. ಟೀಪುವು ಬಿದನೂರು ಕೋಟೆಗೆ ಮುತ್ತಿಗೆಹಾಕಲು, ಘೋರವಾದ ಯುದ್ಧವಾಯಿತು. ಇಂಗ್ಲೀಷ ಸೈನ್ಯದಲ್ಲಿ 500 ಮಂದಿ ಮಡಿದುಬಿದ್ದರು. ಬಿದನೂರಿನ ಸುತ್ತಲೂ ಇರುವ ಕೋಟೆಗಳಲ್ಲೆಲ್ಲಾ ಟೀಪು ಬಲವಾದ ಸೈನ್ಯವನ್ನು ಇಟ್ಟಿದ್ದನು. ಹದಿನೇಳು ದಿವಸಗಳ ವರೆಗೂ ಯುದ್ಧವಾಗಿ ಇಂಗ್ಲೀಷ ಸೇನಾಧಿಪತಿಯು ಸೋತು ಟೀಪುವಿಗೆ ಶರಣಾಗತನಾದನು. ಶರಣಾಗತನಾಗುವಾಗ ಟೀಪುವು ಕೊಟ್ಟ ಶರ್ತಗಳು ಯಾವವೆಂದರೆ:—(1) ಸೈನಿಕರಿಗೆ ಎಲ್ಲಾ ತರದ ಮರ್ಯಾದೆಗಳು ಕೊಡಲ್ಪಡುವವು. (2) ಸೈನಿಕರು ತಮ್ಮ ಆಯುಧಗಳನ್ನೆಲ್ಲಾ ಒಪ್ಪಿಸಬೇಕು. (3) ಸೈನಿಕರು ತಮ್ಮ ಖಾಸಗಿ ವಸ್ತುಗಳನ್ನು ಇಟ್ಟುಕೊಳ್ಳಬಹುದು. (4) ಬಿದನೂರಿನಲ್ಲಿ ಸುಲಿಗೆಮಾಡಿದ ವಸ್ತುಗಳನ್ನೆಲ್ಲಾ ಕೊಡಬೇಕು. (5) ಟೀಪುವಿನ ಖರ್ಚಿನಿಂದ ಸೈನಿಕರನ್ನು ಮುಂಬಯಿಗೆ ಕಳುಹಿಸುವುದು. (6) ಇಂಗ್ಲೀಷ ಸೇನಾಧಿಪತಿಗೆ 100 ಮಂದಿ ಇಂಗ್ಲೀಷ ಸಿಪಾಯಿಗಳ ಗಾರ್ಡ ಒಫ್ ಒನರ್

ಎಂಬ ಮರ್ಯಾದೆಯು ಸೈನ್ಯವನ್ನು ಕೊಡುವದು. 36 ತೋಫು ಗಳನ್ನು ಕೊಡುವುದು. ಮೇಲಿನ ಶರ್ತಗಳಿಗೆ ಇಂಗ್ಲೀಷ ಸೇನಾಧಿಪತಿಯು ಒಪ್ಪಿ 1783ರ ಏಪ್ರಿಲ್ 28ನೇ ತಾರೀಕಿಗೆ ಸೈನ್ಯವು ಬಿದನೂರು ಕೋಟೆಯಿಂದ ಹೊರಗೆ ಬಂದು ಆಯುಧಗಳನ್ನು ಒಪ್ಪಿಸಿ ಸೈನ್ಯವೆಲ್ಲಾ ಬಿದುನೂರು ಮೈದಾನಿನಲ್ಲಿ ನಿಂತುಕೊಂಡಿತು. ಟೀಪುವಿನ ಸೈನಿಕರು ಆಯುಧಪಾಣಿಗಳಾಗಿ ಸುತ್ತಲೂ ನಿಂತುಕೊಂಡಿದ್ದರು. ಆದರೆ ಭಕ್ಷಿಯು (ಸಂಬಳ ಕೊಡುವ ಅಧಿಕಾರಿ) ಇಂಗ್ಲೀಷ ಸೈನಿಕರನ್ನು ಜಪ್ತಿಮಾಡುವಾಗ ಬಿದನೂರಿನಲ್ಲಿ ಸುಲಿಗೆಮಾಡಿದ ಅನೇಕ ವಸ್ತುಗಳು ಸಿಕ್ಕಿದವು. ಇದನ್ನು ಕೇಳಿ ಟೀಪುವು ಸಿಟ್ಟುಗೊಂಡು ಹಣ ಸುಲಿಗೆ ಮಾಡಿದ್ದಕ್ಕಾಗಿಯೂ ಪೇಟೆಯಲ್ಲಿ ಅನೇಕ ಸ್ಥಳಗಳನ್ನು ಹಾಳು ಮಾಡಿದ್ದಕ್ಕಾಗಿಯೂ ಅವರನ್ನೆಲ್ಲಾ ಕೈದಿಗಳಾಗಿ ಬೇರೆ ಬೇರೆ ಕೋಟೆ ಗಳಿಗೆ ಕಳುಹಿದನು.

ಕ್ರಿ. ಶ. 1783ನೇ ಜನವರಿ ತಿಂಗಳಲ್ಲಿ ಇಂಗ್ಲೀಷರ ಇನ್ನೊಂದು ಸೈನ್ಯವು ಕರ್ನಲ ಕೆಂಬೆಲನ ಕೈಕೆಳಗೆ ಮಂಗಳೂರಿನಲ್ಲಿ ಇಳಿದು ಅದನ್ನು ವಶಮಾಡಿಕೊಂಡಿತ್ತು. ಟೀಪುವು ಬಿದನೂರಿನಿಂದ ಒಂದು ಸೈನ್ಯವನ್ನು ಮಂಗಳೂರಿಗೆ ಕಳುಹಿಸಿದನು. ಕರ್ನಲ ಕೆಂಬೆಲನು ಮಂಗಳೂರಿನಿಂದ ಬಂಟವಾಳದ ವರೆಗೆ ಸಣ್ಣ ಗುಡ್ಡಗಳ ಮೇಲೆ ಸಣ್ಣ ಸಣ್ಣ ಮಣ್ಣಿನ ಕೋಟೆಗಳನ್ನು ಎಬ್ಬಿಸಿ ಅಲ್ಲಿ 'ಎಡ್‌ವಾನ್ಸ್‌ಗಾರ್ಡ್' ಎಂಬ ಕೆಲವು ಸೈನಿಕರನ್ನು ಇಟ್ಟಿದ್ದನು. ಅವುಗಳಲ್ಲಿ ಒಂದು ಕೋಟೆಯು ಪಾಳೆ ಮಂಗಳೂರು ಸಂಕದ ಪಶ್ಚಿಮಕ್ಕಿರುವ ಬಳಗದ ಗುಡ್ಡೆಯ ಮೇಲಿದೆ. ಕೋಟೆಯ ಕುರುಹುಗಳು ಈಗಲೂ ಇವೆ. ಟೀಪುವಿನ ಸೈನಿಕರು ಬಂದೊಡನೆಯೇ ಕೆಂಬೆಲನ ಸೈನಿಕರು ಬಳಗದ ಗುಡ್ಡೆಯ ಕೋಟೆ ಯಿಂದ ಮಂಗಳೂರಿನ ಕಡೆಗೆ ಹೊರಟರು. ಟೀಪುವಿನ ಸೈನ್ಯವು ಬಂಟವಾಳದಿಂದ 1½ ಮೈಲು ದೂರವಿರುವ ಜೋಡುಮಾರ್ಗದ ಮೈದಾನಿನಲ್ಲಿ ಇಳಿಯಿತು. 14ನೇ ಮೈಲುಕಲ್ಲಿನ ಹತ್ತರ ಮೊಡಂಕಾಪು

ಇಗರ್ಜಿಗೆ ಹೋಗುವ ದಾರಿಯಲ್ಲಿ ಎತ್ತರವಾದ ಗೋಡೆಯನ್ನು ಎಬ್ಬಿಸಿ ಇಂಗ್ಲೀಷ ಸೈನ್ಯದೊಡನೆ ಯುದ್ಧಮಾಡಿ ಟೀಪುವಿನ ಸೈನ್ಯವು ಸೋತುಹೋಯಿತು. ಈ ಸ್ಥಳದಲ್ಲಿ ಎತ್ತರವಾಗಿಯೂ ಅಗಲವಾಗಿಯೂ ದಕ್ಷಿಣದಿಂದ ಉತ್ತರಕ್ಕೆ ಸುಮಾರು ¾ ಮೈಲಿಗೆ ಚಾಚಿಕೊಂಡಿರುವ ಗೋಡೆಯೂ ಅದರ ಪಶ್ಚಿಮಕ್ಕಿರುವ ಕಂದಕವೂ ಈಗಲೂ ಇವೆ. ಈ ಯುದ್ಧದಲ್ಲಿ ಹಾಳಾದ ಸುಮಾರು 50 ಫಿರಂಗಿಗಳ ತುಂಡುಗಳು ಬಂಟವಾಳದಲ್ಲಿ ಅಲ್ಲಲ್ಲಿ ಇವೆ. ಒಂದು ಫಿರಂಗಿಯನ್ನು ಪಾಣೆ ಮಂಗಳೂರು ಸಂಕದ ಹತ್ತಿರ ಇಟ್ಟಿರುತ್ತಾರೆ. ಸೈನ್ಯವು ಸೋತು ಹೋದ ವರ್ತಮಾನವು ಟೀಪುವಿಗೆ ಮುಟ್ಟಿದ ಕೂಡಲೇ ಅವನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದನು. ಇಂಗ್ಲೀಷರ ಸೈನ್ಯವು ಹಿಂದಕ್ಕೆ ಮಂಗಳೂರಿಗೆ ಓಡುವಾಗ ಸೈನ್ಯದ ರಕ್ಷಣೆಗಾಗಿ ಫಿರಂಗಿಗಳನ್ನು ಇಟ್ಟು ಹೊಡಿಯಲಿಕ್ಕೆ ಎಬ್ಬಿಸಿದ ಮಣ್ಣಿನ ಬತ್ತೇರಿಗಳನ್ನು ಅರ್ಕುಳ, ಅಡ್ಯಾರ, ಕಣ್ಣೂರು ಗುಡ್ಡಗಳಲ್ಲಿ ಈಗಲೂ ಕಾಣಬಹುದು. ಟೀಪುವು ಸೈನ್ಯದೊಡನೆ ಮಂಗಳೂರಿಗೆ ಮುಂದರಿಸಿದನು. ಕರ್ನಲ ಕೆಂಬೆಲನು ಮಂಗಳೂರು ಕೋಟೆಯೊಳಗೆ ಸೇರಿದನು. ಅವನ ಸೈನ್ಯದಲ್ಲಿ 700 ಮಂದಿ ಇಂಗ್ಲೀಷ ಸಿಪಾಯಿಗಳೂ, 2000 ಮಂದಿ ಹಿಂದೂ ಸಿಪಾಯಿ ಗಳೂ ಇದ್ದರು. ಕೋಟೆಯ ಹೊರಗಡೆ ಈಗ ಮಂಗಳೂರು ಸಣ್ಣ ಮೈದಾನಿನಲ್ಲಿರುವ ಕೊನ್ವೆಂಟ ಇದ್ದ ಸ್ಥಳದಲ್ಲಿ ನಿಂತು ಕಠಿಣ ಯುದ್ಧವು ಮೇ 23ರಲ್ಲಿ ಆಯಿತು. ಇಂಗ್ಲೀಷ ಸೈನ್ಯದಲ್ಲಿ 4 ಮಂದಿ ಆಫೀಸರರೂ 10 ಮಂದಿ ಇಂಗ್ಲೀಷ ಶಿಪಾಯಿಗಳೂ 200 ಮಂದಿ ಶಿಪಾಯಿಗಳೂ ಮಡಿದುಬಿದ್ದರು. ಆಗ ಕೆಂಬೆಲನು ಕೋಟೆಯೊಳಗೆ ಹೋಗಿ ಒಳಗಿನಿಂದಲೇ ಯುದ್ಧಮಾಡಲು ಆರಂಭಿಸಿದನು. ಟೀಪುವು ಇಂಗ್ಲೀಷ ಸೈನ್ಯವನ್ನು ಬೇಗನೆ ಸೋಲಿಸುವ ಆಲೋಚನೆ ಕಾಣದೆ ಮಳೆಗಾಲವು ಬಂದುದರಿಂದ ಕುದುರೆ ಸವಾರರನ್ನು ಪೂರ್ವಕಂಡಾವಳಿಗೆ ಕಳುಹಿಸಿದನು. ಟೀಪುವಿನ ಫ್ರೆಂಚ ಸೈನಿಕರು ಫಿರಂಗಿಯ ಕೆಲಸ

ಮಾಡುತ್ತಿದ್ದರು. ಕೋಟೆಯ ಹೆಚ್ಚಿನ ಭಾಗವು ಹಾಳಾಯಿತು. ಜುಲಾಯಿ ತಿಂಗಳಲ್ಲಿ ಇಂಗ್ಲೀಷರಿಗೂ ಫ್ರೆಂಚರಿಗೂ ಒಪ್ಪಂದವಾಯಿ ತೆಂಬ ವರ್ತಮಾನವು ಫ್ರೆಂಚ್ ಸೇನಾಧಿಪತಿಗೆ ತಿಳಿದ ಕೂಡಲೆ ಫ್ರೆಂಚ ಸೈನಿಕರು ಯುದ್ಧಮಾಡುವುದಕ್ಕೆ ಒಪ್ಪದೆ ಟೀಪುವಿನ ಸೈನ್ಯವನ್ನು ಬಿಟ್ಟು ಹೋದರು. ಟೀಪುವು ಬೇರೆ ಉಪಾಯಕಾಣದೆ ಕೋಟೆಗೆ ಮುತ್ತಿಗೆ ಹಾಕಿದನು. ಇಂಗ್ಲೀಷ ಸೈನ್ಯಕ್ಕೆ ಆಹಾರವು ಮುಗಿಯುತ್ತಾ ಬಂತು. ಒಂದೆರಡು ದಿವಸಗಳಲ್ಲಿ ಕೋಟೆಯು ಟೀಪುವಿನ ವಶವಾಗುವ ಹಾಗಿತ್ತು. ಅಷ್ಟರಲ್ಲಿ ಜನರಲ್ ಮೆಕ್ ಲಿಯೋಡನು ದೊಡ್ಡ ಸೈನ್ಯವನ್ನೂ ಸಾಮುಗ್ರಿಗಳನ್ನೂ ತೆಗೆದುಕೊಂಡು ಮುಂಬಯಿಯಿಂದ ಬಂದು ಮಂಗ ಳೂರಿನಲ್ಲಿ ಇಳಿದನು. ಆದರೆ ಏನೂ ಪ್ರಯೋಜನವಿಲ್ಲವೆಂದು ತಿಳಿದು ದಶಂಬರ 2ನೇ ತಾರೀಕಿಗೆ ಹಿಂತಿರುಗಿ ಹೋದನು. ಕ್ರಿ. ಶ. 1784ರ ಜನವರಿ 23ರಲ್ಲಿ ಕೆಂಬೆಲನ ಸೈನ್ಯದ ⅔ ಸಿಪಾಯಿಗಳು ಆಸ್ಪತ್ರೆಯ ಲ್ಲಿದ್ದರು. ದಿನಕ್ಕೆ 12-15ರ ವರೆಗೆ ಸಿಪಾಯಿಗಳು ಸಾಯುತ್ತಿದ್ದರು. ಅನೇಕ ಸಿಪಾಯಿಗಳು ಕುರುಡರಾದರು. ಉಳಿದ ಸೈನಿಕರಿಗೆ ನಿಲ್ಲು ವುದಕ್ಕೆ ಸಹ ಶಕ್ತಿ ಇರಲಿಲ್ಲ. ಆದ್ದರಿಂದ ಕರ್ನಲ ಕೆಂಬೆಲನು ಜನವರಿ 30ನೆಗೆ ಶರಣಾಗತನಾದನು. ಇಂಗ್ಲೀಷರಿಗೂ ಟೀಪುವಿಗೂ ಒಪ್ಪಂದವಾಯಿತು. ಜೋರ್ಜ ಸ್ಟೋಂಟನ್ ಮತ್ತು ಇಬ್ಬರು ರಾಯ ಭಾರಿಗಳು ಮದರಾಸಿನಿಂದ ಮಂಗಳೂರಿಗೆ ಬಂದು ಇಳಿದರು. ಮಾರ್ಚಿ 11ನೇ ತಾರೀಕಿಗೆ ಮಂಗಳೂರಿನಲ್ಲಿ ಒಪ್ಪಂದವಾಯಿತು. ಇದರ ಪ್ರಕಾರ ಸೆರೆಯಲ್ಲಿದ್ದ ಸೈನಿಕರನ್ನೆಲ್ಲಾ ಬಿಟ್ಟು ಯುದ್ಧಕ್ಕೆ ಮುಂಚೆ ಅವರವರಿ ಗಿದ್ದ ಸ್ಥಳಗಳನ್ನು ಅವರವರು ಇಟ್ಟುಕೊಳ್ಳುವದೆಂದು ನಿಶ್ಚಯಿಸಿದರು. ಇದರ ಪ್ರಕಾರ ಮಂಗಳೂರು ಹೊನ್ನಾವರ ಮುಂತಾದ ಸ್ಥಳಗಳು ಟೀಪುವಿಗೆ ಸಿಕ್ಕಿದವು. ಕರ್ನಲ ಕೆಂಬೆಲನು ಸೈನ್ಯದೊಡನೆ ತಲಚೇರಿಗೆ ಹೋಗಿ ಅಲ್ಲಿ ಮಾರ್ಚಿ 23ರಲ್ಲಿ ಕಾಲವಾದನು.

ಈ ಸಮಯದಲ್ಲಿ ಟೀಪುವು ಕನ್ನಡ ಜಿಲ್ಲೆಯಲ್ಲಿರುವ ರೋಮನ ಕೆಥೋಲಿಕ ಕ್ರೈಸ್ತರು ಇಂಗ್ಲೀಷರಿಗೆ ಸಹಾಯಮಾಡಿದ್ದಕ್ಕಾಗಿ

60,000 ಜನರನ್ನು ಸೆರೆಹಿಡಿದು ಶ್ರೀರಂಗಪಟ್ಟಣಕ್ಕೆ ಕಳುಹಿಸಿದನು. ಚೌಟ, ಬಂಗ, ಅಜಿಲ, ಸಾವಂತ, ಮೂಲ, ತೋಳಾರ ಮುಂತಾದ ಜೈನ ಪಾಳೆಯಗಾರರ ಸೀಮೆಗಳನ್ನು ಪೂರ್ಣ ಸೆಳಕೊಂಡನು. ಅವರ ಮಲ್ಲಿಖಾನೆಯನ್ನೂ ಕಡಿಮೆಮಾಡಿದನು. ಕನ್ನಡ ಜಿಲ್ಲೆಯ ದಕ್ಷಿಣದಲ್ಲಿರುವ ಕುಂಬಳೆ ರಾಜನನ್ನು ಮಲೆಯಾಳಕ್ಕೆ ಓಡಿಸಿದನು. ಅವನು ಹಿಂತಿರುಗಿ ಬಂದು ದಂಗೆಯೆಬ್ಬಿಸಿದಾಗ ಅವನನ್ನು ಬೇಕಲ ಕೋಟೆಯಲ್ಲಿ ಗಲ್ಲಿಗೆಹಾಕಿಸಿದನು ಇದೇ ರಾಜನ ತಮ್ಮನು ಮಂಗಳೂರು ಯುದ್ಧದ ಸಮಯದಲ್ಲಿ ಇಂಗ್ಲೀಷರಿಗೆ ಸಹಾಯಮಾಡಿದನೆಂದು ಅವನನ್ನೂ ಹಿಡಿದು ಗಲ್ಲಿಗೆಹಾಕಿಸಿದನು. ಅವನ ತರುವಾಯ ಪಟ್ಟಕ್ಕೆ ಬಂದ ಅರಸನು ಓಡಿಹೋಗಿ ತಲಚೇರಿಯಲ್ಲಿರುವ ಇಂಗ್ಲೀಷರಿಗೆ ಶರಣಾಗತನಾದನು. 1787ರಲ್ಲಿ ನಿಲೇಶ್ವರದ ಇಬ್ಬರು ಅರಸರು ಇಂಗ್ಲೀಷರ ಕಡೆಗೆ ಸೇರಿದರೆಂದು ಬೇಕಲ ಕೋಟೆಯಲ್ಲಿ ಅವರನ್ನು ಗಲ್ಲಿಗೆಹಾಕಿಸಿದನು.

1799ರಲ್ಲಿ ಮೈಸೂರು ಕಡೇ ಯುದ್ಧವು ಶುರುವಾದ ಕೂಡಲೇ ಕುಂಬಳೆ ರಾಜನೂ ವಿಟ್ಲದ ರಾಜನೂ ತಲಚೇರಿಯಿಂದ ತನ್ನ ತನ್ನ ಸೀಮೆಗೆ ಬಂದು ಸುಲಿಗೆ ಮಾಡಲಾರಂಭಿಸಿದರು. ಟೀಪುವು ಕೊಡಗಿನಲ್ಲಿ ಅನೇಕ ತರದ ಬಾಧೆಗಳನ್ನು ಕೊಟ್ಟು ಅಲ್ಲಿ ದೇವರ ಪೂಜೆಮಾಡುವ ಬ್ರಾಹ್ಮಣರನ್ನು ಸಹ ಶ್ರೀರಂಗಪಟ್ಟಣಕ್ಕೆ ಒಯ್ದುದರಿಂದ ಕೊಡಗಿನ ಅರಸನಾದ ವೀರರಾಜೇಂದ್ರ ಒಡೆಯನು ಕನ್ನಡ ಜಿಲ್ಲೆಯನ್ನು ಸುಲಿಗೆಮಾಡುವುದಕ್ಕೆ ಕೊಡಗರ ಗುಂಪುಗಳನ್ನು ಕಳುಹಿಸಿದನು. ಅವರು ಜಮಾಲಾಬಾದ ಪಟ್ಟದಲ್ಲಿರುವ ಬ್ರಾಹ್ಮಣರ ಕುಟುಂಬಗಳನ್ನೆ ಸೆರೆಹಿಡಿದು, ಅಳದಂಗಡಿ, ಬೈಲಂಗಡಿ, ಬಂಗಾಡಿ ಮುಂತಾದ ಊರುಗಳನ್ನು ಸುಲಿಗೆಮಾಡಿ, ಬಂಟವಾಳಕ್ಕೆ ಬಂದು ಪೇಟೆಯನ್ನು ಸುಲಿಗೆಮಾಡಿ ಬಂಟವಾಳ ಶ್ರೀ ವೆಂಕಟ್ರಮಣ ದೇವರ ಪ್ರತಿಮೆಯನ್ನೂ ಅನೇಕ ಮಂದಿ ಗೌಡಸಾರಸ್ವತರನ್ನೂ ಸೆರೆಹಿಡಿದುಕೊಂಡು ಹೋದರು. ಮಂಜೇಶ್ವರ ಕುಂಬಳೆಯ ಊರುಗಳನ್ನು ಬೆಳ್ಳಾರೆ, ಬೇಳದ

ದಾರಿಯಾಗಿ ಬಂದು ಲುಟಾಯಿಸಿದರು. ಶ್ರೀರಂಗಪಟ್ಟಣದ ಯುದ್ಧದ ಸಮಯ ಕಾಮಪ್ಪರಸ ಬಂಗ ಅರಸನನ್ನು ನಂದಾವರದಿಂದ ಜಮಲಾಬಾದಿಗೆ ಕರಿಸಿ ಅವನು ಇಂಗ್ಲೀಷರ ಕಡೆ ಸೇರಿದನೆಂದು ಊಹಿಸಿ ಅಲ್ಲಿ ಅವನನ್ನು ಗಲ್ಲಿಗೆಹಾಕಿಸಿದನು. ಕ್ರಿ. ಶ. 1799ನೇ ಮೇ 3ನೇ ತಾರೀಕಿನ ಸಾಯಂಕಾಲ ಇಂಗ್ಲೀಷರು ಶ್ರೀರಂಗಪಟ್ಟಣದ ಕೋಟೆಯನ್ನು ಒಡೆದರು. ಮೇ 4ನೇ ತಾರೀಕಿನ ಮಧ್ಯಾಹ್ನ ಇಂಗ್ಲೀಷರು ಶ್ರೀರಂಗಪಟ್ಟಣದ ಉತ್ತರ ದಿಕ್ಕಿನಲ್ಲಿರುವ ಕಲ್ಲಾಳದಿಡ್ಡಿ ಎಂಬ ಕೋಟೆಯ ಹೆಬ್ಬಾಗಲನ್ನು ಹಿಡಿದರೆಂಬ ವರ್ತಮಾನವು ಟೀಪುವಿಗೆ ಮಧ್ಯಾಹ್ನ ಊಟಕ್ಕೆ ಕುಳಿತ ಸಮಯ ತಿಳಿದುಬಂತು. ಊಟ ಮುಗಿಸುವಷ್ಟರಲ್ಲಿ ಸೈನ್ಯದ ಕೋಲಾಹಲವು ಕೇಳಿಸಿತು. ಕೂಡಲೆ ತನ್ನ ಕೈಗಳನ್ನು ತೊಳದು ತನ್ನ ಪಟ್ಟದ ಕತ್ತಿಯನ್ನು ರತ್ನಖಚಿತವಾದ ನಡುಕಟ್ಟಿಗೆ ಸಿಕ್ಕಿಸಿ ತನ್ನ ಕೋವಿಗಳಿಗೆ ಮದ್ದುತುಂಬಿಸಲು ಅಂಗರಕ್ಷಕರಿಗೆ ಹೇಳಿದನು. ಕೂಡಲೆ ಹೊರಟು ಕಲ್ಲಾಳದಿಡ್ಡಿಗೆ ಮುಖ್ಯ ಉದ್ಯೋಗಸ್ಥರೊಡನೆಯೂ ಅಂಗರಕ್ಷಕರೊಡನೆಯೂ ಓಡಿದನು. ಹೆಬ್ಬಾಗಲಿಗೆ ಹೋಗಲಿಕ್ಕೆ 200 ಯಾರ್ಡು ದೂರವಿರುವಾಗ ತನ್ನ ಸೈನಿಕರು ಓಡಿ ಬರುವುದನ್ನು ಕಂಡು ಅವರಿಗೆ ಧೈರ್ಯಹೇಳಿ ಹಿಂಬಾಲಿಸಿಬರುತ್ತಿರುವ ಇಂಗ್ಲೀಷ ಸೈನ್ಯದೊಡನೆ ಕಾದಾಡಲಾರಂಭಿಸಿದನು. ಸುಲ್ತಾನನು ತಾನೇ ಅನೇಕ ಮಂದಿ ಇಂಗ್ಲೀಷರನ್ನು ಕೊಂದುಹಾಕಿದನು. ಹೀಗೆ ಮುಂದೊತ್ತಿಕೊಂಡು ಬರುತ್ತಿರುವ ಇಂಗ್ಲೀಷ ಸೈನ್ಯದೊಡನೆ ಯುದ್ಧಮಾಡುತ್ತಾ ಒಳಗಿನ ಕೋಟೆಗೆ ಹೋಗುವ ಸೇತುವೆಯ ಹತ್ತರ ಬಂದು ಸುಲ್ತಾನನು ತನ್ನ ಪಟ್ಟದ ಕುದುರೆಯನ್ನು ಹತ್ತಿ ಕೋಟೆಯ ಒಳಗೆ ಹೋಗಲು ಪ್ರಯತ್ನಿಸಿದನು. ಆದರೆ ಕೋಟೆಯ ಬಾಗಲಲ್ಲಿ ಇಂಗ್ಲೀಷ ಸೈನ್ಯವು ತುಂಬಿದ್ದು ದಾರಿಯು ಇರಲಿಲ್ಲ. ಮುಂದೊತ್ತಿ ಹೋಗುವಾಗ ಇಂಗ್ಲೀಷ ಸೈನಿಕರು ಹೊಡದ ಒಂದು ಗುಂಡು ಸುಲ್ತಾನನ ಎದೆಯ ಎಡಬದಿಗೆ ತಾಗಿತು. ಆದರೂ ಧೈರ್ಯ

ದಿಂದ ಮುಂದೊತ್ತಿ ಹೋದನು. ಆಗ ಎದೆಯ ಬಲಭಾಗಕ್ಕೆ ಇನ್ನೊಂದು ಗುಂಡಿನ ಪೆಟ್ಟು ತಗಲಿತು. ಅವನು ಕೂತುಕೊಂಡ ಕುದುರೆಗೆ ಅನೇಕ ಗಾಯಗಳಾಗಿ ಅದೂ ಬಿದ್ದುಬಿಟ್ಟಿತು. ಸುಲ್ತಾನನ ತಲೆ ಪಗಡಿಯೂ ಕೆಳಗೆ ಬಿತ್ತು. ಆಗ ನಂಬಿಗಸ್ಥರಾದ ಅವನ ಸೈನಿಕರು, ಸುಲ್ತಾನನ್ನು ಪಲ್ಲಕಿಯಲ್ಲಿ ಮಲಗಿಸಿ ಮುಂಪಕ್ಕೆ ಒಯ್ದರು. ಕೂಡಲೇ ರಾಜಾಖಾನನೆಂಬ ಸೇನಾಧಿಪತಿ ಈ ಸಂಗತಿಯನ್ನು ಇಂಗ್ಲೀಷ ಸೇನಾಧಿಪತಿಗೆ ತಿಳಿಸಿದರೆ ಅವರು ವೈದ್ಯ ಸಹಾಯಮಾಡ್ಯಾರೆಂದು ಸುಲ್ತಾನನಿಗೆ ತಿಳಿಸಿದನು. ಆದರೆ ಸುಲ್ತಾನನು ಇದಕ್ಕೆ ಒಪ್ಪಲಿಲ್ಲ. ಅಷ್ಟರಲ್ಲಿ ಒಬ್ಬ ಇಂಗ್ಲೀಷ ಸೈನಿಕನು ಸುಲ್ತಾನನ ರತ್ನ ಖಚಿತವಾದ ನಡುಕಟ್ಟನ್ನು ಎಳೆದು ತೆಗಿಯಲು ಪ್ರಯತ್ನಿಸಿದನು. ಗಾಯಪಡೆದ ಸುಲ್ತಾನನು ಇದನ್ನು ಸಹಿಸಲಾರದೆ ತನ್ನ ಕೈಯಲ್ಲಿದ್ದ ಪಟ್ಟದ ಕತ್ತಿಯಿಂದ ಆ ಇಂಗ್ಲೀಷ ಶಿಪಾಯಿಯನ್ನು ಕಡಿಯಲು ಪ್ರಯತ್ನಿಸಿದನು. ಸಿಪಾಯಿಗೆ ಮೊಣಕಾಲಿನಲ್ಲಿ ಗಾಯವಾಯಿತು. ಸಿಪಾಯಿಯು ಕೂಡಲೆ ತನ್ನ ಕೋವಿಯಿಂದ ಸುಲ್ತಾನನ ಕೆನ್ನೆಗೆ ಗುಂಡು ಹೊಡೆದನು. ಸುಲ್ತಾನನು ಈ ಪೆಟ್ಟಿನಿಂದ ಕೂಡಲೆ ಮೃತಿಯನ್ನು ಹೊಂದಿದನು.

ಸಾಯಂಕಾಲವಾಗುವಷ್ಟರಲ್ಲಿ ಶ್ರೀರಂಗಪಟ್ಟಣದ ಕೋಟೆಯು ಇಂಗ್ಲೀಷರ ಸ್ವಾಧೀನವಾಯಿತು. ಟೀಪುವಿನ ಮರಣದ ವಾರ್ತೆಯು ಇಂಗ್ಲೀಷ ಸೇನಾಧಿಪತಿಯಾದ ಜನರಲ್ ಬೇಯರ್ಡನಿಗೆ ತಿಳಿದ ಕೂಡಲೆ ಅವನು ಶ್ರೀರಂಗಪಟ್ಟಣದ ಖಿಲ್ಲೆದಾರರನ್ನೂ ಸುಲ್ತಾನನ ಇತರ ಅಧಿಕಾರಿಗಳನ್ನೂ ಕರಕೊಂಡು ಟೀಪುವಿನ ಮೃತದೇಹವನ್ನು ದೀವಟಿಗೆ ಬೆಳಕಿನಿಂದ ಹುಡುಕಲು ಬಂದನು. ಹೆಣಗಳ ರಾಶಿಯಿಂದ ಸುಲ್ತಾನನ ದೇಹವನ್ನು ಹುಡುಕಿತೆಗೆದರು. ತೆಗೆದು ನೋಡುವಾಗ ಕಣ್ಣುಗಳು ತೆರೆದಿದ್ದವು. ಶರೀರವು ಬಿಸಿಯಾಗಿತ್ತು. ಸುಲ್ತಾನನ ಪ್ರಾಣಹೋಗಲಿಲ್ಲವೆಂದು ಕರ್ನಲ್ ವೆಲ್ಲೆಸ್ಲಿಗೆ ಸಂಶಯವು ಹುಟ್ಟಿತು. ಆದರೆ



ಟೀಪುಸುಲ್ತಾನನ ಮೃತದೇಹವನ್ನು ಹುಡುಕುವುದು

ನಾಡಿಹಿಡಿದು ನೋಡಲಾಗಿ ಮರಣಪಟ್ಟ ಸಂಗತಿಯು ಖಚಿತವಾಯಿತು. ದೇಹದಲ್ಲಿ 4 ಗಾಯಗಳಿದ್ದವು. ಮೂರು ಶರೀರದಲ್ಲಿ; ಒಂದು ಬಲ ಕೆನ್ನೆಯಲ್ಲಿ. ಶಿಪಾಯಿಯು ಹೊಡದ ಗುಂಡು ಬಲದವಡೆಯಲ್ಲಿ ನಾಟಿಕೊಂಡಿತ್ತು. ಮುಖವು ಸ್ವಲ್ಪವಾದರೂ ಕಳೆಗುಂದದೆ ಗಂಭೀರವಾಗಿ ಕಾಣುತ್ತಿತ್ತು. ಪಗಡಿ, ನಡುಕಟ್ಟು, ಪಟ್ಟದ ಕತ್ತಿ ಇವುಗಳು ಒಂದೂ ಇರಲಿಲ್ಲ. ಅನಂತರ ಮೃತದೇಹವನ್ನು ಪಲ್ಲಕಿಯಲ್ಲಿ ಇಟ್ಟು ಅರಮನೆಯ ರಾಜಾಂಗಣಕ್ಕೆ ವೈದರು. ಸುಲ್ತಾನನ ಮೃತ ದೇಹಕ್ಕೆ ಎಲ್ಲಾ ತರದ ರಾಜಮರ್ಯಾದೆಗಳನ್ನು ಕೊಡಬೇಕೆಂದು ಜನರಲ್ ಹೆರಿಸನು ಸೈನಿಕರಿಗೆ ಅಪ್ಪಣೆಕೊಟ್ಟನು. ಶ್ರೀರಂಗಪಟ್ಟಣದ ಖಾಜಿಯು ಶವಸಂಸ್ಕಾರಕ್ಕಾಗಿ ಎಲ್ಲವನ್ನೂ ಸಿದ್ಧಪಡಿಸಿದನು. ಶವ ಸಂಸ್ಕಾರಕ್ಕಾಗಿ ಹೇರಳ ಹಣವು ವೆಚ್ಚಮಾಡಲ್ಪಟ್ಟಿತು. ದೇಹವನ್ನು ಮಸ್ಲಿನ ವಸ್ತ್ರದಲ್ಲಿ ಪವಡಿಸಿ ಜಂತದಿಂಗ ಮಾಡಿದ ರಾಜಪಲ್ಲಕಿ

ಯಲ್ಲಿ ಇರಿಸಿ ಅದನ್ನು ಅಮೂಲ್ಯವಾದ ಜಲತಾರಿನ ವಸ್ತ್ರದಿಂದ ಮುಚ್ಚಿದರು. ಮೇ ತಿಂಗಳ 5ನೇ ತಾರೀಕಿನ ಮಧ್ಯಾಹ್ನ ಶವ ಸಂಸ್ಕಾರದ ಮೆರವಣಿಗೆಯು ರಾಜದ್ವಾರದಿಂದ ಹೊರಟಿತು. ಇಂಗ್ಲೀಷ ಸೈನ್ಯದ 4 ಕಂಪೆನಿಗಳು ಹಿಂದಕ್ಕೂ ಮುಂದಕ್ಕೂ ನಡೆದರು. ಪಲ್ಲಕಿಯನ್ನು ಸುಲ್ತಾನನ ಸೇವಕರೇ ಹೊತ್ತುಕೊಂಡಿದ್ದರು. ಸುಲ್ತಾನನ ಎರಡನೇ ರಾಜಕುಮಾರನಾದ ಅಬ್ದುಲ್ ಕಲಿಕನೂ, ಖಿಲ್ಲೆದಾರನೂ, ಖಾಜಿಗಳೂ ಮತ್ತು ಶ್ರೀರಂಗಪಟ್ಟಣದ ಇತರ ಮುಸಲ್ಮಾನರೂ ಪಲ್ಲಕಿಯೊಡನೆ ಹೋದರು. ಲಾಲಭಾಗದ ಹೆಬ್ಬಾಗಲಲ್ಲಿ ನೈಜಾಮನ ಸೈನ್ಯದ ಮುಸಲ್ಮಾನ ಅಧಿಕಾರಿಗಳು ಆಯುಧಪಾಣಿಗಳಾಗಿ ಸೈನಿಕರೊಡನೆ ನಿಂತಿದ್ದರು. ಶ್ರೀರಂಗಪಟ್ಟಣದ ಕೋಟೆಯ ದ್ವಾರದಿಂದ ಲಾಲಭಾಗದ ಹೆಬ್ಬಾಗಲ ವರೆಗೆ ನಿಂತಿದ್ದ ಸುಲ್ತಾನನ ಪ್ರಜೆಗಳು ಪಲ್ಲಕಿಯು ಬರುತ್ತಲೇ ಅಡ್ಡಬೀಳುತ್ತಲೂ ರೋದನಮಾಡುತ್ತಲೂ ಇದ್ದರು. ಟೀಪುಸುಲ್ತಾನನ ದೇಹವನ್ನೂ ಹೈದರಾಲಿಯ ಸಮಾಧಿಯ ಹತ್ತಿರವೇ ಮೊದಲೇ ತಯಾರಿಸಿದ್ದ ಸಮಾಧಿಯಲ್ಲಿ ಇರಿಸಿದರು. ಖಾಜಿಯು ಕುತುಬವನ್ನು ಓದಿದನು. ಹನ್ನೆರಡು ಸಾವಿರ ರೂಪಾಯಿಗಳನ್ನು ಬಡವರಿಗೂ ಫಕೀರರಿಗೂ ದಾನವಾಗಿ ಹಂಚಿದರು. ಶವಸಂಸ್ಕಾರದ ಮೆರವಣಿಗೆಯು ಹೊರಟಂದಿನಿಂದ ದೇಹವನ್ನು ಸಮಾಧಿಯಲ್ಲಿ ಇಡುವ ವರೆಗೂ ಶ್ರೀರಂಗಪಟ್ಟಣದ ಕೋಟೆಯಿಂದ ಮಿನಿಟಿಗೊಂದು ಫಿರಂಗಿಯನ್ನು ಹಾರಿಸುತ್ತಿದ್ದರು. ಶವಸಂಸ್ಕಾರವಾದೊಡನೆಯೇ ಭಯಂಕರವಾದ ಬಿರುಗಾಳಿ, ಮಳೆ, ಗುಡುಗು, ಮಿಂಚು ಬರಲಾರಂಭಿಸಿತು. ಟೀಪುವಿಗೆ ಸಾಯುವಾಗ 60 ವರುಷ ಪ್ರಾಯವಾಗಿತ್ತು.

ಹೈದರನ ಮತ್ತು ಟೀಪುವಿನ ಸಮಾಧಿಯನ್ನು ಕಾಯಲಿಕ್ಕೆ ಈಗಲೂ ಶಿಪಾಯಿಗಳ ಪಹರೆ ಇದೆ. ಎರಡೂ ಸಮಾಧಿಗಳ ಮೇಲೆ ಜಲತಾರಿನ ವಸ್ತ್ರವನ್ನು ಪವಡಿಸಿರುತ್ತಾರೆ. ತಲೆಯ ಹತ್ತಿರ 2

ಭಂಗಾರದ ದೀಪಗಳನ್ನು ಉರಿಸುತ್ತಾರೆ. ಅಲ್ಲಿ ಹೋದವರು ಊದು ಹಾಕಿ ಡಬ್ಬಿಯಲ್ಲಿ ಕಾಣಿಕೆಹಾಕುತ್ತಾರೆ.

ಶ್ರೀರಂಗಪಟ್ಟಣದ ಕೋಟೆಯು ಇಂಗ್ಲೀಷರ ವಶವಾಗುವಾಗ ಅದರಲ್ಲಿ 929 ಫಿರಂಗಿಗಳು ಇದ್ದವು. ಅವುಗಳಲ್ಲಿ 287 ಫಿರಂಗಿಗಳು ಕೋಟೆಯ ಬತ್ತೇರಿಗಳಲ್ಲಿದ್ದವು. 99000 ಕೋವಿಗಳೂ 83 ಮದ್ದಿನ ಕಾರ್ಖಾನೆಗಳೂ ಮದ್ದು ಗುಂಡುಗಳೂ ಇದ್ದವು. ಭಂಡಾರದಲ್ಲಿ 11,143,216 ಪೌಂಡು ಬೆಲೆಬಾಳುವ ಐಶ್ವರ್ಯವಿದ್ದಿತು. 21,839 ಸೈನಿಕರಿದ್ದರು. ಇವರಲ್ಲಿ ಕೆಲವು ಸಾವಿರ ಯುದ್ಧದಲ್ಲಿ ಮಡಿದುಬಿದ್ದಿದ್ದರು. ಟೀಪು ಸುಲ್ತಾನನ ಮರಣವನ್ನೂ ಶ್ರೀರಂಗಪಟ್ಟಣದ ನಾಶವನ್ನೂ ಗ್ರೀಕದೇಶದ ಕಡೆಯ ಚಕ್ರವರ್ತಿಯಾದ ಪೆಲಿಯೊ ಲೋಗಸನ ಮರಣವನ್ನೂ ತುರುಕರು ಕ್ರಿ. ಶ. 1453ರಲ್ಲಿ ಕೊನ್ಸಟೆಂಟ ನೋಪಲವನ್ನು ಹಿಡಿದ ವಿಷಯವನ್ನೂ ಸರಿಹೋಲಿಸಬಹುದು.

ಗವರ್ನರ ಜನರಲಾದ ಮಾರ್ಕ್ವಿಸ್ ಒಫ್ ವೆಲ್ಲೆಸ್ಲಿಯು ಟೀಪು ಸುಲ್ತಾನನ ಅಮೂಲ್ಯವಾದ ಪುಸ್ತಕ ಭಂಡಾರವನ್ನು ಶ್ರೀರಂಗಪಟ್ಟಣದಿಂದ ಕಲ್ಕತ್ತಕ್ಕೆ ವೈದನು. ಅನಂತರ ಇದರ ಒಂದು ಅಂಶವನ್ನು ಇಂಗ್ಲೆಂಡಿನಲ್ಲಿರುವ ಇಷ್ಟ-ಇಂಡಿಯಾ ಹೌಸಿಗೆ ವೈದರು. ಟೀಪುವಿನ ರತ್ನಖಚಿತವಾದ ಸಿಂಹಾಸನವನ್ನೂ ಅದರ ಮೇಲಿದ್ದ ಕೊಡೆಯ ಮೇಲಿರುವ ರತ್ನಖಚಿತವಾದ ಸಗ್ಗದ ಹಕ್ಕಿಯನ್ನೂ ಸುಲ್ತಾನನ ಕವಚವನ್ನೂ, ಕತ್ತಿಗಳನ್ನೂ, ಕೋವಿಗಳನ್ನೂ ಇನ್ನೂ ವಿಚಿತ್ರವಾದ ಅನೇಕ ವಸ್ತುಗಳನ್ನೂ ಇಂಗ್ಲೆಂಡಿನಲ್ಲಿರುವ ವಿಂಡ್ಸರ ಕೆಸಲ್ ಎಂಬ ಅರಮನೆಗೆ ವೈದು ಅಲ್ಲಿ ಇಟ್ಟಿರುತ್ತಾರೆ. ಆಗ ಯುದ್ಧದ ಫಲಿತಾಂಶವಾಗಿ 1 ಕೊಡಿಯಾಲ, 2 ಬೇಕಲ, 3 ನೀಲೇಶ್ವರ, 4 ಕಾರ್ಕಳ, 5 ಬಾರ್ಕೂರು, 6 ಕುಶಾಲಪುರ, 7 ಬಟ್ಕಲ,8 ಗೆರಸಪ್ಪೆ, 9 ಹೊನ್ನಾವರ, 10 ಮಿರಜಾನ್, 11 ಅಂಕೋಲಾ, 12 ಪಂಚಮಹಾಲ, 13 ಸದಾಶಿವಗಡ, 14 ಬಿಳಿಗಿ

ಇಷ್ಟು ತಾಲೂಕುಗಳನ್ನು ಒಳಕೊಂಡ ಸುಮಾರು 3,11,874 ವರಹ 6 ಹಣ ಕಂದಾಯ ಸಿಕ್ಕುವ ಸೀಮೆಯು ಇಂಗ್ಲೀಷರ ವಶಕ್ಕೆ ಬಂತು. ಇವುಗಳೆಲ್ಲವನ್ನು ಕೂಡಿಸಿ ಕನ್ನಡಜಿಲ್ಲೆಯಾಗಿ ಮಾಡಿದರು. ಕೆಪ್ಟನ್ ಮನ್ರೋ ಎಂಬ ಸೇನಾಧಿಪತಿಯು ಮೊದಲನೇ ಕಲೆಕ್ಟರನಾಗಿ ನೇಮಿಸಲ್ಪಟ್ಟನು. ಕನ್ನಡ ಜಿಲ್ಲೆಯು ಟೀಪುಸುಲ್ತಾನನ ಕೈತಪ್ಪಿ ಇಂಗ್ಲೀಷರ ವಶವಾಯಿತು.

## ಟೀಪುವಿನ ರಾಜ್ಯಭಾರ ಕ್ರಮ.

ಟೀಪುವು ಬಹು ಧೈರ್ಯಶಾಲಿಯೆಂಬುದು ಸ್ಪಷ್ಟವಾಗಿದೆ. ದೇಶವಾತ್ಸಲ್ಯವು ಇವನಲ್ಲಿ ಹೆಚ್ಚಾಗಿದ್ದುದರಿಂದ ಅನ್ಯದೇಶೀಯರು ಇಲ್ಲಿ ಇರಬಾರದಾಗಿ ಬಹಳ ಸಾಹಸಪಡುತ್ತಿದ್ದನು. ಇಂಗ್ಲೀಷರನ್ನು ಓಡಿಸಿ ಬಿಡಬೇಕೆಂಬ ಆಸೆಯು ಅವನಲ್ಲಿ ಹೆಚ್ಚಾಗಿತ್ತು.

ಮುಹಮ್ಮದಿಮತವನ್ನು ವೃದ್ಧಿಪಡಿಸುವುದಕ್ಕೋಸ್ಕರ ಟೀಪುವು ಮುಸಲ್ಮಾನರಿರುವ ಪ್ರತಿ ಗ್ರಾಮದಲ್ಲಿಯೂ ಒಂದೊಂದು ಮಸೀದಿಯನ್ನು ಕಟ್ಟಿಸಿ ಅಲ್ಲಿನ ಮುಸಲ್ಮಾನರೆಲ್ಲರೂ ಪ್ರತಿ ಶುಕ್ರವಾರವೂ ತಪ್ಪದೆ ನಮಾಜಿಗೆ ಹೋಗಬೇಕೆಂದು ಗೊತ್ತುಮಾಡಿದ್ದನು. ಹಾಗೆ ಯಾರಾದರೂ ತಪ್ಪಿಸಿಕೊಂಡರೆ ಅಂಥವರು ಸರಕಾರಕ್ಕೆ ದಂಡಕೊಡಬೇಕೆಂದು ವಿಧಿಸಿದ್ದನು.

ಹಿಂದೂ ದೇವಸ್ಥಾನಗಳಿಗೆ ಮುಂಚಿನ ಕಾಲದಿಂದ ನಡದು ಬರುತ್ತಿರುವ ಬ್ರಹ್ಮಾದಾಯ, ಉಂಬಳಿ, ಉತ್ತಾರ ಮುಂತಾದ್ದು ಆಯಾ ದೇವಸ್ಥಾನಗಳಿಗೆ ಕೊಡುತ್ತಿದ್ದನು.

ಹೆಂಡ, ಅಫೀಮು ಮತ್ತು ಗಾಂಜಾ ಇವುಗಳನ್ನು ಮಾರುವ ಅಂಗಡಿಗಳನ್ನು ಮುಚ್ಚಿಸಿದ್ದನು.

ಟೀಪು ರಾಜ್ಯಭಾರದಲ್ಲಿ ಅನೇಕ ಬದಲಾವಣೆಗಳನ್ನು ಮಾಡಿದ್ದನು. ದೇಶದ ಮೊದಲಿನ ವಿಭಾಗಗಳನ್ನು ಬಿಟ್ಟು 5000 ವರಹ

ಉತ್ಪತ್ತಿಯಾಗುವ ಸೀಮೆಗೆ ಒಂದು ತುಕ್ಕಡಿ ಎಂದೂ 20-30 ತುಕ್ಕಡಿಗಳಿಗೆ ಒಂದು ಜಿಲ್ಲೆಯೆಂದೂ ವಿಂಗಡಿಸಿದನು. ಪ್ರತಿ ತುಕ್ಕಡಿಯು ಒಬ್ಬ ಅಮಿಲನ ವಿಚಾರಣೆಯಲ್ಲಿಯೂ ಪ್ರತಿ ಜಿಲ್ಲೆಯು "ಅಸೋಫ" ಎಂಬ ಅಧಿಕಾರಿಯ ವಿಚಾರಣೆಯಲ್ಲಿಯೂ ಇರತಕ್ಕುದೆಂದು ಗೊತ್ತು ಮಾಡಿದನು. ಹಜೂರಲ್ಲಿ ಸೈನ್ಯದ ಆಡಳಿತೆಗೆ ಒಂದು ಕಚೇರಿ, ಜಹಜುಗಳ ವಿಚಾರಕ್ಕೆ ಒಂದು ಕಚೇರಿ, ವ್ಯಾಪಾರ ವಿಚಾರಕ್ಕಾಗಿ ಒಂದು ಕಚೇರಿ, ಕೋಟೆಗಳ ವಿಚಾರಕ್ಕಾಗಿ ಒಂದು ಕಚೇರಿ, ಹಣ ಕಾಸುಗಳ ವಿಚಾರಕ್ಕೆ ಒಂದು ಕಚೇರಿ ಈ ಪ್ರಕಾರ 6 ಕಚೇರಿಗಳನ್ನು ಏರ್ಪಡಿಸಿದ್ದನು. ಗ್ರಾಮಗಳಿಂದ ಬರುತ್ತಿದ್ದ ಲೆಖ್ಖಪತ್ರಗಳು ಕನ್ನಡದಲ್ಲಿ ಬರೆಯಲ್ಪಡುತ್ತಿದ್ದವು. ತುಕ್ಕಡಿಗಳ ಕಚೇರಿಯಲ್ಲಿ ಹಿಂದವಿಯನ್ನೂ ಅದಕ್ಕೆ ಮೇಲ್ಪಟ್ಟ ಕಚೇರಿಗಳಲ್ಲಿ ಪಾರ್ಶಿಲಿಪಿಯನ್ನೂ ಉಪಯೋಗಿಸುತ್ತಿದ್ದರು ಟೀಪುವು ಎಲ್ಲಾ ತುಕ್ಕಡಿಗಳಲ್ಲಿಯೂ ಜಿಲ್ಲೆಗಳಲ್ಲಿಯೂ ಮುಸಲ್ಮಾನರನ್ನೆ ಕೆಲಸಕ್ಕೆ ನಿಯಮಿಸಿದನು. ಒಂದೊಂದು ಕೋಟೆಗೆ ಒಬ್ಬೊಬ್ಬ ಖಿಲ್ಲೆದಾರನನ್ನೂ ನಿಯಮಿಸಿದನು. ಬೇಕಲ, ಮಂಗಳೂರು, ಜಮಾಲಾಬಾದ, ಕುಂದಾಪುರ ಕೋಟೆಗಳಲ್ಲಿ ಒಬ್ಬೊಬ್ಬ ಖಿಲ್ಲೆದಾರನೂ, ಮಂಗಳೂರ (ಕೊರಿಯಾಲ), ಬಾರಕೂರು ಕಾರ್ಕಳ ಎಂಬ ಮೂರು ಜಿಲ್ಲೆಗಳಿಗೆ ಮೂವರು ಅಸೋಫರೂ ಇದ್ದರು. ಇವರನ್ನು ವರುಷಕ್ಕೆ ಒಂದಾವರ್ತಿ ಶ್ರೀರಂಗಪಟ್ಟಣಕ್ಕೆ ಕರೆಯಿಸಿ ಅವರ ತಲೆಯ ಮೇಲೆ ಖುರಾನ ಪುಸ್ತಕವನ್ನಿಟ್ಟು ಅನ್ಯಾಯಮಾಡುವದಿಲ್ಲವೆಂದು ಪ್ರಮಾಣಮಾಡಿಸುತ್ತಿದ್ದನು. ಇಂಗ್ಲೀಷರ ಪ್ರಾಬಲ್ಯವು ವ್ಯಾಪಾರದಿಂದ ಉಂಟಾಯಿತೆಂದು ಟೀಪುವು ಚನ್ನಾಗಿ ತಿಳಿದುಕೊಂಡು ಅದರಂತೆ ತನ್ನ ದೇಶದಲ್ಲಿಯೂ ಅಲ್ಲಲ್ಲಿ ವ್ಯಾಪಾರದ ಕೋಠಿಗಳನ್ನು ಸ್ಥಾಪಿಸಿದನು. ರಾಜ್ಯದ ಒಳಸಂದರ್ಭಗಳು ಹೊರಪಡಿಸದಿರುವುದಕ್ಕೂ ಮತ್ತು ವ್ಯಾಪಾರದ ಕ್ರಯವು ಹೆಚ್ಚಾಗದಂತಿರುವುದಕ್ಕೂ ಯಾವ ಪದಾರ್ಥಗಳನ್ನೂ ಹೊರಗೆ ತಗೆದುಕೊಂಡು ಹೋಗಕೂಡದೆಂದೂ ಹೊರಗಿನಿಂದ

ಒಳಗೆ ತರಕೂಡದೆಂದೂ ವಿಧಿಸಿದ್ದನು. ಹೊಗೆಸೊಪ್ಪು, ಗಂಧ, ಮರ, ಮೆಣಸು, ಚಿನ್ನ, ಬೆಳ್ಳಿ ಇವುಗಳ ವರಮಾನವು ಸರಕಾರಕ್ಕೆ ಸಲ್ಲ ತಕ್ಕುದೆಂದು ನಿಷ್ಕರ್ಷೆಮಾಡಿದನು. ಹೀಗೆಯೇ ತೂಕದ ಕಲ್ಲುಗಳು ಅಳತೆಯ ಸೇರುಗಳು, ನಾಣ್ಯಗಳು ಇವೆಲ್ಲವನ್ನೂ ಬೇರೆಮಾಡಿದನು.

## 22ನೇ ಅಧ್ಯಾಯು.

### ಇಂಗ್ಲೀಷರು.

ಶ್ರೀರಂಗಪಟ್ಟಣದ ಯುದ್ಧದಲ್ಲಿ ಟೀಪುಸುಲ್ತಾನನು ಮಡಿದು ಹೋದನಂತರ ಅವನ ರಾಜ್ಯವು ಇಂಗ್ಲೀಷರ ಸ್ವಾಧೀನಕ್ಕೆ ಬಂತು. ಇಂಗ್ಲೀಷರು ಇದನ್ನು 4 ಪಾಲುಮಾಡಿದರು. ಐವತ್ತು ಲಕ್ಷ ರೂಪಾಯಿ ಕಂದಾಯ ಉತ್ಪತ್ತಿಯಾಗುವ ರಾಜ್ಯವನ್ನು ಮೈಸೂರು ಅರಸನಿಗೆ ಕೊಟ್ಟು ಮೈಸೂರು ಸಂಸ್ಥಾನವನ್ನು ಉಂಟುಮಾಡಿದರು. 24 ಲಕ್ಷ ರೂಪಾಯಿ ಕಂದಾಯ ಸಿಕ್ಕುವ ಭಾಗವು ಇಂಗ್ಲೀಷರಿಗೆ ಸಿಕ್ಕಿತು. 24 ಲಕ್ಷ ರೂಪಾಯಿ ಕಂದಾಯ ಸಿಕ್ಕತಕ್ಕ ಪಾಲನ್ನು ನವಾಬ ನೈಜಾಮು ಉದೌಲಾಅಸೋಬಜಾನಿಗೆ ಕೊಟ್ಟರು. 12 ಲಕ್ಷ ರೂಪಾಯಿ ಕಂದಾಯ ಸಿಕ್ಕುವ ಪಾಲನ್ನು ಪೆಷ್ವೆರಾವ್ ಪಂಡಿತ ಪರಧಾನನಿಗೆ ಕೊಟ್ಟರು. ಇಂಗ್ಲೀಷರಿಗೆ ಮಂಗಳೂರು (ಕೊರಿಯಾಲ) ಬೇಕಲ ಮತ್ತು ನೀಲೇಶ್ವರ ಎಂಬ 1,33,662 ಕಂಠಿರವ ವರಹ 7¼ ಹಣ ಉತ್ಪತ್ತಿಯಾಗುವ ಜಿಲ್ಲೆಯೂ 11,393 ಕ. ವ. 2¼ ಹಣ ಉತ್ಪತ್ತಿ ಇರುವ ಕಾರ್ಕಳ ಜಿಲ್ಲೆಯೂ, 48,389 ಕ. ವ. 8½ ಹಣ ಉತ್ಪತ್ತಿಯಾಗುವ ಬಾರಕೂರು ಜಿಲ್ಲೆಯೂ 9,177 ಕ. ವ. ¼ ಹಣ ಉತ್ಪತ್ತಿ ಇರುವ ಭಟ್ಕಲ ಜಿಲ್ಲೆಯೂ, 9,192 ಕ. ವ. ½ ಹಣ ಉತ್ಪತ್ತಿ ಇರುವ ಗೆರಸಪ್ಪೆ ಜಿಲ್ಲೆಯೂ 17,482 ಕ. ವ. 9½ ಹಣ ಉತ್ಪತ್ತಿ ಇರುವ ಹೊನ್ನಾವರ

ಜಿಲ್ಲೆಯೂ ಸಿಕ್ಕಿದವು. ಹೀಗೆ ಈಗಿನ ಉತ್ತರ ಕನ್ನಡ, ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳನ್ನು ಒಳಕೊಂಡಿರುವ ಕನ್ನಡ ಜಿಲ್ಲೆಯನ್ನು 1799ನೇ ಇಸವಿಯಲ್ಲಿ ಕೆಪ್ಟನ್ ಮನ್ರೊ ಎಂಬ ಸೇನಾಧಿಪತಿಯ ಕೈಕೆಳಗೆ ಇಟ್ಟರು. ಶ್ರೀರಂಗಪಟ್ಟಣದ ಯುದ್ಧದಲ್ಲಿ ಟೀಪುವು ಮಡಿದುಹೋದನಂತರ ಬಿದನೂರಿನಲ್ಲಿ ಅವನ ಸೈನ್ಯದಲ್ಲಿದ್ದ ದೊಂಡಿಯಾವಾಘ ಎಂಬ ಮರಾಟಿ ಸೇನಾಧಿಪತಿಯು ಮೈಸೂರು ಸೈನ್ಯವನ್ನು ಬಿಟ್ಟು ಕೊಲ್ಲಾಪುರ ಅರಸನ ಸೈನ್ಯದ ಸೇನಾಧಿಪತಿಯಾದನು. ಇಂಗ್ಲೀಷರು ಕೊಲ್ಲಾಪುರವನ್ನು ಹಿಡಿದಾಗ ಇವನು ಆ ಸೈನ್ಯದ ಕೆಲಸವನ್ನು ಬಿಟ್ಟನು. ಅನಂತರ ಇವನು ಸೈನ್ಯವನ್ನು ಕೂಡಿಸಿ ದಕ್ಷಿಣ ಕನ್ನಡದ ಕುಂದಾಪುರ ತಾಲೂಕಿನಲ್ಲಿಯೂ ಉತ್ತರ ಕನ್ನಡ ಜಿಲ್ಲೆಯಲ್ಲಿಯೂ ಧಾರವಾಡ, ಬಿಜಾಪುರ ಜಿಲ್ಲೆಗಳಲ್ಲಿಯೂ ಸುಲಿಗೆ ಮಾಡಲಾರಂಭಿಸಿದನು. ಕುಂದಾಪುರದಲ್ಲಿದ್ದ ಸೈನ್ಯವು ಇವನನ್ನು ಕುಂದಾಪುರ ತಾಲೂಕಿನಿಂದ ಓಡಿಸಿತು. ಆದರೆ ಇವನ ಕಡೆಗೆ ಅನೇಕರು ಸೇರಿದರು. ಇದರಿಂದ ಇವನು ಹಿಗ್ಗಿಕೊಂಡು ಇಹಪರಲೋಕದ ಅರಸನೆಂಬ ಬಿರುದನ್ನು ಧರಿಸಿಕೊಂಡು ಕೆಲವು ಪ್ರದೇಶಗಳನ್ನು ಹಿಡಿದು ಅರಸನಾದನು. ಕೊಲ್ಲಾಪುರದ ಸೇನಾಧಿಪತಿಯಾದ ದೊಂಡೇಪಂತ್ ಗೋಖಲೆಯು ದೊಡ್ಡ ಸೈನ್ಯದೊಡನೆ ಕೊಲ್ಲಾಪುರದಿಂದ ದಕ್ಷಿಣಕ್ಕಿರುವ ಜಿಲ್ಲೆಗಳಿಗೆ ಬಂದು ದೊಂಡಿಯವಾಘನ ಸಂಗಡ ಯುದ್ಧಮಾಡಿದನು. ದೊಂಡೂಪಂತ ಗೋಖಲೆಯೂ ಕೊಲ್ಲಲ್ಪಟ್ಟನು. ಸಾಂಗಲಿಯ ಅರಸು ಕುಟುಂಬದವನಾದ ಚಿಂತಾಮಣಿರಾಯನೂ ಗಾಯಪಡೆದನು. ಪೇಶ್ವೆಯ ಅಪ್ಪಣೆ ಪ್ರಕಾರ ಇಂಗ್ಲೀಷ ಸೇನಾಧಿಪತಿಯಾದ ಮೆಜೆರ ಜನರಲ್ ವೆಲ್ಲೆಸ್ಲಿಯು (ಡ್ಯೂಕ್ ಒಫ್ ವೆಲ್ಲಿಂಗಟನ್) ದೊಡ್ಡ ಸೈನ್ಯದೊಡನೆ ಇವನನ್ನು ಬೆನ್ನಟ್ಟಿ 1800 ಸಪ್ಟಂಬರ 10ರಲ್ಲಿ, ಯುದ್ಧದಲ್ಲಿ ಸೋಲಿಸಿದನು. ಆದರೆ ದೊಂಡಿಯನು ಯುದ್ಧದಲ್ಲಿ ಮಡಿದುಹೋದನು. ಆ ಮೇಲೆ ಉತ್ತರ ಭಾಗದಲ್ಲಿ ಯಾವ ತರದ ತೊಂದರೆಗಳು ಇರಲಿಲ್ಲ. ಬೆಳತಂಗಡಿಯ

ಹತ್ತಿರವಿರುವ ಜಮಾಲಾಬಾದು ಕೋಟೆಯು ಟೀಪುವಿನ ಸೈನ್ಯದವರ ಸ್ವಾಧೀನವಿತ್ತು. ವಿಟ್ಲ ಹೆಗ್ಗಡೆಯು ಕಾಸರಗೋಡು ತಾಲೂಕಿನ ಉತ್ತರ ಭಾಗದಲ್ಲಿ ಸುಲಿಗೆಮಾಡುತ್ತಿದ್ದನು. ಕುಂಬಳೆ ಅರಸನು ಅದೇ ತಾಲೂಕಿನ ಮಧ್ಯಭಾಗದಲ್ಲಿ ಸುಲಿಗೆಮಾಡುತ್ತಿದ್ದು ತನ್ನ ರಾಜ್ಯವನ್ನು ತಿರಿಗಿ ಸ್ಥಾಪನೆಮಾಡಲಿಕ್ಕೆ ಪ್ರಯತ್ನಿಸುತ್ತಿದ್ದನು. ನೀಲೇಶ್ವರದ ಅರಸನೂ ಅದೇ ಸಾಧನೆಯಲ್ಲಿದ್ದನು.

ಜಮಾಲಾಬಾದ ಕೋಟೆಯಲ್ಲಿ 400 ಮಂದಿ ಸೈನಿಕರಿದ್ದರು. ಕೋಟೆಯ ಬುಡದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣಭಾಗದ ಅಧಿಕಾರಿಯಾಗಿದ್ದ ಒಬ್ಬ ಅಸೋಫನೂ ಇದ್ದನು. ಶ್ರೀರಂಗಪಟ್ಟಣದ ಯುದ್ಧದ ಸಮಯ, ಕೊಡಗರು ಟೀಪುವಿನ ಸೈನ್ಯವಿಲ್ಲದ ಸಮಯದಲ್ಲಿ ಜಮಾಲಾಬಾದು ಪಟ್ಟಣವನ್ನು ಸುಲಿಗೆಮಾಡಿ ಹಾಳುಮಾಡಿದ್ದರು. 1799ನೇ ಅಕ್ಟೋಬರ ತಿಂಗಳಲ್ಲಿ ಇಂಗ್ಲೀಷರ ಒಂದು ಸಣ್ಣ ಸೈನ್ಯವು ಅದನ್ನು ಹಿಡಕೊಂಡಿತು. ಅದನ್ನು ಹಿಡಿದ ಸಂಗತಿಯನ್ನು ಸೇನಾಧಿಪತಿಯು ಹೀಗೆ ವರ್ಣಿಸಿರುತ್ತಾನೆ. "ಮೊದಲು ಕೆಳಗಿನ ಕೋಟೆಯನ್ನು ಒಡದೆವು. ನಮ್ಮ ಕಡೆಯಲ್ಲಿ ಒಬ್ಬನು ಮಾತ್ರವೇ ಸತ್ತನು. ಒಬ್ಬನಿಗೆ ಗಾಯವಾಗಿದೆ. ಮೇಲಿನ ಕೋಟೆಯನ್ನು ಒಡಿಯಲು ಪ್ರಯತ್ನಿಸುತ್ತೇವೆ. 15ನೇ ರೆಜಿಮೆಂಟಿನ ಲ್ಯಾಟ ಕಂಪೆನಿಯ ೩೩ ಜನರಲ್ಲಿ ಕೆಲವರು ಸತ್ತರು. ಕೆಲವರಿಗೆ ಗಾಯವಾಗಿದೆ. ಕೋಟೆಯ ಮೇಲಕ್ಕೇರುವ ದಾರಿಯು 1700 ಅಡಿ ಎತ್ತರವಿರುವ ಪ್ರಪಾತವಾದ ಬಂಡೆಯ ಕಡೆಯಲ್ಲಿದೆ. ಈ ಕೋಟೆಯು ನಮ್ಮ ಸ್ವಾಧೀನವಾದರೆ ಕನ್ನಡ ಜಿಲ್ಲೆಯು ಪೂರ್ಣ ನಮ್ಮ ಸ್ವಾಧೀನವಾದ ಹಾಗಾಗುತ್ತದೆ. ನಮ್ಮಲ್ಲಿ ಇಬ್ಬರು ಆಫೀಸರರಿಗೆ ಗಾಯವಾಗಿದೆ" ಟೀಪು ಸುಲ್ತಾನನ ಕಾಲದಲ್ಲಿ ಬೇಕಲ ಕೋಟೆಯಲ್ಲಿರುವ ಸೈನ್ಯದಲ್ಲಿ ಸಣ್ಣ ಅಧಿಕಾರಿಯಾಗಿದ್ದ ಬಾಮರಾಜ ಕ್ಷತ್ರಿಯನಾದ ತಿಮ್ಮನಾಯಕ (ಕೆಲವರ ಹೇಳಿಕೆ ಮೇರೆಗೆ ಕೃಷ್ಣನಾಯಕ)ನು, ಬೇಕಲ

ಕೋಟೆಯು ಇಂಗ್ಲೀಷರ ಸ್ವಾಧೀನವಾದ ಮೇಲೆ, ಮುಂಬಯಿಯಲ್ಲಿರುವ ಇಂಗ್ಲೀಷರ ಸೈನ್ಯಕ್ಕೆ ಜನರನ್ನು ಕೂಡಿಸುವ ಕೆಲಸಕ್ಕೆ ನೇಮಿಸಲ್ಪಟ್ಟಿದ್ದನು. ಕೊಯಮುತ್ತೂರು ಜಿಲ್ಲೆಯಲ್ಲಿ ಟೀಪುವಿನ ಕಾಲದಲ್ಲಿ ಶಿರಸ್ತೆದಾರನಾಗಿದ್ದ ಸುಬ್ಬರಾವ್ ಎಂಬವನೂ ಈ ತಿಮ್ಮ ನಾಯಕನೂ ಒಳಸಂಚುನಡಿಸಿ ಮುಂಬಯಿಗೆ ಕಳುಹಿಸಲಿಕ್ಕೆ ತಯಾರಿಸಿದ್ದ 200 ಮಂದಿ ಸೈನಿಕರನ್ನು ಕರಕೊಂಡು ಬೆಳತಂಗಡಿಯ ಹತ್ತಿರವಿರುವ ಬೈಲಂಗಡಿಗೆ ಹೋಗಿ ಅಲ್ಲಿ ಟೀಪುವಿನ ಮಗನೆನಿಸುವ ಫಟಿ ಹೈದರ ಎಂಬವನಿಗೆ ಪಟ್ಟುಕಟ್ಟುವ ಆಲೋಚನೆಮಾಡಿದರು. ಬೇಕಲದಿಂದ ತಿಮ್ಮನಾಯಕನೂ ಕೊಯಮುತ್ತೂರು ಸುಬ್ರಾಯನೂ ಜಮಾಲಗಡದ ಕಡೆಗೆ ಹೊರಟರು. ಇವರು ಜಮಾಲಗಡದ ಹತ್ತಿರ ಹೋಗುವಾಗ ಅಲ್ಲಿ ಕೋಟೆಯ ಹತ್ತಿರವಿದ್ದ ಸೇನಾಧಿಪತಿಯೂ ಸೈನಿಕನೂ ನಿದ್ರೆಮಾಡುತ್ತಿದ್ದರು. ಒಬ್ಬ ನಾಯಕನೂ ಅವನ ಕೈಕೆಳಗಿನ ಒಬ್ಬ ಶಿಪಾಯಿಯೂ ಎಚ್ಚರಿಕೆಯಿಂದ ಇದ್ದರು. ಆಗ ಎಲ್ಲರು ಎಚ್ಚರಿಕೆಯಾದರು. ಅದನ್ನು ತಿಳಿದು ಸುಬ್ಬರಾಯನು ಉಪ್ಪಿನಂಗಡಿಯ ಕಡೆಗೆ ತಿರುಗಿದನು.

ವಿಟ್ಲ ಹೆಗ್ಗಡೆಯು 1768ರಲ್ಲಿ ಹೈದರನಿಗೂ ಇಂಗ್ಲೀಷರಿಗೂ ಆದ ಯುದ್ಧದಲ್ಲಿ ಇಂಗ್ಲೀಷರಿಗೆ ಸಹಾಯಮಾಡಿದನೆಂದು ಹೈದರನು ಅವನ ರಾಜ್ಯವನ್ನು ಸೆಳಕೊಂಡಾಗ ಅವನು ಓಡಿಹೋಗಿ, ತಲಚೇರಿಯಲ್ಲಿದ್ದನು. 1799ನೇ ಇಸವಿ ದಶಂಬರ 15ನೇ ತಾರೀಕಿಗೆ ಇವನು ತಲಚೇರಿಯಿಂದ ಓಡಿಹೋಗಿ ವಿಟ್ಲದಲ್ಲಿರುವ ತನ್ನ ಅಳಿಯನನ್ನು ಸೇರಿಕೊಂಡು 150 ಮಂದಿ ಸೈನಿಕರನ್ನು ಕೂಡಿಸಿದನು. ಮೇ 7ನೇ ತಾರೀಕಿನೊಳಗೆ ಕೊಯಮುತ್ತೂರು ಸುಬ್ರಾಯನೂ ಇವನೊಡನೆ ಬಂದು ಸೇರಿದ್ದನು.

ಸುಬ್ರಾಯನೂ, ಹೆಗ್ಗಡೆಯೂ ಕೂಡಿ ಉಪ್ಪಿನಂಗಡಿಗೆ ಹೋದರು. ಕಡಬದ ತಹಶೀಲದಾರನು ಉಪ್ಪಿನಂಗಡಿ ದೇವಸ್ಥಾನದಲ್ಲಿ ಕಚೇರಿ ಮಾಡಿದ್ದನು. ಸುಬ್ರಾಯನು ಬಂದ ವರ್ತಮಾನವನ್ನು ಕೇಳಿ ತಹಶೀಲ

ದಾರನೂ ಕಂದಾಯದ ಹಣ ತಂದಿದ್ದ ಕೆಲವು ಮಂದಿ ಪಟೇಲರೂ ಹೊಳೆದಾಟಿಕೊಂಡು ಓಡಿಹೋದರು. ಸುಬ್ರಾಯನು ಅಲ್ಲಿಂದ ಬಂಟವಾಳಕ್ಕೆ ಬಂದು ಸುಲಿಗೆಮಾಡಿ ಪುತ್ತೂರಿಗೆ ಹೋಗಿ ಕಂದಾಯವನ್ನು ವಸೂಲುಮಾಡಲಾರಂಭಿಸಿದನು. ಆಗ ಕೆಪ್ಟನ ಮನ್ರೋವು 200 ಮಂದಿ ಪೇದೆಗಳ ಒಂದು ಸೈನ್ಯವನ್ನು ತಯಾರಿಸಿ ಬಂಟವಾಳದ ಜೈನಪಟೇಲ ಕುಮಾರ ಹೆಗ್ಗಡೆಯನ್ನು ಇವರಿಗೆ ಅಧಿಪತಿಯಾಗಿ ನೇಮಿಸಿದನು. ಕುಮಾರ ಹೆಗ್ಗಡೆಯು ಬಂಟವಾಳದಿಂದ ಹೊರಟು ಸುಬ್ಬರಾಯನನ್ನು ಹಿಂಬಾಲಿಸಿ ಮೇ 11ನೇ ತಾರೀಕಿಗೆ ಅವನನ್ನು ಸೋಲಿಸಿದನು. ಆದರೆ ಕುಮಾರ ಹೆಗ್ಗಡೆಗೆ ತೋಳಿನಲ್ಲಿ ಒಂದು ಗುಂಡಿನ ಪೆಟ್ಟು ತಗಲಿತು. ಕೂಡಲೇ ಕಡಬದ ತಹಶೀಲದಾರನು ಮುಖ್ಯಸ್ಥನಾಗಿ ಸಿಸಿಲದ ವರೆಗೆ ಸುಬ್ರಾಯನನ್ನು ಓಡಿಸಿದನು. ಈ ಸಂಗತಿಯು ಮೇ 17ರಲ್ಲಿ ಸಂಭವಿಸಿತು. ಪೇದೆಗಳಲ್ಲಿ 40 ಯಾ 50 ಮಂದಿ ಸತ್ತರು.

ಇದೇ ಸಮಯದಲ್ಲಿ ಜಮಾಲಗಡದಲ್ಲಿ ಯುದ್ಧವು ನಡಿಯುತ್ತಿದ್ದುದರಿಂದ ಇದ್ದ ಸೈನ್ಯವು ಸಾಕಾಗದೆ ಕೆಪ್ಟನ ಮನ್ರೋವು 700 ಮಂದಿ ಪೇದೆಗಳ ಒಂದು ಸೈನ್ಯವನ್ನು ತಯಾರಿಸಿ ಅವರನ್ನೆಲ್ಲಾ ತಹಶೀಲದಾರರಿಗೆ ಹಂಚಿಕೊಟ್ಟನು. ವಿಟ್ಲದ ತಹಶೀಲದಾರನು ವಿಟ್ಲದ ಹೆಗ್ಗಡೆಯನ್ನು ವಿಟ್ಲದಲ್ಲಿಯೇ ಸೋಲಿಸಿ ಅವನನ್ನೂ ಅವನ ಕುಟುಂಬದವರಲ್ಲಿ 9 ಮಂದಿಯನ್ನೂ ಸೆರೆಹಿಡಿದನು. ಕುಮಾರ ಹೆಗ್ಗಡೆಯ ಸಹಾಯದಿಂದ ಜಮಾಲಗಡ ಕೋಟೆಯು ವಶವಾಯಿತು. ಇದಾದ ಮೇಲೆ ಕನ್ನಡ ಜಿಲ್ಲೆಯ ಎಲ್ಲಾ ಕಡೆಗಳಲ್ಲಿಯೂ ಶಾಂತತೆಯು ನೆಲೆಗೊಂಡಿತು. ಕುಂಬಳೆ, ನೀಲೇಶ್ವರ ರಾಜರು ಶರಣಾಗತರಾದರು. ಕೆಲವು ಪಟೇಲರು ಮಾತ್ರವೇ ಕಂದಾಯವನ್ನು ಕೊಡುವುದಕ್ಕೆ ಹಿಂಜರಿದರು. ಉಪ್ಪಿನಂಗಡಿ ಪಟೇಲನನ್ನು ಕೊಯಮುತ್ತೂರು ಸುಬ್ರಾಯನು 15 ದಿವಸಗಳ ವರೆಗೆ ಸೆರೆಯಲ್ಲಿಟ್ಟರೂ ಅವನು ಕಂದಾಯದ ಹಣ ಕೊಡಲಿಕ್ಕೆ ಒಪ್ಪದೆ ಇಂಗ್ಲೀಷರಿಗೆ ತಂದುಕೊಟ್ಟನು.

ಕುಂದಾಪುರ, ಉಡುಪಿ ತಾಲೂಕುಗಳು ಒಳ್ಳೇ ಅಭಿವೃದ್ಧಿಸ್ಥಿತಿಯಲ್ಲಿವೆ ಎಂದೂ, ಕಾರ್ಕಳವು ಸೈನ್ಯ ಹೋಗುವ ದಾರಿಯಲ್ಲಿದ್ದುದರಿಂದ ಹಾಳಾಗಿತ್ತೆಂದೂ, ಕಡಬ ತಾಲೂಕಿನ ಹೆಚ್ಚಿನ ಭಾಗವು ಕೊಡಗರ ಹಾವಳಿಯಿಂದ ಪೂರ್ಣ ಹಾಳಾಗಿತ್ತೆಂದೂ, ಜಮುಲಾಬಾದಿನ ಸುತ್ತಮುತ್ತಲಿನ ಪ್ರದೇಶವನ್ನು ಬಿಟ್ಟು ಉಳಿದ ಉಪ್ಪಿನಂಗಡಿ ತಾಲೂಕಿನ ಭಾಗವೂ ಮಂಗಳೂರು ತಾಲೂಕೂ ಕಾಸರಗೋಡು ತಾಲೂಕಿನ ಉತ್ತರಭಾಗವೂ ಒಳ್ಳೇ ರೀತಿಯಲ್ಲಿತ್ತೆಂದೂ, ಕಾಸರಗೋಡು ತಾಲೂಕಿನ ಕುಂಬಳೆ ರಾಜನ ರಾಜ್ಯದ ಅಂಶವು ಕೊಡಗರ ಹಾವಳಿಯಿಂದ ಬಹಳ ಹಾಳಾಗಿತ್ತೆಂದೂ ಕ್ರಿ. ಶ 1800ರಲ್ಲಿ ಕೆಪ್ಟನ ಮನ್ರೊವು ಮದರಾಸು ಸರಕಾರಕ್ಕೆ ಬರೆದ ಪತ್ರದಲ್ಲಿ ತೋರುತ್ತದೆ.

1801ನೇ ಇಸವಿಯಲ್ಲಿ ಹಿಂದೂಸ್ಥಾನದ ಗವರ್ನರ ಜನರಲರಾಗಿದ್ದ ಮಾರ್ಕ್ವಿಸ್ ಒಫ್ ವೆಲ್ಲೆಸ್ಲಿಯು ಡೊಕ್ಟರ್ ಫ್ರಾನಿಸ್ಸ ಬುಚೆನನ್ ಎಂಬ ವೈದ್ಯಉದ್ಯೋಗಸ್ಥನನ್ನು ಟೀಪುಸುಲ್ತಾನನಿಂದ ಇಂಗ್ಲೀಷರಿಗೆ ಸಿಕ್ಕಿದ ರಾಜ್ಯಗಳ ವಿಷಯವಾಗಿ ದೇಶದ ಬೇಸಾಯು, ಕೈಗಾರಿಕೆ, ವ್ಯಾಪಾರ, ಮತನಡತೆಗಳು ಇವುಗಳ ವಿಷಯ ತನಿಖಿನಡಿಸಬೇಕಾಗಿ ಕಳುಹಿಸಿದನು.

ಇವನು ಕನ್ನಡ ಜಿಲ್ಲೆಗೆ ದಕ್ಷಿಣ ದಾರಿಯಿಂದ ಬಂದನು. ನೀಲೇಶ್ವರ, ಹೊಸದುರ್ಗ ಪ್ರದೇಶಗಳಲ್ಲಿ ಜನಸಂಖ್ಯೆಯು ಕಡಿಮೆಯಾಗಿ ಬೇಸಾಯವು ಕಡಿಮೆಯಾಗಿತ್ತೆಂದೂ ಚಂದ್ರಗಿರಿಯ ಹತ್ತಿರವೂ ಅದೇ ರೀತಿ ಇತ್ತೆಂದೂ, ಕುಂಬಳೆಯ ಹತ್ತಿರ ಬೇಸಾಯವು ಸ್ವಲ್ಪ ಒಳ್ಳೇ ಸ್ಥಿತಿಯಲ್ಲಿತ್ತೆಂದೂ, ಮಂಜೇಶ್ವರದಲ್ಲಿ ಗೌಡಸಾರಸ್ವತರು ಐಶ್ವರ್ಯವಂತರಾಗಿದ್ದರೆಂದೂ, ಮಂಗಳೂರಿನಲ್ಲಿ ಜನಸ್ಥಿತಿಯು ಮಲಬಾರಿಗಿಂತಲೂ ಒಳ್ಳೇ ಸ್ಥಿತಿಯಲ್ಲಿತ್ತೆಂದೂ, ಫರಂಗಿಫೇಟೆಯಲ್ಲಿ ಟೀಪುಸುಲ್ತಾನನು ಯುರೋಪಿಯನರನ್ನು ಬಾರದ ಹಾಗೆ ಮಾಡುವುದಕ್ಕೆ ಒಳ್ಳೇ ಮೆಣಸಿನ ಬಳ್ಳಿಗಳನ್ನೆಲ್ಲಾ ಕಡಿದುಹಾಕಿದ್ದನೆಂದೂ, ಬಂಟವಾಳ ಪೇಟೆಯಲ್ಲಿ

ಹೊಸ ಮನೆಗಳನ್ನು ಕಟ್ಟಿಸುತ್ತಿದ್ದರೆಂದೂ, ವ್ಯಾಪಾರವು ಉನ್ನತಸ್ಥಿತಿಯಲ್ಲಿತ್ತೆಂದೂ, ಬೆಳತಂಗಡಿಯು ಕೊಡಗರ ಹಾವಳಿಯಿಂದ ಹಾಳಾಗಿತ್ತೆಂದೂ, ಹೊಸಂಗಡಿಗೆ ಸೊಪ್ಪಿನಂಗಡಿ ಎಂಬ ಹೆಸರಿತ್ತೆಂದೂ, ಮೂಡಬಿದರೆಯ ಸುತ್ತಮುತ್ತಲಿನ ಪ್ರದೇಶವು ಹಾಳಾಗಿತ್ತೆಂದೂ, ಕಾರ್ಕಳದಲ್ಲಿಯೂ ಅದೇ ರೀತಿ ಇತ್ತೆಂದೂ, ಹಿರಿಯಡ್ಕ ಮತ್ತು ಉಡುಪಿಯ ಸುತ್ತ ಮುತ್ತಲೂ ಬೇಸಾಯವು ಬಹಳ ಕಡಿಮೆಯಾಗಿತ್ತೆಂದೂ, ಬ್ರಹ್ಮಾವರ, ಕುಂದಾಪುರದಲ್ಲಿ ತೆಂಗಿನ ತೋಟಗಳು ಉತ್ತಮಸ್ಥಿತಿಯಲ್ಲಿದ್ದವೆಂದೂ, ಕುಂದಾಪುರದಿಂದ ಉತ್ತರಕ್ಕಿರುವ ಪ್ರದೇಶದಲ್ಲಿ ಮರಾಟಿಯವರ ಹಾವಳಿಯಿಂದಲೂ, ಜ್ವರದ ಪೀಡೆಯಿಂದಲೂ ಜನಸಂಖ್ಯೆಯು ಬಹಳ ಕಡಿಮೆಯಾಗಿತ್ತೆಂದೂ ಬುಚೆನನನು ಬರೆದಿರುತ್ತಾನೆ.

1820ನೇ ಇಸವಿಯ ನಂತರ ಕಂದಾಯವನ್ನು ವಸೂಲು ಮಾಡಲು ಸ್ವಲ್ಪ ಕಷ್ಟವಾಯಿತು. 1831ರಲ್ಲಿ ಜನರೆಲ್ಲಾ ಅಲ್ಲಲ್ಲಿ ಕೂಟಕೂಡಿ ತೀರ್ವೆ ಕೊಡುವುದಿಲ್ಲವೆಂದು ಒಳಸಂಚುನಡಿಸುತ್ತಿದ್ದರು. ಇದರ ವಿಷಯ ವಿಚಾರಿಸಿದಾಗ, ಮುಖ್ಯ ಶಿರಸ್ತೆದಾರನೂ ಬ್ರಾಹ್ಮಣ ಅಧಿಕಾರಿಗಳೂ ಕೂಡಿ ರೊಮನ್ ಕೆಥೊಲಿಕ ಕ್ರೈಸ್ತ ಅಧಿಕಾರಿಗಳನ್ನು ಸರಕಾರದ ಕೆಲಸದಿಂದ ತೆಗಿಸಲಿಕ್ಕೆ ಮಾಡಿದ ಒಂದು ಉಪಾಯವೆಂದು ತಿಳಿದುಬಂತು. ಕಡೆಗೆ ತೀರ್ವೆ ಹೆಚ್ಚಾದ್ದಲ್ಲಿ ಸ್ವಲ್ಪ ಕಡಿಮೆಮಾಡಿದಾಗ ಕೂಟಗಳು ಚದರಿದವು.

1834ನೇ ಇಸವಿಯಲ್ಲಿ ಆದ ಕೊಡಗು ಯುದ್ಧದ ಸಮಯ ಕರ್ನಲ್ ಜೆಕ್‌ಸನನು ಮಾರ್ಚಿ 29ನೇ ತಾರೀಕಿಗೆ ಕುಂಬಳೆಯಿಂದ ಒಂದು ಸೈನ್ಯವನ್ನು ತೆಗೆದುಕೊಂಡು ಬೇಳಕ್ಕೆ ಹೋದನು. ಮಾರ್ಚಿ 1ನೇ ತಾರೀಕಿಗೆ ಇವನು ಈಶ್ವರಮಂಗಲಕ್ಕೆ ಮುಟ್ಟಿದನು. ಇವನು ಕೊಡಗರ ವಶದಲ್ಲಿದ್ದ ಬೆಳ್ಳಾರೆಯನ್ನು ಹಿಡಿಯಲು ಹೋಗುತ್ತಿದ್ದನು. ಆದರೆ ಮದೂರಿಗೂ ಬೆಳ್ಳಾರೆಗೂ ಮಧ್ಯದಲ್ಲಿ ಕೊಡಗರ ಒಂದು ದೊಡ್ಡ ಸೈನ್ಯವಿದೆ ಎಂದು ತಿಳಿದುಬಂತು. ಈಶ್ವರಮಂಗಲದಿಂದ

ಸಂಚಾರಕ್ಕೆ ಹೊರಟ ಒಂದು ಸೈನ್ಯದ ಇಬ್ಬರು ಇಂಗ್ಲೀಷ ಅಫೀಸ ರರನ್ನೂ 60 ಮಂದಿ ಸಿಪಾಯಿಗಳನ್ನೂ ಕೊಡಗರ ಸೈನ್ಯವು ಕೊಂದು ಹಾಕಿತು. ಇದರಿಂದ ಕೊಡಗರ ಸೈನ್ಯವು ಬಲವಾದದ್ದೆಂದು ತಿಳಿದು ಕರ್ನಲ್ ಜಿಕ್‌ಸನನು ತಿರಿಗಿ ಕಾಸರಗೋಡಿಗೆ ಬಂದನು.

ಕೊಡಗು ಯುದ್ಧದಲ್ಲಿ ಇಂಗ್ಲೀಷರಿಗೆ ಜಯವಾಗಿ ಕೊಡಗು ರಾಜ್ಯವು ಇಂಗ್ಲೀಷರ ಸ್ವಾಧೀನಕ್ಕೆ ಬಂದ ಮೇಲೆ ಕೊಡಗು ರಾಜನ ವಶದಲ್ಲಿದ್ದ ಪಂಜ, ಬೆಳ್ಳಾರೆ, ಅಮರ, ಸೂಳ್ಯ ಮಾಗಣೆಗಳು ಕನ್ನಡ ಜಿಲ್ಲೆಗೆ ಕೂಡಿಸಲ್ಪಟ್ಟವು. ಇದರಿಂದ ಕೊಡಗರಿಗೆ ಏನೂ ಸಮಾಧಾನ ವಿರಲಿಲ್ಲ. ಕೊಡಗರು 1837ರಲ್ಲಿ ದಂಗೆ ಎಬ್ಬಿಸಿದಾಗ ಇಂಗ್ಲೀಷರು ಅದನ್ನು ಬೇಗನೇ ನಿಲ್ಲಿಸಿದರು.

1860ನೇ ಇಸವಿಯಲ್ಲಿ ಕನ್ನಡ ಜಿಲ್ಲೆಯನ್ನು ಉತ್ತರ ಕನ್ನಡ, ದಕ್ಷಿಣ ಕನ್ನಡ ಎಂಬ ಎರಡು ಜಿಲ್ಲೆಗಳಾಗಿ ವಿಭಾಗಿಸಿದರು. 1862ರಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಮುಂಬಾಯಿ ಸಂಸ್ಥಾನಕ್ಕೆ ಕೂಡಿಸಿದರು.

1863ನೇ ಇಸವಿಯಲ್ಲಿ ದೇವಸ್ಥಾನಗಳಿಗೂ ಮಶೀದಿಗಳಿಗೂ ಬಸದಿಗಳಿಗೂ ಭೂತಸ್ಥಾನಗಳಿಗೂ ಸಲ್ಲಬೇಕಾದ ತಸದೀಕನ್ನು ಕೊಡಲು ಸುಲಭವಾಗುವ ಹಾಗೆ ಲೆಕ್ಕಗಳನ್ನು ತಯಾರಿಸಿದರು. ಅರಸರಿಗೆ ಸಲ್ಲಬೇಕಾದ ಮಲ್ಲಿಖಾನೆಯನ್ನು ಹಣದ ರೂಪವಾಗಿ ಕೊಡಲಾರಂಭಿ ಸಿದರು. 1884ನೇ ಇಸವಿಯಲ್ಲಿ ಆದ ಲೋಕಲ್‌ಬೋರ್ಡು ಆಕ್ಟಿನ ಪ್ರಕಾರ ಈ ಜಿಲ್ಲೆಯಲ್ಲಿ ಒಂದು ಡಿಸ್ಟ್ರಿಕ್ಟ ಬೋರ್ಡನ್ನೂ, ಕುಂದಾ ಪುರ ಉಪ್ಪಿನಂಗಡಿ, ಮಂಗಳೂರು ಈ ಮೂರು ತಾಲೂಕು ಬೋರ್ಡು ಗಳನ್ನೂ ಮಂಗಳೂರು ಮುನ್ಸಿಪಾಲಿಟಿಯನ್ನೂ ಏರ್ಪಡಿಸಿದರು. 1901-1903ರಲ್ಲಿ ಭೂಮಿಯನ್ನೆಲ್ಲಾ ಅಳತೆಮಾಡಿ ಪ್ರತಿಯೊಬ್ಬನಿಗೆ ಇಂತಿಷ್ಟೇ ಭೂಮಿಯು ಇದೆ ಎಂದೂ, ಪ್ರತಿ ಒಬ್ಬನು ಸರಕಾರಕೆ ಇಂತಿಷ್ಟೇ ಕಂದಾಯ ಕೊಡಬೇಕೆಂದೂ ನಿಶ್ಚಯಿಸಿದರು.

# 23ನೇ ಅಧ್ಯಾಯ.
## ಕೊ ಡ ಗ ರು .

ಇಕ್ಕೇರಿಯ 2ನೇ ಸೋಮಶೇಖರ ನಾಯಕನು ಕೊಲತ್ತರಸನ ಸಂಗಡ ನಿಲೇಶ್ವರದಲ್ಲಿ ಯುದ್ಧಮಾಡಿದಾಗ ಕೊಲತ್ತರಸನು ಕೊಡಗು ರಾಜನಾದ ಹಾಲೇರಿ ದೊಡ್ಡ ವೀರಪ್ಪ ಒಡೆಯನ ಸಹಾಯವನ್ನು ಕೇಳಲು, ಅವನು ಇವರೊಳಗೆ ಸಂಧಿಯನ್ನು ಮಾಡಿಸಿ ಕೊಲತ್ತರಸನು ಇಕ್ಕೇರಿ ಸೋಮಶೇಖರ ನಾಯಕನಿಗೆ 18,00,000 ರೂಪಾಯಿ ಕೊಡುವಂತೆ ತಾಹಾಮಾಡಿ ಹಣಕ್ಕೆ ತಾನೇ ಜಾಮೀನುದಾರನಾಗಿ ನಿಂತು ನಗರದ ಸೋಮಶೇಖರನನ್ನು ಹಿಂದಕ್ಕೆ ಕಳುಹಿಸಿದನು. ಕೊಲತ್ತರಸನು ಅರ್ಧ ಹಣ ಕೊಡಲಿಕ್ಕೆ ನಿರಾಕರಿಸಲು ದೊಡ್ಡ ವೀರಪ್ಪನು ತನ್ನ ಸೇನಾಧಿಪತಿಯಾದ ಜೋಶಿ ಮುತ್ತಣ್ಣನನ್ನು 5000 ಕೊಡಗರ ಸೈನ್ಯದೊಡನೆ ಕಣ್ಣಾನೂರಿಗೆ ಕಳುಹಿಸಿ ಕೊಲತ್ತ ರಾಜನನ್ನು ಯುದ್ಧದಲ್ಲಿ ಸೋಲಿಸಿದನು. ಆದರೆ ಬಾಕಿಯಾದ ಹಣ ದೊರೆಯದೆ ಇದ್ದುದರಿಂದ ಕೊಡಗು ಸೈನ್ಯವು ಹಿಂದಕ್ಕೆ ಬರಬೇಕಾಯಿತು. ಈ ಸಾಹಸಕ್ಕೆ ಇಕ್ಕೇರಿ ರಾಜನು ಮೆಚ್ಚಿ ಅಮರ, ಸುಳ್ಯ ಮಾಗಣೆಗಳನ್ನು ಹಾಲೇರಿ ದೊಡ್ಡ ವೀರಪ್ಪನಿಗೆ ಇನಾಮಾಗಿ ಕೊಟ್ಟನು. ಕ್ರಿ. ಶ. 1768ನೇ ಇಸವಿಯಲ್ಲಿ ಹೈದರಾಲಿಯು ಮಂಗಳೂರಿಗೆ ಬಂದು ಅದನ್ನು ಇಂಗ್ಲೀಷರ ಕೈಯಿಂದ ವಶಮಾಡಿಕೊಂಡು ತನ್ನ ರಾಜ್ಯಕ್ಕೆ ಹಿಂತೆರಳುವಾಗ ಅದೇ ದೊಡ್ಡ ವೀರಪ್ಪ ಒಡೆಯನಿಂದ ಗಟ್ಟದ ಮೇಲಿರುವ ಉಚ್ಚಿಂಗೀ ಎಂಬ ಸೀಮೆಯನ್ನು ಪಡಕೊಂಡು ಅದರ ಬದಲಾಗಿ ಪಂಜ ಮತ್ತು ಬೆಳ್ಳಾರೆ ಮಾಗಣೆಗಳನ್ನು ಅವನಿಗೆ ಬಿಟ್ಟುಕೊಟ್ಟನು. ಅಂದಿನಿಂದ ಬೆಳ್ಳಾರೆಯು ಈ ನಾಲ್ಕು ಮಾಗಣೆಗಳಿಗೆ ಮುಖ್ಯ ಪಟ್ಟಣವಾಯಿತು. ಕ್ರಿ. ಶ. 1775ರಲ್ಲಿ ಹೈದರನು ತನ್ನ ಮರೆಹೊಕ್ಕಿದ್ದ ಲಿಂಗರಾಜನನ್ನು ಕೊಡಗಿನ ಅರಸನಾಗಿಮಾಡಿ ವೈನಾಡನ್ನು ಲಿಂಗರಾಜನಿಗೆ ಬಿಟ್ಟು

ಕೊಟ್ಟನು. ಇದಕ್ಕೆ ಬದಲಾಗಿ ಲಿಂಗರಾಜನು ಅಮರ-ಸುಳ್ಯ ಎಂಬ ಏಳು ಸಾವಿರ ಸೀಮೆಯನ್ನು ಹೈದರನಿಗೆ ಬಿಟ್ಟುಕೊಟ್ಟನು. ಕ್ರಿ. ಶ. 1784ರಲ್ಲಿ ಟೀಪುವು ಮಡಿಕೇರಿಗೆ ಬಂದು ಕೊಡಗರನ್ನೆಲ್ಲಾ ತಲಕಾವೇರಿಗೆ ಬರಮಾಡಿಸಿ ಅಲ್ಲಿ ಅವರನ್ನು ಸೆರೆಹಿಡಿದು ಅನೇಕ ಬ್ರಾಹ್ಮಣರ ಸಹಿತ ಶ್ರೀರಂಗ ಪಟ್ಟಣಕ್ಕೆ ಕೊಂಡುಹೋದನು. ಟೀಪುವು ತನ್ನ ರಾಜ್ಯದ ಜನರನ್ನು ಸೆರೆಹಿಡಿದ ಹಾಗೆಯೇ ತಾನೂ ಕನ್ನಡ ಜಿಲ್ಲೆಯಲ್ಲಿರುವ ಬ್ರಾಹ್ಮಣರನ್ನು ಸೆರೆಹಿಡಿದುತರಬೇಕೆಂದು ಒಂದು ಸೈನ್ಯವನ್ನು ಕಡಬದ ಕಡೆಗೆ ಕಳುಹಿಸಿದನು. ಈ ಕೊಡಗರ ಸೈನ್ಯವು ಕಡಬ, ಬೈಲಂಗಡಿ, ಜಮಾಲಾಬಾದು, ಅಳದಂಗಡಿ ಮುಂತಾದ ಪಟ್ಟಣಗಳನ್ನು ಸುಲಿಗೆಮಾಡಿ ಅನೇಕ ಮಂದಿ ಬ್ರಾಹ್ಮಣರ ಕುಟುಂಬಗಳನ್ನೇ ಸೆರೆಹಿಡಿದುಕೊಂಡು ಅರಸನಿಗೆ ಒಪ್ಪಿಸಿತು. ಈ ಸಮಯದಲ್ಲಿ ಮೇಲೆ ಹೇಳಿದ ಪಟ್ಟಣಗಳೆಲ್ಲ ಬಹಳ ದೊಡ್ಡದಾಗಿಯೂ, ಜನಭರಿತವಾಗಿಯೂ, ಐಶ್ವರ್ಯದಿಂದ ತುಂಬಿದ್ದಾಗಿಯೂ, ವ್ಯಾಪಾರದ ಮಧ್ಯಸ್ಥಳಗಳಾಗಿಯೂ ಇದ್ದವು. ಜಮಲಾಬಾದು ಪಟ್ಟಣದಲ್ಲಿ ಸುಮಾರು 1000 ಮನೆಗಳಿದ್ದವು. ಹೊಯ್ಸಳ ರಾಜನಾದ 1ನೇ ನರಶಿಂಹನು ಅನೇಕ ಮಂದಿ ವಿದ್ಯಾವಂತರಾದ ಚಿತ್ತಪಾವನ ಬ್ರಾಹ್ಮಣರನ್ನು ತಂದು ಈ ಪಟ್ಟಣದಲ್ಲಿ ನಿಲ್ಲಿಸಿದ್ದನು. ಟೀಪುವು ಬ್ರಾಹ್ಮಣರನ್ನು ಸೆರೆಹಿಡಿದುದಕ್ಕಾಗಿ ಕೊಡಗು ರಾಜ್ಯದಲ್ಲಿ ಮತಸಂಬಂಧದ ಕೆಲಸಗಳಿಗೆ ಬ್ರಾಹ್ಮಣ ಕುಟುಂಬಗಳನ್ನೇ ಹಿಡಿದುತರಬೇಕಾಗಿ ಕೊಡಗು ರಾಜನ ಅಪ್ಪಣೆ ಇತ್ತು. ಆದ್ದರಿಂದ ಕೊಡಗು ಸೈನಿಕರು ಬ್ರಾಹ್ಮಣರ ಕುಟುಂಬಗಳನ್ನೇ ಸೆರೆಹಿಡಿದು ವೈದರು. ದಾರಿಯಲ್ಲಿರುವ ಊರುಗಳನ್ನೂ ಹಳ್ಳಿಗಳನ್ನೂ ಸುಲಿಗೆಮಾಡಿ ಸುಟ್ಟುಹಾಕಿದರು.

ಕೊಡಗರ ಇನ್ನೊಂದು ಸೈನ್ಯವು ಕುಂಬಳೆಗೆ ಬಂದು ಸುಲಿಗೆ ಮಾಡಿತು. ಕೊಡಗರು ಬರುವ ವರ್ತಮಾನವನ್ನು ಕೇಳಿ ಜನರೆಲ್ಲರೂ ದಿಕ್ಕು ದಿಕ್ಕಿಗೆ ಓಡಿಹೋಗಿದ್ದರು. ಕೊಡಗರು ಅಲ್ಲಿಂದ ಮಂಜೇಶ್ವರಕ್ಕೆ

ಬಂದು ಅದನ್ನೂ ಸೂರೆಮಾಡಿದರು. ಅಲ್ಲಿ ಜನರು ಯಾರೂ ಇರಲಿಲ್ಲ. ಕೆಲವು ಸಾಹುಕಾರರು ಮಂಜಿಗಳಲ್ಲಿ ಕೂತು ಸಮುದ್ರದಲ್ಲಿ ಹೋಗಿ ನಿಂತಿದ್ದರು. ಕೊಡಗರ ಇನ್ನೊಂದು ಸೈನ್ಯವು ಬಂಟವಾಳಕ್ಕೆ ಬಂದು ಸೂರೆಸುಲಿಗೆಮಾಡಿ ಅನೇಕ ಗೌಡಸಾರಸ್ವತ ಬ್ರಾಹ್ಮಣ ಗಂಡಸರು ಹೆಂಗಸರನ್ನು ಸೆರೆಹಿಡಿದುಕೊಂಡು ಹೋದರು. ಟೀಪುವು ಆಗಾಗ್ಗೆ ಕೊಡಗಿಗೆ ಬಂದು ಲೂಟಿಮಾಡಿದ ಹಾಗೆಯೇ ವೀರರಾಜೇಂದ್ರ ಒಡೆಯನು ಆಗಾಗ್ಗೆ ಬೆಳ್ಳಾರೆಯಿಂದ ಕೊಡಗರನ್ನು ಕಳುಹಿಸಿ ಕುಂಬಳೆ, ಮಂಜೇಶ್ವರ, ಪುತ್ತೂರು, ಪಾಣೆಮಂಗಳೂರು, ಬಂಟವಾಳ, ಕಡಬ, ಬೈಲಂಗಡಿ, ಜಮಲಾಬಾದು, ಅಳದಂಗಡಿ ಮುಂತಾದ ಪಟ್ಟಣಗಳನ್ನು ಲೂಟಿ ಮಾಡಿಸಿ ಪಶುಧನಾದಿಗಳನ್ನು ಸೂರೆಮಾಡಿಸುತ್ತಿದ್ದನು.

ಕ್ರಿ. ಶ. 1799ರಲ್ಲಿ ಶ್ರೀರಂಗಪಟ್ಟಣದ ಯುದ್ಧದ ಸಮಯ ದಲ್ಲಿ ವೀರರಾಜೇಂದ್ರ ಒಡೆಯನು ಇಂಗ್ಲೀಷರೊಡನೆ ಸೇರಿ ಕೊಡಗ ರನ್ನು ಕನ್ನಡ ಜಿಲ್ಲೆಗೆ ಕಳುಹಿಸಿ ಸುಲಿಗೆಮಾಡಿಸಿದನು. ಗೋಪಗೌಡ ನೆಂಬವನು ಪುತ್ತೂರು ಮಾರ್ಗವಾಗಿ ಬಂದು ನಂದಾವರದ ಅರ ಮನೆಗೆ ಮುತ್ತಿಗೆಹಾಕಿ ಅರಮನೆಯಲ್ಲಿದ್ದುದನ್ನೆಲ್ಲಾ ದೋಚಿಕೊಂಡು ಹೋದನು. ಅಲ್ಲಿಂದ ಬಂಟವಾಳಕ್ಕೆ ಬಂದು ಪೇಟೆಯನ್ನು ಸುಲಿಗೆಮಾಡಿ ವೆಂಕಟರಮಣ ದೇವರ ಪ್ರತಿಮೆಯನ್ನು ಸಹ ಕೊಂಡುಹೋದನು. ಆಗ ದೇವಸ್ಥಾನವು ಸಣ್ಣದಾಗಿತ್ತು. ಈಗಿನ ಹಾಗೆ ಸಂಪತ್ತಿರಲಿಲ್ಲ. ಕೊಂಡುಹೋದ ದೇವರ ಪ್ರತಿಮೆಯನ್ನು ಬಂಟವಾಳದಲ್ಲಿದ್ದ ಸಾರ ಸ್ವತ ಬ್ರಾಹ್ಮಣನಾದ ಮಂಜಯ್ಯಭಾಗವತನು ಮಡಿಕೇರಿಗೆ ಹೋಗಿ ಅಲ್ಲಿ ರಾಜಾಂಗಣದಲ್ಲಿ ಒಂದು ದಶಾವತಾರ ಆಟ ಆಡಿ ತೋರಿಸಿ ಅರಸನನ್ನು ಮೆಚ್ಚಿಸಿ ಆ ಪ್ರತಿಮೆಯನ್ನು ಇನಾಮಾಗಿ ಪಡಕೊಂಡು ಇಲ್ಲಿಗೆ ತಂದು ದೇವಸ್ಥಾನಕ್ಕೆ ಒಪ್ಪಿಸಿದನು. ಇದು ಈಗಲೂ ಮೂಲ ಪ್ರತಿಮೆಯಾಗಿ ಸಿಂಹಾಸನದಲ್ಲಿದೆ. ಗೋಪಗೌಡನು ಬಂಟವಾಳದಿಂದ ಮಂಗಳೂರಿಗೆ ಹೋಗಬೇಕಾದರೆ ಮಧ್ಯಾಹ್ನ ಹೊತ್ತಿಗೆ ನಂದಾವರ

ಅರಮನೆಗೆ ಬೆಂಕಿಕೊಡಿಸಿದನು. ಈ ಕೊಡಗರ ಹಾವಳಿಯಿಂದ ಉಪ್ಪಿನಂಗಡಿ ತಾಲೂಕಿನ ಪೂರ್ವಭಾಗದಲ್ಲಿರುವ ದೊಡ್ಡ ಪಟ್ಟಣಗಳ ಜನರು ಜೀವದಾಸೆಗಾಗಿ ಓಡಿಹೋದರು. ಈ ಪಟ್ಟಣಗಳೆಲ್ಲಾ ಹಾಳಾಗಿ ಈಗ ಕಾಡುಪಾಲಾಗಿವೆ.

ಕ್ರಿ. ಶ. 1834ನೇ ಇಸವಿಯಲ್ಲಿ ಹಾಲೇರಿ ವೀರರಾಜೇಂದ್ರ ಒಡೆಯನು ತನ್ನ ಪ್ರಜೆಗಳನ್ನು ಬಹಳ ಕ್ರೂರತನದಿಂದ ನಡಿಸುತ್ತಾ ಇರುವಾಗ ಅವನ ತಂಗಿ ದೇವಮ್ಮಾಜಿಯೂ ಮತ್ತು ಅವಳ ಗಂಡ ಚನ್ನಬಸವಪ್ಪನು ಓಡಿಹೋಗಿ ಇಂಗ್ಲೀಷರ ಮರೆಹೊಕ್ಕು ತಮ್ಮ ಜೀವ ವನ್ನು ಉಳಿಸಿಕೊಂಡರು. ಇಂಗ್ಲೀಷರು ದೊಡ್ಡ ಸೈನ್ಯವನ್ನು ಕೊಡ ಗಿಗೆ ಕಳುಹಿಸಿ ವೀರರಾಜೇಂದ್ರ ಒಡೆಯನನ್ನು ಹಿಡಿದು ಕೊಡಗು ಜಿಲ್ಲೆಯನ್ನು ಸ್ವಾಧೀನಪಡಿಸಿಕೊಂಡು ಅಮರ, ಸೂಳ್ಯ, ಪಂಜ, ಬೆಳ್ಳಾರೆ ಮಾಗಣೆಗಳನ್ನು ಕನ್ನಡ ಜಿಲ್ಲೆಗೆ ಕೂಡಿಸಿದರು. ಕೊಡಗು ಅಧಿ ಕಾರಿಗಳನ್ನು ತೆಗೆದು ಇಂಗ್ಲೀಷ ಅಧಿಕಾರಿಗಳನ್ನು ನೇಮಿಸಿದರು. ಇದರಿಂದ 4 ಮಾಗಣೆಗಳಲ್ಲಿರುವ ಕೊಡಗು ಅಧಿಕಾರಿಗಳಿಗೆ ಬೇಸರ ವಾಯಿತು. ಕಡೇಗೆ ಹೇಗೂ ಸಾಧನೆಮಾಡಿ ದೇವಮ್ಮಾಜಿಗೆ ತಿರಿಗಿ ಕೊಡಗಿನ ಪಟ್ಟಕಟ್ಟಿ ಸ್ವತಂತ್ರವಾಗಿ ಕೊಡಗನ್ನು ಆಳಬೇಕೆಂಬ ಆಸೆ ಯುಂಟಾಯಿತು. ಕೊಡಗು ಸೇನಾಧಿಪತಿಯಾಗಿದ್ದ ಕಲ್ಯಾಣಪ್ಪನು ಈ ಪಂಗಡಕ್ಕೆ ಮುಖ್ಯಸ್ಥನಾದನು. ಅವನೂ ಅಮರ, ಸುಳ್ಯ, ಪಂಜ, ಬೆಳ್ಳಾರೆ ಮಾಗಣೆಗಳ ಮುಖ್ಯಸ್ಥರೂ ಕೂಡಿ ಕನ್ನಡ ಜಿಲ್ಲೆಯ ಮುಖ್ಯ ಪಟ್ಟಣವಾದ ಮಂಗಳೂರನ್ನು ಹಿಡಿದ ಕೂಡಲೇ ಕೊಡಗು ರಾಜ್ಯವನ್ನು ಪುನಹ ಸ್ಥಾಪನೆಮಾಡಬಹುದೆಂದು ನಿರ್ಧರಿಸಿದರು.

1837ನೇ ಇಸವಿಯಲ್ಲಿ ಕಲ್ಯಾಣಪ್ಪನು ದೊಡ್ಡ ಸೈನ್ಯದೊಡನೆ ಸೂಳ್ಯದಿಂದ ಹೊರಟನು. ಉಪ್ಪಿನಂಗಡಿ ತಹಶೀಲದಾರನು ಈ ವರ್ತ ಮಾನವನ್ನು ಕೇಳಿ ಮಂಗಳೂರಿನಲ್ಲಿದ್ದ ಕಲ್ಲೆಕ್ಟರನಿಗೆ ಹೇಳಿಕಳುಹಿಸಿ ದನು. ಕಲೆಕ್ಟರನು ಶಿಪಾಯಿಗಳ ಒಂದು ಸಣ್ಣ ಸೈನ್ಯವನ್ನು ತೆಗೆದು

ಕೊಂಡು ಪುತ್ತೂರಿಗೆ ಬಂದು ತಾನು ಖಚೇರಿಮಾಡಿ ಕೂತುಕೊಳ್ಳು ವಷ್ಟರಲ್ಲಿ ಕಲ್ಯಾಣಪ್ಪನು ಬಹಳ ದೊಡ್ಡ ಸೈನ್ಯದೊಡನೆ ಪುತ್ತೂರಿನ ಹತ್ತಿರ ಬಂದನೆಂದು ಕೇಳಿದೊಡನೆಯೇ ಕಲ್ಲೆಕ್ಕರನು ಮಂಗಳೂರಿನ ಬಂದೊಬಸ್ತಿಗಾಗಿ ಕುದುರೆಹತ್ತಿ ಮಂಗಳೂರಿಗೆ ಬಂದನು. ಕರಣೀಕ ದೇವಪ್ಪನೂ ಕೆಲವು ಗುಮಾಸ್ತರೂ ಪುತ್ತೂರಿನಲ್ಲಿಯೇ ನಿಂತರು. ಕಲ್ಯಾಣಪ್ಪನು ಪುತ್ತೂರಿಗೆ ಬಂದು ಕಲ್ಲೆಕ್ಕರನು ಖಚೇರಿಮಾಡಿ ಕೂತ ಕಟ್ಟೋಣಕ್ಕೆ ಹೋಗಿ ನೋಡುವಾಗ ಕಲ್ಲೆಕ್ಕರನು ಇರಲಿಲ್ಲ. ಕಲ್ಯಾಣಪ್ಪನು ಬಂದು ಆಸನದಲ್ಲಿ ಕುಳಿತುಕೊಂಡನು. ಸುತ್ತಲೂ ಕತ್ತಿಗಳನ್ನೂ, ಕೋವಿಗಳನ್ನೂ, ಕೊರಡೆಗಳನ್ನೂ ಹಿಡಿದ ಭಟರು ನಿಂತುಕೊಂಡಿದ್ದರು. ಕರಣೀಕ ದೇವಪ್ಪನನ್ನು ಎಳದುತರಿಸಿ ತನ್ನ ಕರಣೀಕನಾಗಬೇಕೆಂದು ಹೇಳಿದನು. ದೇವಪ್ಪನು ಸುತ್ತಮುತ್ತಲೂ ಇರುವ ಮರಣದ ಸಾಧನಗಳನ್ನು ನೋಡಿದರೂ ಹೆದರದೆ "ನಾನು ನಿನ್ನ ಚಾಕರನಾಗಿರಲಾರೆನು" ಎಂದು ಹೇಳಿದನು. ಕಲ್ಯಾಣಪ್ಪನು ಸಿಟ್ಟಿನಿಂದ "ನೀನು ಯಾರ ಕೂಡೆ ಮಾತನಾಡುತ್ತಿ ? ನಮ್ಮ ಆಜ್ಞೆಗೆ ವಿರೋಧವಾಗಿ ನಡೆದರೆ ನಿನಗೆ ಮರಣವೇ ಗತಿ. ಈಗ ರಾಜ್ಯವು ನಮಗಾಯಿತು" ಎಂದು ಹೇಳಿದನು. ಅನಂತರ ದೇವಪ್ಪನನ್ನೂ ಗುಮಾಸ್ತರನ್ನೂ ಸೆರೆಹಿಡಿದು ಊರಿಂದ ಊರಿಗೆ ಬಂದೊಬಸ್ತಿನಿಂದ ಕೊಂಡುಹೋಗುತ್ತಿದ್ದರು. ಕಲ್ಯಾಣಪ್ಪನು ಪುತ್ತೂರನ್ನು ಸುಲಿಗೆಮಾಡಿ ಪಾಣೆಮಂಗಳೂರಿಗೆ ಬಂದನು. ಆಗ ನಂದಾವರದಲ್ಲಿ ಇಂಗ್ಲೀಷರ ಮಲ್ಲಿಖಾನೆಯನ್ನು ಪಡಿಯುತ್ತಾ ಇರುವ ಲಕ್ಷ್ಮಪ್ಪರಸ ಬಂಗರಾಜನು ಕಲ್ಯಾಣಪ್ಪನ ಸೈನಿಕರಿಗೆ ಊಟಉಪಚಾರಕ್ಕೆ ಬೇಕಾದ ಸಾಹಿತ್ಯವನ್ನು ಒದಗಿಸಿಕೊಟ್ಟು ಸಹಾಯಮಾಡಿದನು. ಕಲ್ಯಾಣಪ್ಪನ ಸೈನ್ಯವು ಪಾಣೆ ಮಂಗಳೂರು ಸುಂಕದಕಟ್ಟೆ ಮೈದಾನಿನಲ್ಲಿ ಇಳಿದಿತ್ತು.

ಇದೇ ಸಮಯದಲ್ಲಿ ತೆಂಕುಂಬಳೆ ಕೋಟೆಬಳಿಯಲ್ಲಿ ವಾಸವಾಗಿದ್ದ ಸುಬ್ರಾಯಹೆಗ್ಗಡೆ ಎಂಬವನು ತಾನೂ ಒಬ್ಬ ಅರಸನಾಗಬಹುದೆಂಬು

ಆಲೋಚಿಸಿ ಜನರನ್ನು ಕೂಡಿಸಿ ಕಲ್ಯಾಣಪ್ಪನೊಡನೆ ಸೇರುವುದಕ್ಕಾಗಿ ಮಂಜೇಶ್ವರ ದಾರಿಯಾಗಿ ಹೊರಟನು. ಸುಬ್ರಾಯ ಹೆಗ್ಗಡೆಯು ಮಂಜೇಶ್ವರಕ್ಕೆ ಬಂದೊಡನೆಯೇ ಊರಿನವರು ಈ ಸುಬ್ರಾಯ ಹೆಗ್ಗಡೆಗೂ ಅವನ ಕಡೆಯವರಿಗೂ ಊಟಉಪಚಾರವಮಾಡಿಸಿ ಉಡಿಗೆ ಉಚಿತಗಳನ್ನು ಕೊಟ್ಟರು ಅಲ್ಲಿಂದ ಮುಂದರಿಸಿ ಉಳ್ಳಾಲಕ್ಕೆ ಹೋಗಲು ಆ ಊರಿನವರೂ ಇದೇ ತರದ ಉಪಾಯದಿಂದ ತಮ್ಮನ್ನು ರಕ್ಷಿಸಿಕೊಂಡರು. ಸುಬ್ರಾಯ ಹೆಗ್ಗಡೆಯು ಮಂಗಳೂರಿಗೆ ತಲಪ ಬೇಕಾದರೆ ಕುಂಬಳೆ ರಾಜನು ತನ್ನ ರಾಜ್ಯದಲ್ಲಿ ದಂಗೆಯೆಬ್ಬಿಸಿದ್ದಾ ರೆಂದೂ ಕೂಡಲೇ ಸೈನ್ಯವನ್ನು ಕಳುಹಿಸಬೇಕೆಂದೂ ತಲಚೇರಿಗೆ ಹೇಳಿ ಕಳುಹಿಸಿದನು. ಬೆಂಗಳೂರಿನಿಂದ ಸೈನ್ಯವನ್ನು ಕಳುಹಿಸಬೇಕಾಗಿ ಕುಂದಾಪುರದಿಂದ ಹೇಳಿಕಳುಹಿಸಿದರು. ತಲಚೇರಿಯಿಂದ ಪತ್ತೆಮಾರಿ ಗಳಲ್ಲಿಯೂ ಬೆಂಗಳೂರಿನಿಂದ ಕಾಲುದಾರಿಯಾಗಿಯೂ ಸೈನ್ಯವು ಬಂತು. ಆದರೆ ಆ ಸಮಯದಲ್ಲಿ ಕೂಡಲೇ ಬರಲು ಸಾಧ್ಯವಿರಲಿಲ್ಲ. ಸೈನ್ಯವು ಬರುವಷ್ಟರಲ್ಲಿ ಕಲ್ಯಾಣಪ್ಪನು ಪಾಣೆಮಂಗಳೂರಿನಿಂದ ಬಂಟ ವಾಳಕ್ಕೆ ಬಂದು ಊರನ್ನು ಸುಲಿಗೆಮಾಡಿದನು. ತಾಲೂಕು ಖಚೇರಿ ಯಲ್ಲಿ ಹಣವು ಖಜಾನೆಯಲ್ಲಿರಲಿಲ್ಲ. ಗುಮಾಸ್ತರೂ ತಹಸೀಲ ದಾರನೂ ಮೊದಲೇ ಪಲಾಯನಮಾಡಿದ್ದರು. ಕಲ್ಯಾಣಪ್ಪನು ಬಂಟ ವಾಳದಿಂದ ಮಂಗಳೂರಿಗೆ ಹೊರಟನು. ದಾರಿಯಲ್ಲಿ ಇವನ ಕಡೆಯ ಜನರು ಹೆಚ್ಚೆಚ್ಚಾಗುತ್ತಾ ಬಂದರು. ಮಂಗಳೂರಿಗೆ ಮುಟ್ಟುವಾಗ ಅಲ್ಲಿರುವ ಇಂಗ್ಲೀಷರ ಸೈನ್ಯವು ಸಣ್ಣದಾದ್ದರಿಂದ ಇವರನ್ನು ಓಡಿಸು ವದು ಕಷ್ಟವಾಯಿತು. ಕಲ್ಯಾಣಪ್ಪನು ತಾಲೂಕು ಖಚೇರಿಗೆ ಹೋಗಿ ಖಜಾನೆಯನ್ನು ಒಡೆದು ಹಣವನ್ನು ತೆಗೆದುಕೊಂಡನು. ಸುಬ್ರಾಯ ಹೆಗ್ಗಡೆಯು ದೋಣಿಯಲ್ಲಿ ಕೂತು ಮಂಗಳೂರಿಗೆ ಬರುವಾಗ ಬೋಳಾ ರದ ಹತ್ತಿರ ಕೆಲವು ಶಿಪಾಯಿಗಳು ನಿಂತು ಗುಂಡು ಹೊಡೆದು ದೋಣಿಯನ್ನು ಮುಳುಗಿಸಿದರು. ತಲಚೇರಿಯಿಂದ ಬಂದ ಸೈನ್ಯವು

ಮಂಗಳೂರಿಗೆ ಇಳಿಯುತ್ತದೆಂಬ ವರ್ತಮಾನ ಸಿಕ್ಕಿದ ಕೂಡಲೇ ಕಲ್ಯಾಣಪ್ಪನ ಕಡೆಯುವರಲ್ಲಿ ಹೆಚ್ಚಿನವರು ಓಡಿಹೋದರು. ಕಲ್ಯಾಣಪ್ಪನನ್ನೂ ಲಕ್ಷ್ಮಪ್ಪರಸ ಬಂಗರಾಜನನ್ನೂ ಹಿಡಿದು ಮಂಗಳೂರು ಬಿಕ್ರನಕಟ್ಟೆ ಪದವಿನ ಹತ್ತಿರ ಗಲ್ಲಿಗೆ ಹಾಕಿಸಿದರು. ಅವರಿಬ್ಬರೂ ಅಲ್ಲಿಯೇ ಪ್ರಾಣಬಿಟ್ಟರು. ಸುಬ್ರಾಯನೂ ಅವನ ಕಡೆಯುವರೂ ಮುಳುಗಿ ಸತ್ತರು. ಇನ್ನೂ ಈ ಕಾಟಕಾಯಿಗೆ ಸೇರಿದ ಅನೇಕರನ್ನು ಹಿಡಿದು ತನಖಿಮಾಡಿ ಗಲ್ಲಿಗೆ ಹಾಕಿಸಿದರು. ಒಂದು ತಿಂಗಳಲ್ಲಿ ದಂಗೆಯು ಶಾಂತವಾಯಿತು.

## 24ನೇ ಅಧ್ಯಾಯು.

## ಬಂಗರ ಅರಸರು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಳಿದ ಜೈನ ಅರಸರಲ್ಲಿ ಬಂಗರರಸನು ತುಳುರಾಜ್ಯದಲ್ಲೆಲ್ಲಾ ಒಂದನೇ ಮರ್ಯಾದೆಯನ್ನು ಪಡಿಯುತ್ತಿದ್ದನು. ಈಗಲೂ ಈ ಜಿಲ್ಲೆಯಲ್ಲಿರುವ ಜೈನ ರಾಜರೂ ಬಲ್ಲಾಳರೂ ಹೆಗ್ಗಡೆಯರೂ ಈಗ ಇರುವ ಬಂಗರ ಅರಸರಿಗೂ ಮೊದಲನೇ ಮರ್ಯಾದೆಯನ್ನು ಕೊಡುತ್ತಾರೆ. ಈ ಕುಟುಂಬದ ವಿಷಯ ಬಂಗರ ಚರಿತ್ರೆ ಎಂಬ ಗ್ರಂಥದಲ್ಲಿಯಾಗಲೀ ಇಷ್ಟರ ವರೆಗೆ ಸಿಕ್ಕಿದ ಶಾಸನಗಳಲ್ಲಿಯಾಗಲೀ ಶಾ.ಶ. 1079 ( ಕ್ರಿ. ಶ. 1157 )ರಕ್ಕಿಂತ ಮುಂಚಿನ ಚರಿತ್ರೆಯು ತಿಳಿದುಬರುವುದಿಲ್ಲ. ಇವರ ಮೂಲಚರಿತ್ರೆಯ ವಿಷಯ ಭಿನ್ನಾಭಿಪ್ರಾಯಗಳಿರುವುದರಿಂದ ಚರ್ಚಾಸ್ಪದವಾದ ಈ ಸಂಗತಿಯನ್ನು ಬಿಟ್ಟುಬಿಟ್ಟು ಶಾ. ಶ. 1079ರಿಂದ ಇವರ ವಿಷಯದ ಚರಿತ್ರೆಯನ್ನು ಬರೆದಿದೆ.

1. ವೀರನರಸಿಂಹ ಬಂಗರಾಜ. ಕ್ರಿ. ಶ. 1157-1208. ಗಂಗ ಅರಸರ ಕುಟುಂಬದ ಚಂದ್ರಶೇಖರ ಅರಸನು ಗಂಗವಾಡಿಗೆ ಸೇರಿದ

ತನ್ನ ಸಣ್ಣದೊಂದು ರಾಜ್ಯವನ್ನು ಆಳಿಕೊಂಡಿರುವಾಗ ಹೊಯ್ಸಳರಾಜನಾದ ವಿಷ್ಣುವರ್ಧನನು ಇವನ ಸಂಗಡ ಯುದ್ಧವನ್ನು ಮಾಡಲು ಚಂದ್ರಶೇಖರ ಅರಸನು ಯುದ್ಧದಲ್ಲಿ ಮಡಿದುಹೋದನು. ರಾಜ್ಯವು ಹೊಯ್ಸಳ ಬಲ್ಲಾಳರ ಸ್ವಾಧೀನವಾಯಿತು. ಹೊಯ್ಸಳ ರಾಜನಾದ ವಿಷ್ಣುವರ್ಧನನು ಸಾಯುವ ವರೆಗೆ ಚಂದ್ರಶೇಖರನ ಸಾಮಾಜಿಕರಾದ ಪ್ರಧಾನಿ ಕೃಷ್ಣಪ್ಪಯ್ಯ, ಕರಣೀಕ ವೆಂಕಟಪ್ಪಯ್ಯ, ಕರಣೀಕ ತಿಮ್ಮಪ್ಪಯ್ಯ, ಜೋಯಿಸ ಕುಪ್ಪಾಭಟ್ಟ, ಬಲ್ಯಾಯ ಈ 5 ಮಂದಿ ಚಂದ್ರಶೇಖರ ಅರಸನ ರಾಜಕುಮಾರನನ್ನೂ ರಾಜಕುಟುಂಬದವರನ್ನೂ ಕರಕೊಂಡು ಮಲೆನಾಡಿನಲ್ಲಿ ಅಡಗಿಕೊಂಡಿದ್ದರು. ವಿಷ್ಣುವರ್ಧನನು ಕಾಲವಾದ ಮೇಲೆ ಇವರು ಗಟ್ಟ ಇಳಿದು ಬಂಗಾಡಿಗೆ ಬಂದರು. ಬರುವಾಗ ಕರ್ಣಾಟಕ ಬ್ರಾಹ್ಮಣ ಮರಿಯಪ್ಪಯ್ಯ, ಅಕ್ಕಸಾಲಿದೇವು, ಹಜಾಮ ರುಪ್ರ, ಮಲಬೋವಿ ಗುರುವ, ಮುಸಲ್ಮಾಜಾಂಗಖಾನ ನೇಮುಖಖಾನ, ದರ್ಜಿ ದಾದೆಭಾಯಿ ಮತ್ತು ಯಾಕುಬು ಚಂದ್ರನಾಯಕ, ಅಪ್ಪಯ್ಯನಾಯಕ, ಜೈನ ಪಾರಶೆಟ್ಟಿ, ದೋಬಿ ತಿಮ್ಮಪ್ಪ, ಹಳೆಪೈಕ ಭೈರ, ರಜಪೂತ ದೇವುಮಾಣಿ ಮತ್ತು ಲಕ್ಷ್ಮಣಸಿಂಗ ಮುಂತಾದ ಪರಿವಾರದವರನ್ನು ಕರಕೊಂಡು ಕುಲದೇವರಾದ ಸೋಮನಾಥ ದೇವರ ಪ್ರತಿಮೆಯನ್ನೂ, ಅರಸನು ಪೂಜಿಸುವ ಶಾಂತೇಶ್ವರನ ಪ್ರತಿಮೆಯನ್ನೂ ತೆಗೆದುಕೊಂಡು ಬಂದರು. ವಿಶಾಲವಾಗಿಯೂ ಬಹಳ ಅಂದವಾಗಿಯೂ ನೇತ್ರಾವತಿ ತೀರದಲ್ಲಿ ಬೈಲನ್ನು ನೋಡಿ ಬಹಳ ಸಂತೋಷಪಟ್ಟು ಅಲ್ಲಿ ಕೆಲವು ದಿವಸ ಉಳುಕೊಂಡರು. ಇಲ್ಲಿ ನಿಂತಾಗ ನಡೆದ ಸಂಗತಿಯ ವಿಷಯದಲ್ಲಿ ಒಂದು ಕಥೆ ಇದೆ. ಒಂದು ದಿವಸ ಅರಸನ ಮಗುವಿಗೆ ಹಜಾಮನು ಕ್ಷೌರ ತೆಗಿಯುವಾಗ್ಯೆ ಉಗುರು ತೆಗಿಯುವ ಕೊಳ್ಳಿಯನ್ನು ಕೂತಸ್ಥಳದಲ್ಲಿ ಮರೆತು ಸ್ವಲ್ಪ ದೂರ ಹೋದ ಮೇಲೆ ಹಿಂತಿರುಗಿ ಬಂದು ನೋಡಿದಾಗ ಆ ಕೊಳ್ಳಿಯ ಸ್ಥಳದಲ್ಲಿ ಒಂದು ಸರ್ಪವು ಇತ್ತು. ಅದೇ ದಿನ ರಾತ್ರಿ ಪ್ರಧಾನಿ ಕೃಷ್ಣಪ್ಪಯ್ಯಗೆ ಅಮ್ಮನವರು ಸಣ್ಣ ಕನ್ನಿಕೆಯಾಗಿ ಸ್ವಪ್ನದಲ್ಲಿ ಕಾಣಿಸಿಕೊಂಡು, ನೀವು ಚಿಂತೆಮಾಡಬೇಡಿ

ನಿಮ್ಮ ಮನೋರಥವು ಸ್ವಲ್ಪ ದಿವಸಗಳಲ್ಲಿಯೇ ಕೊನೆಗಾಣುವದು. ಕೊಳ್ಳಿಯು ಮಾಯವಾದ ಸ್ಥಳದಲ್ಲಿ ದೇವಾಲಯವನ್ನು ಕಟ್ಟಿಸಿ ಅಮ್ಮನವರ ಪ್ರತಿಮೆಯನ್ನು ಪ್ರತಿಷ್ಠಿಸಿರಿ ಎಂಬುದಾಗಿ ಹೇಳಿದಳು. ಮರುದಿವಸ ಬೆಳಿಗ್ಗೆ ಈ ಸ್ವಪ್ನದ ಸಂಗತಿಯನ್ನು ಸಂಗಡ ಇದ್ದ ಜನರಿಗೆ ತಿಳಿಸಲು ಎಲ್ಲರೂ ಬಲ್ಲಾಳ್ಯಯನ ಕೂಡೆ ಕೇಳಿದರು. ಅವನು ಸ್ವಪ್ನದ ಅರ್ಥವನ್ನು ಹೀಗೆಂದು ಹೇಳಿದನು. "ಮುಂದೆ ರಾಜಾಧಿಪತ್ಯಮಾಡುವವರ ಭೇಟಿಯಾಗಿ ಅವರು ಈ ಮಗುವಿಗೆ ರಾಜ್ಯ ಭಾರವನ್ನು ವಹಿಸಿಕೊಡುವರು''. ಈ ಸಾಮಾಜಿಕರು ಹೀಗೆ ಸಂತೋಷದಿಂದ ಇರುತ್ತಿರಲು ಸ್ವಲ್ಪ ದಿವಸಗಳಲ್ಲಿಯೇ ಹೊಯ್ಸಳ ಬಲ್ಲಾಳ ವಿಷ್ಣುವರ್ಧನನ ಮಗನಾದ ತ್ರಿಭುವನಮಲ್ಲ ಭುಜಬಲ ವೀರಗಂಗ 1ನೇ ನರಸಿಂಹನು ತನ್ನ ಸೀಮೆಯ ವಿಚಾರಣೆಯ ಬಗ್ಗೆ ಮೇಲ್ಬಂಗಾಡಿಗೆ ಬಂದನು. ಆಗ ಚಂದ್ರಶೇಖರ ಅರಸನ ಸಾಮಾಜಿಕರು ರಾಜಕುಮಾರನನ್ನು ಕರಕೊಂಡು ಅಲ್ಲಿಗೆ ಹೋಗಿ ಭೇಟಿ ತೆಗೆದುಕೊಳ್ಳಬೇಕೆಂತ ಅವನ ಬಳಿಗೆ ಹೋಗುವಾಗ ಅರಸನು ನೇತ್ರಾವತಿಯಲ್ಲಿ ಸ್ನಾನಮಾಡಿಕೊಂಡು ನಿತ್ಯಕರ್ಮಾನುಷ್ಠಾನಗಳನ್ನು ಮಾಡುವ ಸಮಾಚಾರವನ್ನು ಕೇಳಿ, ಅಲ್ಲಿಗೆ ಹೋಗಿ ಭೇಟಿಮಾಡಲು ಅರಸನು ಇವರ ಸಮಾಚಾರವನ್ನು ಕೇಳಿ, ಬಹಳ ಬೇಸರಪಟ್ಟು ರಾಜಕುಮಾರನನ್ನು ಹಿಡಿದು ಅಪ್ಪಿಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿ ಬೆಳ್ಳಿಯ ಗಿಂಡಿಯಲ್ಲಿ ಹಾಲು ತರಿಸಿ ಮಗುವಿಗೆ ತಾನೇ ಕುಡಿಸಿದನು. ಆಗ ಬಾಯಿಯಿಂದ ಇಳಿದ ಸ್ವಲ್ಪ ಹಾಲು ಹರಿದು ನದಿಗೆ ಸೇರಿತು. ಇದನ್ನು ಕಂಡು ಅರಸನು ಆಶ್ಚರ್ಯಪಟ್ಟು ಈ ಮಗುವಿಗೆ ಒಳ್ಳೇ ಯೋಗ್ಯತೆ ಇದೆ ಎಂದು ನೆನಸಿ ನೇತ್ರಾವತಿಯು ಸಮುದ್ರಕ್ಕೆ ಸಂಗಮವಾಗುವ ವರೆಗೆ ನದಿಯ 2 ದಡಗಳಲ್ಲಿರುವ ಮಲವಂತಿಗೆ, ಕಳಿಯ, ಪಾಡ್ಯಾರು, ಬುಳಕ್ಕಾರು, ಬಳ್ಳಮಂಜ, ಬಂಡಾಡಿ, ಮದಗ, ಪುತ್ತೂರು, ಕಡೆಕಾರು, ಬಾಳ್ತಿಲ, ಅಮಟಾಡಿ, ಮಣಿನಾಲ್ಕೂರು, ಪೆರೋಡಿ, ನೀರುಮಾರ್ಗ,

ಸಜೀಪ, ಇರ, ಇನವಳ್ಳಿ, ವರ್ಕಾಡಿ, ಮಂಜೇಶ್ವರ ಈ 20 ಮಂದಿ ಬಲ್ಲಾಳರ ಕೈಕೆಳಗಿರುವ ಸೀಮೆಗಳನ್ನು ಒಳಕೊಂಡಿರುವ (1) ಮೇಲ್ಬಂಗಾಡಿ (2) ಕೆಳಬಂಗಾಡಿ (3) ಬೆಳತಂಗಡಿ (4) ಮಾಯ ಬಳಲು (5) ಉಪ್ಪಿನಂಗಡಿ (6) ಪುತ್ತೂರು (7) ಮೊಗರ್ನಾಡು (8) ಮಣಿನಾಲ್ಕೂರು (9) ಬಾರ್ಯಕಜೆಕಾರು (10) ಬಂಟವಾಳ (11) ಕೊಡಿಯಾಲ (12) ಸಜೀಪ (13) ಹರೆಕಳ (14) ವರ್ಕಾಡಿ (15) ಮಂಜೇಶ್ವರ ಎಂಬ 15 ಮಾಗಣೆಗಳನ್ನು ನೇತ್ರಾವತಿ ನದಿಯ ತೀರದಲ್ಲಿ ಧಾರಾಪೂರ್ವಕವಾಗಿ ಈ ಮಗುವಿಗೆ ಬಿಟ್ಟುಕೊಟ್ಟನು. ನರಸಿಂಹ ರಾಜನು ಈ ಮಗುವು ತನ್ನದೆಂದೇ ಭಾವಿಸಿ ಆ ಮಗುವಿಗೆ ತನ್ನ ಹೆಸರನ್ನೇ ಇಟ್ಟು ವೀರ ನರಶಿಂಹ ಬಂಗರಾಜ ಎಂಬ ಹೆಸರಿನಿಂದ ಕರೆದನು. ಅಂದಿನಿಂದ ಇಷ್ಟರವರೆಗೆ ಪಟ್ಟದ ಹೆಸರಿನ ಆದಿ ಭಾಗಕ್ಕೆ ವೀರನರಸಿಂಹ ಎಂಬ ಶಬ್ದವನ್ನು ಕೂಡಿಸುವ ವಾಡಿಕೆ ಇದೆ. ಅನಂತರ ಇವರನ್ನು ಕೆಳಬಂಗಾಡಿಗೆ ಕಳುಹಿಸಿಕೊಡುವಾಗ ಕೊಟ್ಟ ಬಿರುದು ಬಾವಲಿಗಳ ವಿವರ:—ಹಸುರು ಅಲಂಕೃತವಾದ ಪಾಲಕಿ 1, ಕೂತುಕೊಳ್ಳುವ ರತ್ನಕಂಬಳಿ 1, ಬಿಳಿ ಪಟ್ಟದ ಕುದುರೆ 1, ರಣಕಹಳೆ 1, ಚಾಮರುಗಳು 2, ಪಂಚದೀವಟಿಗೆಗಳು 2, ನೆಗಳ ಬಾಯಿ 1, ಚಿನ್ನದ ಗಿಂಡಿ 1, ಹಸುರು ಹಾರ್ಸ್ನವ ರುಮಾಲು 2, ಹಸುರು ಪಕ್ಕೆ 2, ಮುದ್ರೆ ಉಂಗುರ 1, ಪಟ್ಟದ ಕತ್ತಿ 1, ಪಟ್ಟದ ಆನೆ 1, ಹಸುರು ನಿಶಾನಿ 2, ಹಸುರು ಕೊಡೆ 2, ಗಗ್ಗರದ ಈಟಿಗಳು 2, ಬೆಳ್ಳಿ ಕಟ್ಟಿದ ಪಾರಕರ ಬೆತ್ತಗಳು 2. ಈ ಬಿರುದು ಬಾವಲಿಗಳನ್ನು ತೆಗೆದುಕೊಂಡು, ಕೆಳಬಂಗಾಡಿಗೆ ಬಂದು, ನೇತ್ರಾವತಿಯ ತೀರದ ಹತ್ತಿರ ಒಂದು ಅರಮನೆಯನ್ನು ಕಟ್ಟಿಸಿ, ಶಾ. ಶ. 1079ನೇ ಬಹುಧಾನ್ಯ ಸಂ|ದ ಫಾಲ್ಗುಣ ಬ. ೧೦ರಲ್ಲಿ ಪಟ್ಟಾಭಿಷೇಕವಾಯಿತು. ಪಟ್ಟಾಭಿಷೇಕ ಸಮಯದಲ್ಲಿ 15 ಮಾಗಣೆಗಳ, ಗ್ರಾಮಗುರಿಕಾರರು, ಮಾಗಣೆ ಗುರಿಕಾರರು ಮತ್ತು ಪ್ರಜೆಗಳನ್ನು ಕರಿಸಿ 15 ಮಾಗಣೆಗಳ

ಗುರಿಕಾರರಲ್ಲಿ ಬಲಿಷ್ಠರಾದ (1) ಬಂಗಾಡಿ ಮಾಗಣೆ ನಡದಗುತ್ತು (2) ಮಣಿನಾಲ್ಕೂರು ಸೀಮೆಯ ನಾಲೂರುಗುತ್ತು (3) ಸಜೀಪ ಸೀಮೆಯ ಸಜೀಪನಡುಗುತ್ತು (4) ಹರೆಕಳ ಮಾಗಣೆಯ ಹರೆಕಳ ಗುತ್ತು ಈ ನಾಲ್ಕು ಗುತ್ತಿನವರನ್ನು ರಾಜ್ಯದಲ್ಲಿ ದೊಡ್ಡ ಹುದ್ದೆದಾರ ರಾಗಿ ನಿಯಮಿಸಿ, ಈ ನಾಲ್ಕು ಗುತ್ತುಗಳನ್ನು ರಾಜಗುತ್ತುಗಳಾಗಿ ಮಾಡಿದನು. ಬಂಗರಾಜನಿಗೆ ಪಟ್ಟಕಟ್ಟುವಾಗ ನಡದಗುತ್ತಿನವರು ಅರಸನ ಕೈ ಹಿಡಿದು ಪಟ್ಟದ ಮಂಚದ ಮೇಲೆ ಕೂತುಕೊಳ್ಳಿಸುವ ಅಧಿ ಕಾರವೂ ಹರೆಕಳ ಗುತ್ತಿನವರು ಅರಸನ ಕೈಗೆ ಪಟ್ಟದ ಉಂಗುರವನ್ನು ಹಾಕುವ ಅಧಿಕಾರವೂ, ಸಜೀಪ ನಡುಗುತ್ತಿನವರು ಪಟ್ಟದ ಕತ್ತಿಯನ್ನು ಅರಸನ ಕೈಯಲ್ಲಿ ಕೊಡುವ ಅಧಿಕಾರವೂ ಮಣಿನಾಲ್ಕೂರು ಸೀಮೆಯ ನಾಲೂರು ಗುತ್ತಿನವರು ಪಟ್ಟದ ಹೆಸರನ್ನು ಕರಿಯುವ ಅಧಿಕಾರವೂ ಸಂತಾನ ಪಾರಂಪರ್ಯದ ಹಕ್ಕಾಗಿ ಕೊಡಲ್ಪಟ್ಟಿತು. ಸಜೀಪ ಗ್ರಾಮದ ಮುನ್ನೂರು ಭಟ್ಟರ ಮನೆಯವರನ್ನು ರಾಜಪುರೋಹಿತರಾಗಿ ನಿಯ ಮಿಸಿದರು. ಅನಂತರ ಆ ಕೊಳ್ಳಿಯು ಮಾಯವಾದ ಸ್ಥಳದಲ್ಲಿ (ಕಿಲ್ಲೂರಲ್ಲಿ) ಒಂದು ದೇವಸ್ಥಾನವನ್ನು ಕಟ್ಟಿಸಿ ಅಲ್ಲಿ ಅಮ್ಮನವ ರನ್ನು ಪ್ರತಿಷ್ಠಿಸಿ, ಕೊಳ್ಳಿ ದುರ್ಗಾಂಬಾ ಎಂಬ ಹೆಸರನ್ನಿಟ್ಟು, ಆ ದೇವಸ್ಥಾನಕ್ಕೆ ಉಂಬಳಿ ಉತ್ತಾರವನ್ನು ಬಿಟ್ಟರು. ಈ ದೇವ ಸ್ಥಾನವು ಮೇಲ್ಬಂಗಾಡಿಯಲ್ಲಿ ಕಿಲ್ಲೂರ್ ಎಂಬಲ್ಲಿ ಈಗಲೂ ಇದೆ. ಆ ಬಳಿಕ ಕುಲದೇವರಾದ ಸೋಮನಾಥ ದೇವರಿಗೆ ಒಂದು ದೇವಸ್ಥಾನ ವನ್ನು ಕಟ್ಟಿಸಿ ಪ್ರತಿಷ್ಠೆಮಾಡಿಸಿ ಉಂಬಳಿ ಉತ್ತಾರವನ್ನು ಬಿಟ್ಟನು. ಇವುಗಳಲ್ಲದೆ ಒಂದು ಮಹಾಗಣಪತಿ ದೇವಸ್ಥಾನ, ಒಂದು ವೀರಭದ್ರ ದೇವಸ್ಥಾನ, ಒಂದು ಶಾಂತೇಶ್ವರ ಬಸದಿ, ಒಂದು ಕ್ಷೇತ್ರಪಾಲಸ್ಥಾನ, ಒಂದು ಶ್ರವಣಗುಂಡೆಂಬ ಬ್ರಹ್ಮಸ್ಥಾನ, ಒಂದು ಉಳ್ಳಾಳ್ತಿಗುಂಡ ಹೀಗೆ ಪ್ರತ್ಯ ಪ್ರತ್ಯೇಕ ಸ್ಥಾನಗಳನ್ನು ಕಟ್ಟಿಸಿ ಪ್ರತಿಷ್ಠೆಮಾಡಿಸಿ ಉಂಬಳಿ ಉತ್ತಾರ ಬಿಟ್ಟು, ಸಾಮಾಜಿಕರೊಡನೆ ವೀರ ನರಶಿಂಹ ಬಂಗರಾಜನು ಬಂಗಾಡಿಯಲ್ಲಿಯೇ ಇದ್ದನು.

ಆ ಮೇಲೆ ಪಗಡೆಸಾಲಿನಲ್ಲಿ ಬಂಗಾಡಿ ಪಟ್ಟಣವನ್ನು ಕಟ್ಟಿಸಿದನು. ಕ್ರಮೇಣ ಈ ಪಟ್ಟಣವು ದೊಡ್ಡದಾಗುತ್ತಾ ಬಂದು ಒಂದು ಸಾವಿರ ಮನೆಗಳಿಗಿಂತಲೂ ಹೆಚ್ಚು ಮನೆಗಳು ಕಟ್ಟಲ್ಪಟ್ಟವು. ಸೈನ್ಯ ನಿಲ್ಲುವದಕ್ಕಾಗಿ ಅರಮನೆಯ ಉತ್ತರಕ್ಕೆ ಒಂದು ಕೋಟೆ ಕಟ್ಟಲ್ಪಟ್ಟಿತು. ಈಗಲೂ ಮೇಲೆ ಹೇಳಿದ ದೇವಸ್ಥಾನಗಳನ್ನೂ ಬಸದಿಯನ್ನೂ ಹಾಳು ಬಿದ್ದ ಮನೆಗಳ ಅಡಿ ಸ್ಥಳಗಳನ್ನೂ ಅಗಲವಾದ ಮಾರ್ಗಗಳನ್ನೂ ನೋಡಬಹುದು. ಅರಮನೆಯ ಅಡಸ್ಥಳವು ಸುಮಾರು ಒಂದು ಎಕ್ರೆ ವಿಸ್ತೀರ್ಣವಿದೆ. ಅರಮನೆಯ ಉತ್ತರ ದಿಕ್ಕಿಗೆ ಮರಗಳು ಬೆಳೆದು ಕಾಡು ತುಂಬಿದ ಮಣ್ಣಿನ ಗೋಡೆಗಳ ದೊಡ್ಡ ಕೋಟೆಯು ಇದೆ. ಅರಮನೆಯ ಮುಂದುಗಡೆ ದೊಡ್ಡ ರಾಜಾಂಗಣವಿದ್ದದ್ದನ್ನು ಈಗ ಗದ್ದೆಮಾಡಿದ್ದಾರೆ. ಈ ಅರಸನಿಗೆ 5 ಮಂದಿ ರಾಣಿಯರಿದ್ದರು. ಕ್ರಿ. ಶ. 1208 (ಶಾ. ಶ. 1130) ರಲ್ಲಿ ಈ ಅರಸನು ಕಾಲವಾದನು.

**2. ಚಂದ್ರಶೇಖರ ಬಂಗರಾಜ.** ಕ್ರಿ. ಶ. 1208-1224. ಶಾ. ಶ. 1130 (1208)ನೆಯ ಶುಕ್ಲ ಸಂ|ದ ವೈಶಾಖ ಶು. ೫ನೇ ದಿವಸ ವೀರನರಸಿಂಹ ಬಂಗರಾಜನ ಮಗ ಚಂದ್ರಶೇಖರ ಬಂಗರಾಜನಿಗೆ ಪಟ್ಟವಾಯಿತು. ಒಂದಾನೊಂದು ದಿವಸ ಮಂಗಳೂರು ವರೆಗಿರುವ ತನ್ನ ರಾಜ್ಯವನ್ನು ನೋಡಿಕೊಂಡು ಬರಬೇಕೆಂದು ಆಲೋಚನೆ ಮಾಡಿ ಮಂಗಳೂರಿಗೆ ಬಂದು ಶರವಿನ ಮಹಾ ದೇವರ ದೇವಸ್ಥಾನದ ಪೂರ್ವ ದಿಕ್ಕಿನಲ್ಲಿ (ಈಗ ಯುರೋಪಿಯನ್ ಕ್ಲಬ್ ಇರುವಲ್ಲಿ) ಅರಮನೆ ಕಟ್ಟಿಸಿದನು. ಈ ಸಮಯದಲ್ಲಿ ಅಲೂಪ ಅರಸು ಕುಲಶೇಖರನು ಮಂಗಳೂರು ರಾಜ್ಯವನ್ನು ಹೊಯ್ಸಳ ಬಲ್ಲಾಳರ ಮಹಾ ಮಂಡಲೇಶ್ವರನಾಗಿ ಆಳುತ್ತಿದ್ದನು. ಈ ಅರಸನ ಅರಮನೆಯು ಮಂಗಳೂರಿನ ಹತ್ತಿರ ಕೂಲಿಶೇಖರದಲ್ಲಿತ್ತು. ಬಂಗರಾಜನು ಅವನ ಒಳ ಅರಸನಾಗಿ ಆಳುತ್ತಿದ್ದನು. ಒಂದು ದಿವಸ ಅರಮನೆಯ ಕಡಕಟ್ಟಿನಲ್ಲಿ ಕುಳಿತಿರುವಾಗ್ಗೆ ಸಮುದ್ರದಲ್ಲಿ 7 ಹಡಗಗಳು ಬಂದು ಅಳಿವೆಯ

ಬಾಗಲಲ್ಲಿ ನಿಂತವು. ಬಂಗರಾಜನಿಗೆ ಈ ಹಡಗಗಳು ಸಿಕ್ಕಿದರೆ ಆದೀತೆಂಬ ಆಸೆಯುಂ ಹುಟ್ಟಿ ಸಾಮಾಜಿಕರೊಡನೆ ಆಲೋಚಿಸಲು ಅವರು "ಇಲ್ಲಿಯೆ ವಸುಪುರ (ಮಂಗಳೂರು ಹೊಗೆ ಬಜಾರ) ಎಂಬಲ್ಲಿ ಚೇಟಕ (ಕೇಶವ) ಎಂಬ ಬ್ರಾಹ್ಮಣನು (ಮಂಜೇಶ್ವರದ ಪೂರ್ವಕ್ಕಿರುವ ಬಡಾಜೆ ತಂತ್ರಿಗಳ ಮೂಲ ಪುರುಷನು) ಒಂದು ಗಣಪತಿ ದೇವಸ್ಥಾನವನ್ನು ಕಟ್ಟಿಕೊಂಡು ಭಜಿಸುತ್ತಾ ಅಲ್ಲಿಯೇ ಇದ್ದಾನೆ. ಈ ಗಣಪತಿ ದೇವರಿಗೆ ಹರಿಕೆ ಹೇಳಿಕೊಂಡು ಅನೇಕರ ಮನಸಾಭಿಷ್ಟವು ಸಿದ್ಧಿಯಾಗಿಯದೆ. ಆದ್ದರಿಂದ ಆ ದೇವರಿಗೆ ಹರಿಕೆ ಹೇಳಿಕೊಂಡರೆ ಆದೀತು" ಎಂದು ಹೇಳಲು ಬಂಗರಾಜನು ಆ ಕೇಶವ ಅಸ್ರಣ್ಣನನ್ನು ಕರಸಿ ಹರಿಕೆ ಹೇಳಿಕೊಂಡನು. ಅದೇ ದಿವಸ ರಾತ್ರಿ ಬಹಳ ಗಾಳಿ ಮಳೆ ಬಂದು ಚೀನಾದೇಶದಿಂದ ಬಂದ ಆ 7 ಹಡಗಗಳು ಒಡೆದು ದಡದ ಮೇಲೆ ಬಿದ್ದುದ್ದರಿಂದ ಮರುದಿವಸ ಬಂಗರಾಜನು ಆ ಹಡಗಗಳಲ್ಲಿರುವ ಚಿನ್ನದ ಮಣ್ಣು ಮುಂತಾದ ಸಾಮಾನುಗಳನ್ನು ತರಿಸಿ ಅರಮನೆಯಲ್ಲಿ ಇಡಿಸಿದನು. ಆ ಚೀನಾ ದೇಶದ ಜನರಿಗೆ ನಿಲ್ಲುವುದಕ್ಕೆ ಮನೆಗಳನ್ನು ಕಟ್ಟಿಸಿಕೊಟ್ಟನು. * "ಮಾರ್ಕೊಪೊಲೊ" ಹೇಳುವಪ್ರಕಾರ 1200ರಲ್ಲಿ ಚೀನಾ ದೇಶದ ಸಂಗಡ ವ್ಯಾಪಾರವು ಬಹಳ ಹೆಚ್ಚಾಗಿ ನಡಿಯುತ್ತಿತ್ತೆಂದು ಕಾಣುತ್ತದೆ.

ಬಳಿಕ ಸ್ಮಾರಕವಾಗಿ ಗಣಪತಿ ದೇವರಿಗೆ ಮಂಗಳೂರು ಮಹಾ ಶರಭೇಶ್ವರ ದೇವಸ್ಥಾನದ ತೆಂಕು ದಿಕ್ಕಿನ ಗೋಡೆಯ ಹತ್ತಿರ ಪ್ರತಿಷ್ಠೆ ಮಾಡಿಸಿ ಅದಕ್ಕೆ ದಿನ ಒಂದಕ್ಕೆ 108 ತೆಂಗಿನಕಾಯಿಯ ಗಣಹೋಮ ಮಾಡಲಿಕ್ಕೆ ಉಂಬಳಿ ಬಿಟ್ಟನು. ಈಗ ಈ ಉಂಬಳಿಯ ಬದಲಾಗಿ 800 ರೂಪಾಯಿ ತಸದೀಕು ಸಿಕ್ಕುತ್ತದೆ. ಶರವಿನ ಗಣಪತಿ ದೇವಸ್ಥಾನ ಕಟ್ಟಿಸಿ ಪ್ರತಿಷ್ಠಿಸಿದ ನಂತರ ಬಂಗರಾಜನು ಬಹಳ ಐಶ್ವರ್ಯವಂತನಾದ್ದರಿಂದ ಹಣವಿನ ಬಂಗರಾಜನೆಂಬ ಹೆಸರು ಬಂತು.

ಅನಂತರ ಬಂಗರಾಜನು ಅಳುವೆಯ ಎದುರುಗಡೆಯಲ್ಲಿ ಒಂದು ಬಲವಾದ ಕೋಟೆಯನ್ನು ಕಟ್ಟಿಸಬೇಕೆಂದು ಆಲೋಚನೆಮಾಡಿ

ಮಂಗಳಾದೇವಿಯ ದೇವಸ್ಥಾನದ ಹತ್ತಿರ ಕ್ರಿ. ಶ. 1222ರಲ್ಲಿ **ಕೋಟೆ**ಯನ್ನು ಕಟ್ಟಿಸಿ ಮಂದಿ ಮಕ್ಕಳನ್ನು (ಸೈನ್ಯವನ್ನು) ಇಟ್ಟು ಅದರ ಮಧ್ಯದಲ್ಲಿದ್ದ ಮಂಗಳಾದೇವಿ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿ ಉಂಬಳಿ ಬಿಟ್ಟನು. ಈ ಸಮಯದಲ್ಲಿ ಅಳುವೆಯು ಈಗ ಇರುವ ಸ್ಥಳದಲ್ಲಿಯೇ ಇತ್ತೆಂದು ಹೇಳಬಹುದು.

**3. ಪಾಂಡ್ಯಪ್ಪ ಬಂಗರಾಜ** ಕ್ರಿ. ಶ. **1224—1239.** ಚಂದ್ರಶೇಖರ ಬಂಗರಾಜನಿಗೆ ಮಕ್ಕಳಿಲ್ಲದ್ದರಿಂದ ತಮ್ಮನಾದ **ಸಾಂತ**ರಾಜ ಎಂಬವನಿಗೆ ಪಾಂಡ್ಯಪ್ಪ ಬಂಗರಾಜನೆಂಬ ಹೆಸರಿನಿಂದ **ಶಾ. ಶ. 1147**ನೇ ಪಾರ್ಥಿವ ಸಂ|ದ ಮಾಘ ಶು. ೫ಯ ದಿವಸ ಪಟ್ಟವಾಯಿತು. ಈ ಅರಸನ ಆಳಿಕೆಯ ವಿಷಯದಲ್ಲಿ ಯಾವದೊಂದು ಸಂಗತಿಯೂ ಇಷ್ಟರ ವರೆಗೆ ತಿಳಿದುಬರಲಿಲ್ಲ.

**4. ವಿಠಲದೇವಿ.** ಕ್ರಿ. ಶ. 1239—1264. ಪಾಂಡ್ಯಪ್ಪ ಬಂಗರಾಜ ಒಡೆಯನು ಕಾಲವಾದ ನಂತರ ಅವನ ತಂಗಿಯಾದ ವಿಠಲದೇವಿಯು ಶಾ. ಶ. 1162ನೇ ಶಾರ್ವರಿ ಸಂ|ದ ಫಾಲ್ಗುಣ ಬ. ೧೦ರಲ್ಲಿ ಪಟ್ಟಕ್ಕೆ ಬಂದು ಕ್ರಿ. ಶ. 1264ರ ವರೆಗೆ ಆಳಿದಳು.

**5. 1ನೇ ಕಾಮರಾಯ.** ಕ್ರಿ. ಶ. **1264—1274.** ವಿಠಲದೇವಿಯ ನಂತರ ಅವಳ ಮಗನಾದ ಕಾಮರಾಯನು **ಶಾ. ಶ. 1166**ನೇ ಕ್ರೋಧಿ ಸಂ|ದ ಚೈತ್ರ ಶು. ೭ಲ್ಲಿ ಪಟ್ಟಕ್ಕೆ ಬಂದು ಶಾ. ಶ. 1196ರ ವರೆಗೆ ಆಳಿದನು.

**6. ಪದುಮಲ ದೇವಿ.** ಕ್ರಿ. ಶ. 1274—1287. ಕಾಮರಾಯನ ತರುವಾಯ ಅವನ ಸೊಸೆ ಪದುಮಲ ದೇವಿಯು ಶಾ. ಶ. 1196ನೇ ಭಾವ ಸಂ|ದ ಕಾರ್ತಿಕ ಶು. ೧೩ಲ್ಲಿ ಪಟ್ಟಕ್ಕೆ ಬಂದು ಶಾ. ಶ. 1209ರ ವರೆಗೆ ಆಳಿದಳು.

**7. 1ನೇ ಹಾವಳಿ ಬಂಗರಾಜ.** ಕ್ರಿ. ಶ. **1287—1328.** ಪದುಮಲ ದೇವಿಯು ಕಾಲವಾದ ನಂತರ ಅವಳ ಮಗನು ಹಾವಳಿ ಬಂಗರಾಜನೆಂಬ ಹೆಸರಿನಿಂದ ಶಾ. ಶ. 1209ನೇ ಸರ್ವಜಿತು ಸಂ|ದ ಶ್ರಾವಣ ಬ. ೭ನೆಯ ದಿವಸ ಪಟ್ಟಕ್ಕೆ ಬಂದನು. ಈ ಅರಸನು ಒಂದು

ದಿವಸ ಬೆಳ್ತಂಗಡಿಯಲ್ಲಿರುವಾಗ ಕುತ್ಯಾರಲ್ಲಿ ಜೀರ್ಣವಾಗಿರುವ ಒಂದು ಸೋಮನಾಥ ದೇವಸ್ಥಾನವಿದೆ ಎಂದು ಅರಸನಿಗೆ ಬ್ರಾಹ್ಮಣರು ತಿಳಿಸಲು, ಅವನು ಕೂಡಲೇ ಆ ಸ್ಥಳಕ್ಕೆ ಹೋಗಿ ನೋಡಿ ಸೋಮನಾಥ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿಸಿ ಅದಕ್ಕೆ ಉಂಬಳಿ ಉತ್ತಾರ ಬಿಟ್ಟನು. ಈ ದೇವಸ್ಥಾನದ ಸುತ್ತಮುತ್ತಲೂ ಇರುವ ಮೈದಾನು ಸ್ಥಳವನ್ನು ನೋಡಿ ಆ ಸ್ಥಳದಲ್ಲಿ ತನ್ನ ರಾಜ್ಯದ ಭದ್ರತೆಗಾಗಿ ಒಂದು ಕೋಟೆ ಇರಬೇಕೆಂದು ಆಲೋಚಿಸಿ ಕೋಟೆಯನ್ನು ಕಟ್ಟಿಸಿದನು. ಅನಂತರ ಅಲ್ಲಿ ಪೇಟೆಯು ದೊಡ್ಡದಾಯಿತು. ಆ ಮೇಲೆ ಪೇಟೆಯಲ್ಲಿ ಒಂದು ಬಸದಿ ಕಟ್ಟಿಸಿ ಪ್ರತಿಷ್ಠೆ ಅಭಿಷೇಕ



ಗುರುವಾಯನಕೆರೆ ಬಸದಿ.

ಮುಂತಾದ್ದನ್ನು ಮಾಡಿಸಿ ಆ ದೇವರಿಗೆ ಉಂಬಳಿ ಉತ್ತಾರ ಬಿಟ್ಟನು. ಸ್ವಲ್ಪ ಸಮಯದ ನಂತರ ಅಲ್ಲಿ ಒಂದು ಅರಮನೆಯನ್ನು ಕಟ್ಟಿಸಿದನು.

ಕೋಟೆಯನ್ನೂ ಗುರುವಾಯನಕೆರೆಯಿಂದ ಬೆಳ್ತಂಗಡಿಗೆ ಹೋಗುವ ದಾರಿಯಲ್ಲಿರುವ ಜೈನರ ಪೇಟೆಯನ್ನೂ ಬಸದಿಯನ್ನೂ ಕೋಟೆಯ ಪೂರ್ವದಿಕ್ಕಿಗಿರುವ ಅರಮನೆಯ ಅಡಿಷ್ಠಳವನ್ನೂ ಸೋಮನಾಥ ದೇವಸ್ಥಾನವನ್ನೂ ಈಗಲೂ ಕಾಣಬಹುದು. ಬಂಗರಾಜರಲ್ಲಿ ಒಬ್ಬನ ಸಮಾಧಿಯು ಬೆಳ್ತಂಗಡಿ ಮೇಜಿಸ್ಟ್ರೇಟರ ಮನೆಯ ಹತ್ತಿರ ಇರುವದನ್ನು ಈಗಲೂ ಕಾಣಬಹುದು. ಈ ಅರಸನು ಶಾ. ಶ. 1245 (ಕ್ರಿ. ಶ. 1323)ರಲ್ಲಿ ಕಾಲವಾದನು.

8. **ಶಂಕರದೇವಿ.** ಕ್ರಿ. ಶ. 1324—1349. ಹಾವಳಿ ಬಂಗರಾಜನ ತಂಗಿ ಶಂಕರದೇವಿಯು ಶಾ. ಶ. 1246ನೇ (ಕ್ರಿ. ಶ. 1324) ರಕ್ತಾಕ್ಷಿ ಸಂ|ದ ವೈಶಾಖ ಬ. ೫ಲ್ಲಿ ಪಟ್ಟಕ್ಕೆ ಬಂದು 25 ವರುಷ ಆಳಿದಳು. ಈ ರಾಣಿಯು ಆಳುವಾಗ ಅಲೂಪ ಅರಸನಾದ ಸೊಯಿದೇವನು ಮಂಗಳೂರಿನಲ್ಲಿ ಮಂಡಲೇಶ್ವರನಾಗಿದ್ದನು. ಈ ಅರಸನಿಗೆ ಸಂತಾನವಿಲ್ಲದ್ದರಿಂದಲೂ ಮರಣಕಾಲವು ಸಮೀಪಿಸಿದ್ದರಿಂದಲೂ, ಇವನು ತಾನು ಸ್ವತಹ ಆಳುತ್ತಿದ್ದ (1) ಬಜಲಬಲ್ಲಾಳ ಸೀಮೆ (2) ಮಣೇಲ ಬಲ್ಲಾಳನ ಒಂದುಸಾವಿರ ಸೀಮೆ (3) ಪೇಜಾವರ ಬಲ್ಲಾಳನ ಸೀಮೆ (4) ಮುಂಡಕೂರು ಬಲ್ಲಾಳನ ಸೀಮೆ (5) ಬೈಲು ಬಲ್ಲಾಳನ ಸೀಮೆ (6) ವಾಮಂಜೂರು ಬಲ್ಲಾಳನ ಸೀಮೆ (7) ನೀರು ಮಾರ್ಗದ ಸೀಮೆ, ಈ 7 ಸೀಮೆಗಳನ್ನು ಶಾ. ಶ. 1247ರಲ್ಲಿ ಶಂಕರದೇವಿಯ ಅಧೀನಕ್ಕೆ ಒಪ್ಪಿಸಿ, ಶಂಕರದೇವಿಗೆ ಒಡೆಯ ಎಂಬ ಬಿರುದನ್ನು ಕೊಟ್ಟನು. ಹೊಯ್ಸಳ ರಾಜ್ಯವು ಬಹಳ ಹೀನಸ್ಥಿತಿಗೆ ಬಂದುದರಿಂದ ಈ ರಾಣಿಯು ಸ್ವತಂತ್ರವಾಗಿ ಆಳತೊಡಗಿದಳು.

9, **2ನೇ ಹಾವಳಿ ಬಂಗರಾಜ.** ಕ್ರಿ. ಶ. 1349—1400. ಶಂಕರದೇವಿಯ ನಂತರ ಅವಳ ಮಗ ಹಾವಳಿ ಬಂಗರಾಜನು ಶಾ. ಶ. 1271 (ಕ್ರಿ. ಶ. 1349)ನೇ ವಿರೋಧಿ ಸಂ|ದ ಚೈತ್ರ ಬ. ೧ಲ್ಲು ಪಟ್ಟವೇರಿ 51 ವರುಷ ಆಳಿದನು.

**10. 1ನೇ ಲಕ್ಷ್ಮಪ್ಪರಸ ಬಂಗರಾಜ.** ಕ್ರಿ. ಶ. **1400–1455.** ಹಾವಳಿ ಬಂಗರಾಜನು ಕಾಲವಾದ ನಂತರ ಅವನ ತಮ್ಮ ಲಕ್ಷ್ಮಪ್ಪರಸನು ಶಾ. ಶ. 1322 (ಕ್ರಿ. ಶ. 1400)ನೇ ವಿಕ್ರಮ ಸಂ|ದ ಮಾಘ ಶು. ೧೦ಲ್ಲಿ ಪಟ್ಟಕ್ಕೆ ಬಂದನು. ಲಕ್ಷ್ಮಪ್ಪರಸ ಬಂಗರಾಜ ಎಂಬದು ಪಟ್ಟದ ಹೆಸರು. ಉಮ್ಮಣ್ಣ ಬಂಗ ಎಂಬದು ವಾಡಿಕೆಯ ಹೆಸರು. ಶಾ. ಶ. 1332 (ಕ್ರಿ. ಶ. 1410)ರಲ್ಲಿ ಈ ಅರಸನಿಗೂ ನೀಲೇಶ್ವರದ ಮೂತರರಸನಿಗೂ ಯುದ್ಧವಾಗಿ ಬಂಗರಸನು ಸೋತು ಹೋಗುವ ಸಂಭವ ಉಂಟಾಗಲು, ಮೂಡಬಿದರೆಯ ಚನ್ನರಾಯ ಚೌಟ (ಅಲ್ಲಪ್ಪಶೇಖ)ನಿಗೆ ಈ ಸಂಗತಿಯನ್ನು ತಿಳಿಸಿ ತನಗೆ ಸಹಾಯವಮಾಡಬೇಕೆಂದು ಹೇಳಿ ಕಳುಹಿಸಲು ಚನ್ನರಾಯನು ತನ್ನ ಸೈನ್ಯವನ್ನು ಕೂಡಲೇ ಕಳುಹಿಸಿದನು. ಬಂಗರ ಮತ್ತು ಚೌಟರ ಸೈನ್ಯ ಕೂಡಿ ನಿಲೇಶ್ವರದ ಅರಸನನ್ನು ಸೋಲಿಸಿ ಓಡಿಸಿತು. ತನಗೆ ಸೈನ್ಯ ಕಳುಹಿಸಿ ಸಹಾಯವಮಾಡಿದ್ದಕ್ಕಾಗಿ ಲಕ್ಷ್ಮಪ್ಪರಸನು ತನ್ನ ರಾಜ್ಯದಲ್ಲಿ ಮಣೇಲ, ಪೇಜಾವರ, ಮುಡುಕೂರು ಸೀಮೆಗಳನ್ನು ಬಿಟ್ಟು ಕೊಟ್ಟನೆಂದು ಮಂಗಳೂರು ತಾಲೂಕು ಕರಿಯಂಗಳ ಗ್ರಾಮದ ಪಲ್ಲಿಪಾಡಿಯಲ್ಲಿರುವ ಶಿಲಾಶಾಸನದಲ್ಲಿದೆ.

ಬೈಲಂಗಡಿ ಮೂಲರಿಗೂ ಇವರಿಗೂ ಜಗಳವು ಆಗಾಗ್ಗೆ ಬರುತ್ತಿದ್ದುದರಿಂದ ಶಾ. ಶ. 1334ರಲ್ಲಿ ಈ ಅರಸನು ಉಪ್ಪಿನಂಗಡಿಯಲ್ಲಿ ಒಂದು ಕೋಟೆಯನ್ನು ಕಟ್ಟಿಸಿದನು. ಇದು ಬೆಳ್ತಂಗಡಿ ಕೋಟೆಯ ಹಾಗೆಯೇ ಇದೆ. ಒಂದು ದಿವಸ ಉಪ್ಪಿನಂಗಡಿಯಿಂದ ದೋಣಿ ಹತ್ತಿಕೊಂಡು ಮಂಗಳೂರಿಗೆ ಹೋಗುವಾಗ ನಂದಾವರದ ಮಹಾಗಣಪತಿ ದೇವಸ್ಥಾನದ ಪೂರ್ವ ದಿಕ್ಕಿನಲ್ಲಿ ಒಂದು ಜೋಡು ಕವಡೆಗಳು ರಾತ್ರೆ 5 ಘಳಿಗೆ ಸಮಯ ಸಮನೆಲದಲ್ಲಿ ಕೂತು ಕೂಗುತ್ತಿದ್ದವು. ಆಗ ಹತ್ತಿರವಿದ್ದ ಜೋಯಿಸನು ಈ ಸಮಯ ಹಕ್ಕಿಗಳು ಕೂಗಿದ್ದರಿಂದ ಆ ಸ್ಥಳದಲ್ಲಿ ಐಶ್ವರ್ಯವು ತುಂಬಿದೆ ಮತ್ತು ಅರಮನೆ ಕಟ್ಟಲಿಕ್ಕೂ ಯೋಗ್ಯವಾದ

ಸ್ಥಳವೂ ಆಗಿದೆ ಎಂದು ಹೇಳಿದನು. ಆಗ ಎಲ್ಲರೂ ದೋಣಿಯಿಂದ ಕೆಳಗಿಳಿದು ಆ ಸ್ಥಳದಲ್ಲಿ ಒಂದು ಕೋಲು ಊರಿ ಗುರುತನ್ನು ಮಾಡಿ ಪುನಹ ದೋಣಿ ಹತ್ತಿ ಮಂಗಳೂರಿಗೆ ಹೋದರು. ಅನಂತರ ತಿರುಗಿ ನಂದಾವರಕ್ಕೆ ಬಂದು ಸಜೀಪ ಸೀಮೆಯ ನಂದಿರಾಯ ಬಲ್ಲಾಳನ ಸಹಾಯದಿಂದ ಅರಮನೆ ಕಟ್ಟಲು ಬುನಾದಿಕಲ್ಲು ಹಾಕಲಿಕ್ಕೆ ಅಗೆದಾಗ ದ್ರವ್ಯವು ಸಿಕ್ಕಿತು. ಶಾ. ಶ. 1336ನೇ ಜಯ ಸಂ|ದ ಮಾಘ ಶು. ೭ಯು ದಿವಸ ಬಹಳ ವಿಜ್ರಂಭಣೆಯಿಂದ ಅರಮನೆಯ ಪ್ರವೇಶವಾಯಿತು. ಅರಮನೆಯನ್ನು ಕಟ್ಟಿದ ಮೇಲೆ ಅದರ ದಕ್ಷಿಣದಲ್ಲಿ ಒಂದು ಕೋಟೆ ಕಟ್ಟಿಸಿ, ಕೋಟೆಯಲ್ಲಿ ಶಿಲಾಮಯವಾದ ದೇವಸ್ಥಾನವನ್ನು ಕಟ್ಟಿಸಿ ಅದರಲ್ಲಿ ವೀರಭದ್ರ ದೇವರ ಪ್ರತಿಷ್ಠೆಮಾಡಿಸಿದನು. ಪಿಲಿಚಾಮುಂಡಿ ದೈವಕ್ಕೆ ಒಂದು ಗುಡಿಯನ್ನು ಸಹ ಕಟ್ಟಿಸಿದನು. ಅರಮನೆಯ ಪೂರ್ವ ದಕ್ಷಿಣಭಾಗದಲ್ಲಿ ಪಗಡೆ ಸಾಲಿನಲ್ಲಿ ಪೇಟೆಯನ್ನು ಕಟ್ಟಿಸಿ ಸಾಮಾಜಿಕರು ಮುಂತಾದವರಿಗೆ ಅವರವರ ತರವರಿತು ಮನೆಗಳನ್ನು ಕಟ್ಟಿಸಿಕೊಟ್ಟು ಅರಮನೆಯ ಪೂರ್ವದಿಕ್ಕಿನಲ್ಲಿ ಒಂದು ಮುಖ್ಯಪ್ರಾಣ ದೇವಸ್ಥಾನವನ್ನೂ, ದಕ್ಷಿಣ ಭಾಗದಲ್ಲಿ ಆದೀಶ್ವರ ಬಸದಿಯನ್ನೂ, ಮುಸಲ್ಮಾನರಿಗೆ ಮತ್ತು ಮಾಪಿಳ್ಳೆಯರಿಗೆ ಒಂದು ಮಶೀದಿಯನ್ನೂ ಕಟ್ಟಿಸಿದನು. ಇವುಗಳಲ್ಲಿ ಬಸದಿ, ದೇವಸ್ಥಾನ, ದೈವಸ್ಥಾನ ಮಶೀದಿಗಳಿಗೆ ಉಂಬಳಿ ಬಿಟ್ಟು ಸಜೀಪ ನಡುಬೈಲು ದೈವಗಳಿಗೂ ಬೇಕಾದಷ್ಟು ಆಭರಣ ಮುಂತಾದ್ದನ್ನು ಮಾಡಿಸಿಕೊಟ್ಟನು. ಇಷ್ಟೆಲ್ಲಾ ಆದ ನಂತರ ನಂದಿರಾಯ ಬಲ್ಲಾಳನ ಮಗಳು ದಾರಕದೇವಿಯನ್ನು ಮದುವೆಮಾಡಿಕೊಂಡನು. ಈ ಅರಸನ ಕಾಲದಲ್ಲಿ, ಬಂಗಾಡಿ, ಬೆಳ್ತಂಗಡಿ, ಮಂಗಳೂರು, ನಂದಾವರ ಎಂಬ ನಾಲ್ಕು ಅರಮನೆಗಳಾದವು.

**11. 2ನೇ ಶಂಕರ ದೇವಿ.** ಕ್ರಿ. ಶ. **1455—1491.** ಲಕ್ಷ್ಮಪ್ಪರಸನ ತಂಗಿ ಶಂಕರದೇವಿಯು ಶಾ. ಶ. 1377 (ಕ್ರಿ. ಶ. 1455)ನೆಯ ಯುವ ಸಂ|ದ ಪುಷ್ಯ ಶು. ೯ ದಿವಸ ಪಟ್ಟಕ್ಕೆ ಬಂದು 36 ವರುಷ ಆಳಿದಳು.

**12. 2ನೇ ಕಾಮರಾಯು.** ಕ್ರಿ. ಶ. 1491—1533. ಶಂಕರದೇವಿಯ ತರುವಾಯ ಅವಳ ಮಗ ಕಾಮರಾಯನು ಶಾ. ಶ. 1413 (ಕ್ರಿ. ಶ. 1491)ನೇ ವಿರೋಧಿಕೃತು ಸಂ|ದ ಆಶ್ವೀಜ ಬ. ೧೩ಲ್ಲಿ ಪಟ್ಟಕ್ಕೆ ಬಂದನು. ಈ ಅರಸನ ಕಾಲದಲ್ಲಿ ಪೋರ್ತುಗೀಸರ ಹಾವಳಿಯು ಪ್ರಾರಂಭವಾಯಿತು. ಕ್ರಿ. ಶ 1526ಲ್ಲಿ ಪೋರ್ತುಗೀಸರ ವ್ಯಾಸರೋಯಿಯಾದ ಲೋಪೆಜ್ ಡಿ ಸಂಪಾಯೋ ಎಂಬವನು ಬಂಗರಾಜನ ಮುಖ್ಯ ಪಟ್ಟಣವಾದ ಮಂಗಳೂರನ್ನು ಹಿಡಿದು ಕಾದಾಡಲು, ಬಂಗರಾಜನ ಸೈನಿಕರಾಗಿದ್ದ ಮಾಪಿಳ್ಳೆಯರೂ ಅರಬಿ ಮೂರರೂ ಸೋತುಹೋದರು. ಪೋರ್ತುಗೀಸರು ಕ್ರೈಸ್ತಮತ ವನ್ನು ಮಂಗಳೂರಿನ ಸುತ್ತಮುತ್ತಲೂ ಬೋಧಿಸಲಾರಂಭಿಸಿದರು. ವ್ಯಾಪಾರವು ಮಾಪಿಳ್ಳೆಯರ ಕೈತಪ್ಪಿತು. ಕಡೆಗೆ ಬಂಗರಾಜನಿಗೂ ಪೋರ್ತುಗೀಸರಿಗೂ ಕರಾರಾಗಿ ಬಂಗರಾಜನು ಪೋರ್ತುಗೀಸರಿಗೆ 2400 ಮುಡಿ ಅಕ್ಕಿಯನ್ನೂ 1000 ಬುದ್ದಲಿ ಎಣ್ಣೆಯನ್ನೂ ಸುಂಕದ ರೂಪವಾಗಿ ಕೊಡಲಾರಂಭಿಸಿದನು. ಕ್ರಿ. ಶ. 1529ಲ್ಲಿ ದಿಯೋಗ ಡಾ ಸಿಲ್ವೆರಾ ಎಂಬ ಪೋರ್ತುಗೀಸರ ಹಡಗುಪಡೆಯುವನು ಮಂಗಳೂರಿಗೆ ಬಂದನು. ಪೋರ್ತುಗೀಸರಿಗೆ ವಿರೋಧಿಯಾಗಿದ್ದ ಒಬ್ಬ ಅರಬೀ ಸಾಹುಕಾರನು ಮಂಗಳೂರಿನಲ್ಲಿ ಇದ್ದನೆಂದು ತಿಳಿದು 1530ನೇ ಮಾರ್ಚಿ ತಿಂಗಳಲ್ಲಿ ಮಂಗಳೂರು ಕೋಟೆಯನ್ನು ಹಿಡಿದನು. ಕಾಮರಾಯನು ವಿಜಯನಗರಕ್ಕೆ ಕೊಡುತ್ತಿರುವ ಕಪ್ಪವನ್ನು ಕೊಡದೆಯಿದ್ದುದರಿಂದ ಕ್ರಿ. ಶ. 1520ರಲ್ಲಿ ಕೆಳದಿಯ ಸದಾಶಿವರಾಯ ನಾಯಕನು ಮಂಗಳೂರಿಗೆ ಬಂದು ಬಂಗರಾಜನನ್ನು ಶರಣಾಗತನನ್ನಾಗಿ ಮಾಡಿ ವಿಜಯನಗರಕ್ಕೆ ಸಲ್ಲಬೇಕಾದ ಕಪ್ಪವನ್ನು ಕೊಡುವ ಹಾಗೆ ಕರಾರುಮಾಡಿ, ಅಷ್ಟರವರೆಗೆ ಕೊಡದೆ ಬಾಕಿ ಉಳಿದ ಕಪ್ಪವನ್ನು ತೆಗೆದುಕೊಂಡು ಹೋಗಿ ವಿಜಯನಗರ ಕೃಷ್ಣದೇವರಾಯನಿಗೆ ಒಪ್ಪಿಸಿದನು.

**13. 3ನೇ ಹಾವಳಿ ಬಂಗರಾಜ.** ಕ್ರಿ. ಶ. 1533-1545. ಕಾಮರಾಯನ ತರುವಾಯ ಅವನ ತಮ್ಮ ಹಾವಳಿ ಬಂಗರಾಜ ಒಡೆಯನಿಗೆ ಶಾ. ಶ. 1455ನೇ ವಿಜಯ ಸಂ|ದ ಕಾರ್ತಿಕ ಬ. ೧೦ಲ್ಲಿ ನಂದಾವರದಲ್ಲಿ ಪಟ್ಟವಾಯಿತು. ಈ ಅರಸನು ನಂದಾವರ ಅರಮನೆಯ ಪಶ್ಚಿಮ ದಿಕ್ಕಿನಲ್ಲಿ ಗಣಪತಿ ದೇವಸ್ಥಾನದ ಹತ್ತಿರ ಶಂಕರನಾರಾಯಣ ದೇವಸ್ಥಾನವನ್ನು ಕಟ್ಟಿಸಿ ಪ್ರತಿಷ್ಠೆಮಾಡಿಸಿದನು.

**14. 2ನೇ ಲಕ್ಷ್ಮಪ್ಪರಸ ಬಂಗರಾಜ.** ಕ್ರಿ. ಶ. 1545-1556. ಹಾವಳಿ ಬಂಗರಾಜನು ಕ್ರಿ. ಶ. 1455ರಲ್ಲಿ ಕಾಲವಾದ ನಂತರ ಅವನ ಅಳಿಯ ಲಕ್ಷ್ಮಣನು, ಲಕ್ಷ್ಮಪ್ಪರಸ ಎಂಬ ಹೆಸರಿನಿಂದ ಶಾ. ಶ. 1467ನೇ ವಿಶ್ವಾವಸು ಸಂವತ್ಸರದ ವೈಶಾಖ ಬ. ೧ರಲ್ಲಿ ಪಟ್ಟಕ್ಕೆ ಬಂದನು. ಈ ಅರಸನು ಮೂಡಬಿದರೆ ಚೌಟ ರಾಣಿಯಾದ ಅಬ್ಬಕ್ಕಾದೇವಿಯನ್ನು ಮದುವೆಮಾಡಿಕೊಂಡಿದ್ದನು. ಈ ಸಮಯದಲ್ಲಿ ಮಂಗಳೂರಿನಲ್ಲಿ ಈ ಅರಸನ ಬಹಳ ದೊಡ್ಡ ಸೈನ್ಯವಿತ್ತು. ವಿಜಯ ನಗರದ ಒಡೆಯನು ಮಂಗಳೂರಿನಲ್ಲಿದ್ದರೂ ರಾಜ್ಯಭಾರವೆಲ್ಲವೂ ಲಕ್ಷ್ಮಪ್ಪರಸನ ಕೈಕೆಳಗಿತ್ತು. ಈ ಅರಸನಿಗೂ ವೇಣೂರಿನ ತಿಮ್ಮಣ್ಣ ಅಜಿಲನಿಗೂ ಹಣದ ವಿಷಯ ವಿವಾದವು ಬಂದು ಇಬ್ಬರೂ ಯುದ್ಧಕ್ಕೆ ಸಿದ್ಧರಾದರು. ತಿಮ್ಮಣ್ಣಾಜಿಲನ ಸೇನಾಧಿಪತಿಯಾದ ಪೆರಂಜೆಗುತ್ತಿನ ದೇವಪೂಂಜನ ಸೈನ್ಯಕ್ಕೂ, ಬಂಗರಾಜನ ಸೇನಾಧಿಪತಿಯಾಗಿದ್ದ ಮಣಿಗುತ್ತಿನ ದುಗ್ಗಣಕೊಂಡೆಯ ಸೈನ್ಯಕ್ಕೂ, ಬಂಟವಾಳದ ಹತ್ತಿರವಿರುವ ಮಣಿ ಗ್ರಾಮದ ಚಂಡತಿಮಾರು ಎಂಬ ಸ್ಥಳದಲ್ಲಿ ಯುದ್ಧವಾಗಿ ದುಗ್ಗಣಕೊಂಡೆಯು ಕೊಲ್ಲಲ್ಪಟ್ಟನು. ದುಗ್ಗಣ ಕೊಂಡೆಯ ತಲೆ ಬಿದ್ದ ಸ್ಥಳದಲ್ಲಿ ಈಗ ಸ್ವಲ್ಪ ಮರಗಳು ಇವೆ. ಆ ಸ್ಥಳವನ್ನು ನೆನಪಿಗಾಗಿ ಸಾಗುವಳಿಮಾಡದೆ ಹಾಗೆಯೇ ಇಟ್ಟಿದ್ದಾರೆ. ಯುದ್ಧವಾದ ಮೇಲೆ ದೇವಪೂಂಜನಿಗೂ ಅಜಿಲನಿಗೂ ವೈಮನಸ್ಸು ಉಂಟಾಗಿ ದೇವಪೂಂಜನು ಬಂಗರ ಸೈನ್ಯದ ಸೇನಾಧಿಪತಿಯಾದನು.

ಕ್ರಿ. ಶ. 1556ರಲ್ಲಿ ಬೈಲಂಗಡಿ ಯುದ್ಧದಲ್ಲಿ ಲಕ್ಷ್ಮಣ ಬಂಗರಾಜನು ಕಾಲವಾದನು.

**15. 3ನೇ ಕಾಮರಾಯ.** ಕ್ರಿ. ಶ. 1556--1612. ಲಕ್ಷ್ಮಣ ಬಂಗರಾಜನ ಅಳಿಯನಾದ ಕಾಮರಾಯನು ಶಾ. ಶ. 1478ನೇ ನಳ ಸಂ||ದ ಫಾಲ್ಗುಣ ಶು. ೫ಲ್ಲಿ ಪಟ್ಟಕ್ಕೆ ಬಂದನು. ಕಾಮರಾಯನು ಆಳುವ ಕಾಲದಲ್ಲಿ ಕ್ರಿ. ಶ. 1611ರ ವರೆಗೆ ಬಂಗ ರಾಜನ ಅರಮನೆಯು ಮಂಗಳೂರಿನಲ್ಲಿಯೇ ಇತ್ತು. 1611ರಲ್ಲಿ ಗೋವೆಯ ಒಬ್ಬ ದೊಡ್ಡ ಮನುಷ್ಯನಾದ ಮಿಕಾಯೆಲ್ ಡಿ'ಆಲ್ಮಿಡಾ ಎಂಬವನು ಬಂಗರಾಜನ ಸ್ನೇಹವನ್ನು ಮಾಡಿಕೊಂಡದ್ದರಿಂದ ಕಾಮ ರಾಯನು ತನ್ನ ಅರಮನೆಯ ವಿಚಿತ್ರವಾದ ವಸ್ತುಗಳನ್ನು ತೋರಿಸು ವಾಗ ಅದರಲ್ಲಿರುವ ಒಂದು ಕ್ರೂಜೆಯನ್ನು ಆ ಸಾಹುಕಾರನು ನೋಡಿ ಅದನ್ನು ತನಗೆ ಕೊಡಬೇಕೆಂದು ಹೇಳಿದನು. ಬಂಗರಾಜನು ಅದು ತನಗೆ ಸಂತಾನ ಪಾರಂಪರ್ಯವಾಗಿ ಬಂದ ಒಂದು ವಸ್ತು ವೆಂದು ಹೇಳಿ ಅದನ್ನು ಕೊಡಲಿಕ್ಕೆ ಒಪ್ಪಲಿಲ್ಲ. ಹೇಗಾದರೂ ಬೇರೆ ಹೆಚ್ಚು ಬೆಲೆಯುಳ್ಳ ವಸ್ತುಗಳನ್ನು ಕೊಟ್ಟು ಆ ಸಾಹುಕಾರನು ಅದನ್ನು ಪಡಕೊಂಡನು.

ಕಾಮರಾಯನ ತಂಗಿಯಾದ ಕಾಮಲಾದೇವಿಯನ್ನು ಕಾರ್ಕಳದ ದಾವಣಿ ಇಮ್ಮಡಿ ಭೈರವರಾಯನು ಮದುವೆಮಾಡಿಕೊಳ್ಳುವದೆಂತ ನಿಶ್ಚಯವಾಗಿ ತಾಳಿಬಂದಿ ಸಹ ಆಗಲು, ಅಷ್ಟರಲ್ಲಿ ಈ ಭೈರವ ರಾಯನು ಮೂಡಬಿದರೆಯ ಚೌಟರಾಣಿ ತಿರುಮಲದೇವಿಯನ್ನು ಯುದ್ಧದಲ್ಲಿ ಕೊಂದುದ್ದರಿಂದ ಸ್ತ್ರೀಹತ್ಯ ಮಾಡಿದವನಿಗೆ ತನ್ನ ತಂಗಿ ಯನ್ನು ಕೊಡುವದಿಲ್ಲವೆಂದು ಕಾಮರಾಯನು ಹೇಳಿದನು. ಆಗ ಭೈರವರಾಯನು ತನಗೆ ಅವಮಾನವಾಯಿತೆಂದು ತಿಳಿದು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂಗರಾಜನ ಸಂಗಡ ಯುದ್ಧಕ್ಕೆ

ಬಂದನು. ಕಾಮುರಾಯನು ತನ್ನ ಸೈನ್ಯದೊಡನೆ ಹೊರಟುಹೋಗಿ ಕೈೂಲಗ್ರಾಮದ ಹತ್ತಿರ ಯುದ್ಧವಾಗಿ ಕಾಮುರಾಯನು ಸೋತು ಉಳಿದ ಸೈನ್ಯವನ್ನು ತೆಗೆದುಕೊಂಡು ಕೇರಳ ದೇಶಕ್ಕೆ ಓಡಿಹೋದನು.

ಮೂಡಬಿದರೆಯ ಚೌಟರಾಣಿಯಾದ ಅಬ್ಬಕ್ಕಾದೇವಿಯನ್ನು ಲಕ್ಷ್ಮಣ ಬಂಗರಾಜನು ಮದುವೆಯಾಗಿದ್ದನು. ಅಬ್ಬಕ್ಕಾದೇವಿಯು ಉಳ್ಳಾಲ ಅರಮನೆಯಲ್ಲಿಯೇ ಇದ್ದಳು. ಕಾಮುರಾಯನ ಕಾಲದಲ್ಲಿ ಅತ್ತೆಯಾದ ಅಬ್ಬಕ್ಕಾದೇವಿಗೂ ಅಳಿಯನಾದ ಕಾಮುರಾಯನಿಗೂ ದ್ವೇಷವು ಉಂಟಾಗಿ ಉಳ್ಳಾಲವನ್ನು ತನ್ನ ಸ್ವಾಧೀನಮಾಡಿಕೊಳ್ಳ ಬೇಕೆಂದು ಕಾಮುರಾಯನು ಪೋರ್ತುಗೀಸರೊಡನೆ ಸ್ನೇಹವನ್ನು ಬೆಳಸಿದನು. ಇಕ್ಕೇರಿ ವೆಂಕಟಪ್ಪ ನಾಯಕನೊಡನೆಯೂ ದ್ವೇಷವನ್ನು ಬೆಳಸಿಕೊಂಡನು. ಪೋರ್ತುಗೀಸರು ಉಳ್ಳಾಲಕ್ಕೆ ಎದುರಾಗಿ ಮಂಗ ಳೂರಿನಲ್ಲಿ ಈಗಿನ ದೀಪಸ್ತಂಬದ ಹತ್ತಿರ "ಸೆವೋಸಿಬಾಸ್ಟಿಯನ್" ಎಂಬ ಕೋಟೆಯನ್ನು ಕಟ್ಟಿಸಿದರು. ಆ ಕೋಟೆಯ ಅಸ್ತಿವಾರದ ಕಲ್ಲು ಕಟ್ಟಡವು ಈಗಲೂ ಉಳಿದಿದೆ.

**16. 3ನೇ ಲಕ್ಷ್ಮಪ್ಪರಸ ಬಂಗರಾಜ.** ಕ್ರಿ. ಶ. 1612—1629. ಕಾಮುರಾಯನ ತರುವಾಯ ಅವನ ಅಳಿಯ ಲಕ್ಷ್ಮಣ ಬಂಗರಾಜನು ಶಾ. ಶ. 1534ನೇ ಪರಿಧಾವಿ ಸಂ।ರದ ಆಶ್ವೀಜ ಬ। ೧೨ಲ್ಲಿ ಪಟ್ಟಕ್ಕೆ ಬಂದನು. ಈ ಅರಸನೂ ಪೋರ್ತುಗೀಸರ ಸಂಗಡ ಒಪ್ಪಂದವನ್ನು ಮಾಡಿ ವೆಂಕಟಪ್ಪನಾಯಕನಿಗೆ ಕಪ್ಪಕೊಡದೆ ಇದ್ದುದ ರಿಂದಲೂ ಪೋರ್ತುಗೀಸರ ಹಾವಳಿಯು ಹೆಚ್ಚಾಗಿ, ಇಕ್ಕೇರಿಯವರಿಗೆ ಸಿಕ್ಕುವ ಬಂದರದ ಸುಂಕವು ಕಡಿಮೆಯಾದ್ದರಿಂದಲೂ ವೆಂಕಟಪ್ಪ ನಾಯಕನು 12 ಸಾವಿರ ಸೈನ್ಯವನ್ನು ತೆಗೆದುಕೊಂಡು ಬಂದು ಪೋರ್ತುಗೀಸರನ್ನು ಸೋಲಿಸಿ ಮಂಗಳೂರು ಕೋಟೆಯನ್ನು ಹಿಡಿ ದನು. ಲಕ್ಷ್ಮಣ ಬಂಗರಾಜನು ಕಾಸರಗೋಡಿಗೆ ಓಡಿಹೋದನು. ಅನಂತರ ಪೋರ್ತುಗೀಸರಿಗೂ ವೆಂಕಟಪ್ಪನಾಯಕನಿಗೂ ಒಪ್ಪಂದವಾಗಿ

ಬಂಗರಾಜನು ಮಂಗಳೂರಿಗೆ ಬಂದು ನಿಲ್ಲಬಹುದೆಂದೂ ಈ ರಾಜನು ದಂಗೆ ಎಬ್ಬಿಸದ ಹಾಗೆ ಪೋರ್ತುಗೀಸರು ಜವಾಬ್ದಾರರಾಗಿರಬೇಕೆಂದೂ ಕರಾರಾಯಿತು. ಲಕ್ಷ್ಮಣ ಬಂಗರಾಜನು ಇದಕ್ಕೆ ಒಪ್ಪಿ ಮಂಗಳೂರಿಗೆ ಬಂದನು. ವೆಂಕಟಪ್ಪನಾಯಕನ ತರುವಾಯ ಅವನ ಮಗನಾದ ವೀರಭದ್ರಪ್ಪನಾಯಕನು ಕ್ರಿ. ಶ. 1630ರಲ್ಲಿ ಪಟ್ಟಕ್ಕೆ ಬಂದನು. ಆದರೆ ನಿಜವಾದ ಅಧಿಕಾರವೆಲ್ಲವೂ ಶಿವಪ್ಪನಾಯಕನ ಕೈಯಲ್ಲಿದ್ದು ಅವನೇ ನಿಜವಾದ ರಾಜನೂ ದಳವಾಯಿಯೂ ಆಗಿದ್ದನು. ಜೈನ ರಾಜರಲ್ಲಿ ಮುಖ್ಯಸ್ಥನಾದ ಬಂಗರಾಜನು ಲಿಂಗಾಯತರಾದ ಇಕ್ಕೇರಿಯವರ ಕೈಕೆಳಗಿರುವುದಕ್ಕೆ ಸಂತೋಷವಿಲ್ಲದೆ ಆಗಾಗ್ಗೆ ದಂಗೆ ಎಬ್ಬಿಸುತ್ತಿದ್ದನು. ಕೊಲತ್ತರಸನು ಬಂಗರಾಜನಿಗೆ ಸಹಾಯಮಾಡುತ್ತಿದ್ದನು. ಶಿವಪ್ಪನಾಯಕನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದು ಬೇಕಲದ ವರೆಗಿನ ಕೊಲತ್ತರಸನ ರಾಜ್ಯವನ್ನು ಹಿಡಿದನು. ಹಿಂದಕ್ಕೆ ಬಂದು ಇಕ್ಕೇರಿಗೆ ಹೋಗುವಾಗ ಬಂಗರಾಜನು 3500 ವರಹ ಕಪ್ಪಕೊಡಬೇಕೆಂದು ನಿಶ್ಚಯಿಸಿ ಹೊರಟು ಹೋದನು.

**17. 4ನೇ ಹಾವಳಿ ಬಂಗರಾಜ ಒಡೆಯ.** ಕ್ರಿ. ಶ. 1628—1631. ಲಕ್ಷ್ಮಣ ಬಂಗರಾಜನ ತರುವಾಯ ಅವನ ಅಳಿಯ ಹಾವಳಿ ಬಂಗರಾಜನು ಶಾ. ಶ. 1550ನೇ ವಿಭವ ಸಂ|ದ ಮಾಘ ಬ. ೭ಲ್ಲಿ ಪಟ್ಟಕ್ಕೆ ಬಂದನು. ಕ್ರಿ. ಶ. 1631ರಲ್ಲಿ ಇಕ್ಕೇರಿಯ ಸರ್ವಾಧಿಕಾರಿಯಾಗಿದ್ದ ಶಿವಪ್ಪನಾಯಕನು ಈ ಹಾವಳಿ ಬಂಗರಾಜನು ನೇಮಕಮಾಡಿದ 3500 ವರಹಗಳನ್ನು ಕೊಡದೆ ಇದ್ದುದಕ್ಕಾಗಿ ಈ ರಾಜನನ್ನು ಇಕ್ಕೇರಿಗೆ ಕರೆಸಿ ಪಹರೆಯಲ್ಲಿಟ್ಟನು. ಆಗ ಪಾಣೆಮಂಗಳೂರಿನ ಹತ್ತಿರವಿರುವ ಮೊಗರನಾಡಿನಲ್ಲಿರುವ ಗೌಡ ಸಾರಸ್ವತ ಬ್ರಾಹ್ಮಣ ದಾಮರ್ಸ ಪೈ ಎಂಬ ದೊಡ್ಡ ಸಾಹುಕಾರನು ಈ ಹಣಕ್ಕೆ ಜಾಮೀನಾಗಿ ನಿಂತು ಅರಸನನ್ನು ಬಿಡಿಸಿದನು.

ಇದಕ್ಕಾಗಿ ವೀರನರಶಿಂಹ ಹಾವಳಿ ಬಂಗರಾಜನು ಮೊಗರನಾಡು ಸಾವಿರ ಸೀಮೆಯಿಂದ ಮೊಗರನಾಡು ದಾಮರ್ಸ ಪೈ ದೇವಸ್ಥಾನಕ್ಕೆ ಉಂಬಳಿ ಬಿಟ್ಟನು.

**18. 3ನೇ ಶಂಕರದೇವಿ. ಕ್ರಿ. ಶ. 1631—1653.** ಹಾವಳಿ ಬಂಗರಾಜನ ತರುವಾಯ ಅವನ ತಂಗಿ ಶಂಕರದೇವಿಯು ಶಾ. ಶ. 1553 (ಕ್ರಿ. ಶ. 1631)ನೇ ಪ್ರಜೋತ್ಪತ್ತಿ ಸಂ|ರದ ಜ್ಯೇಷ್ಠ ಶು| ೧೦ರಲ್ಲಿ ಪಟ್ಟಕ್ಕೆ ಬಂದಳು. ಇಕ್ಕೇರಿ ಸಂಸ್ಥಾನಕ್ಕೆ ಕೊಡಬೇಕಾದ ಕಪ್ಪವನ್ನು ಕೊಡದೆ ಇದ್ದುದಕ್ಕಾಗಿ ಶಾ. ಶ. 1562ನೇ ವಿಕ್ರಮ ಸಂ|ರದಲ್ಲಿ ಇಕ್ಕೇರಿ ಅರಸನಾದ ವೀರಭದ್ರಪ್ಪನಾಯಕನು ನಗರಕ್ಕೆ ಬರಬೇಕೆಂದು ಹೇಳಿಕಳುಹಿಸಲು ಹೆಂಗಸಾದ್ದರಿಂದ ಬಹಳ ಬೇಸರಪಟ್ಟು ನಗರಕ್ಕೆ ಹೋಗದೆ ಕೋಲತ್ತರಸನ ಸೀಮೆಗೆ ಸಾಮಾಜಿಕ ರೊಡನೆ ಹೊರಟುಹೋದಳು. ಆಗ ಶಂಕರದೇವಿಯ ಸೇನಾಧಿಪತಿಯಾದ ಸಜೀಪನಡುಗುತ್ತಿನ ತಿಮ್ಮತಿಕಾರಿಯು ಕೋಲತ್ತರಸನ ಸಂಗಡ ಆಲೋಚಿಸಿ ಇಬ್ಬರೂ ನಗರಕ್ಕೆ ಹೋಗಿ ಶಂಕರದೇವಿಯ ಬಿನ್ನವತ್ತಲೆಯನ್ನು ತಿಮ್ಮತಿಕಾರಿಯು ವೀರಭದ್ರಪ್ಪನಾಯಕನಿಗೆ ಕೊಟ್ಟು ಕೋಲತ್ತರಸನು ಶಂಕರದೇವಿಗೆ ಬಂದ ದೀನಾವಸ್ಥೆಯ ಕುರಿತು ಪ್ರಸ್ತಾಪಿಸಲು ವೀರ ಭದ್ರಪ್ಪನಾಯಕನು ಒಂದು ಕರಾರನ್ನು ತಯಾರಿಸಿದನು. (ಈ ಕರಾರಿನ ಯಥಾ ನಕಲನ್ನು ಈಗಿನ ಪದ್ಮರಾಜ ಬಂಗರಾಜರು ಕೊಟ್ಟಿದ್ದನ್ನು ಈ ಪುಸ್ತಕದ ಕಡೇ ಭಾಗದಲ್ಲಿ ಪ್ರತ್ಯೇಕ ಕೊಟ್ಟದೆ.) ಈ ಕರಾರು ಶಾ. ಶ. 1563ನೇ ವಿಷು ಸಂ|ರದ ಫಾಲ್ಗುಣ ಶು| ೧೦ರಲ್ಲಿ ಆಯಿತು. ಈ ಕರಾರಿನ ಪ್ರಕಾರ ಶಂಕರದೇವಿಗೆ ಈ ಕೆಳಗಿನ ಸೀಮೆ ಗಳನ್ನು ವೀರಭದ್ರಪ್ಪ ನಾಯಕನು ಬಿಟ್ಟುಕೊಟ್ಟನು. 1. ಮೇಲು ಬಂಗಾಡಿ ಮಾಗಣೆ, 2. ಕೆಳಬಂಗಾಡಿ ಮಾಗಣೆ, 3. ಬೆಳತಂಗಡಿ ಮಾಗಣೆ, 4. ಮಾಯಬಳಲು ಮಾಗಣೆ, 5. ಉಪ್ಪಿನಂಗಡಿ ಮಾಗಣೆ, 6. ಕಜೆಕಾರು ಮಾಗಣೆ, 7. ನೀರುಮಾರ್ಗದ ಸೀಮೆ, 8. ಸಜೀಪದ

ಸೀಮೆ 9. ಮಂಜೇಶ್ವರ ಸೀಮೆ 10. ಪುದು ಗ್ರಾಮ 11. ಹರೆಕಳ ಮಾಗಣೆ 12. ಮಣಿನಾಲ್ಕೂರು ಸೀಮೆ 13. ಕೊಳೂರು ಕರ್ಣಂತಾಯ ಬಲ್ಲಾಳನ ಸೀಮೆಯಿಂದ ಕೊಳೂರು ಗ್ರಾಮ 14. ಮೊಗರನಾಡು ಸಾವಿರ ಸೀಮೆಯಿಂದ ನಂದಾವರ ಗ್ರಾಮ 15. ಬಂಟವಾಳ ಪೇಟೆ 16. ತುಂಬೆ ಬೈಪಾಡಿ 17. ಅಮುಟಾಡಿ, ಅಡ್ಯಾರು ಮತ್ತು ಮಂಜಿ ಗ್ರಾಮಗಳು 18. ಬಂಟರಬೈಲು (ಬಂಟವಾಳ ಮೂಡು) 19. ಪಾಮುಂಜೂರುಗುತ್ತು 20. ಕಣಿಲದ ಗುತ್ತು ಈ ಸೀಮೆಗಳಲ್ಲದೆ 1. ಮಂಜೇಶ್ವರ 2. ಉಪ್ಪಿನಂಗಡಿ 3. ಬೆಳತಂಗಡಿ 4. ಬಂಗಾಡಿ 5. ಇನವಳ್ಳಿ ಸುಂಕ (ವಳ ರಾಜ್ಯ) 6. ಪಾಣೆ ಮಂಗಳೂರು ಕರೆ ಸುಂಕ, ಪೇಟೆ ಸುಂಕ ಈ 6 ಸುಂಕ ವಸೂಲು ಮಾಡುವ ಹಕ್ಕನ್ನೂ ಕೊಟ್ಟನು. ಈ ಕರಾರಿನ ಪ್ರಕಾರ ಮಂಗಳೂರು ಪಟ್ಟಣವು ಶಂಕರದೇವಿಯ ಕೈಯಿಂದ ತಪ್ಪಿಹೋಯಿತು.

ಅಷ್ಟರ ವರೆಗೆ ಬಾಕಿ ಇರುವ ಕಪ್ಪದ ಹಣ 14,350 ವರಹದಲ್ಲಿ 10,000 ವರಹವನ್ನು ನಗದಾಗಿ ಕೊಟ್ಟು ಬಾಕಿ ಉಳಿದ ಹಣಕ್ಕೆ ಕೊಡೆಯಾಲದ ಮಾಗಣೆಯನ್ನೂ ಮಂಗಳೂರು ಸುಂಕವನ್ನೂ ಇಕ್ಕೇರಿ ಸಂಸ್ಥಾನಕ್ಕೆ ಬಿಟ್ಟುಕೊಟ್ಟನು. ಮುಂದೆ 5000 ವರಹ ಕಪ್ಪ ಕೊಡ ಬೇಕೆಂತ ನಿಶ್ಚಯಿಸಿದನು. ಬಂಗರಮಂಜೇಶ್ವರ, ಉಪ್ಪಿನಂಗಡಿ, ಬೆಳತಂ ಗಡಿ, ನಂದಾವರ ಕೆಳಬಂಗಾಡಿಯಲ್ಲಿರುವ ಕೋಟೆಗಳನ್ನು ನೆಲಸಮ ಮಾಡಬೇಕೆಂದೂ ಕರಾರಾಯಿತು.

ವೀರ ಭದ್ರಪ್ಪನಾಯಕನು ಕರಾರಾದ ಮೇಲೆ ಕೊಲತ್ತರಸ ನಿಗೂ ತಿಮ್ಮತಿಕಾರಿಗೂ ಉಡುಗೆ ಉಚಿತಗಳನ್ನು ಕೊಟ್ಟು ಕಳುಹಿಸಿ ದನು. ಕೊಲತ್ತರಸನು ಊರಿಗೆ ಬಂದು ಎಲ್ಲಾ ಸಂಗತಿಯನ್ನು ಶಂಕರದೇವಿಗೆ ಹೇಳಲು ಅವಳು ಬಹಳ ಸಂತೋಷಪಟ್ಟು ಕೊಲತ್ತರಸ ನಿಗೆ ಉಡುಗೆ ಉಚಿತಗಳನ್ನು ಕೊಟ್ಟು ನಂದಾವರದ ಅರಮನೆಗೆ ಸಾಮಾ ಜಿಕರೊಡನೆ ಬಂದು ಸೇರಿದಳು. ಆ ಮೇಲೆ ಶಂಕರದೇವಿಯು

ಕೊಳೂರಿನಲ್ಲಿ ಅರಮನೆಯನ್ನು ಕಟ್ಟಿಸಿದಳು. ಅಂದಿನಿಂದ ಕೊಳೂರಿಗೆ ಬಂಗ್ರಕೊಳೂರು ಎಂದು ಹೆಸರಾಯಿತು.

ಶಂಕರದೇವಿಯು ಕ್ರಿ. ಶ. 1643 (ಶಾ. ಶ. 1565)ರಲ್ಲಿ ಬಂಡಿ ಎಲ್ಲಪ್ಪನಾಯಕನ ಮಗ ದಾಸಣ್ಣನಾಯಕನಿಗೂ, ಶಾ. ಶ. 1566 ತಾರಣ ಸಂ|ರದಲ್ಲಿ (ಕ್ರಿ. ಶ. 1644) ವೆಂಕಟಪತಿ ದೇವರಿಗೂ ಉಂಬಳಿ ಬಿಟ್ಟಿರುತ್ತಾಳೆಂತ 2 ತಾಮ್ರ ಶಾಸನಗಳಿಂದ ಕಾಣುತ್ತದೆ.

**19. 5ನೇ ಹಾವಳಿ ಬಂಗರಾಜ.** ಕ್ರಿ. ಶ. 1653—1699. ಶಂಕರದೇವಿಯ ತರುವಾಯ ಅವಳ ಮಗ ಹಾವಳಿ ಬಂಗ ರಾಜನು ಶಾ. ಶ. 1575ನೇ ವಿಜಯ ಸಂ|ರದ ಚೈತ್ರದ ಶು| ೧೦ ರಲ್ಲಿ ಪಟ್ಟಕ್ಕೆ ಬಂದು 46 ವರ್ಷ ರಾಜ್ಯವಾಳಿದನು.

**20. 4ನೇ ಲಕ್ಷ್ಮಪ್ಪರಸ ಬಂಗರಾಜ.** ಕ್ರಿ. ಶ. 1699—1767. ಹಾವಳಿ ಬಂಗರಾಜನ ಅಳಿಯ ಲಕ್ಷ್ಮಪ್ಪರಸ ಬಂಗರಾಜನು ಶಾ. ಶ. 1621ನೇ ಪ್ರಮಾದಿ ಸಂ|ರದ ವೈಶಾಖ ಶು| ೫ರಲ್ಲಿ ಪಟ್ಟಕ್ಕೆ ಬಂದನು. ಕ್ರಿ. ಶ. 1722ರಲ್ಲಿ ಈ ಅರಸನು ಇಕ್ಕೇರಿ ಸಂಸ್ಥಾನಕ್ಕೆ ಕೊಡಬೇಕಾದ ಕಪ್ಪವನ್ನು ಕೊಡದೆ ಇದ್ದುದಕ್ಕಾಗಿ ಆತನನ್ನು ನಗರಕ್ಕೆ ಕರೆಯಿಸಿ ಸೆರೆಯಲ್ಲಿಟ್ಟನು. ಆಗ ಅಲ್ಲಿ ಪ್ರಧಾನಿಯಾಗಿದ್ದ ವೋಟೆಗೆ ಸಂಗಪ್ಪಶೆಟ್ಟಿಯ ಮಗ ನಿರ್ವಾಣಶೆಟ್ಟಿಯು ಜಾಮೀನು ನಿಂತು ಈ ಬಂಗರಾಜನನ್ನು ಸೆರೆಯಿಂದ ಬಿಡಿಸಿದನು ಅದಕ್ಕಾಗಿ ಲಕ್ಷ್ಮಪ್ಪರಸ ಬಂಗರಾಜನು ಕ್ರಿ. ಶ. 1723ರಲ್ಲಿ (ಶಾ. ಶ. 1645)ನೇ ಶೋಭಕೃತು ಸಂ|ರದ ಫಾಲ್ಗುಣ ಬ| ೧೦ರಲ್ಲಿ ಮಂಚಿ ಗ್ರಾಮದಲ್ಲಿ ನಿರ್ಬೈಲು ಬಾಳಾಜೆಬೈಲು ಗುಂಡಿಮಜಲು ಎಂಬ 3 ಸ್ಥಳಗಳನ್ನು ಉಂಬಳಿಯಾಗಿ ಈ ನಿರ್ವಾಣಶೆಟ್ಟಿಗೆ ಬಿಟ್ಟನು. ಈ ಸಂಗತಿಯನ್ನು ತೋರಿಸುವ ವಾಲೆ ಶಾಸನವು ನಿರ್ವಾಣಶೆಟ್ಟಿಯ ಸಂತತಿಯವರಾದ ವಿಟ್ಲ ಸೀಮೆಯ ಕಾಡುಮಠದ ರಾಮಯ್ಯಸೆಟ್ರಲ್ಲಿದೆ.

ಕ್ರಿ. ಶ. 1763ರಲ್ಲಿ ನವಾಬ ಹೈದರಲ್ಲಿಯು ನಗರ ಸಂಸ್ಥಾನವನ್ನು ಹಿಡಿದನು. ಆಗ ಕನ್ನಡ ಜಿಲ್ಲೆಯು ಹೈದರನ ವಶಕ್ಕೆ ಬಂತು. ಹೈದರನು ಮೂಡಬಿದರೆಯ ದಾರಿಯಾಗಿ ಮಂಗಳೂರಿಗೆ ಬಂದಾಗ ಬಂಗರಾಜನು ರಾಜವೈಭವದಿಂದ ಸಾಮಾಜಿಕರನ್ನು ಕರಕೊಂಡು ಮಂಗಳೂರಿಗೆ ಹೋಗಿ ಹೈದರನ ಭೇಟಿಮಾಡಲು, ಹೈದರನು ಎದ್ದು ನಿಂತು ಆಲಿಂಗನಮಾಡಿ ಕುಳ್ಳಿರಿಸಿ ಸೀಮೆಯ ಸಮಾಚಾರವನ್ನು ವಿಚಾರಿಸಿ ಸೀಮೆಯಿಂದ 14,000 ವರಹ ಕಪ್ಪಕೊಡಬೇಕೆಂದು ನಿಶ್ಚಯಿಸಿದನು. ಅನಂತರ ಲಕ್ಷ್ಮಪ್ಪರಸನಿಗೆ ಈ ಕೆಳಗಿನ ಉಡಿಗೆ ಉಚಿತಗಳನ್ನು ಕೊಟ್ಟನು. ಮುಂಡಾಸು 1, ಜೋಡುಶಾಲು 1, ಕುತ್ತನಿಯ ಥಾನು 1, ಕುದುರೆ 1. ಸಾಮಾಜಿಕರಿಗೂ ಅವರವರ ತರವರಿತು ಯೋಗ್ಯವಾದ ಉಡುಗೆ ಉಚಿತಗಳನ್ನು ಕೊಟ್ಟನು. ಬಂಗರಾಜನು 3 ದಿವಸಗಳ ವರೆಗೆ ಮಂಗಳೂರಿನಲ್ಲಿಯೇ ನಿಂತು, ಸಾಮಾಜಿಕರೊಡನೆ ನಂದಾವರದ ಅರಮನೆಗೆ ಬಂದನು. ಹೈದರಾಲಿಯು ಮಂಗಳೂರು ಜಿಲ್ಲೆಯ ಅಧಿಕಾರಿಯಾಗಿದ್ದ ದಾಮಾಜಿಪಂತನಿಗೆ ಬಂಗರಾಜನ ವಿಷಯವಾಗಿ ಎಲ್ಲಾ ಸಂಗತಿಗಳನ್ನು ತಿಳಿಸಿದನು. 1765ರ ವರೆಗೆ ಯಾವ ತರದ ಕಷ್ಟಗಳಿಲ್ಲದೆ ಲಕ್ಷ್ಮಪ್ಪರಸನು ಆಳಿಕೊಂಡಿದ್ದನು.

ಕ್ರಿ. ಶ. 1766ರಲ್ಲಿ ದಾಮಾಜಿಪಂತನ ಅಧಿಕಾರವು, ಚಿರಕಲದ ಸುಲ್ತಾನ ಆಲಿರಾಜನ ತಮ್ಮ ಶೇಕಾಲಿಗೆ ಸಿಕ್ಕಿತು. ಈ ಶೇಕಾಲಿಯು ಬಂಗರು, ಚೌಟರು, ಮೂಲರು, ಸಾವಂತರು, ಅಜಿಲರು ಇವರ ರಾಜ್ಯಗಳನ್ನು ಸ್ವಾಧೀನಪಡಿಸಿಕೊಂಡನು. ನಂದಾವರದ ಅರಮನೆಗೆ ಸೈನಿಕರನ್ನು ಕಳುಹಿಸಿ ಅರಮನೆಯನ್ನು ಸುಲಿಗೆಮಾಡಿಸಿದನು. ಅರಸನನ್ನು ಸೆರೆಯಲ್ಲಿಟ್ಟನು. ಈ ಸಮಯದಲ್ಲಿ ಮಂಗಳೂರು ಕೋಟೆಗೆ ಮಿಚ್ಚಾರು ಸುಮಲ್ಲಿಬೇಗ್ ಎಂಬವನು ಖಿಲ್ಲೆದಾರನಾಗಿದ್ದನು. ಈ ಖಿಲ್ಲೆದಾರನು ದಯಾಳುವಾಗಿದ್ದನು. ಇವನು ಶೇಕಲ್ಲಿಯು ಬಂಗರಾಜನಿಗೆ ಮಾಡಿದ ಅನ್ಯಾಯವನ್ನೆಲ್ಲಾ ಹೈದರಲ್ಲಿಗೆ ತಿಳಿಸಿದನು.

ಹೈದರನು ಕೂಡಲೇ ಬಂಗರಾಜನನ್ನು ಸೆರೆಯಿಂದ ಬಿಡಿಸಿ ನಗರಕ್ಕೆ ಕಳುಹಿಸಬೇಕೆಂದು ಪರವಾನೆ ಕಳುಹಿಸಿದನು. ಲಕ್ಷ್ಮಪ್ಪರಸನು ನಗರಕ್ಕೆ ಹೋಗಿ ಶೇಕಲ್ಲಿಯು ಮಾಡಿದ ಕೆಲಸಗಳ ವಿಷಯ ತಿಳಿಸಿದನು. ಹೈದರನು ಬಹಳ ಕನಿಕರಪಟ್ಟು ರಾಜ್ಯವನ್ನು ಪುನಹ ಬಿಟ್ಟುಕೊಟ್ಟನು. ಶೇಕಲ್ಲಿಯು ತಿರಿಗಿ ಬಂಗರಾಜನಿಗೆ ದೂರಿ ಕಾಗದ ಬರೆದು ಪುನಹ ರಾಜ್ಯವನ್ನು ಸೆಳಕೊಂಡನು. ಲಕ್ಷ್ಮಪ್ಪರಸನು ಈ ದುಃಖದಿಂದಲೇ ಕಾಲವಾದನು.

**21. 4ನೇ ಕಾಮಪ್ಪರಸ ಬಂಗರಾಜ.** ಕ್ರಿ. ಶ. 1767—1799. ಲಕ್ಷ್ಮಪ್ಪರಸ ಬಂಗರಾಜನ ಅಳಿಯ ಕಾಮಪ್ಪರಸನು ಶಾ. ಶ. 1689ನೇ ಸರ್ವಜಿತು ಸಂ।ರದ ಆಷಾಢ ಶು ೧೦ರಲ್ಲಿ ಪಟ್ಟಕ್ಕೆ ಬಂದನು. ಪಟ್ಟಕ್ಕೆ ಬಂದರೂ ರಾಜ್ಯವು ಈ ವಂಶದವರ ಕೈಯಿಂದ ಪೂರ್ಣವಾಗಿ ತಪ್ಪಿಹೋಯಿತು. ಕ್ರಿ. ಶ. 1768ರಲ್ಲಿ ಇಂಗ್ಲೀಷರು ಮಂಗಳೂರನ್ನು ಹಿಡಿವಾಗ ಹೈದರಾಲಿಯು ಗಟ್ಟ ಇಳಿದು ಮೂಡಬಿದರೆಗೆ ಬಂದು ಪೊನ್ನಚಾರು ಮಠದಲ್ಲಿ ಉಳುಕೊಂಡಿರುವಾಗ ಅಲ್ಲಿಗೆ ಹೋಗಿ ಕಾಮಪ್ಪರಸನು ತನ್ನ ಕಷ್ಟಗಳನ್ನು ಹೈದರಾಲಿಯೊಡನೆ ಹೇಳಲು ಅವನು 100 ವರಹ ಉತ್ಪತ್ತಿ ಇರುವ ಗದ್ದೆ ಮತ್ತು ತೋಟವನ್ನು ಕಾಮಪ್ಪರಸನಿಗೆ ಉಂಬಳಿಯಾಗಿ ಬಿಟ್ಟುಕೊಟ್ಟು ಅದನ್ನು ತಿರಿಗಿ ತೆಗೆದುಕೊಳ್ಳದ ಹಾಗೆ ಶೇಕಲ್ಲಿಗೆ ಅಪ್ಪಣೆಕೊಟ್ಟನು. ಅನಂತರ ಟೀಪು ಸುಲ್ತಾನನು 50 ವರಹ ಉತ್ಪತ್ತಿ ಇರುವ ಗದ್ದೆಗಳನ್ನು ಉಂಬಳಿಯಾಗಿ ಬಿಟ್ಟನು. ಹೀಗೆ 150 ವರಹ ಉತ್ಪತ್ತಿಯಿರುವ ಭೂಮಿಯು ಉಂಬಳಿಯಾಗಿ ಸಿಕ್ಕಿತು. ಮಂಗಳೂರಿನ ಸ್ವಾರಿಬ್ಯಾರಿಯು ಮುಂಚಿನ ದ್ವೇಷದಿಂದ ನಂದಾವರ ಅರಮನೆಯನ್ನು ಸುಲಿಗೆಮಾಡಿ ಸುಮಾರು 362 ವರಹ ಕ್ರಯಬಾಳುವ ಚಿನ್ನ ಬೆಳ್ಳಿಯ ಆಭರಣಗಳನ್ನು ಕೊಂಡುಹೋದನು. ಅನಂತರ ಕಾಮಪ್ಪರಸನನ್ನು ಜಮಲಾಬಾದಿನ ಖಿಲ್ಲೆದಾರನು ಉಪಾಯದಿಂದ ಜಮಾಲಾಬಾದಿಗೆ ಕರೆಯಿಸಿ ಗಲ್ಲಿಗೆ ಹಾಕಿಸಿದನು.

ಕೊಡಗಿನ ಅರಸನ ಕಡೆಯುವನಾದ ಗೋಪಗೌಡನು 1799ರಲ್ಲಿ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಬಂದು, ನಂದಾವರ ಅರಮನೆಗೆ ಮುತ್ತಿಗೆಹಾಕಿ ಅರಮನೆಯಲ್ಲಿರುವ ಹೆಂಗಸರು, ಮಕ್ಕಳು, ದಾಸಿಯರು ಇವರ ಹೊರತು ಚಿನ್ನ, ಬೆಳ್ಳಿ, ಕಂಚು, ತಾಮ್ರದ, ನಗಗಳು, ಪಲ್ಲಕಿ, ಪಟ್ಟೆವಸ್ತ್ರ, ದಂಡಿಗೆ, ಕುದುರೆ, ದನಕರು ಮತ್ತು ಇತರ ವಸ್ತುಗಳು ಸುಮಾರು 850 ವರಹ ಕ್ರಯಬಾಳುವ ವಸ್ತುಗಳನ್ನು ಕೊಂಡು ಹೋದನು. ಗೋಪಗೌಡನು ನಂದಾವರದಿಂದ ಬಂಟವಾಳಕ್ಕೆ ಹೋಗಿ ಸುಲಿಗೆಮಾಡಿ ಮಧ್ಯಾಹ್ನದ ಸಮಯ ನಂದಾವರದ ಅರಮನೆಗೆ ಬೆಂಕಿ ಕೊಡಿಸಿದನು.

**22. 3 ನೇ ಲಕ್ಷ್ಮಪ್ಪರಸ ಬಂಗರಾಜ.** ಕ್ರಿ. ಶ. 1800—1838. ಟೀಪುವು ಶ್ರೀರಂಗಪಟ್ಟಣದ ಯುದ್ಧದಲ್ಲಿ 1799ರಲ್ಲಿ ಮಡಿದುಹೋದ ಮೇಲೆ ಕನ್ನಡ ಜಿಲ್ಲೆಯು ಇಂಗ್ಲಿಷರ ಕೈಕೆಳಗೆ ಬಂತು. ಅಲ್ಲಲ್ಲಿ ಎದ್ದ ದಂಗೆಗಳೆಲ್ಲಾ ನಿಂತಮೇಲೆ ಶಾ. ಶ. 1722ನೇ ರೌದ್ರಿ ಸಂ|ರದಲ್ಲಿ (ಕ್ರಿ. ಶ. 1800) ರೇವನಶಾ ಎಂಬವನು ಕನ್ನಡ ಜಿಲ್ಲೆಯ ಕಲೆಕ್ಟರ ಆಗಿರುವ ಸಮಯದಲ್ಲಿ ಬಂಟವಾಳ ತಹಶೀಲದಾರ ಕೊನೆರಾಯನಿಗೆ ಪರವಾನೆ ಬಂದು ಮಾರ್ಗಶಿರ ಶು. ೧೦ರಲ್ಲಿ ಬಹಳ ಸಂಭ್ರಮದಿಂದ ನಂದಾವರದಲ್ಲಿ ಲಕ್ಷ್ಮಪ್ಪರಸನಿಗೆ ಪಟ್ಟವಾಯಿತು. ಅನಂತರ ಮುಂಚಿನ ಅರಮನೆಯ ಸ್ಥಳದಲ್ಲಿಯೇ ಸಣ್ಣ ಅರಮನೆಯನ್ನು ಕಟ್ಟಿಸಿ ಲಕ್ಷ್ಮಪ್ಪರಸನು ಅದರಲ್ಲಿಯೇ ಇದ್ದನು. ಇಂಗ್ಲೀಷ ಸರಕಾರವು ಬಂಗರಾಜನಿಗೆ 150 ವರಹ ಪ್ರಕಾರ ಶಾ. ಶ. 1723ನೇ ದುರ್ಮತಿ ಸಂ|ರದ (ಕ್ರಿ. ಶ. 1801)ವರೆಗೆ ಕೊಡುತ್ತಿತ್ತು. ಆ ಮೇಲೆ ಅಕ್ಕಿಗೆ ಕ್ರಯ ಹಿಡಿದು 60 ವರಹವನ್ನು 1838ನೇ ದುರ್ಮುಖಿ ಸಂ|ರದ ವರೆಗೆ ತೀರ್ವೆಗೆ ಮುಜ್ರೆ ಕೊಡುತ್ತಾ ಬರುತ್ತಿದ್ದನು.

ಕ್ರಿ. ಶ. 1837ರಲ್ಲಿ ಕಲ್ಯಾಣಪ್ಪನ ಕಾಟಕಾಯಿಯಲ್ಲಿ ಈ ಅರಸನು ಸೇರಿದ್ದರಿಂದ 60 ವರಹ ಕೊಡುವುದನ್ನು ಸಹ ನಿಲ್ಲಿಸಿ

ಈ ಲಕ್ಷ್ಮಪ್ಪರಸನನ್ನು 1838ರಲ್ಲಿ ಮಂಗಳೂರು ಬಿಕ್ರುನಕಟ್ಟೆಯ ಹತ್ತಿರ ನೇಣುಹಾಕಿಸಿದರು.

ಲಕ್ಷ್ಮಪ್ಪರಸನ ತರುವಾಯ 5ನೇ ಕಾಮರಾಜ, ಸಾಂತರಾಜ, ಪದ್ಮರಾಜ ಈ ಮೂವರಿಗೆ ಪಟ್ಟವಾಯಿತು. ಕ್ರಿ. ಶ. 1767ರಿಂದಲೇ ರಾಜ್ಯವು ಇವರ ಕೈಯಿಂದ ತಪ್ಪಿಹೋದರೂ ಶಾಸ್ತ್ರ ಪ್ರಕಾರ ಪಟ್ಟ ವಾಗುತ್ತದೆ. ಈಗ ನಂದಾವರ ಅರಮನೆಯು ನೆಲಸಮವಾದರೂ ಅದರ ಕುರುಹುಗಳು ಕೋಟೆ, ಪೇಟೆ, ಅಗಲವಾದ ಮಾರ್ಗಗಳು ದೇವಸ್ಥಾನ ಗಳು, ಬಸದಿ, ಮಶೀದಿ ಮುಂತಾದವುಗಳು ನಂದಾವರದ ಪೂರ್ವ ಮಹತ್ವವನ್ನು ವ್ಯಕ್ತಗೊಳಿಸುತ್ತವೆ. ಪಟ್ಟಣದ ಸುತ್ತಲೂ ಕೋಟೆ ಇರುವ ಪಟ್ಟಣವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಂದಾವರವು ಒಂದೇ ಯಾಗಿದೆ. ಈಗ ಇರುವ ಪದ್ಮರಾಜ ಬಂಗರು ಬಂಗಾಡಿಯಲ್ಲಿ ಒಂದು ಸಣ್ಣ ಅರಮನೆಯನ್ನು ಕಟ್ಟಿಸಿ ಅಲ್ಲಿಯೆ ವಾಸವಾಗಿದ್ದಾರೆ.

## 25ನೇ ಅಧ್ಯಾಯ

## ಚೌಟ ಅರಸರು.

ಹೊಯ್ಸಳ ರಾಜನಾದ ವಿಷ್ಣುವರ್ಧನನು ತುಳು ರಾಜ್ಯವನ್ನು ಜಯಿಸಿ ರಾಜರನ್ನು ಸೆರೆಹಿಡಿದುಕೊಂಡು ಹೋದನೆಂದು ಮೈಸೂರು ಸಂಸ್ಥಾನದ ಹಳೆ ಬೀಡಿನಲ್ಲಿರುವ ಕ್ರಿ. ಶ. 1117ನೇ ಇಸವಿಯ ಶಾಸನ ದಿಂದ ತಿಳಿದುಬರುತ್ತದೆ. ವಿಷ್ಣುವರ್ಧನನು ಕಾಲವಾದ ನಂತರ ತುಳು ಜೈನರಾಜರು ತಲೆಎತ್ತಿದರು. ಹೀಗೆ ಉನ್ನತಿಗೆ ಬಂದ ಅರಸರಲ್ಲಿ ಚೌಟರಾಜನು ಒಬ್ಬನು. ಈ ವಂಶದವರು ಪುತ್ತಿಗೆ ಮೂಡಬಿದರೆ ಗಳನ್ನು ರಾಜಧಾನಿಯಾಗಿ ಮಾಡುವುದಕ್ಕಿಂತ ಮೊದಲು ಉಳ್ಳಾಲ ರಾಜಧಾನಿಯಲ್ಲಿ ಆಳುತ್ತಿದ್ದರು.

**1. Iನೇ ತಿರುಮಲರಾಯ.** ಕ್ರಿ. ಶ. 1160—1179. ತಿರುಮಲರಾಯಚೌಟನು ಅಳಿದುಹೋದ ತನ್ನ ರಾಜ್ಯವನ್ನು ಕ್ರಿ. ಶ 1160ರಲ್ಲಿ ತಿರಿಗಿ ಸ್ಥಾಪನೆಮಾಡಲು ಪ್ರಯತ್ನಿಸಲಾರಂಭಿಸಿದನು. ಈ ತಿರುಮಲಚೌಟನು ಆಗ ಉಳ್ಳಾಲದ ಹತ್ತಿರವಿರುವ ಸೋಮೇಶ್ವರ ಎಂಬ ಗ್ರಾಮದಲ್ಲಿ ವಾಸವಾಗಿದ್ದನು. ಚೌಟವಂಶದ ಕುಲದೇವರು ಉಳ್ಳಾಲ ಸೋಮೇಶ್ವರದ ಸೋಮನಾಥನು. ಈ ದೇವರ ದೇವಸ್ಥಾನವೂ ಅದರ ಭದ್ರತೆಗಾಗಿ ಕಟ್ಟಿದ ಕೋಟೆಯೂ ಈಗಲೂ ಇವೆ. ಅರಮನೆಯು ಉಳ್ಳಾಲದ ಹತ್ತಿರ ತೊಕ್ಕೊಟಿನಲ್ಲಿತ್ತೆಂದು ಅಲ್ಲಿರುವ ಕೋಟೆಯಿಂದಲೂ ಹಾಳುಬಿದ್ದ ಮನೆಯ ಅಧಿಷ್ಠಗಳಿಂದಲೂ ತಿಳುಕೊಳ್ಳಬಹುದು. ಈ ತಿರುಮಲರಾಯನು ಅರಮನೆಯನ್ನು ಜೀರ್ಣೋದ್ಧಾರಮಾಡುವುದಕ್ಕಾಗಿ ಬಿದ್ದುಹೋದ ತನ್ನ ಹಿರಿಯರ ಅರಮನೆಯನ್ನು ಸರಿಪಡಿಸುವಾಗ ಸ್ವಲ್ಪ ದ್ರವ್ಯವು ಸಿಕ್ಕಿತು. ಅನಂತರ ಅರಮನೆಯನ್ನು ತಿರಿಗಿ ಯೋಗ್ಯ ರೀತಿಯಲ್ಲಿ ಕಟ್ಟಿಸಿದನು. ಆ ಮೇಲೆ ತನ್ನ ಹಿರಿಯರ ಪ್ರಜೆಗಳಾಗಿದ್ದ ಉಳ್ಳಾಲದ ಮಾಗಣೆಯವರನ್ನೂ ಸೋಮೇಶ್ವರ ಗ್ರಾಮದವರನ್ನೂ, ತಲಪಾಡಿ ಅಮ್ಮೆಂಬಳ ಮಾಗಣೆಯವರನ್ನೂ, ಬಾಳೆಪುಣಿ, ಕೈರಂಗಳ ಗ್ರಾಮದವರನ್ನೂ ಕರೆಯಿಸಿ ಅವರ ಒಪ್ಪಿಗೆ ಪ್ರಕಾರ ತನ್ನ ರಾಜ್ಯವನ್ನು ಪುನಹ ಸ್ಥಾಪಿಸಿದನು. ಈ ತಿರುಮಲರಾಯನು ಕ್ರಿ. ಶ. 1179ರಲ್ಲಿ ಕಾಲವಾದನು.

**2. Iನೇ ಚನ್ನರಾಯ.** ಕ್ರಿ. ಶ. 1179—1219. ತಿರುಮಲರಾಯನು ಕಾಲವಾದ ನಂತರ ಅವನ ಅಳಿಯನಾದ ಚನ್ನರಾಯನು ಶಾ. ಶ. 1101ನೇ ವಿಕಾರಿ ಸಂ|ರದ ಜ್ಯೇಷ್ಠ ಶು ೫ಯ ದಿವಸ ಪಟ್ಟಕ್ಕೆ ಬಂದನು. ಈ ಅರಸನ ಅಳಿಯನಾದ ವರದಯ್ಯನು ತನ್ನ ಸಂಬಂಧಿಕರಾದ ಸುರಾಲ ತೋಳಾರರಲ್ಲಿ ಹೋಗಿ ಹಿಂತಿರುಗಿ ಬರುವಾಗ ಮಾರ್ಗದಲ್ಲಿ ಪುತ್ತಿಗೆಮಾಗಣೆ ಕಬರಗುಡ್ಡೆ ಬಳಿಯಲ್ಲಿ ಒಂದು ಕಾಸರಕಿನ ಮರದ ಬುಡದಲ್ಲಿ ಕೂತು ಸುತ್ತಲೂ ನೋಡುವಾಗ

ಆ ಸ್ಥಳವು ಅರಮನೆ ಕಟ್ಟಲು ಯೋಗ್ಯವಾದುದೆಂದು ಆಲೋಚಿಸಿದನು. ಅನಂತರ ತನ್ನ ಮಾವನ ಹತ್ತಿರ ಆಲೋಚಿಸಿ ಅಲ್ಲಿಯೇ ಅರಮನೆಯನ್ನು ಕಟ್ಟಿಸಿದನು. ಕಾಸರಕಿನ ಮರದ ಬುಡದಲ್ಲಿ ಕೂತಾಗ ಅರಮನೆ ಕಟ್ಟಲು ಆಲೋಚನೆಯು ಬಂದುದರಿಂದ ಆ ಅರಮನೆಗೆ "ಕಾಯರ ಮಂಜದ" ಅರಮನೆ ಎಂದು ಹೆಸರಿಟ್ಟನು. ಈಗಲೂ ಆ ಅರಮನೆಯು ಹಾಳುಬಿದ್ದು ಅಡಿಸ್ಥಳಮಾತ್ರವೇ ಇದ್ದು ಅದರಲ್ಲಿ ಕಾಡು ಬೆಳೆದು ಇದ್ದರೂ ಆ ಸ್ಥಳಕ್ಕೆ ಕಾಯರಮಂಜ ಅರಮನೆ ಸ್ಥಳವೆಂದು ಹೇಳುತ್ತಾರೆ. ಆ ಮೇಲೆ ಆ ಗ್ರಾಮದವರ ಮನಸ್ಸನ್ನು ಸಂತೋಷಪಡಿಸುವುದಕ್ಕಾಗಿ ಆ ಅರಮನೆಯ ಆಗ್ನೇಯಕ್ಕೆ ಆ ಗ್ರಾಮಸ್ಥರು ನಂಬಿಕೊಂಡು ಬರುವ "ದೈವಂತಿ" ಎಂಬ ದೈವಕ್ಕೆ ಒಂದು ಗುಡಿಯನ್ನು ಕಟ್ಟಿಸಿದನು. ಬಳಿಕ ಸ್ವಲ್ಪ ಸ್ವಲ್ಪ ಸೈನ್ಯವನ್ನು ಕೂಡಿಸಿ, ಸುತ್ತಮುತ್ತಲೂ ಇರುವ ಸೀಮೆಯನ್ನು ಜಯಿಸಬೇಕೆಂಬ ಆಸೆಯು ಹುಟ್ಟಿತು. ಅದೇ ಸಮಯಕ್ಕೆ ಸರಿಯಾಗಿ ಗಟ್ಟದ ಮೇಲಿನಿಂದ ರಾಜತಂತ್ರ ಪ್ರವೀಣರಾದ ಕರ್ಣಾಟಕ ಬ್ರಾಹ್ಮಣರು, ತಿಮ್ಮಪ್ಪಯ್ಯ, ವೆಂಕಟನಾರ್ಣಪ್ಪಯ್ಯ, ನಾಗಭಟ್ಟ ಎಂಬವರು ವರದಪ್ಪನಿದ್ದಲ್ಲಿಗೆ ಬಂದರು. ಆಗ ಅಲ್ಲಿಯೇ ಹತ್ತಿರದಲ್ಲಿದ್ದ ಪುತ್ತಿಗೆ ಸೀಮೆಯನ್ನು ಆಳುತ್ತಿದ್ದ ಸರಳೀಮಂಜದ ತಿಮ್ಮಪ್ಪಯ್ಯ ಬಲ್ಲಾಳನು ಈ ವರದಪ್ಪನು ರಾಜ್ಯವನ್ನು ಬಲಪಡಿಸುವುದನ್ನು ನೋಡಿ ಯುದ್ಧಕ್ಕೆ ಬಂದನು. ಆದರೆ ಯುದ್ಧದಲ್ಲಿ ವರದಪ್ಪನಿಗೆ ಜಯವಾಯಿತು. ಅವನ ಗ್ರಾಮವೂ ಇವನ ವಶಕ್ಕೆ ಬಂತು. ಅನಂತರ ವರದಪ್ಪನು ಬೊಣ್ಯದ ಬೆಟ್ಟಿನ ತಿಮ್ಮಯ್ಯಬಂಗನನ್ನೂ, ಯಾದರ ಬಲ್ಲಾಳನನ್ನೂ ಸೋಲಿಸಿ ಅವರ ಗ್ರಾಮಗಳನ್ನೂ ತನ್ನ ಸ್ವಾಧೀನಮಾಡಿಕೊಂಡು ಅರಮನೆಯನ್ನು ಮುಂಚಿಗಿಂತಲೂ ದೊಡ್ಡದಾಗಿ ಕಟ್ಟಿಸಿದನು. ಆಗ ಮಿಜಾರ ಸೀಮೆಯನ್ನು ಆಳುತ್ತಿದ್ದ ಚನ್ನಪ್ಪರಸ ಎಂಬವನು ವರದಪ್ಪನ ಮೇಲೆ ಕಣ್ಣಿಟ್ಟು ಯುದ್ಧಕ್ಕೆ ಬರಲು, ಸೋಮೇಶ್ವರದಿಂದ ಚನ್ನರಾಯಚೌಟನೂ ಪುತ್ತಿಗೆಯಿಂದ ವರದಪ್ಪನೂ ಸೈನ್ಯ ತಂದು ಚನ್ನಪ್ಪರಸನನ್ನು ಜಯಿಸಿದ ನಂತರ ವರದಪ್ಪನು ಮಿಜಾರ ಮಾಗಣೆಯನ್ನು ತನ್ನ ರಾಜ್ಯಕ್ಕೆ ಕೂಡಿಸಿದನು.

ಆ ಮೇಲೆ ಚನ್ನರಾಯನು ಸಹ ಉಳ್ಳಾಲ ಸೋಮೇಶ್ವರದ ಅರಮನೆಯನ್ನು ಬಿಟ್ಟು ಪುತ್ತಿಗೆ ಅರಮನೆಯಲ್ಲಿಯೇ ನಿಂತನು. ಆದರೆ ಸೋಮನಾಥ ದೇವರ ಪೂಜೆಯು ಪ್ರಸಾದವು ನಿತ್ಯವೂ ಪುತ್ತಿಗೆ ಅರಮನೆಗೆ ಬರುತ್ತಿತ್ತು. ಇದಾದ ಮೇಲೆ ತನ್ನ ರಾಜ್ಯಭಾರವನ್ನು ಕ್ರಮಪಡಿಸಲಾರಂಭಿಸಿದನು. ಕರ್ಣಾಟಕ ಬ್ರಾಹ್ಮಣ ನರ್ಸಪ್ಪಯ್ಯ ಎಂಬವನನ್ನು ಪ್ರಧಾನಿಯಾಗಿ ನಿಯಮಿಸಿ ಪುತ್ತಿಗೆಯಲ್ಲಿ ಅವನಿಗೆ ಭೂಮಿಯನ್ನು ಉಂಬಳಿಬಿಟ್ಟು ಮನೆ ಸಹ ಕಟ್ಟಿಸಿಕೊಟ್ಟನು. ಸೀಮೆಯ ಶಾನಭವಿಕೆಯನ್ನು ವೆಂಕಟನಾರ್ಣಪ್ಪಯ್ಯನಿಗೂ ಕವಳಿಗೆ ಶಾನಭವಿಕೆಯನ್ನು (ಖಜಾನಚಿ) ನಾರ್ಣಪ್ಪಯ್ಯನಿಗೂ ಕೊಟ್ಟು ಅವರನ್ನು ಮೂಡಬಿದರೆಯಲ್ಲಿಯೇ ನಿಲ್ಲಿಸಿದನು. ಈಗ ಮೂಡಬಿದರೆಯ ದೊಡ್ಡ ಮನೆಯವರೆಂದರೆ ಇವರೇ. ಅರಮನೆಯ ಹಾಗಿರುವ ಇವರ ದೊಡ್ಡ ಮನೆಯೂ ದೇವಸ್ಥಾನವೂ ಹಾಳುಬಿದ್ದದ್ದನ್ನು ಈಗಲೂ ನೋಡಬಹುದು. ಪೌರೋಹಿತ್ಯದ ಕೆಲಸವನ್ನು ನಾಗಪ್ಪಯ್ಯನಿಗೆ ಕೊಟ್ಟನು. ಅವಸರದವನಾಗಿ (Personal assistant) ದ್ರಾವಿಡ ಬ್ರಾಹ್ಮಣ ರಾಮಭದ್ರಯ್ಯ ಎಂಬವನಿಗೆ ನೇಮಕ ಮಾಡಿ ಬೆಳವಾಯಿ ಗ್ರಾಮದ ಅಂಬಾಡಿ ಬೈಲಲ್ಲಿ ಸ್ಥಳ ಉಂಬಳಿ ಬಿಟ್ಟನು. ಪುಟ್ಟಯ್ಯ, ಲಕ್ಷ್ಮೀನಾರಾಯಣ ಇವರಿಬ್ಬರಿಗೆ ರಾಯಸದ ಕೆಲಸಕ್ಕೆ ನೇಮಕಮಾಡಿದನು. ಸೈನ್ಯದ ಶಾನಭವಿಕೆಯನ್ನು ವಿಷ್ಣು ಶಾನಭವನಿಗೂ, ಕಂದಾಯ ವಸೂಲುಮಾಡುವ ಶಾನಭವಿಕೆಯನ್ನು ಸ್ಥಾನಿಕ (ಶಿವ) ಬ್ರಾಹ್ಮಣ ನಾರ್ಣಪ್ಪಯ್ಯನಿಗೂ ಕೊಟ್ಟನು. ಇವರ ಕುಟುಂಬದವರಲ್ಲಿ ಕೆಲವರು ಈಗ ಮೂಡಬಿದರೆಯಲ್ಲಿಯೂ ಕೆಲವರು ಪುತ್ತಿಗೆಯಲ್ಲಿಯೂ ಚೌಟರಾಜನು ಉಂಬಳಿಯಾಗಿ ಬಿಟ್ಟ ಭೂಮಿಯನ್ನು ಅನುಭವಿಸುತ್ತಾ ಇದ್ದಾರೆ. ಪದುಮನಾಯಕ, ತಮ್ಮಯ್ಯ ನಾಯಕ, ಕೊಲ್ಲೂರುನಾಯಕ, ತಿಮ್ಮಪ್ಪನಾಯಕ, ಎಂಬ 4 ಮಂದಿ ಬಂಟರನ್ನು ಸೇನಾಧಿಪತಿಗಳಾಗಿಯೂ ನಿಯಮಿಸಿದನು. ಅನಂತರ ಯುದ್ಧದ ಸಮಯದಲ್ಲಿ ತನ್ನ ಪ್ರಜೆಗಳಲ್ಲಿ ಮನೆಗೆ ಒಬ್ಬ ಗಂಡಸಿನ ಪ್ರಕಾರ ಸೈನಿಕನಾಗಿ ಹೊರಡಬೇಕೆಂದು ನಿಯಮಿಸಿದನು.

**3 ದೇವುರಾಯ.** ಕ್ರಿ. ಶ. 1219—1245. ಚನ್ನ ರಾಯನ ತರುವಾಯ ಅವನ ಅಳಿಯ ವರದಪ್ಪನು ದೇವುರಾಯ ಚೌಟ ಎಂಬ ಹೆಸರಿನಿಂದ ಕ್ರಿ ಶ. 1219ನೆಗೆ ಸರಿಯಾದ ಶಾ. ಶ. 1141ನೆಯ ಪ್ರಮಾದಿ ಸಂವತ್ಸರದ ಶ್ರಾವಣ ಶು| ೭ರಲ್ಲಿ ಪಟ್ಟಕ್ಕೆ ಬಂದನು. ಮಾವನ ಕಾಲದಲ್ಲಿಯೇ ಇವನು ರಾಜ್ಯದ ಸ್ಥಿತಿಯನ್ನು ಸರಿಪಡಿಸಿದ್ದರಿಂದ ಇವನ ಆಳಿಕೆಯಲ್ಲಿ ಯಾವ ತರದ ವಿಶೇಷ ಸಂಗತಿಗಳು ನಡಿಯಲಿಲ್ಲ.

**4. 1ನೇ ತಿರುಮಲರಾಯ.** ಕ್ರಿ ಶ. 1245-1283. ದೇವು ರಾಯನು ಕ್ರಿ. ಶ. 1245ರಲ್ಲಿ ಕಾಲವಾಗಲು ಅವನ ಅಳಿಯ ತಿರುಮಲ ರಾಯನು ಶಾ. ಶ. 1167ನೇ ವಿಶ್ವಾವಸು ಸಂ|ರದ ಆಶ್ವೀಜ ಶು. ೧೩ಲ್ಲಿ ಪಟ್ಟಕ್ಕೆ ಬಂದನು. ಈ ಅರಸನು ಈಶ್ವರನಲ್ಲಿ ಪರಮಭಕ್ತಿ ಯುಕ್ತನು. ಇವನು ತನ್ನ ಆಳಿಕೆಯಲ್ಲಿ ತನ್ನ ರಾಜ್ಯದ ಧ್ವಜವಾಗಿ ವೃಷಭಧ್ವಜವನ್ನು ಮಾಡಿಸಿದನು. ವಿದ್ಯಾವಂತರನ್ನು ಮನ್ನಿಸುತ್ತಿದ್ದನು. ಪುತ್ತಿಗೆ ಅರಮನೆಗೆ ಬಂದು ನಿಂತ ಮೇಲೆ ಪ್ರತಿ ದಿವಸವೂ ಸೋಮೇಶ್ವರ ದಿಂದ ಪ್ರಸಾದವು ಬರಲಿಕ್ಕೆ ಅನಾನುಕೂಲವಾದ್ದರಿಂದ ಪುತ್ತಿಗೆ ಅರ ಮನೆಯ ಹತ್ತಿರ ಸೋಮನಾಥ ದೇವರಿಗೆ ಒಂದು ದೇವಸ್ಥಾನವನ್ನು ಕಟ್ಟಿಸಿ ಶಾ. ಶ. 1177ನೆಯ ರಾಕ್ಷಸ ಸಂ|ರದ ವೈಶಾಖ ಶು| ೭ಲ್ಲು ದೇವತಾ ಪ್ರತಿಷ್ಠೆಯನ್ನು ಮಾಡಿಸಿದನು. ದೇವಸ್ಥಾನದ ಹತ್ತಿರ ಪಂಚ ರೂಮವತಿ ದೈವಕ್ಕೆ ಒಂದು ಗುಡಿಯನ್ನು ಸಹ ಕಟ್ಟಿಸಿದನು.

**5. 1ನೇ ಅಬ್ಬಕ್ಕದೇವಿ.** ಕ್ರಿ. ಶ. 1283—1316. ತಿರುಮಲರಾಯನು ಕಾಲವಾದ ನಂತರ ಇವನ ಸೊಸೆ ಅಬ್ಬಕ್ಕ ದೇವಿಯು ಶಾ. ಶ. 1205ನೇ ಸ್ವಭಾನು ಸಂ|ದ ಮಾಘ ಬ. ೧ಲ್ಲಿ ಪಟ್ಟಕ್ಕೆ ಬಂದು ಶಾ. ಶ. 1238ರ ವರೆಗೆ ಆಳಿದಳು.

**6 1ನೇ ಭೋಜರಾಯ.** ಕ್ರಿ ಶ. 1316—1335 ಅಬ್ಬಕ್ಕದೇವಿಯು ಕ್ರಿ. ಶ. 1316ಲ್ಲಿ ಕಾಲವಾದ ನಂತರ ಅವಳ

ಮಗ ಭೋಜರಾಯನು ಶಾ. ಶ 1238ನೇ ನಳ ಸಂ|ದ ಕಾರ್ತಿಕ ಶು. ೧೫ಲ್ಲಿ ಪಟ್ಟಕ್ಕೆ ಬಂದು 39 ವರುಷ ಆಳಿದನು. ಈ ಭೋಜ ರಾಯನು ಮೂಲಿಕೆ ಸಾವಂತನ ಮಗಳನ್ನು ಮದುವೆಯಾಗಿದ್ದನು. ಅನಂತರ ಇವರೊಳಗೆ ಜಗಳಗಳು ಹುಟ್ಟಿ ಎರಡೂ ಮನೆತನದವರಿಗೂ ಪರಸ್ಪರ ದ್ವೇಷವುಂಟಾಯಿತು.

**7 1ನೇ ಪದುಮಲಾದೇವಿ.** ಕ್ರಿ. ಶ. 1335—1382. ಭೋಜರಾಯನ ತರುವಾಯ ಅವನ ಸೊಸೆ ಪದುಮಲಾದೇವಿಯು ಶಾ. ಶ. 1277ನೇ ಮನ್ಮಥ ಸಂ|ದ ಚೈತ್ರ ಶುದ್ಧ ೫ಯ ದಿವಸ ಪಟ್ಟಕ್ಕೆ ಬಂದಳು

**8. 1ನೇ ಚನ್ನಮ್ಮದೇವಿ** ಕ್ರಿ. ಶ. 1382—1403. ಪದುಮಲಾದೇವಿಯ ತರುವಾಯ ಅವಳ ಮಗಳು ಚನ್ನಮ್ಮದೇವಿಯು ಶಾ ಶ 1304ನೇ ದುಂದುಭಿ ಸಂ|ದ ಆಶಾಢ ಬ ೯ಲ್ಲಿ ಪಟ್ಟಕ್ಕೆ ಬಂದು ಶಾ. ಶ. 1325ರ ವರೆಗೆ ಆಳಿದಳು.

**9. 2ನೇ ಚನ್ನರಾಯ.** ಕ್ರಿ. ಶ. 1403—1470. ಚನ್ನಮ್ಮದೇವಿಯು ಕಾಲವಾದ ನಂತರ ಅವಳ ತಮ್ಮ ಚನ್ನರಾಯನು ಶಾ. ಶ. 1325ನೇ ಸ್ವಭಾನು ಸಂ|ದ ಶ್ರಾವಣ ಬ. ೨ನೇ ದಿವಸ ಪಟ್ಟಕ್ಕೆ ಬಂದನು. ಈ ಅರಸನ ಹೆಸರು ಅಲ್ಲಪ್ಪಶೇಖ ಪಟ್ಟದ ಹೆಸರು ಚನ್ನರಾಯ. ಈ ಅರಸನ ಕಾಲದಲ್ಲಿ ನಂದಾವರದ ಬಂಗ ರಾಜನಿಗೂ ನೀಲೇಶ್ವರದ ಮೂತರಸನಿಗೂ ಯುದ್ಧವಾಗಲು ಬಂಗ ರಾಜನ ಹತ್ತಿರವಿದ್ದ ಸೈನ್ಯವು ಸಾಕಾಗದೆ ಸೋತುಹೋಗುವ ಸಂಭವ ಬಂದಾಗ ಚನ್ನರಾಯನ ಸಹಾಯವನ್ನು ಅಪೇಕ್ಷಿಸಿದಾಗ ಕೂಡಲೇ ಪುತ್ತಿಗೆಯಿಂದ ದೊಡ್ಡ ಸೈನ್ಯವನ್ನು ಕಳುಹಿಸಲು ಬಂಗರಾಜನಿಗೆ ಜಯವಾಯಿತು. ಹೀಗೆ ಸಹಾಯಮಾಡಿದ್ದಕ್ಕಾಗಿ ಬಂಗರಾಜನು ತನ್ನ ರಾಜ್ಯದಲ್ಲಿ ಮಣೇಲ, ಪೇಜಾವರ, ಮುಡುಕೂರು ಸೀಮೆಗಳನ್ನು

ಬಿಟ್ಟುಕೊಟ್ಟನೆಂದೂ ಈ ಅರಸನಿಗೆ ದೇವರಶೇಖ, ಬಿರ್ಮಣಶೇಖ, ಹಮ್ಮಣಶೇಖ ಎಂಬ ಮೂವರು ತಮ್ಮಂದಿರು ಇದ್ದರೆಂದೂ ಮಣೇಲ ಸಾವಿರ ಸೀಮೆಯ ಪೊರಲದೇವಿಯ (ಪೊಳಲಿ ರಾಜರಾಜೇಶ್ವರಿ) ದೇವಸ್ಥಾನದ ಆಯವ್ಯಯವನ್ನು ಚೌಟರೇ ನೋಡಿಕೊಂಡು ಬರಬೇಕೆಂದೂ, ಚೌಟ ಅರಸನು ಪೊಳಲಿಗೆ ಬರುವಾಗ ಅರ್ಕುಳ 400 ಸೈನ್ಯದ ಸೇನಾಧಿಪತಿಯೂ ಅಮ್ಮುಂಜೆ ಗುತ್ತಿನ 600 ಸೈನ್ಯದ ಸೇನಾಧಿಪತಿಯೂ ಮಿಜಾರ ಗಡಿಗೆ ಬಂದು ನಿಂತಿರಬೇಕೆಂದೂ ಚೌಟರಾಜನ ಅಪ್ಪಣೆ ಇಲ್ಲದೆ ಪೊಳಲಿ ದೇವಸ್ಥಾನದಲ್ಲಿ ಧ್ವಜಾರೋಹಣವಾಗಲೀ ಚಂಡಾಗಲೀ ಆಗಕೂಡದೆಂದೂ, ಪುತ್ತಿಗೆ ಸೋಮನಾಥ ಬೆಟ್ಟಿನ ಕಾಳಪ್ಪ ಶೆಟ್ಟಿಯ ಸಂತತಿಯವರೂ ಪೊಳಲಿ ಅಮ್ಮುಣ್ಣೆ ಬಂಗ ಮಂಜನ ಸಂತತಿಯವರೂ, ಮೂಡುಕೂರು ಚಿನ್ನದ (ಇನ್ನದ) ಗುತ್ತಿನ ಪಾರಕಾಂತು ಶೆಟ್ಟಿಯ ಸಂತತಿಯವರೂ ಪೇಜಾವರ ಸೀಮೆಯ ತೋಕೂರು ಗುತ್ತಿನ ಮಾರಂಶೇಖನ ಸಂತತಿಯವರೂ, ಬಂಗರಾಜನಿಂದ ಚೌಟರಾಜನ ಸೀಮೆಗೆ ಕೂಡಿಸಿದ ಈ ಮಣೇಲ, ಪೇಜಾವರ ಮೂಡುಕೂರು ಸೀಮೆಗಳಲ್ಲಿ ಯಾವ ತರದ ದಂಗೆ ಮುಂತಾದ್ದು ಏಳದ ಹಾಗೆ ಜವಾಬ್ದಾರರಾಗಿರಬೇಕೆಂದೂ ಶಾ. ಶ 1332ನೇ ವಿಕೃತಿ ಸಂ|ದಲ್ಲಿ ಆದ ಕರಾರು ಮಂಗಳೂರು ತಾಲೂಕು ಕರಿಯಂಗಳ ಗ್ರಾಮದಲ್ಲಿ ಪಲ್ಲಿಪಾಡಿ ಎಂಬಲ್ಲಿ ಒಂದು ಆಲದ ಮರದ ಹತ್ತಿರವಿರುವ ಎರಡು ಶಿಲಾಶಾಸನಗಳಲ್ಲಿದೆ.

ಚನ್ನರಾಯನು ಮೇಲೆ ಹೇಳಿದ ಮೂರು ಸೀಮೆಗಳು ಸ್ವಾಧೀನಕ್ಕೆ ಬಂದ ಕೂಡಲೇ ಪೇಜಾವರಕ್ಕೆ ಹೋಗಿ ಪ್ರಜೆಗಳನ್ನೆಲ್ಲಾ ಕರೆಯಿಸಿ ಅವರಿಗೆ ಉಡಿಗೆ ಉಚಿತಗಳನ್ನು ಕೊಡಿಸಿ ಅಲ್ಲಿಯ ದೇವಸ್ಥಾನ ದೈವಸ್ಥಾನಗಳಿಗೆ ಉಂಬಳಿ ಉತ್ತಾರ ಬಿಟ್ಟು ಅಲ್ಲಿಂದ ಪುತ್ತಿಗೆಗೆ ಹೊರಟನು. ಬರುವಾಗ ದಾರಿಯಲ್ಲಿ ನೆಲ್ಲಿತೀರ್ಥ ಎಂಬಲ್ಲಿ ಜಾಬಾಲಿ ಋಷಿಯ ಆಶ್ರಮವಿದ್ದ ಸ್ಥಳದಲ್ಲಿ ಗುಹ್ಯತೀರ್ಥದಲ್ಲಿ

ಸ್ಥಾನವಮಾಡಿ, ಆ ಋಷಿಯು ಪ್ರತಿಷ್ಠೆಮಾಡಿದ ಸೋಮನಾಥೇಶ್ವರ ದೇವರ ದರ್ಶನಮಾಡಿಕೊಂಡು ನೆಲ್ಲಿತೀರ್ಥ ಮತ್ತು ಕರಂಬಾರು ಎಂಬ ಎರಡು ಗ್ರಾಮಗಳನ್ನು ಆ ದೇವಸ್ಥಾನಕ್ಕೆ ಉತ್ತಾರಬಿಟ್ಟು ಅಲ್ಲಿಂದ ಮಿಜಾರಿಗೆ ಬಂದನು. ಅಲ್ಲಿ ಮಿಜಾರ ಮಾಗಣೆ ಇರು ವೈಲಿಗೆ ಬಂದು ಅಲ್ಲಿ ಜಲದುರ್ಗಿ ದೇವರ ದರುಶನಮಾಡಿ ದೇವತಾ ಸೇವೆ ನಡಿಯುವ ಬಗ್ಗೆ ಉತ್ತಾರವನ್ನು ಬಿಟ್ಟು, ಅಲ್ಲಿಂದ ಪೊಳಲಿಗೆ ಹೋಗಿ ಅಲ್ಲಿ ಪುಳಿನೀ (ಫಲಾನಿ ಗುರ್ಪುರ) ನದೀ ತೀರದಲ್ಲಿ ಹಿಂದೆ ಕೇರಳ ದೇಶದ ಸುರಥರಾಯನು ಪ್ರತಿಷ್ಠಿಸಿದ ರಾಜರಾಜೇಶ್ವರಿ ಅಮ್ಮನವರ ದರುಶನ ಮಾಡಿಕೊಂಡು ಆ ದೇವಸ್ಥಾನದ ದೇವತಾ ಸೇವೆ ನಡೆಯುವ ಹಾಗೆ ಉಂಬಳಿ ಉತ್ತಾರವನ್ನು ಬಿಟ್ಟು ಮುಳಲಿ ಸೀಮೆಯ ಪ್ರಜೆಗಳನ್ನು ಕರೆಯಿಸಿ ಅವರು ಭಂಡಾರಕ್ಕೆ ತೆರಬೇಕಾದ ಕಪ್ಪವನ್ನು ನಿಶ್ಚಯಿಸಿದನು. ಅಲ್ಲಿಂದ ಅಮ್ಮುಣಜೆ ವರದೇಶ್ವರ ವಿನಾ ಯಕ ದೇವರ ದರುಶನ ಮಾಡಿ ನೇತ್ರಾವತಿಯನ್ನು ದಾಟಿ ಅಮ್ಮೆಂಬ ಳಕ್ಕೆ ಹೋಗಿ ಅಲ್ಲಿ ಹಿಂದೆ ಕುಂಡಲೀ ಮುನೀಶ್ವರನು ಕುಂಡಲೀ ಪರ್ವತದಲ್ಲಿ ಪ್ರತಿಷ್ಠಿಸಿದ ಸೋಮನಾಥ ದೇವರ ಜೀರ್ಣವಾದ ದೇವ ಸ್ಥಾನವನ್ನು ಕಟ್ಟಿಸಲಿಕ್ಕೆ ಹೇಳಿ ಆ ದೇವಸ್ಥಾನಕ್ಕೂ ಉಂಬಳಿ ಉತ್ತಾರ* ಬಿಟ್ಟು ಮೂಲಸ್ಥಾನವಾದ ಉಳ್ಳಾಲ ಸೋಮೇಶ್ವರಕ್ಕೆ ಹೋಗಿ ಆ ಸೀಮೆಯವರು ಕೊಡತಕ್ಕ ಕಂದಾಯವನ್ನು ನಿರ್ಣ ಯಿಸಿ ಸೋಮನಾಥ ದೇವರ ದರುಶನಮಾಡಿ ಪುತ್ತಿಗೆಗೆ ಬಂದನು. ಈ ಅರಸನ ಕಾಲದಿಂದ ಚೌಟರ ಸೀಮೆಯು ಅಭಿವೃದ್ಧಿಯನ್ನು ಹೊಂದಲಾರಂಭಿಸಿತು. ಚನ್ನರಾಯನು ತನ್ನ ರಾಜ್ಯದ ಗಡಿಯಾದ ಅಕರ್ಳದಲ್ಲಿ ಒಂದು ದೊಡ್ಡ ಕೋಟೆಯನ್ನು ಅಕರ್ಳ ನಾನೂರಾಳರ ಬೀಡಿನ ಹತ್ತಿರ ಕಟ್ಟಿಸಿ ಅಕರ್ಳ ಗ್ರಾಮವನ್ನು ಆ ಗ್ರಾಮದ ದೈವಕ್ಕೆ ಉಂಬಳಿಯಾಗಿ ಬಿಟ್ಟು ಅದರ ಆಡಳಿತೆಯನ್ನು ಸಂತಾನ ಪಾರಂಪರ್ಯ ವಾಗಿ ಅವರು ನೋಡಿಕೊಂಡು ಬರಬೇಕೆಂದು ಶಾಸನ ಬರೆಸಿದನು. ಈ

ಕೋಟೆಯ ಕುರುಹುಗಳು ಈಗಲೂ ಇವೆ. ಈ ಸಮಯದಲ್ಲಿ ಕನ್ನಡ ಜಿಲ್ಲೆಯ ಮೇಲಾಧಿಕಾರವನ್ನು ನಡಿಸುತ್ತಿದ್ದ ವಿಜಯನಗರದ ಸ್ಥಿತಿಯು ಬಹಳ ಕಳೆಗುಂದಿತ್ತು.



ಮೂಡಬಿದರೆಯ ತ್ರಿಭುವನತಿಲಕ ಚೈತ್ಯಾಲಯ (ಸಾವಿರ ಕಂಬಗಳ ಬಸದಿ)

ಈ ಅರಸನು ಪುತ್ತಿಗೆಯ ರಾಜಧಾನಿಯಲ್ಲಿ ಆಳಿಕೊಂಡಿರುವಾಗ ಮೂಡಬಿದರೆಯಲ್ಲಿ ಶಾ. ಶ. 1351ನೆ ಸೌಮ್ಯ ಸಂ|ದಲ್ಲಿ (ಕ್ರಿ.ಶ 1429) ತ್ರಿಭುವನತಿಲಕ ಚೈತ್ಯಾಲಯವೆಂಬ ಸಾವಿರ ಕಂಬದ ಹೊಸ ಬಸದಿಯನ್ನು ಮೂಡಬಿದರೆಯ ಜೈನಸೆಟ್ಟರು ಕಟ್ಟಿಸಿದರು. ಶಾ. ಶ. 1373ನೇ ಪ್ರಜೋತ್ಪತ್ತಿ ಸಂ|ದಲ್ಲಿ (ಕ್ರಿ ಶ. 1451)ಲ್ಲಿ ಈ ಹೊಸ ಬಸದಿಯ ಮುಂದುಗಡೆ ಇರುವ ಭೈರಾದೇವಿ ಮಂಟಪವನ್ನು ಕಾರ್ಕಳ ಭೈರವ ರಾಯನ ಮಗಳಾದ ಭಟಕಲದ ರಾಣಿ ಭೈರಾದೇವಿಯು ಕಟ್ಟಿಸಿದಳು. ಶಾ. ಶ. 1384ನೇ ವಿಷು ಸಂ|ದಲ್ಲಿ ಅದೇ ಹೊಸ ಬಸದಿಯ 2ನೇ



ಸಾವಿರ ಕಂಬದ ಬಸದಿಯ ಮುಂದುಗಡೆ ಇರುವ ಮಾನಸ್ತಂಭ

೩ನೇ ಅಂತಸ್ತುಗಳ (ಉಪ್ಪರಿಗೆ)ನ್ನು ಮೂಡಬಿದರೆಯ ಶ್ರೀಮಂತರು ಕಟ್ಟಿಸಿದರು ಎಂದು ಹೊಸ ಬಸದಿಯ ಗದ್ದಿಗೆ ಮಂಟಪದ ದ್ವಾರದ ಎಡಬಲ ಗೋಡೆಗಳಲ್ಲಿರುವ ಶಾಸನಗಳಿಂದ ತಿಳಿದುಬರುತ್ತವೆ.

**10. 2ನೇ ಭೋಜರಾಯ.** ಕ್ರಿ. ಶ. 1470—1510. ಚನ್ನರಾಯನ ತರುವಾಯ ಇವನ ಅಕ್ಕ ಚನ್ನಮ್ಮದೇವಿಯ ಮಗ ಭೋಜರಾಯನು ಶಾ. ಶ. 1392ನೇ ವಿಕೃತಿ ಸಂ|ರದ ಚೈತ್ರ ಶು. ೧೧ಲ್ಲಿ ಪಟ್ಟಕ್ಕೆ ಬಂದನು. ಈ ಅರಸನ ಕಾಲದಲ್ಲಿ ವಿಜಯನಗರ ರಾಜ್ಯವು ಬಿದ್ದುಹೋಗುವ ಸ್ಥಿತಿಯಲ್ಲಿದ್ದು ಕನ್ನಡ ಜಿಲ್ಲೆ ಮತ್ತು ಸ್ವಲ್ಪಭಾಗ ಮಾತ್ರವೆ ಅದರ ಕೈಕೆಳಗಿತ್ತು. ಕ್ರಿ. ಶ. 1509ರಲ್ಲಿ

ಕೃಷ್ಣದೇವರಾಯನು ಪಟ್ಟಕ್ಕೆ ಬಂದನು. ಇವನು ಕಳೆದುಹೋದ ರಾಜ್ಯವನ್ನು ತಿರಿಗಿ ಒಟ್ಟುಗೂಡಿಸಲು ಪ್ರಯತ್ನಮಾಡಿದನು. ತನ್ನ ಕೈಕೆಳಗಿರುವ ಎಲ್ಲಾ ಒಳ ಅರಸುಗಳನ್ನೂ ಉಪಾಯಗಳಿಂದಲೂ, ಸ್ನೇಹಭಾವದಿಂದಲೂ ವಿಜಯನಗರಕ್ಕೆ ಕರೆಯಿಸಿ ಅವರಿಂದ ವಿಜಯನಗರಕ್ಕೆ ಬರಬೇಕಾದ ಕಪ್ಪವನ್ನು ಕೊಡುವ ಹಾಗೆ ಮಾಡಿದನು.

ಭೋಜರಾಯನು ಬಹಳ ಬಲಿಷ್ಠನಾಗಿದ್ದು ದೊಡ್ಡ ಸೈನ್ಯವನ್ನು ಕೂಡಿಸಿ ತುಳು ರಾಜ್ಯದಲ್ಲಿರುವ ಎಲ್ಲಾ ಜೈನ ಅರಸರಿಗಿಂತಲೂ ಉನ್ನತ ಸ್ಥಿತಿಯಲ್ಲಿದ್ದನು. ಕೃಷ್ಣದೇವರಾಯನು ಭೋಜರಾಯನನ್ನು ಕರೆಯಕಳುಹಿಸಲು, ರಾಜ್ಯಭಾರದ ಕೆಲಸವನ್ನು ತನ್ನ ತಮ್ಮನಾದ ಲಕ್ಷ್ಮಯ್ಯ ಅರಸನಿಗೆ ವಹಿಸಿಕೊಟ್ಟು, ಪ್ರಧಾನಿ ನಾರ್ಣಪ್ಪಯ್ಯನನ್ನೂ, ಕವುಳಿಗೆ ಶ್ಯಾನಭಾಗ ನಾರ್ಣಪ್ಪಯ್ಯನನ್ನೂ, ರಾಯಸದ ಗಣಪತಿಯನ್ನೂ, ಅವಸರದ ಸುಬ್ರಾಯನನ್ನೂ, ಸೇನಾಧಿಪತಿಗಳಾದ ಪದುಮನಾಯಕ, ಕೋಟಿನಾಯಕ ಇವರಿಬ್ಬರನ್ನೂ ಊಳಿಗದ 50 ಜನರನ್ನೂ ಕರೆದುಕೊಂಡು ರಾಜವೈಭವದಲ್ಲಿ ಪುತ್ತಿಗೆ ಅರಮನೆಯಿಂದ ಹೊರಟು ಸೋಮನಾಥ ದೇವರ ದರುಶನಮಾಡಿ ಹೊರಟು ವಿಜಯನಗರಕ್ಕೆ ಹೋದನು. ಅಲ್ಲಿ ಕೃಷ್ಣದೇವರಾಯನ ಭೇಟಿಮಾಡಲು ಅರಸನು ಭೋಜರಾಯನನ್ನು ಆದರಪೂರ್ವಕವಾಗಿ ಸತ್ಕರಿಸಿ ಕುಳ್ಳಿರಿಸಿದನು. ಅನಂತರ ಕೆಲವು ವರುಷಗಳಿಂದ ವಿಜಯನಗರಕ್ಕೆ ಕಪ್ಪಕೊಡದೆ ಇದ್ದುದಕ್ಕಾಗಿ ಬಹಳ ಬೇಸರಪಟ್ಟು ಕೊಡದೆ ಇದ್ದ ಹಣವನ್ನು ಮಾಫಿಬಿಟ್ಟು ಇನ್ನು ಮುಂದೆ ಕ್ರಮಪ್ರಕಾರ ಕಪ್ಪಕೊಡಬೇಕೆಂದು ಹೇಳಲು ಭೋಜರಾಯನು ಅದಕ್ಕೆ ಒಪ್ಪಿದನು. ಆಮೇಲೆ ಕೃಷ್ಣದೇವರಾಯನೂ ಭೋಜರಾಯನೂ ವಿರೂಪಾಕ್ಷನ ದರುಶನವನ್ನು ಮಾಡಿ ಬಂದರು. ಬಳಿಕ ದೇವತಾಧರ್ಮ, ಅಗ್ರಹಾರ, ಬ್ರಹ್ಮಾದಾಯ ಮುಂತಾದ ಧರ್ಮಗಳನ್ನು ನಡಿಸಿಕೊಂಡು ರಾಜಧರ್ಮದ ಪ್ರಕಾರ ಆಳಿಕೊಂಡು ಬರಬೇಕೆಂದು ಕೃಷದೇವರಾಯನು ಭೋಜರಾಯನಿಗೆ ಹೇಳಿ ಈ ಕೆಳಗೆ ಬರೆದ ಬಿರುದು

ಬಾವಲಿಗಳನ್ನು ಕೊಟ್ಟು ಪುತ್ತಿಗೆಗೆ ಕಳುಹಿಸಿದನು. 1 ಮುಂಡಾಸು, 1 ಹಚ್ಚಡ, 1 ಅಂಗಿ, 1 ಶಾಲು, 1 ನಡುಕಟ್ಟು, 1 ಮುತ್ತಿನ ತುರಾಯಿ, 1 ಪಲ್ಲಕಿ, 1 ಕೂತುಕೊಳ್ಳುವ ಸದ್ರು, 1 ಬಸವನ ಟಕ್ಕೆ ನಿಶಾನಿ, 2 ಹಸುರುಪಕ್ಕೆ, 2 ಜಾಲಿಸತ್ತಿಗೆ, 2 ಹಸುರು ಹಾರಿಸುವ ರುಮಾಲು 2 ಹಸುರು ಬೀಸಣಿಗೆ, 2 ಹಸುರು ಚವರಿ, 2 ಗಗ್ಗರದ ಈಟಿ, 2 ಝೂಡಿಹಲಿಗೆ, 2 ಬೆಳ್ಳಿಕಟ್ಟದ ಬೆತ್ತಗಳು, 2 ನೆಗಳಬಾಯಿ, 1 ಚಿನ್ನದ ಗಿಂಡಿ, ಇಬ್ಬರು ಪಾರಕರು, 4 ಕತ್ತಿಗಳು, ರುಮಾಲು ಹಾರಿಸುವವರ ಸೊಂಟಕ್ಕೆ ಕಟ್ಟುವ ಒರೆಯಲ್ಲಿರುವ 2 ಕತ್ತಿಗಳು, 2 ಅಂಗರಕ್ಷಕರ ಕೈಯಲ್ಲಿರುವ ಕತ್ತಿಗಳು, 2 ಪಟ್ಟೆಯ ಕತ್ತಿ (ಪಟಾವು)ಗಳು, 2 ರಣ ಕಹಳೆಗಳು, 2 ಒಂಟೆ ಮೇಲಿನ ನಗಾರಿಗಳು, 1 ಪಟ್ಟದ ಆನೆ, 2 ಪಟ್ಟದ ಕುದುರೆಗಳು, 2 ಪಂಚದೀವಟಿಗೆಗಳು, 1 ವಾದ್ಯದ ಮೇಳ, 1 ಕೊಂಬು, 1 ನರ್ತಕಿಯರ ಮೇಳ.

ಈ ಬಿರುದುಬಾವಲಿಗಳನ್ನು ತೆಗೆದುಕೊಂಡು ರಾಜವೈಭಗಳಿಂದ ಹೊರಡುವಾಗ ಸುಬ್ರಾಯ ದೇವರ ಒಂದು ಪ್ರತಿಮೆಯನ್ನು ತೆಗೆದು ಕೊಂಡು ಬಂದರು. ಪಲ್ಲಕಿ ಹೊರುವ ಬೋವಿಯರು ತಮ್ಮ ಮಾರಿಯಮ್ಮ ದೇವರಿಗೆ ಗುಡಿ ಕಟ್ಟಿಸಿಕೊಟ್ಟು ಉಂಬಳಿ ಉತ್ತಾರ ಬಿಟ್ಟುಕೊಟ್ಟರೆ ಪುತ್ತಿಗೆಗೆ ಬಂದೇವು, ಇಲ್ಲದಿದ್ದರೆ ಬರಲಿಕ್ಕಿಲ್ಲವೆಂದು ಹೇಳಿದರು. ಭೋಜರಾಯನು ಅದಕ್ಕೆ ಒಪ್ಪಿ ಅವರನ್ನು ಕರೆತಂದನು. ಪುತ್ತಿಗೆಗೆ ಬಂದ ಮೇಲೆ ಮೂಡಬಿದರೆಯಲ್ಲಿ ಮಾರಿಯಮ್ಮನ ಗುಡಿ ಕಟ್ಟಿಸಿ ಉಂಬಳಿ ಉತ್ತಾರ ಬಿಟ್ಟುಕೊಟ್ಟನು. ಈ ಗುಡಿ ಈಗಲೂ ಇದೆ. ಬೋವಿಯರಿಗೆ ಈಗಲೂ ಇಲ್ಲಿ ಮರ್ಯಾದೆಯು ಸಿಕ್ಕುತ್ತದೆ. ಸುಬ್ರಾಯ ದೇವರಿಗೋಸ್ಕರ ಕಡಂದಳೆಯಲ್ಲಿ ದೇವಸ್ಥಾನವನ್ನು ಕಟ್ಟಿಸಿ ವಿಜಯ ನಗರದಿಂದ ತಂದ ಪ್ರತಿಮೆಯನ್ನು ಪ್ರತಿಷ್ಠಿಸಿ ಉಂಬಳಿ ಉತ್ತಾರ ಬಿಟ್ಟನು.

ಭೋಜರಾಯನು ಅತೀ ಸೌಂದರ್ಯ ಪುರುಷನೂ ದೇವತಾ ಭಕ್ತಿಯುಳ್ಳವನೂ ಆಗಿದ್ದು ಪ್ರಜೆಗಳನ್ನು ಒಳ್ಳೇ ರೀತಿಯಲ್ಲಿ

ನಡಿಸುತ್ತಿದ್ದನು. ಈ ಅರಸನಕಾಲದಲ್ಲಿ ಅನ್ಯ ದೇಶದ ಜನರ ಬಾಧೆಯು ಯಾವುದೊಂದು ಇರಲಿಲ್ಲ. ಈ ಅರಸನ ಆಳಿಕೆಯ ಕಡೆಯ ವರುಷಗಳಲ್ಲಿ ಕನ್ನಡಜಿಲ್ಲೆಗೆ ಪೋರ್ತುಗೀಸರ ಹಾವಳಿಯು ಉಂಟಾಗಲು ಹಳೆಯ ರಾಜಧಾನಿಯಾದ ಉಳ್ಳಾಲವು ಕ್ಷೀಣಸ್ಥಿತಿಯನ್ನು ಹೊಂದಲಿಕ್ಕೆ ಪ್ರಾರಂಭ ವಾಯಿತು.

**11. 3ನೇ ತಿರುಮಲರಾಯ.** ಕ್ರಿ. ಶ. 1510—1544. ಭೋಜರಾಯನ ತರುವಾಯ ಅವನ ಅಳಿಯನಾದ ತಿರುಮಲರಾಯನು ಶಾ. ಶ. ವರುಷ 1432ನೇ ಪ್ರಮೋದೂತ ಸಂ|ರದ ಮಾಘ ಶು. ೧೨ಲ್ಲು ಪಟ್ಟಕ್ಕೆ ಬಂದನು. ಕೃಷ್ಣದೇವರಾಯನು ತನ್ನ ರಾಜ್ಯದಲ್ಲಿರುವ ಅನೇಕ ದೇವಸ್ಥಾನಗಳಿಗೆ ಉಂಬಳಿಯನ್ನು ಬಿಟ್ಟಹಾಗೆಯೇ ಪುತ್ತಿಗೆ ಸೋಮ ನಾಥ ದೇವಸ್ಥಾನಕ್ಕೂ ಶಾ. ಶ. 1434ನೇ ಅಂಗೀರಸ ಸಂ|ದಲ್ಲಿ ಉಂಬಳಿಬಿಟ್ಟಿದ್ದಾನೆಂದು ಆ ದೇವಸ್ಥಾನದ ಮುಂದುಗಡೆ ಇರುವ ಶಾಸನದಲ್ಲಿದೆ. ಶಾ. ಶ. 1460ರಲ್ಲಿ ಗುರುಗಳ ಬಸದಿಯ ಗದ್ದಿಗೆಯ ಮಂಟಪವನ್ನು ಕಟ್ಟಿಸಿದರು.

ನಂದಳಿಕೆ ದೇವಸ್ಥಾನದಲ್ಲಿರುವ ಒಂದು ತಾಮ್ರ ಶಾಸನಪ್ರಕಾರ, ಶಾ. ಶ. 1450ನೇ ಸರ್ವಧಾರಿ ಸಂ|ರದ ವೃಷಭಮಾಸದಿನ ೧೪ನೇ ಸೋಮವಾರ ದಿವಸ ತಿರುಮಲರಾಯ ಚೌಟನಿಗೂ ತಿರುಮಲರಸ ನಂದಳಿಕೆ ಕಿನ್ಯಕ್ಕ ಹೆಗ್ಗಡೆಗೂ ಒಂದು ಕರಾರಾಗಿದೆಂದೂ, ಬಂಗರು, ಭೈರರಸರು, ಎಲ್ಲೂರು ಕುಂದಹೆಗ್ಗಡೆಯು ಯುದ್ಧಕ್ಕೆ ಬರುವಾಗ ಇಬ್ಬರೂ ಸೈನ್ಯಕೂಡಿಸಿ, ಈ ಮೂವರ ಸಂಗಡ ಯುದ್ಧಕ್ಕೆ ಹೊರಡ ಬೇಕೆಂದೂ, ಒಬ್ಬರ ಒಪ್ಪಿಗೆಯಿಲ್ಲದೆ ಇನ್ನೊಬ್ಬರು ಭೈರರಸರು, ಬಂಗರು ಅಥವಾ ಕುಂದಹೆಗ್ಗಡೆಯೊಡನೆ ರಾಜಿಮಾಡಕೂಡದೆಂದೂ ತಿಳಿದು ಬರುತ್ತದೆ. ಅದೇ ದೇವಸ್ಥಾನದಲ್ಲಿರುವ ಇನ್ನೊಂದು ಶಾಸನದಲ್ಲಿ

ಕಾರ್ಕಳ ಚಂದಲದೇವಿಯ ಕುಮಾರ ಪಾಂಡ್ಯಪ್ಪರಸನಿಗೂ ತಿರುಮಲರಸ ಚೌಟನಿಗೂ ಎರಮಾಳ ಮಾರಂಹೆಗ್ಗಡೆಯನ್ನು ಮಧ್ಯಸ್ಥನಾಗಿ ಇಟ್ಟು ಶಾ. ಶ. 1465ನೆಯ ಶೋಭಕೃತು ಸಂವತ್ಸರದ ಚೈತ್ರ ಶು| ೪ ಶುಕ್ರವಾರ ದಿವಸ ಒಂದು ಕರಾರಾಯಿತು. ಅದರಲ್ಲಿ ಇಬ್ಬರೂ ಒಕ್ಕಟ್ಟಾಗಿ ಹೊರಗಿನಿಂದ ಬೇರೆ ಅರಸರು ಬರುವಾಗ ಒಬ್ಬರಿಗೊಬ್ಬರು ಸಹಾಯಮಾಡಬೇಕೆಂದಿದೆ.

**12. 2ನೇ ಅಬ್ಬಕ್ಕದೇವಿ.** ಕ್ರಿ. ಶ. 1544—1582. ತಿರುಮಲರಾಯನ ತರುವಾಯ ಅವನ ಸೊಸೆ ಅಬ್ಬಕ್ಕದೇವಿಗೆ ಶಾ. ಶ. 1466ನೇ ಕ್ರೋಧಿ ಸಂ|ರದ ಫಾಲ್ಗುಣ ಶು. ೧೧ರಲ್ಲಿ ಪಟ್ಟವಾಯಿತು. ಈ ರಾಣಿಯನ್ನು ಲಕ್ಷ್ಮಪ್ಪರಸ ಬಂಗರಾಜನು ಮದುವೆಯಾಗಿದ್ದನು. ಅಬ್ಬಕ್ಕದೇವಿಯು ಈ ಸಮಯದಲ್ಲಿ ಉಳ್ಳಾಲದ ಅರಮನೆಯಲ್ಲಿಯೇ ಇದ್ದಳು. ಲಕ್ಷ್ಮಪ್ಪರಸ ಬಂಗರಾಜನು ತನ್ನ ರಾಜಧಾನಿಯಾದ ಮಂಗಳೂರಿನಲ್ಲಿಯೇ ಇದ್ದನು. ಕ್ರಿ. ಶ. 1556ಲ್ಲಿ ಲಕ್ಷ್ಮಪ್ಪರಸ ಬಂಗರಾಜನು ಕಾಲವಾಗಲು ಅವನ ಅಳಿಯನಾದ ಕಾಮರಾಯನು ಪಟ್ಟಕ್ಕೆ ಬಂದನು. ಅತ್ತೆಯಾದ ಅಬ್ಬಕ್ಕದೇವಿಗೂ ಅಳಿಯನಾದ ಕಾಮರಾಯನಿಗೂ ಆಗಾಗ್ಗೆ ಜಗಳಗಳು ಹುಟ್ಟುತ್ತಲೇ ಇದ್ದವು. ಕಾಮರಾಯನು ಅತ್ತೆಯ ಮೇಲಿನ ದ್ವೇಷದಿಂದ ಪೋರ್ತುಗೀಸರೊಡನೆ ಸ್ನೇಹವನ್ನು ಬೆಳಸಿದನು. ಈ ಸಮಯದಲ್ಲಿ ಪೋರ್ತುಗೀಸರ ಹಾವಳಿಯು ಸಹಿಸಲಾರದಷ್ಟು ಹೆಚ್ಚಾಗಿತ್ತು. ಉಳ್ಳಾಲದಲ್ಲಿಯೂ ಮಂಗಳೂರಿನಲ್ಲಿಯೂ ಬಹಳ ದೊಡ್ಡ ಸೈನ್ಯಗಳಿದ್ದವು. ಪೋರ್ತುಗೀಸರು ಪ್ರತಿ ಒಂದು ಬಂದರದಿಂದಲೂ ಸುಂಕ ವಸೂಲುಮಾಡುತ್ತಿದ್ದರು. ಪೋರ್ತುಗೀಸರು ಅಬ್ಬಕ್ಕದೇವಿಗೆ ಅಭಯದೇವಿ ಅಥವಾ ಬುಕ್ಕಾದೇವಿ ಎಂದು ಕರೆಯುತ್ತಿದ್ದರು. ಈ ಅಬ್ಬಕ್ಕದೇವಿಯು ಪೋರ್ತುಗೀಸರಿಗೆ ಸರಿಯಾಗಿ ಕಪ್ಪಕೊಡುತ್ತಿರಲಿಲ್ಲ. ಅದನ್ನು ವಸೂಲುಮಾಡುವುದಕ್ಕಾಗಿ ಕ್ರಿ.ಶ. 1567ನೇ ಜನವರಿ 4ರಲ್ಲಿ ಪೋರ್ತುಗೀಸ

ವ್ಯಾಸರೊಯಿಯಾಗಿದ್ದ ಡೊನ್ ಫ್ರಾನ್ಸಿಸ್ಕ ಮಸ್ಕರೆಂಞಾನು 7 ಬಗಲೆಗಳಲ್ಲಿಯೂ 5 ಮಂಜಿಗಳಲ್ಲಿಯೂ 3000 ಸೈನಿಕರನ್ನು ತೆಗೆದು



ಉಳ್ಳಾಲದ ಯುದ್ಧ.

ಕೊಂಡು ಉಳ್ಳಾಲದ ಹತ್ತಿರ ಹೊಳೆಯಲ್ಲಿ ಲಂಗರು ಹಾಕಿದನು. ಪೋರ್ತುಗೀಸರು ರಾತ್ರೆ ಊಟಮಾಡುವ ಸಮಯ ಅಬ್ಬಕ್ಕದೇವಿಯ 500 ಮಂದಿ ಸೈನಿಕರು ಪೋರ್ತುಗೀಸರ ಹಡಗುಗಳ ಮೇಲೆ ಬಂದು ಬಿದ್ದರು. ಅವರ ಹಿಂದಿನಿಂದ 1500 ಮಂದಿ ಸೈನಿಕರು ಬಂದು ಹಡಗುಗಳಿಗೆ ಮುತ್ತಿಗೆಹಾಕಿದರು. ಪೋರ್ತುಗೀಸರು ದಿಕ್ಕುದಿಕ್ಕಿಗೆ ಓಡಿಹೋದರು. ಡೊನ್ ಫ್ರಾನ್ಸಿಸ್ಕನು ಸೈನ್ಯವನ್ನು ಕೂಡಿಸಿ ಯುದ್ಧಕ್ಕೆ ನಿಂತನು. ಅನೇಕರು ಮಡಿದುಬಿದ್ದರು. ಡೊನಲೂಯಿಜ್ ಅಲ್ಮೆಡನು ಇಫಿಫೆನಿಯ ದಿವಸ ಎಂದರೆ, ಜನವರಿ 6ನೇ ತಾರೀಕಿನ ಸಾಯಂಕಾಲ ಬಹಳ ಸಾಹಸದಿಂದ ಕಾದಿದನು. ಅಬ್ಬಕ್ಕದೇವಿಯ ಸೈನಿಕರು ಸೋತುಹೋದರು. ಪೋರ್ತುಗೀಸರು

ಉಳ್ಳಾಲವನ್ನು ಹಿಡಿದು ಸುಟ್ಟುಬಿಟ್ಟರು. ಈ ಯುದ್ಧದಲ್ಲಿ ಅಬ್ಬಕ್ಕ ದೇವಿಯ 500 ಮಂದಿ ಸೈನಿಕರೂ ಪೋರ್ತುಗೀಸರ 40 ಮಂದಿ ಸೈನಿಕರೂ ಮಡಿದುಬಿದ್ದರು. ಅಬ್ಬಕ್ಕದೇವಿಯು ಉಚ್ಚಿಲ ತಲಪಾಡಿ ಯಲ್ಲಿ ಗುಡ್ಡದ ಮೇಲಿರುವ ತನ್ನ ಕೋಟೆಗೆ ಓಡಿಹೋದಳು. ಕ್ರಿ. ಶ. 1569ರಲ್ಲಿ ಪೋರ್ತುಗೀಸರಿಗೂ ಈ ರಾಣಿಗೂ ಒಪ್ಪಂದವಾಯಿತು. ಕ್ರಿ. ಶ. 1570ರಲ್ಲಿ ಯಾವ ಉಪಾಯದಿಂದಲಾದರೂ ಪೋರ್ತುಗೀಸರನ್ನು ಓಡಿಸಬೇಕೆಂದು, ಉಳ್ಳಾಲದ ಹತ್ತರ ಸಮುದ್ರದಲ್ಲಿ ಸಂಚರಿಸುತ್ತಿದ್ದ ಜಾಮೋರಿನನ ನೌಕಾಸೇನಾಧಿಪತಿಯಾಗಿದ್ದ ಕುಟ್ಟಿಪೋಕ್ರೆಗೆ ಹೇಳಿ ಕಳುಹಿಸಿದಳು. ಅವನು ಉಳ್ಳಾಲಕ್ಕೆ ಸೈನ್ಯ ತಂದು ಪೋರ್ತುಗೀಸ ರೊಡನೆ ಯುದ್ಧಮಾಡಿ ಸೋತುಹೋದನು. ಕ್ರಿ. ಶ. 1581ರಲ್ಲಿ ಈ ರಾಣಿಯು ಕಪ್ಪಕೊಡದೆ ಇದ್ದುದಕ್ಕಾಗಿ ಪೋರ್ತುಗೀಸರು ಉಳ್ಳಾಲವನ್ನು ಸುಟ್ಟು ಅದರ ಸುತ್ತಲೂ ಇರುವ ಕಾಡುಗಳನ್ನೆಲ್ಲಾ ಕಡಿದುಹಾಕಿದರು. ರಾಣಿಯು ಕಪ್ಪಕೊಡುವುದಕ್ಕೆ ಒಪ್ಪಿದಳು. ಅಬ್ಬಕ್ಕದೇವಿಯು 1582ಲ್ಲಿ ಕಾಲವಾದಳು.

13. **ತಿರುಮಲಾದೇವಿ.** ಕ್ರಿ. ಶ. 1582—1606. ಅಬ್ಬಕ್ಕ ದೇವಿಯ ತರುವಾಯ ಅವಳ ಮಗಳು ತಿರುಮಲಾದೇವಿಯು ಶಾ. ಶ. ವರುಷ 1504ನೇ ಚಿತ್ರಭಾನು ಸಂ|ರದ ವೈಶಾಖ ಶು. ೩ಲ್ಲು ಪಟ್ಟಕ್ಕೆ ಬಂದಳು. ಆಗ ಕಾರ್ಕಳದ ಪಾಂಡ್ಯಪ್ಪ ಧಾವಣಿ ಇಮ್ಮಡಿ ಭೈರವರಾಯನಿಗೂ ತಿರುಮಲಾದೇವಿಗೂ ಜಗಳಹುಟ್ಟಿ ಎರಡೂ ಕಡೆ ಯವರು ಯುದ್ಧಕ್ಕೆ ಸಿದ್ಧರಾದರು. ಪ್ರಧಾನಿ ನಾರ್ಣಪ್ಪಯ್ಯ, ಸೇನಾಧಿಪತಿ ಗಳಾದ ತಿಮ್ಮಪ್ಪನಾಯಕ, ಪದುಮನಾಯಕ, ಮತ್ತು ತಿರುಮಲಾದೇವಿ ಇಷ್ಟು ಮಂದಿಯೂ ಸೈನ್ಯದೊಡನೆ ಯುದ್ಧಕ್ಕೆ ಹೊರಟರು. ಇಬ್ಬ ರಿಗೂ ಸಮಯುದ್ಧವಾಗಿ ಕಡೆಗೆ ಚೌಟರ ಸೈನ್ಯವು ಹಿಂದಕ್ಕೆ ಓಡಿತು. ಆಗ ತಿರುಮಲಾದೇವಿಯೂ ಅವಳ ಕಡೆ ಪ್ರಧಾನಿ, ಸೇನಾಧಿಪತಿಗಳು ಸಹ ತಂಡತಂಡವಾಗಿ ಮಂದಿ ಮಕ್ಕಳನ್ನು ಕಟ್ಟಿಕೊಂಡು ಹೋಗಿ

ಜಗಳವಾಗುವಾಗ ಭೈರರಸನು ಸಾಣೂರು ಕಣಿವೆಯ ಬಳಿಯಲ್ಲಿ ತಿರುಮಲಾದೇವಿಯು ನಡಿಸುವ ಸೈನ್ಯವನ್ನು ಬೆನ್ನಟ್ಟಿಹೋಗಿ ತಿರುಮಲಾದೇವಿಯನ್ನು ಕೊಂದನು. ಭೈರವರಾಯನು ಹಿಂತಿರುಗಿ ಕಾರ್ಕಳಕ್ಕೆ ಹೋದನು. ಅವನ ಸೇನಾಧಿಪತಿಯು ಅವಳ ತಲೆಯನ್ನು ಕಾರ್ಕಳಕ್ಕೆ ಕೊಂಡುಹೋಗಿ ಒಂದು ಹರಿವಾಣದಲ್ಲಿ ಭೈರರಸನ ಮುಂದೆ ಇಟ್ಟನು. ಆ ಮುಖವು ಓರೆಯಾಗಿ ಭೈರರಸನಿಗೆ ಅಭಿಮುಖವಾಗದೆ ತಿರುಗಿಕೊಂಡಿರುವುದನ್ನು ನೋಡಿ ಆಶ್ಚರ್ಯಪಟ್ಟು ಸತ್ತಮೇಲೆಯೂ ತನ್ನ ಮುಖವನ್ನು ನೋಡದೆ ಇರುವದರಿಂದ ಅದನ್ನು ಶೂಲದ ಮೇಲೆ ಏರಿಸಿಬಿಡಿರೆಂದು ತನ್ನ ಸೈನಿಕರಿಗೆ ಹೇಳಲು ಅವರು ಅದನ್ನು ಅರಮನೆಯಿಂದ ಸ್ವಲ್ಪ ದೂರವಿರುವ ಶೂಲದ ಮೇಲೆ ಏರಿಸಿದರು. ಆದರೆ ಚೌಟರ ಸೈನ್ಯದ ಮಂಗಿಲ ಎಂಬವನು ಆ ತಲೆಯನ್ನು ಯಾರಿಗೂ ತಿಳಿಯದ ಹಾಗೆ ಕಾಡುದಾರಿಯಿಂದ ತೆಗೆದುಕೊಂಡು ಪುತ್ತಿಗೆಗೆ ತಂದನು. ಸಾಣೂರಿನಲ್ಲಿ ತಿರುಮಲಾದೇವಿಯು ಮಡಿದುಬಿದ್ದ ಸಂಗತಿಯು ಆಕೆಯ ಮಗ ಚಿಕ್ಕರಾಯನಿಗೆ ತಿಳಿದ ಕೂಡಲೇ ಅವನು ಸಾಣೂರಿಗೆ ಬಂದು ತಾಯಿಯ ಶವವನ್ನು ಪುತ್ತಿಗೆಗೆ ಒಯ್ದನು. ಮಂಗಿಲನು ತಂದ ತಲೆಯನ್ನು ಸಹ ಶವದೊಟ್ಟಿಗೆ ಇಟ್ಟು ಪುತ್ತಿಗೆಯಲ್ಲಿ ಶವಸಂಸ್ಕಾರ ನಡಿಯಿತು. ಈ ರಾಣಿಯ ಆಳಿಕೆಯ ಕಾಲದಲ್ಲಿ ಕ್ರಿ. ಶ. 1605ರಲ್ಲಿ ಜೈನರ ಗುರುಗಳಲ್ಲಿ ಒಬ್ಬನಾದ ಚಂದ್ರಕೀರ್ತಿ ಎಂಬವನು ಕಾಲವಾಗಲು ಅವನ ಹೆಸರಿನಲ್ಲಿ ನಾಯಿ ಬಸದಿಯನ್ನು ಕಟ್ಟಿಸಿದರೆಂದು ಆ ಬಸದಿಯ ಹತ್ತಿರವಿರುವ ಒಂದು ಶಾಸನದ ತುಂಡಿನ ಮೇಲಿದೆ.

**14. 1ನೇ ಚಂದ್ರಶೇಖರ ಚಿಕ್ಕರಾಯ. ಕ್ರಿ. ಶ. 1606—1628.** ಚಿಕ್ಕರಾಯನು ಶಾ. ಶ. 1528ನೇ ಪರಾಭವ ಸಂ|ರದ ಮಾರ್ಗಶಿರ ಶು. ೫ಲ್ಲು ಪಟ್ಟಕ್ಕೆ ಬಂದನು. ಪಟ್ಟಕ್ಕೆ ಬಂದೊಡನೆಯೇ ತನ್ನ ತಾಯಿಯನ್ನು ಕೊಂದ ಭೈರರಸ ಒಡೆಯನನ್ನು ಯಾವ ಉಪಾಯದಿಂದಲಾದರೂ ಕೊಲ್ಲಬೇಕೆಂದು ಪ್ರಧಾನಿಗಳೊಡನೆ

ಆಲೋಚಿಸಿ ತನ್ನ ಕುಟುಂಬದವರಾದ ಸುರಾಲ ತೋಳಾರರಲ್ಲಿಯೂ ಈ ಸಂಗತಿಯನ್ನು ಹೇಳಿಕಳುಹಿಸಿದನು. ತೋಳಾರ ಅರಸನೂ ಇದಕ್ಕಾಗಿ ಬಹಳ ದುಃಖಪಟ್ಟು ಇಕ್ಕೇರಿ ಅರಸನ ಸಹಾಯದಿಂದ ಈ ಭೈರರಸನನ್ನು ಕೊಲ್ಲಬೇಕೆಂದು ಆಲೋಚಿಸಿ ಆ ಸಮಯದಲ್ಲಿ ಇಕ್ಕೇರಿ ಅರಸನಾದ ವೆಂಕಟಪ್ಪನಾಯಕನಿದ್ದಲ್ಲಿಗೆ ಚಿಕ್ಕರಾಯನೂ, ತೋಳಾರನೂ ಕೂಡಿ ಕಾಶಿಪತಿರಾಯನನ್ನು ರಾಯಭಾರಿಯಾಗಿ ಕಳುಹಿಸಿದರು. ವೆಂಕಟಪ್ಪನಾಯಕನು ಇದಕ್ಕೆ ಒಪ್ಪಿದನು. ತೋಳಾರನೂ ಹೊಸಂಗಡಿ ಹೊನ್ನೆಯ ಕಂಬಳಿ ಅರಸನೂ ಗಟ್ಟದ ಮಾರ್ಗವನ್ನು ಸರಿಪಡಿಸಿ, ವೆಂಕಟಪ್ಪನಾಯಕನು ದೊಡ್ಡ ಸೈನ್ಯದೊಡನೆ ಇಳಿದು ಬರುವ ಹಾಗೆ ಸಿದ್ಧಪಡಿಸಿದನು. ವೆಂಕಟಪ್ಪನಾಯಕನು 1608ರಲ್ಲಿ ದೊಡ್ಡ ಸೈನ್ಯದೊಡನೆ ಹೊಸಂಗಡಿ ಕಣಿವೆಯ ಮಾರ್ಗವಾಗಿ ಕಾರ್ಕಳಕ್ಕೆ ಬಂದನು. ಚಿಕ್ಕರಾಯನು ಸೈನ್ಯದೊಡನೆ ಪುತ್ತಿಗೆಯಿಂದ ಕಾರ್ಕಳದ ಕಡೆಗೆ ಹೊರಟನು. ಯುದ್ಧದಲ್ಲಿ ಧಾವಣಿ ಇಮ್ಮಡಿ ಭೈರವರಾಯನು ಮಡಿದುಬಿದ್ದನು. ಕಾರ್ಕಳ ಸೀಮೆಯು ವೆಂಕಟಪ್ಪನಾಯಕನ ಸ್ವಾಧೀನಕ್ಕೆ ಬಂತು. ವೆಂಕಟಪ್ಪನಾಯಕನು ಚಿಕ್ಕರಾಯನಿಗೆ ತಿರುಮಲಾದೇವಿಯನ್ನು ಕೊಂದ ಸ್ಥಳವನ್ನು (ಸಾಣೂರು ಗ್ರಾಮ) ಉಂಬಳಿಯಾಗಿ ಬಿಟ್ಟನು.

ಆ ಮೇಲೆ ಚಿಕ್ಕರಾಯನು ವೆಂಕಟಪ್ಪನಾಯಕನೊಡನೆ ಮಂಗಳೂರಿಗೆ ಹೋದನು. ಅಲ್ಲಿ ಬಂಗರಾಜನೂ, ವೇಣೂರು ಅಜಿಲನೂ, ವಿಟ್ಲದ ದೊಂಬ ಹೆಗ್ಗಡೆಯೂ, ಕುಂಬಳೆ ದೌಶಿಂಗ ಅರಸನೂ, ಬೈಲಂಗಡಿ ಮೂಲರರಸನೂ, ಚಿಕ್ಕರಾಯ ಚೌಟನ ಮುಖಾಂತರ ವೆಂಕಟಪ್ಪನಾಯಕನೊಡನೆ ಕಾಲುಮಾಡಿಕೊಂಡು ಕಪ್ಪಕೊಡತಕ್ಕ ಹಣ ನಿಗದಿಮಾಡಿ ತಮ್ಮ ತಮ್ಮ ರಾಜಧಾನಿಗಳಿಗೆ ಹೊರಟುಹೋದರು.

ಚಿಕ್ಕರಾಯನೂ, ವೆಂಕಟಪ್ಪನಾಯಕನೂ ಮಂಗಳೂರಿನಿಂದ ಮೂಲ್ಕಿಗೆ ಹೋಗುವಾಗ ಮೂಲಿಕೆ ಸಾವಂತನ ಸೈನ್ಯವು ದಾರಿಯನ್ನು ಅಡ್ಡಕಟ್ಟಿತು. ಹೊಳೆಯಲ್ಲಿ ಒಂದು ದೋಣಿಯಾದರೂ ಇರಲಿಲ್ಲ.

ಆಗ ಚಿಕ್ಕರಾಯನು ಇಕ್ಕೇರಿಯ ಸೈನ್ಯವನ್ನು ಬೇರೆ ದಾರಿಯಿಂದ ಹೆಜಮಾಡಿಗೆ ತಂದು ಇಳಿಸಿದನು. ಅನಂತರ ತನ್ನ ಸೈನ್ಯವನ್ನು ತೆಗೆದು ಕೊಂಡು ಪಟ್ಟಿ ಗ್ರಾಮಕ್ಕೆ ಹೋಗಿ ಸಾವಂತನ ಸೈನ್ಯವನ್ನು ಸೋಲಿಸಲು ಸಾವಂತನು ವೆಂಕಟಪ್ಪನಾಯಕನೊಡನೆ ಕೌಲುಮಾಡಿದನು.

ಮೂಲಿಕೆಯಿಂದ ಇಬ್ಬರೂ ಹೊರಟು ಬಾರಕೂರಿಗೆ ಹೋಗಿ, ಸುಂಕಾಲ ತೋಳಾರರೊಡನೆ ಕೌಲುಮಾಡಿ, ಕರವೂರು, ಮೆರಬಡಿ, ಸಾಳ ನಾಡು, ಬಟಕಳ, ಗೆರಸಪ್ಪೆ, ಚಂದಾವರ, ಗೋವರ್ಧನಗಿರಿ, ವಡ್ಡಿಮೇದಿನಿ ಈ ಇಷ್ಟು ಸೀಮೆಗಳನ್ನೂ ಭಟಕಲವನ್ನು ರಾಜಧಾನಿಯಾಗಿ ಮಾಡಿ ಕೊಂಡು ಆಳುತ್ತಿದ್ದ ಭೈರಾದೇವಿಯೊಡನೆ ಕೌಲುಮಾಡಿಕೊಂಡು ಕೊಲ್ಲೂರಿಗೆ ಹೋದರು ಅನಂತರ ವೆಂಕಟಪ್ಪನಾಯಕನು ಇಕ್ಕೇರಿಗೆ ಹೋದನು. ವೆಂಕಟಪ್ಪನಾಯಕನು ಹೋಗುವಾಗ ಚಿಕ್ಕರಾಯನು ತನಗೆ ಮಾಡಿದ ಸಹಾಯಕ್ಕಾಗಿ ಪಟ್ಟಿಗ್ರಾಮ ಮತ್ತು ಹೆಜಮಾಡಿ ಮಾಗಣೆ ಯನ್ನು ಚಿಕ್ಕರಾಯನಿಗೆ ಉಂಬಳಿಯಾಗಿ ಬಿಟ್ಟನು. ಈ ಸಮಯದಲ್ಲಿ ಪೋರ್ತುಗೀಸರ ಹಾವಳಿಯು ಹೆಚ್ಚಾಗುತ್ತ ಬಂದದರಿಂದ ಮಂಗಳೂರು ರಾಜ್ಯದೊಳಗೆ ಕೊಡೆಯಾಲ, ಮೂಲಿಕೆ, ಮೂಡಬಿದರೆ, ಉಳ್ಳಾಲ (ಸೋಮೇಶ್ವರ)ಕುಂಬಳೆ, ಕಾಸರಗೋಡು, ಪುದುವೆಟ್ಟು, ಬೆಳ್ಳಾರೆ, ಕಾಂತ ಮಂಗಲ, ಬಂದ್ಯೈಡ್ಕ, ಕುಂಡೆಂಕುಳಿ, ಕೊಲ್ಲೂರುಬಾಚಿ, ಶಿಶಿಲ, ಚಂದ್ರಗಿರಿ, ಕಿದೂರು, ಮೂಡುಗೊಡೆಯಾಲ, ಫಣಿಯಾಲ, ಇಷ್ಟು ಕೋಟೆಗಳನ್ನು ಕಟ್ಟಿಸಲಿಕ್ಕೆ ಮಂಗಳೂರು ರಾಜ್ಯದ ಅಧಿಕಾರಿಗೆ ಅಪ್ಪಣೆಕೊಟ್ಟನು. ಬಾರಕೂರು ರಾಜ್ಯದಲ್ಲಿ ಬಾರಕೂರು, ಕಲ್ಯಾಣಪುರ, ಮಲ್ಲಿಕಾರ್ಜುನ ಗಿರಿ, ಕಂಡಲೂರು ಕೋಟೆಗಳನ್ನು ಕಟ್ಟಿಸಲಿಕ್ಕೆ ಬಸರೂರು ಅಧಿಕಾರಿಗೆ ಅಪ್ಪಣೆಕೊಟ್ಟನು. ಹೊನ್ನೆಯ ಕಂಬಳಿಯ ರಾಜ್ಯದಲ್ಲಿ ಹೊಸಂಗಡಿ ಮತ್ತು ಬಗ್ಗವಾಡಿಯಲ್ಲಿ ಕೋಟೆ ಕಟ್ಟಿಸಲಿಕ್ಕೆ ತನ್ನ ಸೇನಾಧಿಪತಿಯಾದ ದಳವಾಯಿ ಲಿಂಗಣ್ಣನಿಗೆ ಅಪ್ಪಣೆಕೊಟ್ಟನು.

ಚಿಕ್ಕರಾಯನ ಕಾಲದಲ್ಲಿ ಚೌಟರ ಸೀಮೆಯು ಬಹಳ ವಿಸ್ತಾರವಾಯಿತು. ಉಳ್ಳಾಲ, ತಲಪಾಡಿ, ಅಮ್ಮೆಂಬಳ, ಮಿಂಜಾರ, ಮಳಲಿ, ಪುತ್ತಿಗೆ, ಕಡಂದಳೆ, ಪೇಜಾವರ, ಹೆಜಮಾಡಿ, ಮುಂಡುಕೂರು ಮಾಗಣೆಗಳು, ಬಾಳೆಪುಣೆ, ಕೈರಂಗಳ, ಬೊಳುಮ, ಬಾಳಕಳವಾರು, ಸಾಣೂರು, ಪಟ್ಟೆಗ್ರಾಮಗಳು ಅಮುಣಜೆ ಮತ್ತು ಹೊಸಕೇರಿ ಎಂಬ 2 ಸುಂಕಗಳು ಇವುಗಳೆಲ್ಲಾ ಚಿಕ್ಕರಾಯನ ಕೈ ಕೆಳಗೆ ಬಂದವು. ಕ್ರಿ. ಶ. 1623 ರಲ್ಲಿ ಪಶ್ಚಿಮ ಕರಾವಳಿಯಲ್ಲಿ ಪ್ರಯಾಣಮಾಡಿದ ಡೆಲ್ಲಾವೆಲ್ಲಿಯು ಭೂಲೋಕದ ಒಂದು ನಕ್ಷೆಯನ್ನು ಚಿಕ್ಕರಾಯನಿಗೆ ಇನಾಮಾಗಿ ಕೊಟ್ಟನು

**15. 2ನೇ ಚನ್ನಮ್ಮದೇವಿ.** ಕ್ರಿ. ಶ. 1628—1630. ಚಿಕ್ಕರಾಯನ ತರುವಾಯ ಅವನ ಸೊಸೆ ಚನ್ನಮ್ಮದೇವಿಯು ಶಾ. ಶ. 1550ನೇ ವಿಭವ ಸಂ|ರದ ಶ್ರಾವಣ ಶು| ೧೩ರಲ್ಲಿ ಪಟ್ಟಕ್ಕೆ ಬಂದಳು. ಆಗ ಇಕ್ಕೇರಿಯಲ್ಲಿ ಪ್ರಧಾನಿಯೂ ಸೇನಾಧಿಪತಿಯೂ ಆಗಿದ್ದು ಭದ್ರಪ್ಪನಾಯಕನ ಕಾಲದಲ್ಲಿ ರಾಜ್ಯವಾಳುತ್ತಿದ್ದ ಶಿವಪ್ಪನಾಯಕನು ತುಳುರಾಜ್ಯಕ್ಕೆ ಬಂದು ಎಲ್ಲಾ ತುಳು ಜೈನ ಅರಸರು ಕೊಡತಕ್ಕ ಕಪ್ಪವನ್ನು ನಿಶ್ಚಯಿಸಿದನು. ಚೌಟರರಸನು 3000 ಇಕ್ಕೇರಿ ವರಹ ಕೊಡಬೇಕೆಂದು ನಿಶ್ಚಯಿಸಿದನು.

**16. 3ನೇ ಭೋಜರಾಯ.** ಕ್ರಿ. ಶ. 1630—1644. ಚನ್ನಮ್ಮದೇವಿಯ ತರುವಾಯ ಅವಳ ಮಗ ಭೋಜರಾಯನು ಶಾ. ಶ. 1552ನೇ ಪ್ರಮೋದುತ ಸಂ|ದ ಮಾಘ ಶು| ೧೧ರಲ್ಲು ಪಟ್ಟಕ್ಕೆ ಬಂದನು. ಇಕ್ಕೇರಿಗೆ ಕೊಡಬೇಕಾದ ಕಪ್ಪವನ್ನು ಸಲ್ಲಿಸದೆ ಇದ್ದುದರಿಂದ ವೀರಭದ್ರಪ್ಪನಾಯಕನು ಭೋಜರಾಯನನ್ನು ಇಕ್ಕೇರಿಗೆ ಕರೆಯಿಸಿ ಸೆರೆಯಲ್ಲಿಟ್ಟನು. ಆಗ ಅಮ್ಮೆಂಬಳ ಮಾಗಣೆಯವರು ಕೊಡಬೇಕಾದ ಕಪ್ಪವನ್ನು ಕೊಟ್ಟು ಭೋಜರಾಯನನ್ನು ಬಿಡಿಸಿಕೊಂಡು ಬಂದರು.

ಮುಂದಿನ ವರುಷಗಳಿಗೆ ವರ್ಷ ಒಂದಕ್ಕೆ 4050 ವರಹ 4¼ ಹಣ ವನ್ನು ಕಪ್ಪವಾಗಿ ಕೊಡಬೇಕೆಂದೂ, ಸೈನ್ಯದ ಖರ್ಚು ಕಡಿಮೆಮಾಡಿ ರಾಜಮರ್ಯಾದೆಗೆ ಬೇಕಾದ 10 ಕುದುರೆಗಳನ್ನೂ 100 ಮುಂದಿ ಊಳಿಗದವರನ್ನೂ, ಪಲ್ಲಕಿ, ದಂಡಿಗೆ ಬಿರುದುಬಾವಲಿ ಹಿಡಕೊಳ್ಳುವ ಜನರನ್ನೂ ಪಾಠಕರನ್ನೂ ಮಾತ್ರವೇ ಇಟ್ಟುಕೊಳ್ಳಬೇಕೆಂದು ಸರ್ವಾಧಿ ಕಾರಿ ಶಿವಪ್ಪನಾಯಕನು ಅಪ್ಪಣೆಕೊಟ್ಟು ಕರಾರಾಗಿ ಭೋಜರಾಯನನ್ನು ಹಿಂತಿರುಗಿ ಪುತ್ತಿಗೆಗೆ ಕಳುಹಿಸಿದನು.

ಪುತ್ತಿಗೆ ಅರಮನೆಯು ಬಹಳ ಜೀರ್ಣವಾದ್ದರಿಂದ ಭೋಜ ರಾಯನು ಅರಮನೆಯನ್ನು ಮೂಡಬಿದರೆಯಲ್ಲಿ ಕಟ್ಟಿಸಿದನು. ಈ ಅರಮನೆಯ ಪ್ರವೇಶವು ಶಾ. ಶ. 1565ನೇ ಸ್ವಭಾನು ಸಂ|ದಲ್ಲಿ (ಕ್ರಿ ಶ. 1643) ಆಯಿತು.

ಈ ಅರಸನ ಕಾಲದಲ್ಲಿ ಸೋಮೇಶ್ವರ ಗ್ರಾಮವನ್ನು ಮಾತ್ರವೇ ಚೌಟನಿಗೆ ಬಿಟ್ಟು ಉಳ್ಳಾಲದ ಮಾಗಣೆಯನ್ನೂ, ಬೊಳುವ ಗ್ರಾಮ ವನ್ನೂ ಇಕ್ಕೇರಿಯವರು ತಮ್ಮ ಸ್ವಾಧೀನವಿಟ್ಟುಕೊಂಡರು. ಚಿಕ್ಕ ರಾಯ ಚೌಟನ ತರುವಾಯ ಈ ವಂಶವು ಬಹಳ ದೀನಸ್ಥಿತಿಗೆ ಬಂತು.

**17. 3ನೇ ಚನ್ನಮ್ಮದೇವಿ. ಕ್ರಿ. ಶ. 1644—1687.** ಭೋಜರಾಯನ ತರುವಾಯ ಅವನ ಸೊಸೆ ಚನ್ನಮ್ಮದೇವಿಯು ಶಾ. ಶ. 1566ನೇ ತಾರಣ ಸಂ|ದ ಜ್ಯೇಷ್ಠ ಬ. ೫ಲ್ಲು ಪಟ್ಟಕ್ಕೆ ಬಂದು 43 ವರುಷ ಆಳಿದಳು.

**18. 2ನೇ ಚಂದ್ರಶೇಖರ ಚಿಕ್ಕರಾಯ. ಕ್ರಿ. ಶ. 1687—1715.** ಚನ್ನಮ್ಮ ದೇವಿಯ ಮಗನಾದ ಚಿಕ್ಕರಾಯನು ಶಾ. ಶ. 1609ನೇ ಪ್ರಭವ ಸಂ|ದ ಪುಷ್ಯ ಬ. ೫ಲ್ಲಿ ಪಟ್ಟಕೆ ಬಂದು 28 ವರುಷ ಆಳಿದನು.

**19. 2ನೇ ಪದುಮಲಾದೇವಿ.** ಕ್ರಿ. ಶ. 1715-1726. ಚಿಕ್ಕರಾಯನ ಸಹೋದರಿ ಪದುಮಲಾದೇವಿಯು ಶಾ. ಶ. 1637ನೇ ಮನ್ಮಥ ಸಂ||ದ ಫಾಲ್ಗುಣ ಬ. ೭ಲ್ಲಿ ಪಟ್ಟಕ್ಕೆ ಬಂದು 11 ವರುಷ ಆಳಿದಳು.

**20. 3ನೇ ಅಬ್ಬಕ್ಕದೇವಿ.** ಕ್ರಿ. ಶ. 1726—1749. ಪದುಮಲಾದೇವಿಯ ತಂಗಿ ಅಬ್ಬಕ್ಕದೇವಿಯು ಶಾ. ಶ. 1648ನೇ ಪರಾಭವ ಸಂ||ದ ಕಾರ್ತಿಕ ಶು|| ೫ಲ್ಲಿ ಪಟ್ಟಕ್ಕೆ ಬಂದಳು. ಶಾ. ಶ. 1651 (ಕ್ರಿ. ಶ. 1729) ಸೌಮ್ಯ ಸಂ||ದಲ್ಲಿ ಇಕ್ಕೇರಿಯ ಅರಸು ಸೋಮಶೇಖರ ನಾಯಕನು ಕನ್ನಡ ಜಿಲ್ಲೆಗೆ ಬಂದು ಮೂಡ ಬಿದರೆ ಪೊನ್ನಚಾರು ಮಠದಲ್ಲಿರುವಾಗ್ಗೆ ಅಬ್ಬಕ್ಕದೇವಿಯು ಹೋಗಿ ಭೇಟಿಮಾಡಿದಳು. ಸೋಮಶೇಖರನು ಪದ್ಧತಿಪ್ರಕಾರ ಮರ್ಯಾದೆ ಯನ್ನು ಕೊಟ್ಟು ಕುಳ್ಳಿರಿಸಿ ಉಡಿಗೆಉಚಿತಗಳನ್ನು ಕೊಟ್ಟ ಮೇಲೆ ಅವ ರಿಗೆ ಪರಸ್ಪರ ಸಂಭಾಷಣೆಯಲ್ಲಿ ಮನಃಕ್ಲೇಶಬಂದುದರಿಂದಲೂ ಅಬ್ಬಕ್ಕ ದೇವಿಯನ್ನು ಬಿದನೂರಿಗೆ ತೆಗೆದುಕೊಂಡು ಹೋಗಬೇಕೆಂದು ಸೋಮ ಶೇಖರನಿಗೆ ಆಲೋಚನೆಯಾದ್ದರಿಂದಲೂ ಅಬ್ಬಕ್ಕದೇವಿಗೆ ಬೇಸರವಾಗಿ ಅವಳು ಉಪಾಯದಿಂದ ಅರಮನೆಗೆ ಹೋದಳು. ಇನ್ನು ಮುಂದೆ ನಿಂತರೆ ಪ್ರಾಣಹಾನಿಯಾಗುವದೆಂದು ಆಲೋಚಿಸಿ ತನ್ನ ಮಗಳಾದ ಚನ್ನಮ್ಮದೇವಿ ಯನ್ನೂ ಮೊಮ್ಮಗ ಚಿಕ್ಕರಾಯನನ್ನೂ ಸ್ವಲ್ಪ ಸೈನಿಕರನ್ನೂ ಸಂಗಡ ಕರಕೊಂಡು ಹೊರಟು ಪಡುಬಿದರೆಯ ಬಂದರದಿಂದ ಹಡಗುಹತ್ತಿ ಮಲಬಾರು ಜಿಲ್ಲೆಯ ಚರಕಲ್ಲಿಗೆ ಹೋಗಿ ನಿಂತಳು. ರಾಜ್ಯಭಾರ ವನ್ನು ಮಂತ್ರಿ ಸೇನಾಧಿಪತಿಗಳೇ ನಡಿಸುತ್ತಿದ್ದರು. ಕಪ್ಪಕೊಡತಕ್ಕ 4050 ವರಹ ೪|| ಹಣವನ್ನು ಮಂಗಳೂರಿನಲ್ಲಿರುವ ಇಕ್ಕೇರಿ ಅಧಿ ಕಾರಿಗೆ ಕೊಡುತ್ತಿದ್ದರು. ಶಾ ಶ. 1667ನೇ ಕ್ರೋಧನ ಸಂ||ದ ವರೆಗೆ (ಕ್ರಿ. ಶ. 1745) ಇದೇ ರೀತಿಯಲ್ಲಿ ನಡಿಯುತ್ತಾ ಬಂತು. ಕ್ರಿ. ಶ. 1746ಲ್ಲಿ ಇಕ್ಕೇರಿ ಅರಸನು ಈ ಸೀಮೆಯನ್ನು ಸೆಳಕೊಂಡು

ಮುದ್ರಾಡಿ ಅನಂತಯ್ಯನನ್ನು ಚೌಟರ ಸೀಮೆಗೆ ಅಧಿಪತಿಯಾಗಿಟ್ಟು ಕೊಂಡು ಆಳುವರೆಂಬ ವರ್ತಮಾನವನ್ನು ಅಬ್ಬಕ್ಕದೇವಿಯು ಕೇಳಿ ಕೊಲತ್ತರಸನ ಸೈನ್ಯವನ್ನು ತನ್ನ ಸಹಾಯಕ್ಕೆ ಕರಕೊಂಡು ಕನ್ನಡ ಜಿಲ್ಲೆಯ ದಕ್ಷಿಣ ಭಾಗವನ್ನು ಸುಲಿಗೆಮಾಡುತ್ತಾ ಸಿಕ್ಕಿದ ಹಣ ದಿಂದ ಕಾಲಕ್ಷೇಪಮಾಡಿಕೊಂಡಿದ್ದಳು. ಕ್ರಿ. ಶ. 1740ರಲ್ಲಿ ಇಕ್ಕೇರಿ ಸೋಮಶೇಖರ ನಾಯಕನು ಕಾಲವಾಗಿ ಬೂದಿ ಬಸವಪ್ಪ ನಾಯಕನು ಪಟ್ಟಕ್ಕೆ ಬಂದನು. 1749ರಲ್ಲಿ ಅಬ್ಬಕ್ಕದೇವಿಯು ಯೋಗ್ಯರಾದ ಸಾಮಾಜಿಕರನ್ನು ಬಸವಪ್ಪ ನಾಯಕನಿದ್ದಲ್ಲಿಗೆ ಕಳುಹಿಸಿ ತನ್ನ ಸೀಮೆಯನ್ನು ತಿರಿಗಿ ಸ್ವಾಧೀನಪಡಿಸಿಕೊಂಡು ಮಲೆಯಾಳದಿಂದ ಹೊರಟು ಬರುವಾಗ ದಾರಿಯಲ್ಲಿ ಅಬ್ಬಕ್ಕದೇವಿಯು ಕಾಲವಾದಳು. ಆಕೆಯ ಮಗಳು ಚೆನ್ನಮ್ಮ ದೇವಿಯೂ ಮೊಮ್ಮಗ ಚಿಕ್ಕರಾಯನೂ ಪರಿವಾರ ಸಹಿತರಾಗಿ ಮೂಡಬಿದರೆಗೆ ಬಂದರು. ಶಾ. ಶ. 1671ನೇ ಶುಕ್ಲ ಸಂ|ರದಲ್ಲಿ (ಕ್ರಿ. ಶ. 1749ರಲ್ಲಿ) ಅರಮನೆಯನ್ನು ಜೀರ್ಣೋದ್ಧಾರ ಮಾಡಿಸಿ ಚಂದ್ರಶೇಖರ ಚಿಕ್ಕರಾಯನಿಗೆ ಪಟ್ಟವಾಯಿತು.

.21 **3ನೇ ಚಂದ್ರಶೇಖರ ಚಿಕ್ಕರಾಯ**. ಕ್ರಿ. ಶ. 1749—1769. ಚಂದ್ರಶೇಖರ ಚಿಕ್ಕರಾಯನು ಶಾ. ಶ. 1671ನೇ ಶುಕ್ಲ ಸಂ|ರದ ಚೈತ್ರ ಶು| ೨ರಲ್ಲು ಪಟ್ಟಕ್ಕೆ ಬಂದನು. ಈ ಅರಸನು ತನ್ನ ಪಟ್ಟಾಭಿಷೇಕಕ್ಕೆ ಒಸವಪ್ಪನಾಯಕನು ಮೂಡಬಿದರೆಗೆ ಬಂದಾಗ ಅವನಿಗೆ ಒಂದು ಆನೆಯನ್ನು ಕಾಣಿಕೆಯಾಗಿ ಕೊಟ್ಟನು. ಬಸವಪ್ಪ ನಾಯಕನು 10 ದಿವಸ ಮೂಡಬಿದರೆಯಲ್ಲಿ ನಿಂತು ಸೀಮೆಯ ಲೆಖ್ಖ ವನ್ನು ತನಖಿಮಾಡಿ 13792 ವರಹ $1\frac{1}{2}$ ಹಣ ಕಪ್ಪಕೊಡಬೇಕೆಂದು ನಿಶ್ಚಯಿಸಿ ಅದರಲ್ಲಿ ದೇವತಾ ಉತ್ತಾರ, ದೈವ ಉತ್ತಾರ, ಅಜಿಲ ಉತ್ತಾರ, ಪುರವರ್ಗ ಉತ್ತಾರ ಮುಂತಾದ್ದನ್ನು ಕಳೆದು 7779 ವರಹ $2\frac{1}{2}$ ಹಣ $1\frac{1}{2}$ ಹಾಗವನ್ನು ಕೊಟ್ಟು ಸೀಮೆಯನ್ನು ಆಳಿಕೊಂಡು ಬರಬಹುದೆಂದು ಅಪ್ಪಣೆಕೊಟ್ಟನು.

ಕ್ರಿ. ಶ. 1763 (ಶಾ. ಶ. 1684)ನೇ ಚಿತ್ರಭಾನು ಸಂ|ರದಲ್ಲಿ ನವಾಬ ಹೈದರಲ್ಲಿಯು ಬಿದನೂರಿಗೆ ಬಂದು ಇಕ್ಕೇರಿ ಸಂಸ್ಥಾನವನ್ನು ತನ್ನ ಸ್ವಾಧೀನಮಾಡಿಕೊಂಡು ಈ ಸಂಸ್ಥಾನದ ಒಳಅರಸುಗಳಿಗೆ ಕೌಲುಪತ್ರಗಳನ್ನು ಬರಿಸಿದನು. ಚಿಕ್ಕರಾಯನಿಗೆ ಬಜಪೆ ಕೃಷ್ಣಯ್ಯನ ಹತ್ತರ ಕಾಗದವನ್ನು ಹೈದರನು ಕೊಟ್ಟು ಕಳುಹಿಸಿದನು. ಬಳಿಕ ಹೈದರನು ಗಟ್ಟ ಇಳಿದು ಕಾರ್ಕಳಕ್ಕೆ ಬಂದ ತರುವಾಯ ಚಿಕ್ಕರಾಯನು ಅಲ್ಲಿಗೆ ಹೋಗಿ ಕಾಣಿಸಿಕೊಂಡಲ್ಲಿ ಎದ್ದು ಕುಳ್ಳಿರಿಸಿ ಸನ್ಮಾನ ಬಹುಮಾನಗಳಾಗಿ ಇಬ್ಬರೂ ಮೂಡಬಿದರೆಗೆ ಬಂದರು. ನವಾಬ ಹೈದರಲ್ಲಿಯು ಪೊನ್ನಚಾರು ಮಠದಲ್ಲಿ ಉಳುಕೊಂಡನು. ಎಲ್ಲಾ ತರದ ರಾಜವೈಭವಗಳಿಂದ ಕೂಡಿಕೊಂಡು ತನ್ನ ಭೇಟಿಗೆ ಬರಬೇಕೆಂದು ಹೈದರನು ಚಿಕ್ಕರಾಯನಿಗೆ ಹೇಳಕಳುಹಿಸಿದನು. ಚಿಕ್ಕರಾಯನು ರಾಜವೈಭವಗಳಿಂದ ಪೊನ್ನಚಾರು ಮಠಕ್ಕೆ ಹೋದನು. ಅವನು ಬರುವದನ್ನು ಹೈದರನು ಮಠದಮಾಳಿಗೆಯಲ್ಲಿ ನಿಂತು ನೋಡುತ್ತಿದ್ದನು. ಚಂದ್ರಶೇಖರ ಚಿಕ್ಕರಾಯನು ಮಠದ ಬಾಗಲಲ್ಲಿ ಇಳಿದ ಕೂಡಲೇ ಹೈದರನು ಮಾಳಿಗೆಯಿಂದ ಇಳಿದು ಕೆಳಗೆ ಬಾಗಲಿಗೆ ಬಂದು ಚಿಕ್ಕರಾಯನ ಕೈಹಿಡಿದು ಕರಕೊಂಡು ಹೋಗಿ ತನ್ನ ಸಮೀಪದಲ್ಲಿ ಕುಳ್ಳಿರಿಸಿ ಅವನ ಸಾಮಾಜಿಕರನ್ನೂ ಎಡಬಲದಲ್ಲಿ ಕುಳ್ಳಿರಿಸಿ ಉಡಿಗೆ ಉಚಿತಗಳನ್ನು ಕೊಟ್ಟು ಸೀಮೆಯ ವಿಚಾರವನ್ನೆಲ್ಲಾ ಕೇಳಿ ತರುವಾಯ 14,000 ವರಹ ಕಪ್ಪಕೊಡಬೇಕೆಂದು ನಿಶ್ಚಯಿಸಿದನು.

ಅನಂತರ ಕ್ರಿ. ಶ. 1764ನೇ ತಾರಣ ಸಂ|ರದಲ್ಲಿ 18,000 ವರಹ ಕೊಡಬೇಕೆಂದು ಹೈದರನು ಅಪ್ಪಣೆಕೊಟ್ಟನು. ಕ್ರಿ. ಶ. 1765ನೇ ಪಾರ್ಥಿವ ಸಂ|ದಲ್ಲಿ 19,000 ವರಹ ಕಪ್ಪಕೊಡಬೇಕಾಯಿತು. ಅದೇ ವರುಷ ಮಂಗಳೂರು ಜಿಲ್ಲೆಯ ಅಧಿಕಾರವನ್ನು ಹೈದರಲ್ಲಿಯು ಶೇಕಲ್ಲಿಗೆ ಕೊಟ್ಟು ಎಲ್ಲಾ ಒಳಅರಸುಗಳ ರಾಜ್ಯವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಆಗ ಹೈದರನು ಚೌಟರ

ಸೀಮೆಗೆ ಒಬ್ಬ ಅಧಿಕಾರಿಯನ್ನು ನೇಮಿಸಿ 21,215 ವರಹ 4 ಹಣ ಕಂದಾಯವನ್ನು ಸೀಮೆಯಿಂದ ವಸೂಲುಮಾಡಿದನು.

ಕ್ರಿ. ಶ. 1766 (ಸರ್ವಜಿತು)ರಲ್ಲಿ ಇಂಗ್ಲೀಷರು ಮಂಗಳೂರು ಕೋಟೆಯನ್ನು ಹಿಡಿಯಲು ಅದನ್ನು ತಿರಿಗಿ ಹಿಡಕೊಳ್ಳುವದಕ್ಕಾಗಿ ಹೈದರನು ನಗರದಿಂದ ಮಂಗಳೂರಿಗೆ ಹೋಗಲಿಕ್ಕೆ ಮೂಡಬಿದರೆಗೆ ಬಂದು ಪೊನ್ನಚಾರು ಮಠದಲ್ಲಿರುವಾಗ ಚಿಕ್ಕರಾಯನು ಅಲ್ಲಿಗೆ ಹೋಗಿ ತನ್ನ ಸ್ಥಿತಿಯನ್ನು ಹೇಳಿಕೊಳ್ಳಲು 18,000 ವರಹವನ್ನು ಕೊಟ್ಟು ಸೀಮೆಯನ್ನು ಆಳಿಕೊಂಡು ಇರಬಹುದೆಂದು ಹೈದರನು ಹೇಳಿದನು. ಆಗ ಚಿಕ್ಕರಾಯನು ಶೇಕಾಲಿಯು ಬಹಳ ಕ್ರೂರ ಸ್ವಭಾವದವನಾದ್ದರಿಂದ ಅವನ ಕೈಕೆಳಗೆ ರಾಜ್ಯವಾಳಲು ಅಸಾಧ್ಯವೆಂದು ಹೇಳಲು ಹೈದರನು ವರುಷಕ್ಕೆ 455 ವರಹ $1\frac{1}{2}$ ಹಣವನ್ನು ಚೌಟರ ಕುಟುಂಬಕ್ಕೆ ಇನಾಮಾಗಿ ಬಿಟ್ಟನು. ಚೌಟರ ವಂಶದ ರಾಜ್ಯಭಾರವು ಇಲ್ಲಿಗೆ ಮುಗಿಯಿತು.

ರಾಜ್ಯವನ್ನು ಕಳಕೊಂಡ ಮೇಲೆ ಈ ವಂಶದವರು ಮೂಡಬಿದರೆ ಅರಮನೆಯಲ್ಲಿ ಇರುತ್ತಿರುವರು. ಮೂಡಬಿದರೆಯ ಅರಮನೆಯಷ್ಟು ದೊಡ್ಡ ಅರಮನೆಯು ಕನ್ನಡ ಜಿಲ್ಲೆಯಲ್ಲಿ ಮತ್ತೊಂದಿಲ್ಲ. ಅದು ಹಾಳುಬಿದ್ದಿರುವದನ್ನು ಈಗಲೂ ನೋಡಬಹುದು. ಸುಮಾರು 8 ಎಕ್ರೆ ವಿಸ್ತೀರ್ಣವಾದ ಸ್ಥಳದ ಮಧ್ಯದಲ್ಲಿ ಅರಮನೆಯೂ ಸುತ್ತಲೂ ಕೋಟೆಯೂ ಇದೆ. ಕೋಟೆಯ ಪೂರ್ವ ದಕ್ಷಿಣ ಪಶ್ಚಿಮ ಕಡೆಗಳಲ್ಲಿ ಕಂದಕವೂ ಇದೆ. ಅರಮನೆಯ ಮುಂದುಗಡೆ ಉತ್ತರಕ್ಕಿರುವ ರಾಜಾಂಗಣವು ಸುಮಾರು 2 ಎಕ್ರೆ ವಿಸ್ತೀರ್ಣವಾಗಿದೆ. ರಾಜಾಂಗಣವನ್ನು ದಾಟುತ್ತಲೇ ಈಗ ಹಾಳುಬಿದ್ದ ಹುಲಿಮುಖದ ಚಾವಡಿಯು ಇದೆ. ಇದನ್ನು ದಾಟುತ್ತಲೇ ಸಣ್ಣ ರಾಜಾಂಗಣವು ಸುಮಾರು $\frac{1}{2}$ ಎಕ್ರೆ ವಿಸ್ತೀರ್ಣವಾಗಿದೆ. ಅದನ್ನು ದಾಟುತ್ತಲೇ ಹೊರಗೆ ಅಗಲವಾದ ಚಾವಡಿಗಳೂ ಒಳಗೆ ಚತುಷ್ಕೋಣಾಕೃತಿಯಲ್ಲಿರುವ ಒಡ್ಡೋಲಗದ

ಚಾವಡಿಯೂ ಇದೆ. ಒಡ್ಡೋಲಗದ ಚಾವಡಿಗೆ ತಾಗಿ ಮೃತರಾಜನ ಶವವನ್ನು ಲವಣದಲ್ಲಿ ಹಾಕಿಡುವ ದೊಡ್ಡ ಮರದ ಮರಿಗೆ ಇರುವ ಕೋಣೆ ಇರುವದು. ಇದರ ಹಿಂದುಗಡೆ ಪಶ್ಚಿಮಕ್ಕೆ ಸೋಮನಾಥ ದೇವಸ್ಥಾನವಿತ್ತು. ಈಗ ಇದು ಪೂರ್ಣ ಹಾಳಾಗಿದೆ. ಈ ದೇವಸ್ಥಾನದ ಸುತ್ತಲೂ ಒಡ್ಡೋಲಗದ ಚಾವಡಿಯ ರಕ್ಷಣೆಗಾಗಿ ಎತ್ತರವಾದ ಕಲ್ಲಿನ ಗೋಡೆ ಇದೆ. ಪಟ್ಟದ ಚಾವಡಿಯ ಪೂರ್ವಕ್ಕೆ ತೋಷಖಾನೆಯ ಚಾವಡಿ ಇದೆ. ಇದು ಪಟ್ಟದ ಚಾವಡಿಯಷ್ಟೇ ದೊಡ್ಡದಾಗಿತ್ತು. ಈಗ ಇದು ಪೂರ್ಣ ಹಾಳುಬಿದ್ದು ಹೋಗಿದೆ. ಇದರ ಪೂರ್ವಕ್ಕೆ ಅಂತಃಪುರದ ಚಾವಡಿ, ಅದರ ಪೂರ್ವಕ್ಕೆ ಅಂತಃಪುರ, ಇದರ ಉತ್ತರಕ್ಕೆ ನೀರು ತುಂಬಿಸಿ ಮೊಯಲಿಕ್ಕೆ ಕಟ್ಟಿಸಿದ ಬಹಳ ಚಂದವಾದ ಶಿಲೆಯಿಂದಲೇ ಮಾಡಿದ ಸಣ್ಣ ಕೊಳ ಇದೆ. ಅರಮನೆಯ ಪೂರ್ವಕ್ಕೂ ದಕ್ಷಿಣಕ್ಕೂ ಕಾಡು ಇದೆ. ಅರಮನೆ ಕೋಟೆಯ ನೈರುತ್ಯಕ್ಕೆ ಮಾರಿಗುಡಿಯೂ ದಕ್ಷಿಣಕ್ಕೆ ಜಾನಕಿ ಕೋಟೆಯೂ ಇವೆ. ಪಟ್ಟದ ಚಾವಡಿಯನ್ನು ಹಿಸ್ಟೋರಿಕಲ್ ಮೊನ್ಯೂಮೆಂಟ ಆಕ್ಟಿ'ನ ಪ್ರಕಾರ ದುರುಸ್ತಿಮಾಡುವ ಬಗ್ಗೆ ಸರಕಾರವು ಇದೇ ಕಳೆದ 1921ರಲ್ಲಿ ವಹಿಸಿಕೊಂಡಿದೆ.

**22. 2ನೇ ಚನ್ನರಾಯ** ಕ್ರಿ. ಶ. 1769—1781. ಚಂದ್ರಶೇಖರನ ಮಗ ಚನ್ನರಾಯನಿಗೆ ಶಾ. ಶ. 1691ನೇ ವಿರೋಧಿ ಸಂ|ರದ ಶ್ರಾವಣ ಬ| ೯ರಲ್ಲು ಪಟ್ಟವಾಯಿತು.

**23. 4ನೇ ಚಂದ್ರಶೇಖರ ಚಿಕ್ಕರಾಯ** ಕ್ರಿ. ಶ. 1781—1783. ಚನ್ನರಾಯನ ತಮ್ಮ ಚಿಕ್ಕರಾಯನಿಗೆ ಶಾ. ಶ. 1703ನೇ ಪ್ಲವ ಸಂ|ರದ ಮಾರ್ಗಶಿರ ಶು| ೧೦ರಲ್ಲಿ ಪಟ್ಟವಾಯಿತು.

**24 ಚಂದ್ರಶೇಖರ ಚಿಕ್ಕರಾಯ.** ಕ್ರಿ. ಶ. 1783—1822. ಚಿಕ್ಕರಾಯನ ತಮ್ಮ ಚಂದ್ರಶೇಖರ ಚಿಕ್ಕರಾಯನು ಶಾ. ಶ. 1705ನೇ ಶೋಭಕೃತು ಸಂ|ರದ ಜ್ಯೇಷ್ಠ ಶು| ೩ರಲ್ಲಿ ಪಟ್ಟಕ್ಕೆ ಬಂದನು. ಕ್ರಿ. ಶ. 1793ರಲ್ಲಿ ಟೀಪುವಿನ ರಾಜ್ಯಭಾರದ ಕಾಲದಲ್ಲಿ ಮಂಗಳೂರು ಜಿಲ್ಲೆಯನ್ನು ಆಳುತ್ತಿದ್ದ ಅಸೋಫನಾದ ಸುಲುಖಾನನು ಈ ಕುಟುಂಬಕ್ಕೆ ಸಲ್ಲುತ್ತಿದ್ದ 455 ವರಹದಲ್ಲಿ, ಈ ಅರಸನು ಇಂಗ್ಲೀಷರಿಗೆ ಸಹಾಯವಾಡಿದನೆಂದು 300 ವರಹವನ್ನು ಭಂಡಾರಕ್ಕೆ ವಜಾಮಾಡಿ 155 ವರಹ 1½ ಹಣ ಮಾತ್ರವೇ ಕೊಡುತ್ತಾ ಬಂದನು. ಅನಂತರ 205 ವರಹ 3½ ಹಣದ ಪ್ರಕಾರ ಕನ್ನಡ ಜಿಲ್ಲೆಯು ಇಂಗ್ಲೀಷರ ಸ್ವಾಧೀನಕ್ಕೆ ಬರುವ ವರೆಗೆ ಸಿಕ್ಕಿತು. ಇಂಗ್ಲೀಷ ಸರಕಾರವು 198 ವರಹ 4 ಹಣವನ್ನು (ರೂ. 793—12—0) ಇಷ್ಟರ (1923) ವರೆಗೆ ಕೊಡುತ್ತಾ ಬರುತ್ತದೆ.

**25 ಚಂದ್ರಶೇಖರ ಚನ್ನರಾಯ.** ಕ್ರಿ ಶ. 1822—1833. ಚಂದ್ರಶೇಖರ ಚಿಕ್ಕರಾಯನ ಮೊಮ್ಮಗ ಚಂದ್ರಶೇಖರನು ಶಾ. ಶ. 1744ರಲ್ಲಿ ಚಿತ್ರಭಾನು ಸಂ|ರದ ಜ್ಯೇಷ್ಠ ಬ| ೧೪ರಲ್ಲಿ ಪಟ್ಟಕ್ಕೆ ಬಂದನು.

1833ರಲ್ಲಿ ಚನ್ನರಾಯನು ಮಕ್ಕಳಿಲ್ಲದೆ ಕಾಲವಾಗಲು ಅವನ ರಾಣಿಯು ಗುಮ್ಮಣ್ಣ ಎಂಬ ಮಗುವನ್ನು ದತ್ತಕ್ಕೆ ತೆಗೆದುಕೊಂಡು ಅವನಿಗೆ ಚಿಕ್ಕರಾಯ ಚೌಟನೆಂಬ ಹೆಸರಿನಿಂದ ಪಟ್ಟವಾಯಿತು. ಇವನು 1867ರಲ್ಲಿ ಕಾಲವಾಗಲು ವ್ಯಾಜ್ಯವಾಗಿ 1880ರಲ್ಲಿ ಕುಂಞಮ್ಮ ಶೆಟ್ರ ವಶಕ್ಕೆ ಬಂತು. ಆದರೆ ಇವರಿಗೆ ಪಟ್ಟವಾಗಲಿಲ್ಲ. ಇವರು ನಿಸ್ಸಂತತಿಯಾದ್ದರಿಂದ ಮಗ ಧರ್ಮಸಾಮ್ರಾಜ್ಯರ ಸ್ವಾಧೀನ ಆಸ್ತಿಯು ಸಿಕ್ಕಿಯದೆ. ಇನ್ನೂ ಪಟ್ಟವಾಗಲಿಲ್ಲ.

# 26ನೇ ಅಧ್ಯಾಯ.

## ಅ ಜಿ ಲ ರು .

ತುಳುರಾಜ್ಯದಲ್ಲಿ ಆಳಿದ ಜೈನರಾಜರ ವಂಶಗಳಲ್ಲಿ ವೇಣೂರಲ್ಲಿ ಆಳಿದ ಅಜಿಲರ ವಂಶವು ಒಂದಾಗಿದೆ. ಈ ವಂಶದವರ ರಾಜಧಾನಿಯು ಫಲ್ಗುಣೀ ನದೀತೀರದಲ್ಲಿರುವ ವೇಣೂರು. ಇವರಿಗೆ ವೇಣೂರು ಅರಮನೆ ಅಲ್ಲದೆ, ಅಳದಗಂಡಿಯಲ್ಲಿ ಒಂದು, ಕೇಳಗ್ರಾಮದಲ್ಲಿ ಒಂದು, ಬರಯದಲ್ಲಿ ಒಂದು, ಹೀಗೆ 4 ಅರಮನೆಗಳಿದ್ದವು. ಈಗ ವೇಣೂರಿನ ಅರಮನೆಯು ಪೂರ್ಣ ಹಾಳಾಗಿದೆ. ಗೋಮಟೇಶ್ವರನ ಬಸದಿಯು ಪೂರ್ವಕ್ಕೆ ತಗ್ಗಾದ ಮೈದಾನಿನಲ್ಲಿ ಈ ಅರಮನೆಯು ಹಾಳುಬಿದ್ದ ಸ್ಥಳವನ್ನೂ, ಹೆಬ್ಬಾಗಲಿನ ಹತ್ತರವಿರುವ ಬಹಳ ಅಂದವಾದ ಸುಮಾರು 3 ಅಡಿ ಎತ್ತರವಾದ ಶಿಲೆಯಿಂದ ಮಾಡಿದ 2 ಆನೆಗಳನ್ನೂ ನೋಡಬಹುದು. ಈ ಅರಮನೆಗೆ 7 ಅಂತಸ್ತಿನ ಮಾಳಿಗೆ ಇತ್ತಂತೆ. ಅರಮನೆಯ ಆಗ್ನೇಯಕ್ಕೆ ಮಹಾಲಿಂಗೇಶ್ವರ ದೇವಸ್ಥಾನವಿದೆ. ಗೋಮಟೇಶ್ವರನ ಬಸದಿಯ ಹಿಂದೆಯೇ ದಕ್ಷಿಣ ದಿಕ್ಕಿಗೆ ಪಾರ್ಶ್ವನಾಥ ಬಸದಿ ಇದೆ. ಈ ಬಸದಿಯಿಂದ ಪೂರ್ವಕ್ಕೆ ಜೈನರ ಪೇಟೆಯು ಸುಮಾರು ಅರ್ಧ ಮೈಲಿಗೆ ನೆಟ್ಟಗೆ ಚಾಚಿಕೊಂಡಿದೆ. ಅರ್ಧಕ್ಕೆ ಬರುವಾಗ ಈ ಮಾರ್ಗಕ್ಕೆ ಉತ್ತರ ದಿಕ್ಕಿನಿಂದ ಗೋಮಟೇಶ್ವರನ ಬಸದಿಯಿಂದ ಬರುವ ಮಾರ್ಗವು ಬಂದು ಕೂಡಿಯದೆ. ಮಹಾಲಿಂಗೇಶ್ವರ ದೇವಸ್ಥಾನದ ಹತ್ತರದಲ್ಲಿ ಅರಮನೆಯಿಂದ ಬರುವ ಮಾರ್ಗವು ಬಂದು ಈ ಮಾರ್ಗಕ್ಕೆ ಕೂಡುತ್ತದೆ. ಅಲ್ಲಿಂದ ಅರಮನೆಯಿಂದ ಬರುವ ಇನ್ನೊಂದು ಮಾರ್ಗವು ನೆಟ್ಟಗೆ ದಕ್ಷಿಣಕ್ಕೆ ಶಾಂತೇಶ್ವರ (ಕಲ್ಲು ಬಸದಿ) ಬಸದಿಯ ವರೆಗಿದೆ. ಈ ಬಸದಿಯ ಅಂಗಳದಲ್ಲಿ ಎಡಬಲ ಬಸದಿಗಳು ಇವೆ. ದಕ್ಷಿಣದಲ್ಲಿರುವದು ತೀರ್ಥಂಕರರ ಬಸದಿ. ಇದರ ದ್ವಾರವು ಬಳಪದ ಕಲ್ಲಿನಿಂದ

ಮಾಡಲ್ಪಟ್ಟಿದೆ. ಇದರಲ್ಲಿ ಕೆತ್ತಿದ ಚಿತ್ರಗಳಷ್ಟು ಸೂಕ್ಷ್ಮವಾದ ಕೆತ್ತನೆಯ ಕೆಲಸವು ದಕ್ಷಿಣಕನ್ನಡ ಜಿಲ್ಲೆಯ ಯಾವ ದೇವಸ್ಥಾನಗಳಲ್ಲಿಯಾಗಲೀ ಬಸದಿಗಳಲ್ಲಿಯಾಗಲೀ ಇರುವದಿಲ್ಲ. ಬಸದಿಯ ಒಳಗಡೆ 24 ತೀರ್ಥಂಕರರ ಪ್ರತಿಮೆಗಳು ಇವೆ. ಮಧ್ಯದಲ್ಲಿರುವ ಶಾಂತೇಶ್ವರ ಬಸದಿಯು ಪೂರಾ ಶಿಲೆಯಿಂದಲೇ ಕಟ್ಟಲ್ಪಟ್ಟಿದೆ. ಬಸದಿಯ ಪೂರ್ವಕ್ಕೆ ದೊಡ್ಡ ಕೆರೆ ಇದೆ. ಗೋಮಟೇಶ್ವರ ಬಸದಿಯ ಒಳಗಡೆ ಎಡಬಲ ಬಸದಿಗಳಿವೆ. ಪೂರ್ವದಿಕ್ಕಿನ ಬಸದಿಯ ಹೆಸರು ಅಕ್ಕಂಗಳ ಚಂದ್ರನಾಥ ಬಸದಿ. ಇದನ್ನು ಶಾ. ಶ 1526 (ಕ್ರಿ. ಶ 1604)ರಲ್ಲಿ ವೀರ ತಿಮ್ಮಣ್ಣಾಜಿಲನ ರಾಣಿ ಪಾಂಡ್ಯಕ್ಕ ಯಾನೆ ವರ್ಧಮಾನಕ್ಕ ಕಟ್ಟಿಸಿದಳೆಂದು ಇದರ ಹತ್ತರವಿರುವ ಶಾಸನದಿಂದ ತಿಳಿದುಬರುತ್ತದೆ. ಪಶ್ಚಿಮಕ್ಕಿರುವ ಬಿನ್ನಾಣಿ ಬಸದಿಯನ್ನು ವೀರ ತಿಮ್ಮಣ್ಣಾಜಿಲನ ರಾಣಿ ಬಿನ್ನಾಣಿಯು ಶಾ. ಶ. 1526 (ಕ್ರಿ. ಶ. 1604)ರಲ್ಲಿ ಕಟ್ಟಿಸಿ ಶಾಂತೇಶ್ವರನನ್ನು ಪ್ರತಿಷ್ಠಿಸಿ ಉಂಬಳಿಬಿಟ್ಟಳೆಂದು ಅವರ ಹತ್ತಿರವಿರುವ ಶಾಸನದಿಂದ ತಿಳಿಯಬಹುದು. 33 ಅಡಿ ಎತ್ತರವಾದ ಗೋಮಟೇಶ್ವರನ ಪ್ರತಿಮೆಯನ್ನು ಸುಮಾರು ನಾಲ್ಕೈದು ಅಡಿ ಎತ್ತರವಾದ ಪೀಠದ ಮೇಲೆ ಪ್ರತಿಷ್ಠಿಸಿದ್ದಾರೆ. ಇದರ ಹಿಂದುಗಡೆ ಕಟ್ಟೋಣ ಕಟ್ಟಿಸಲಿಕ್ಕೆ ನಿಲ್ಲಿಸಿದ ಕಂಬಗಳು ಹಾಗೆಯೇ ಇವೆ. ರಾಜ್ಯಭಾರದ ಸಂಗತಿಯಲ್ಲಿ ಕಷ್ಟಗಳು ಬಂದೊದಗಿದ್ದರಿಂದ ಕೆಲಸವು ಹಾಗೆಯೇ ಅರ್ಧದಲ್ಲಿ ಉಳಿಯಿತು. ಕಾರ್ಕಳ ಪ್ರತಿಮೆಗಿಂತಲೂ ಈ ಪ್ರತಿಮೆಯು ಅಂದವಾಗಿ ಉತ್ತರಕ್ಕೆ ಮುಖಮಾಡಿ ಪ್ರತಿಷ್ಠಿಸಲ್ಪಟ್ಟಿದೆ.

ಹೊಯ್ಸಳ ಬಲ್ಲಾಳ ವಿಷ್ಣುವರ್ಧನನು ತುಳು ಜೈನ ಅರಸರನ್ನು ಸೆರೆಹಿಡಿದುಕೊಂಡು ಹೋದಮೇಲೆ ಈ ಅಜಿಲರವಂಶವು ಹೀನಸ್ಥಿತಿಯಲ್ಲಿತ್ತು. ವಿಷ್ಣುವರ್ಧನನ ಮಗ ತ್ರಿಭುವನಮಲ್ಲ ಭುಜಬಲವೀರ ಗಂಗ 1ನೇ ನರಶಿಂಹನ ಕಾಲದಲ್ಲಿ ಈ ವಂಶವು ತಿರಿಗಿ ತಲೆ ಎತ್ತಿತು. ಇವರ ವಿಷಯ ಇಷ್ಟರವರೆಗೆ ಶೋಧನೆಮಾಡಿ ಸಿಕ್ಕಿದ ರಾಜವಂಶಾವಳಿ

ಮತ್ತು ಶಾಸನಗಳ ಆಧಾರದಿಂದ ಈ ವಂಶದ ವಿಷಯ ಕೆಳಗಿನ ಸಂಗತಿ ಗಳನ್ನು ಬರೆದಿದೆ.

1. 1ನೇ ತಿಮ್ಮಣ್ಣಾಜಿಲ. ಕ್ರಿ.ಶ. 1154-1180. ಹೊಯ್ಸಳ ಬಲ್ಲಾಳ ವಿಷ್ಣುವರ್ಧನನ ಮಗ 1ನೇ ನರಸಿಂಹನ ಕಾಲದಲ್ಲಿ ತಿಮ್ಮಣ್ಣಾಜಿಲನು ತನ್ನ ಕೈಯಿಂದ ತಪ್ಪಿಹೋದ ರಾಜ್ಯವನ್ನು ತಿರಿಗಿ ವಶಮಾಡಿಕೊಳ್ಳಲು ಪ್ರಯತ್ನಿಸಿದನು. ಹಾಳುಬಿದ್ದ ತನ್ನ ಅರಮನೆ ಯನ್ನು ಜೀರ್ಣೋದ್ಧಾರಮಾಡಿಸಿ ಮುಂದುಗಡೆ ಗೋಪುರಕ್ಕೆ 7 ಮಾಳಿಗೆಗಳನ್ನು ಕಟ್ಟಿಸಿದನು. ವೇಣೂರು, ಕೇಳ, ಪೆರಂಜೆ, ಅಜ್ಜಿ ಬೆಟ್ಟು ಈ ನಾಲ್ಕು ಮಾಗಣೆಗಳನ್ನು ಸ್ವಾಧೀನಪಡಿಸಿಕೊಂಡು ಕ್ರಿ. ಶ. 1180ರ ವರೆಗೆ ಆಳಿದನು.

2. ಪೂಂಜನ ಆಳಿಕೆ. ಕ್ರಿ. ಶ 1180—1186. ತಿಮ್ಮಣ್ಣಾ ಅಜಿಲನಿಗೆ ಚನ್ನಮ್ಮ ಮತ್ತು ಮಧುರಕ್ಕದೇವಿ ಎಂಬ ಇಬ್ಬರು ಸೊಸೆ ಯಂದಿಯರಿದ್ದರು. ಕುಟಂಬದವರು ಬೇರೆ ಯಾರೂ ಇರಲಿಲ್ಲ. ಇವ ರಲ್ಲಿ ಮಧುರಕ್ಕದೇವಿಯನ್ನು ಗಂಗವಂಶದ ಅರಸರ ಕುಟುಂಬದ ಚಾಮುಂಡರಾಯನೆಂಬವನು ಮದುವೆಮಾಡಿಕೊಂಡಿದ್ದನು. ತಿಮ್ಮ ಣ್ಣಾಜಿಲನು ಸಾಯುವಾಗ ಚನ್ನಮ್ಮದೇವಿಗಾಗಲೀ ಮಧುರಕ್ಕದೇವಿ ಗಾಗಲೀ ಮಕ್ಕಳು ಇರಲಿಲ್ಲ. ತಿಮ್ಮಣ್ಣಾಜಿಲನು ಕಾಲವಾದ ಕೂಡಲೇ ಇವರಿಬ್ಬರೂ ಗಟ್ಟದ ಮೇಲಿನಿಂದ ವೇಣೂರಿಗೆ ಬಂದು ಇವನ ಉತ್ತರ ಕ್ರಿಯೆಗಳೆಲ್ಲಾ ಮುಗಿದ ಮೇಲೆ ಪಟ್ಟಕಟ್ಟುವ ವಿಷಯದಲ್ಲಿ ಪ್ರಜೆಗಳಲ್ಲಿ ಬೇರೆ ಬೇರೆ ಆಲೋಚನೆಗಳಾದವು. ಈ ಸಮಯದಲ್ಲಿ ಜೈನರಾಜರು ಬಲ ಕುಂದಿದ್ದರು. ಬಂಟರು ಮೇಲಕ್ಕೆ ಬರಲು ಪ್ರಯತ್ನಿಸುತ್ತಿದ್ದರು. ಬಾರಕೂರಿನಲ್ಲಿ ಬದ್ದದಾಸಪಾಂಡ್ಯನೆಂಬವನು ದಂಗೆಯನ್ನು ಎಬ್ಬಿಸಿ ಬಾರ ಕೂರು ರಾಜ್ಯವನ್ನು ಆಳತೊಡಗಿದನು. ಅದನ್ನು ತಿಳಿದು ವೇಣೂರು ಸೀಮೆಯ ಬಂಟರೂ ದಂಗೆ ಎಬ್ಬಿಸಿದರು. ಅದಕ್ಕೆ ಸರಿಯಾಗಿ ವೇಣೂರಿ ನಲ್ಲಿ ಈ ಹೆಂಗುಸರ ಕಡೆಯಲ್ಲಿ ಯಾರೂ ಇರಲಿಲ್ಲ. ಮಧುರಕ್ಕ ಮತ್ತು

ಚನ್ನಮ್ಮದೇವಿಯರು ಹೆದರಿಕೆಯಿಂದ ತಮ್ಮ ಗಂಡಂದಿರ ಮನೆಗೆ ಹೋದರು. ವೇಣೂರುಸೀಮೆಯವರು ಶಿಲತಬೆಟ್ಟು ಗ್ರಾಮದ ಬಲಿಷ್ಠನಾದ ಪೂಂಜ ಕುಟುಂಬದ ಒಬ್ಬ ಬಂಟನನ್ನು ರಾಜಮರ್ಯಾದೆಯಿಂದ ವೇಣೂರಿಗೆ ಕರಕೊಂಡು ಹೋಗಿ ಪಟ್ಟಕಟ್ಟಿದರು. ತಿಮ್ಮಣ್ಣಾಜಿಲನ ಪಟ್ಟದ ಉಂಗುರವು ಸೇನಾಧಿಪತಿಯಾದ ಪೆರಂಜೆಗುತ್ತಿನ ಬಂಟನ ಕೈಯಲ್ಲಿತ್ತು.

ಈ ರೀತಿಯಲ್ಲಿ 6 ವರ್ಷಗಳು ಕಳೆದವು. ಈ ಸಮಯದಲ್ಲಿ ಕನ್ನಡ ಜಿಲ್ಲೆಯು ಪಶ್ಚಿಮ ಚಾಲುಕ್ಯ 4ನೇ ಸೋಮೇಶ್ವರನ ಕೈಕೆಳಗೆ ಮಹಾಮಂಡಲೇಶ್ವರನಾಗಿ ಬನವಾಸಿಯಲ್ಲಿ ಆಳುತ್ತಿದ್ದ ಹಂಗಳದ ಕದಂಬ ರಾಜನಾದ ಕಾಮದೇವನ ಕೈಕೆಳಗಿತ್ತು. ಬಂಟರು ದಂಗೆ ಎಬ್ಬಿಸಿದ ದೂರು ಕಾಮದೇವನಿಗೆ ತಲಪಿ ಅವನು ಸೈನ್ಯದೊಡನೆ ತುಳು ರಾಜ್ಯಕ್ಕೆ ಬಂದನು. ಬಾರಕೂರು ಬದ್ದರಸನು ಶರಣಾಗತನಾದನು. ಮಧುರಕ್ಕದೇವಿಯು ಸಹ ತನ್ನ ಹಕ್ಕಿನ ರಾಜ್ಯವನ್ನು ಬಂಟರು ಸೆಳಕೊಂಡಿದ್ದಾರೆಂಬ ಸಂಗತಿಯನ್ನು ಅವನಿಗೆ ತಿಳಿಸಿದ್ದಳು. ಕಾಮದೇವನು ದಂಗೆಯನ್ನು ಅಣಗಿಸಲಿಕ್ಕೆ ವೇಣೂರಿಗೆ ಬರುವಾಗ ಪೂಂಜನು ಓಡಿಹೋಗಿ ಸವಣಾಲು ಗ್ರಾಮದಲ್ಲಿ ಆತ್ಮಹತ್ಯಮಾಡಿಕೊಂಡನು. ಇವನನ್ನು ಸುಟ್ಟ ಗದ್ದೆಗೆ ಅಂದಿನಿಂದ ಪೂಂಜಲತಿಮಾರು ಎಂಬ ಹೆಸರು ಬಂದಿದೆ. ಪೂಂಜನು ಸತ್ತರೂ ವೇಣೂರಿನ ಪಟ್ಟಕ್ಕೆ ಪೂಂಜಳಿಕೆ ಪಟ್ಟವೆಂದು ಹೆಸರಾಯಿತು. ಪೂಂಜನು ವೇಣೂರಿಗೆ ಹೋಗುವ ಮುಂಚೆ ಕೂತುಕೊಂಡ ಬಿಲ್ಲಮಂಜು ಮನೆ ಹತ್ತರ ಇರುವ ಕಟ್ಟೆಗೆ ಪುಂಜಾಲಕಟ್ಟೆ ಎಂದು ಹೆಸರಾಯಿತು.

ಕಾಮದೇವನು ಮಧುರಕ್ಕದೇವಿಗೆ 1. ಅಳದಂಗಡಿ, 2. ಸುಳ್ಕೇರಿ, 3. ಇದು, 4. ಇರ್ವತ್ತೂರು, 5. ಸವಣಾಲು, 6. ಪಂಜಿಕಲ್ಲು, 7, ನಾರಾವಿ, 8, ಎಡ್ತೂರು, 9. ಬೆಳ್ಳೂರು, ಹೀಗೆ 9 ಮಾಗಣೆಗಳನ್ನು ಬಿಟ್ಟುಕೊಟ್ಟನು. ಮೊದಲಿದ್ದ 1. ವೇಣೂರು, 2. ಕೇಳ, 3. ಪೆರಂಜೆ,

4. ಅಜ್ಜಿಬೆಟ್ಟು ಈ 4 ಮಾಗಣೆಗಳು ಕೂಡಿ ಒಟ್ಟು 13 ಮಾಗಣೆಗಳು ಇವರ ಸ್ವಾಧೀನ ಸಿಕ್ಕಿದವು.

.3 Iನೇ ರಾಯಕುಮಾರ. ಕ್ರಿ. ಶ. 1186-1204. ಗಂಗವಾಡಿಗೆ ಓಡಿಹೋಗಿದ್ದ ಮಧುರಕ್ಕದೇವಿಗೂ ಅವಳ ಅಕ್ಕ ಚನ್ನಮ್ಮದೇವಿಗೂ ವೇಣೂರಿಗೆ ಬರಬೇಕೆಂದು ಕಾಮದೇವನು ಹೇಳಿ ಕಳುಹಿಸಲು ಮಧುರಕ್ಕದೇವಿಯು ತನ್ನ ಮಗನಾದ ರಾಯಕುಮಾರನನ್ನು ಪರಿವಾರದವರನ್ನೂ ಕರಕೊಂಡು ಕಡದಕಲ್ಲುಘಾಟಿ ಇಳಿದು ಕೆಳಬಂಗಾಡಿಗೆ ಬಂದು ಅಲ್ಲಿಂದ ಅಳದಂಗಡಿಗೆ ಹೋಗಿ ರಾಜ್ಯವನ್ನು ಸ್ವಾಧೀನಪಡಿಸಿಕೊಂಡು ಅನಂತರ ಅಳದಂಗಡಿಯಲ್ಲಿ ಅರಮನೆಯನ್ನು ಕಟ್ಟಿಸಿದಳು. ಬರುವಾಗ ತಂದಿದ್ದ ಅರ್ಧನಾರೀಶ್ವರ ಸೋಮನಾಥ ದೇವರಿಗೆ ಒಂದು ದೇವಸ್ಥಾನವನ್ನೂ, ಅರಮನೆಯ ಹತ್ತರ ಒಂದು ಬಸದಿಯನ್ನೂ, ಕಟ್ಟಿಸಿದಳು. ಈ ಕೆಲಸಗಳು ಆಗುವಾಗ ವೇಣೂರು ಅರಮನೆಗೆ ಹೋಗಿ ಅದನ್ನು ಸ್ವಾಧೀನಪಡಿಸಿಕೊಂಡಳು. ರಾಯಕುಮಾರನಿಗೆ ಶಾ. ಶ. 1108ನೇ ಪರಾಭವ ಸಂ।ರದ ಕಾರ್ತಿಕ ಶು। ೪ರಲ್ಲಿ ಬಹಳ ವಿಜೃಂಭಣೆಯಿಂದ ವೇಣೂರಿನಲ್ಲಿ ಪಟ್ಟವಾಯಿತು. ಪಟ್ಟಾಭಿಷೇಕಕ್ಕೆ ಸೀಮೆಯಲ್ಲಿ ರಾಜ್ಯಭಾರದ ಕೆಲಸವನ್ನು ನಿರ್ವಹಿಸುವ ಪೆರಾಡಿ, ಕೌಡಾಡಿ, ಪಿಲತಬೆಟ್ಟು, ಇರ್ವತ್ತೂರು, ಕರಂಬಾರು, ಪಿಲ್ಯ, ಅಳದಂಗಡಿ, ನಾರಾವಿ, ಏಣೂರು ಬಲ್ಲಾಳರೂ, 13 ಮಾಗಣೆಗಳ ಗುರಿಕಾರರೂ, ಗ್ರಾಮ ಗುರಿಕಾರರೂ, ಸೀಮೆಯ ಪ್ರಜೆಗಳೂ ಕಪ್ಪ ಕಾಣಿಕೆಗಳನ್ನು ತೆಗೆದುಕೊಂಡು ಬಂದಿದ್ದರು. ಇನ್ನುಮುಂದೆ ರಾಜ್ಯದಲ್ಲಿ ದಂಗೆ ಏಳದ ಹಾಗೆ 13 ಮಾಗಣೆಗಳಲ್ಲಿರುವ ಬಹಳ ಐಶ್ವರ್ಯವಂತರಾದ (1) ಬೆಳ್ಳೂರುಗುತ್ತು, (2) ಅರವದಗುತ್ತು, (3) ಕುಕ್ಕೇಡಿಗುತ್ತು, (4) ಪೆರಂಜೆಗುತ್ತು ಈ ನಾಲ್ಕು ಗುತ್ತಿನವರನ್ನು ತನ್ನ ಸೇನಾಧಿಪತಿಗಳಾಗಿಯೂ ರಾಜಗುತ್ತಿನವರನ್ನಾಗಿಯೂ ನಿಯಮಿಸಿದನು. ಪಟ್ಟಾಭಿಷೇಕವಾಗುವಾಗ ಅರಸನ ಕೈಹಿಡಿದು ಪಟ್ಟದ ಮಂಚದ

ಮೇಲೆ ಕೂತುಕೊಳ್ಳಿಸುವ ಅಧಿಕಾರವನ್ನು ಅರವದಗುತ್ತಿನವರಿಗೂ, ಪಟ್ಟದ ಉಂಗುರವನ್ನು ಅರಸನ ಕೈಬೆರಳಿಗೆ ಇಡುವ ಅಧಿಕಾರವನ್ನು ಬೆಳ್ಳೂರುಗುತ್ತಿನವರಿಗೂ, ಅರಸನ ಕೈಯಲ್ಲಿ ಪಟ್ಟದ ಕತ್ತಿಯನ್ನು ಕೊಡುವ ಅಧಿಕಾರವನ್ನು ಕುಕ್ಕೇಡಿಗುತ್ತಿನವರಿಗೂ, ಪಟ್ಟದ ಹೆಸರನ್ನು ಕರಿಯುವ ಅಧಿಕಾರವನ್ನು ಪರಂಜೆಗುತ್ತಿನವರಿಗೂ ಸೀಮೆಯವರ ಅನುಮತಿ ಮೇರೆಗೆ ಕೊಡಲಾಯಿತು. ವೇಣೂರು ದೇವುನಾಯಕನ ಮನೆತನದವರನ್ನು ಪ್ರಧಾನಿಯಾಗಿಯೂ ನಿಯಮಿಸಲಾಯಿತು. ರಾಯ ಕುಮಾರನು ಕ್ರಿ. ಶ. 1204 ವರೆಗೆ ಆಳಿದನು. ರಾಯಕುಮಾರನ ತರು ವಾಯ (1) 2ನೇ ತಿಮ್ಮಣ್ಣಾಜಿಲ 1204-1256 ವರೆಗೂ, (2) 1ನೇ ಪಾಂಡ್ಯಪ್ಪಾಜಿಲನು 1256-1288ರ ವರೆಗೂ, (3) 1ನೇ ಪದು ಮಲಾದೇವಿಯು 1288-1345ರ ವರೆಗೂ, (4) ಶಂಕರದೇವಿಯು 1345-1382ರ ವರೆಗೂ, (5) 3ನೇ ತಿಮ್ಮಣ್ಣಾಜಿಲನು 1382-1427ರ ವರೆಗೂ, (6) 1ನೇ ಮಧುರಕ್ಕದೇವಿಯು 1427-1462ರ ವರೆಗೂ, (7) 2ನೇ ಪಾಂಡ್ಯಪ್ಪಾಜಿಲನು 1462-1502ರ ವರೆಗೂ, (8) 2ನೇ ರಾಯಕುಮಾರನು, 1502-1550ರ ವರೆಗೂ ಆಳಿದರು. ಮೇಲಿನ 8 ಮಂದಿ ಅಜಿಲರ ಕಾಲದಲ್ಲಿಯೂ ವಿಶೇಷ ಸಂಗತಿಗಳು ನಡಿಯಲಿಲ್ಲವಾದ್ದರಿಂದ ಅವರ ಬರೇ ಹೆಸರುಗಳನ್ನು ಮಾತ್ರ ಕೊಟ್ಟಿರುತ್ತದೆ.

4. **4ನೇ ವೀರತಿಮ್ಮಣ್ಣಾಜಿಲ.** ಕ್ರಿ.ಶ. 1550-1610. ರಾಯ ಕುಮಾರನು ಕಾಲವಾದ ಬಳಿಕ ಶಾ. ಶ. 1472ನೇ ಸಾಧಾರಣ ಸಂವತ್ಸ ರದ ವೈಶಾಖ ಶು. ೫ರಲ್ಲಿ ರಾಯಕುಮಾರನ ತಂಗಿ ಪಾಂಡ್ಯಕ್ಕದೇವಿಯ ಮಗ ತಿಮ್ಮಣ್ಣಾಜಿಲನು ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ವೇಣೂರು ಪ್ರಸಿದ್ಧಿಯನ್ನು ಪಡೆಯಿತು. ಇವನಿಗೆ ಪಾಂಡ್ಯದೇವಿ ಯಾನೆ ವರ್ಧ ಮಾನಕ್ಕ, ಮಲ್ಲಿದೇವಿ, ಬಿನ್ನಾಣಿ ಎಂಬ ಮೂವರು ರಾಣಿಯರಿದ್ದರು.

ಮೈಸೂರಿನಲ್ಲಿರುವ ಶ್ರಾವಣಬೆಳುಗುಳದಲ್ಲಿ ತನ್ನ ಹಿರಿಯರ ವಂಶ ದವರಾದ ಚಾಮುಂಡರಾಯನು ಪ್ರತಿಷ್ಠಿಸಿದ ಶ್ರಾವಣ ಬೆಳುಗುಳದ

ಗೋಮಟೇಶ್ವರನ ಹಾಗೆಯೆ ತನ್ನ ರಾಜಧಾನಿಯಲ್ಲಿಯೂ ಒಂದು ಪ್ರತಿಮೆಯನ್ನು ಪ್ರತಿಷ್ಠಿಸಬೇಕೆಂದು ತಿಮ್ಮಣ್ಣಾಜಿಲನಿಗೆ ಇಚ್ಛೆಯಾಯಿತು. ಈ ಸಮಯದಲ್ಲಿ ತುಳುರಾಜ್ಯದಲ್ಲಿ ಶಿಲ್ಪಕಲೆಯು ಬಹಳ ವೃದ್ಧಿಯನ್ನು ಹೊಂದಿತ್ತು. ಮಾರ್ನಾಡಿನಲ್ಲಿ ಬಹಳ ಬುದ್ಧಿವಂತರಾದ ಅನೇಕ ಶಿಲ್ಪಿಗಳು ಇದ್ದರು. ವೀರಪಾಂಡ್ಯನ ರಾಜಧಾನಿಯಾದ ಕಾರ್ಕಳದಲ್ಲಿ ಪ್ರತಿಷ್ಠಿಸಿದ ಗೋಮಟೇಶ್ವರನ ಪ್ರತಿಮೆಯನ್ನು ಮಾಡಿದ ಶಿಲ್ಪಿ ಶಂಬು ಕಲ್ಕುಡನ ಕುಟುಂಬದವನೊಬ್ಬನನ್ನು ಕರೆಯಿಸಿ ವೇಣೂರಿನ ಹತ್ತರವೇ ಇರುವ ಕಲ್ಯಾಣಿ ಎಂಬ ಸ್ಥಳದಲ್ಲಿರುವ ಶಿಲೆಯಿಂದ ಗೋಮಟೇಶ್ವರ ಪ್ರತಿಮೆಯನ್ನು ತಯಾರಿಸಬೇಕೆಂದು ಹೇಳಿದನು. ಶಿಲ್ಪಿಯು ಗೋಮಟೇಶ್ವರನ ಪ್ರತಿಮೆಯನ್ನು ತಯಾರಿಸಿದನು. ಪ್ರತಿಷ್ಠೆಗೆ ಎಲ್ಲವೂ ಸಿದ್ಧವಾಯಿತು.

ವೇಣೂರಿನಲ್ಲಿಯೂ, ಕಾರ್ಕಳದ ಗೋಮಟೇಶ್ವರನ ಹಾಗೆಯೇ ಗೋಮಟೇಶ್ವರನ ಬಿಂಬವು ಪ್ರತಿಷ್ಠೆಯಾಗುತ್ತದೆಂಬ ವರ್ತಮಾನವು ಕಾರ್ಕಳ ಪಾಂಡ್ಯನಗರಿಯಲ್ಲಿ ಆಳುತ್ತಿದ್ದ ದಾವಣಿ ಇಮ್ಮಡಿ ಭೈರವ ರಾಯನಿಗೆ ತಲ್ಪಿತು. ಹೀಗಾದರೆ ತನ್ನ ಹಿರಿಯನಾದ ವೀರಪಾಂಡ್ಯನು ಮಾಡಿಸಿದ ಕೆಲಸಕ್ಕೆ ಕೀರ್ತಿಯು ಕಡಿಮೆಯಾದೀತೆಂದು ಯೋಚಿಸಿ ವೀರತಿಮ್ಮಣ್ಣ ಅಜಿಲನು ತಯಾರಿಸಿದ ಗೋಮಟೇಶ್ವರ ಪ್ರತಿಮೆಯನ್ನು ಪ್ರತಿಷ್ಠಿಸಕೂಡದೆಂದೂ, ಅದನ್ನು ತನ್ನ ಬಳಿಗೆ ಕಾರ್ಕಳಕ್ಕೆ ಕಳುಹಿಸಿ ಕೊಡಬೇಕೆಂದೂ, ದಾವಣಿ ಇಮ್ಮಡಿ ಭೈರವರಾಯನು ಹೇಳಿಕಳುಹಿಸಿದನು. ತಿಮ್ಮಣ್ಣಾಜಿಲನು ತಾನು ಮಾಡಿಸಿದ ಪ್ರತಿಮೆಯನ್ನು ಪ್ರತಿಷ್ಠಿಸದೆ ಇದ್ದರೆ ತನಗೆ ಮಾನಹಾನಿಕರವೆಂದು ತಿಳಿದು ಯಾವತರದ ಕಷ್ಟಗಳು ಬಂದೊದಗಿದ್ದಾಗ್ಯೂ ಪ್ರತಿಷ್ಠಿಸದೆ ಇರಲಾರನೆಂದು ಹೇಳಿಕಳುಹಿಸಿದನು. ಇದನ್ನು ಕೇಳಿದೊಡನೆ ಭೈರವರಾಯನು ಯುದ್ಧಕ್ಕೆ ಹೊರಟುಬಂದು ಅಜಿಲರ ರಾಜ್ಯದ ಗಡಿಯಾದ ನಾರಾವಿಯಲ್ಲಿ ದೇವಸ್ಥಾನ, ಬಸದಿ ಮುಂತಾದ್ದನ್ನು ಸುಟ್ಟು ಊರನ್ನು ಸುಲಿಗೆಮಾಡಿದನು. ಈ ವರ್ತಮಾನ ಕೇಳಿ ತಿಮ್ಮಣ್ಣಾಜಿಲನೂ ಯುದ್ಧಕ್ಕೆ ಸಿದ್ಧನಾದನು. ಒಂದುವೇಳೆ

ಭೈರರಸನು ವೇಣೂರು ವರೆಗೆ ಬಂದರೂ ಮಾಡಿಸಿಗ ಪ್ರತಿಮೆಯು ಅವನಿಗೆ ಸಿಕ್ಕಬಾರದೆಂದು ಅಲ್ಲಿಯೇ ಹೊಳೆಯ ತಳದಲ್ಲಿ ಹೊಗೆಯಲ್ಲಿ ಅಡಗಿಸಿಡಿಸಿದನು.



ವೇಣೂರು ಗೋಮಟೇಶ್ವರ ಭುಜಬಲಿಯ ಪ್ರತಿಮೆ.

ತಿಮ್ಮಣ್ಣಾಜಿಲನು ತನ್ನ ಸೇನಾಧಿಪತಿಯಾದ ನಾರಾವಿಯ ಕಾಂತು ಸಾಮಣಿ ಎಂಬವನ ಸಂಗಡ ಸೈನ್ಯವನ್ನು ಕಳುಹಿಸಿಕೊಟ್ಟನು. ಈ ಸೇನಾಧಿಪತಿಯು ಭೈರವರಾಯನನ್ನು ಸೋಲಿಸಿ ಓಡಿಸಿದನು. ಆ ಮೇಲೆ ಪ್ರತಿಮೆಯನ್ನು ಹೊಯಿಗೆ ರಾಶಿಯಿಂದ ತೆಗೆದು ಈಗಿರುವ ಸ್ಥಳದಲ್ಲಿ ಪ್ರತಿಷ್ಠಿಸಿದನು. ಈ ಗೋಮಟೇಶ್ವರ ಪ್ರತಿಮೆಯ ಬಲದಿಕ್ಕಿಗಿರುವ ಸಂಸ್ಕೃತ ಶಾಸನದಲ್ಲಿ ಚಾಮುಂಡವಂಶದ ತಿಮ್ಮರಾಜನು ಶ್ರಾವಣ ಬೆಳುಗುಳದ ತನ್ನ ಗುರುಗಳಾದ ಚಾರುಕೀರ್ತಿಯವರ ಅಪ್ಪಣೆಪ್ರಕಾರ

ಭುಜಬಲಿಯು ಈ ಪ್ರತಿಮೆಯನ್ನು ಶಾ. ಶ. 1525ನೇ ಶೋಭಕೃತು ಸಂವತ್ಸರ, ಕ್ರಿ. ಶ. 1604ನೇ ಮಾರ್ಚಿ 1ನೇ ತಾರೀಕು ಗುರುವಾರ ದಿವಸ ಪ್ರತಿಷ್ಠಿಸಿದನೆಂದೂ, ತಿಮ್ಮರಾಜನ ತಾಯಿ ಪಾಂಡ್ಯಕ್ಕ ಎಂದೂ, ಮಾವನು ರಾಯಕುಮಾರನೆಂದೂ ಕಂಡುಬರುತ್ತದೆ. ಇದರ ಎಡ ದಿಕ್ಕಿನಲ್ಲಿ ಕನ್ನಡ ಪದ್ಯರೂಪದಲ್ಲಿ ಇದೇ ಸಂಗತಿ ಇದೆ.

ಶಾ. ಶ. 1526ರಲ್ಲಿ ತಿಮ್ಮರಾಜನ ರಾಣಿಯರಾದ ಪಾಂಡ್ಯಕ್ಕ ದೇವಿ ಯಾನೆ ವರ್ಧಮಾನಕ್ಕ ಮತ್ತು ಮಲ್ಲಿದೇವಿ ಎಂಬವರಿಬ್ಬರು ಗೋಮಟೇಶ್ವರ ಬಸದಿಯ ಒಳಗಡೆ ಬಾಗಲಲ್ಲಿ ಪೂರ್ವಕ್ಕೆ ಅಕ್ಕಂಗಳ ಬಸದಿ ಎಂಬ ಚಂದ್ರನಾಥ ಬಸದಿಯನ್ನೂ, ಇನ್ನೊಬ್ಬ ರಾಣಿ ಬಿನ್ನಾಣಿಯು ಪಶ್ಚಿಮ ದಿಕ್ಕಿನ ಶಾಂತೇಶ್ವರ ಬಸದಿ ಎಂಬ ಬಿನ್ನಾಣಿ ಬಸದಿಯನ್ನೂ ಕಟ್ಟಿಸಿ ಉಂಬಳಿಬಿಟ್ಟಿರುತ್ತಾರೆಂದು ಅಲ್ಲಿರುವ ಎರಡು ಶಿಲಾಶಾಸನಗಳಿಂದ ತಿಳಿಯಬಹುದು. ಇವು ಎರಡೂ ಸಣ್ಣ ಬಸದಿಗಳಾಗಿವೆ.

ತಿಮ್ಮಣ್ಣಾಜಿಲನ ಕಾಲದಲ್ಲಿ ಲಕ್ಷ್ಮಪ್ಪರಸ ಬಂಗರಾಜನಿಗೂ ಇವನಿಗೂ ಹಣದ ಸಂಬಂಧ ಸ್ವಲ್ಪ ವಿವಾದವು ಹುಟ್ಟಿ ಇಬ್ಬರೂ ಯುದ್ಧಕ್ಕೆ ಸಿದ್ಧರಾದರು. ತಿಮ್ಮಣ್ಣಾಜಿಲನು ತನ್ನ ಸೇನಾಧಿಪತಿಯಾದ ಪೆರಂಜಿಗುತ್ತಿನ ದೇವಪೂಂಜನ ಸಂಗಡ ದೊಡ್ಡ ಸೈನ್ಯವನ್ನು ಕೊಟ್ಟು ಬಂಟವಾಳಕ್ಕೆ ಕಳುಹಿಸಿದನು. ತಿಮ್ಮಣ್ಣಾಜಿಲನು ಇನ್ನೊಂದು ಸೈನ್ಯವನ್ನು ತೆಗೆದುಕೊಂಡು ಬಂದು ಪಂಜಿಕಲ್ಲು ಕೋಟೆಯಲ್ಲಿ ಉಳುಕೊಂಡನು. ಬಂಗರಾಜನ ಸೇನಾಧಿಪತಿಯಾದ ಮಣಿಗುತ್ತಿನ ದುಗ್ಗಣ್ಣಕೊಂಡೆಗೂ ದೇವಪೂಂಜನಿಗೂ ಬಂಟವಾಳದ ಹತ್ತರವಿರುವ ಮಣಿಗ್ರಾಮದ ಚಂಡತ್ತಿಮಾರ ಎಂಬ ಸ್ಥಳದಲ್ಲಿ ಯುದ್ಧವಾಗಿ ದುಗ್ಗಣ್ಣಕೊಂಡೆಯು ಸೋತು ಹೋದನು. ದೇವಪೂಂಜನು ಅವನನ್ನು ಹಿಡಿದು ಅವನ ತಲೆಕಡಿದು ತಲೆಯನ್ನು ಪಂಜಿಕಲ್ಲು ಕೋಟೆಯಲ್ಲಿದ್ದ ತಿಮ್ಮಣ್ಣಾಜಿಲನಿಗೆ ಒಪ್ಪಿಸಿದನು. ದೇವಪೂಂಜನಿಗೆ ಆಗ 16 ವರ್ಷ ಪ್ರಾಯವಾಗಿತ್ತು. ಇಷ್ಟು

ಸಣ್ಣ ಪ್ರಾಯದಲ್ಲಿ ಮಾಡಿದ ಧೈರ್ಯದ ಕೆಲಸವನ್ನು ನೋಡಿ ಇವನು ಕಾಲಾನುಭಾಗದಲ್ಲಿ ತನ್ನನ್ನು ಸಹ ಕೊಂದುಬಿಟ್ಟಾನು ಎಂಬ ಯೋಚನೆಯಿಂದ ಅವನನ್ನು ಅಸಡ್ಡೆಯಿಂದ ದೂರಮಾಡಿದನು. ದೇವಪೂಂಜನು ಬಹಳ ಬೇಸರಪಟ್ಟು ಕೂಡಲೇ ಪೆರಂಜೆಯಿಂದ ತನ್ನ ತಾಯಿಯನ್ನು ಕರಕೊಂಡು ಬಂಟವಾಳದ ಹತ್ತಿರ ಬೆಳ್ಳೂರಿನಲ್ಲಿರುವ ತನ್ನ ಅಕ್ಕನ ಮನೆಯಲ್ಲಿ ತಾಯಿಯನ್ನು ನಿಲ್ಲಿಸಿ ಅಲ್ಲಿಯೇ ಇದ್ದನು. ಬಂಗರಾಜನು ಇದನ್ನು ತಿಳಿದು ಅವನನ್ನು ತನ್ನ ಸೈನ್ಯಕ್ಕೆ ಸೇನಾಧಿಪತಿಯಾಗಿ ನೇಮಿಸಿದನು.

ವಿಜಯನಗರದ ರಾಜ್ಯಭಾರವು ಕಳೆಗುಂದಿದ ಮೇಲೆ ಕನ್ನಡ ಜಿಲ್ಲೆಯು ಇಕ್ಕೇರಿ ನಾಯಕರ ವಶವಾಯಿತು. ಕ್ರಿ. ಶ. 1608ಲ್ಲಿ ವೆಂಕಟಪ್ಪನಾಯಕನು ಕಾರ್ಕಳಕ್ಕೆ ಬಂದು ಭೈರವರಾಯನನ್ನು ಸೋಲಿಸಿ ಮೂಡಬಿದರೆಯ ದಾರಿಯಾಗಿ ಮಂಗಳೂರಿಗೆ ಹೋದಾಗ, ಅಲ್ಲಿ ಎಲ್ಲಾ ಜೈನ ಅರಸರು ಬಂದು ಕೌಲುಮಾಡಿಕೊಳ್ಳಲು, ತಿಮ್ಮಣ್ಣಾಜಿಲನೂ ಕೌಲುಮಾಡಿಕೊಂಡು ವರುಷ ಒಂದಕ್ಕೆ ೩,೦೦೦ ವರಹ ಕಪ್ಪಕೊಡಲಿಕ್ಕೆ ಒಪ್ಪಿದನು. ಇದರಲ್ಲಿ ಅಜಿಲರ ಮನೆದೇವರಿಗೆ ದೈವದ ಖರ್ಚಿಗೆ ೫೦೦ ವರಹ ೨॥ ಹಣವನ್ನು ಕಳೆದು ಬಾಕಿ ಉಳಿದ ೨,೪೯೯ ವರಹ ೨॥ ಹಣವನ್ನು ಇಕ್ಕೇರಿಯವರಿಗೆ ಕಪ್ಪ ಕೊಡಬೇಕೆಂದು ನಿಶ್ಚಯವಾಯಿತು.

**5. 2ನೇ ಮಧುರಕ್ಕದೇವಿ.** ಕ್ರಿ. ಶ. **1610—1647.** ತಿಮ್ಮಣ್ಣಾಜಿಲನು ಕಾಲವಾದನಂತರ ಅವನ ಸೊಸೆ ಮಧುರಕ್ಕದೇವಿಯು ಶಾ. ಶ. 1532ನೇ ಸಾಧಾರಣ ಸಂ|ದಲ್ಲಿ ಪಟ್ಟಕ್ಕೆ ಬಂದಳು. ಇವಳನ್ನು ಕಾರ್ಕಳದ ಭೈರವವಂಶದ ರಾಮನಾಥ ಅರಸನು ಮದುವೆಮಾಡಿಕೊಂಡಿದ್ದನು. ವೇಣೂರು ಶಾಂತೇಶ್ವರ ಬಸದಿಯ ಒಳಸುತ್ತಿನಲ್ಲಿರುವ ತೀರ್ಥಂಕರರ ಬಸದಿಯ ಪೂರ್ವ ಗೋಡೆಗೆ ತಾಗಿ ಒಂದು ಬಳಪದಕಲ್ಲಿನ ಮೇಲೆ ಇರುವ ಶಾಸನದಲ್ಲಿ ಶಾ. ಶ.

1544ನೇ ದುರ್ಮುಖಿ ಸಂವತ್ಸರದಲ್ಲಿ ರಾಮನಾಥ ಅರಸನು ೧೦೦ ವರಹ ಬಸದಿಗೆ ಉಂಬಳಿಬಿಟ್ಟನೆಂದು ಇದೆ.

ಮಧುರಕ್ಕದೇವಿಯು ಆಳುವ ಕಾಲದಲ್ಲಿ ವೇಣೂರು ಗೋಮಟೇಶ್ವರನಿಗೆ ಮಸ್ತಕಾಭಿಷೇಕ ಮಾಡಿಸಲಿಕ್ಕೆ ಸಿದ್ಧಮಾಡಿಸಿದರು ಕಾರ್ಕಳದ ವೀರಪಾಂಡ್ಯ ಭೈರವರಾಯನು ಅಭಿಷೇಕವು ಆಗದ ಹಾಗೆ ಮಾಡಬೇಕೆಂದು ಯುದ್ಧಕ್ಕೆ ಬಂದನು. ಆಗ ಮಧುರಕ್ಕದೇವಿಯು ಬಹಳ ಬೇಸರಪಟ್ಟು, ದೇವರ ಕೆಲಸಕ್ಕೆ ಅಡ್ಡಿಮಾಡಬಾರದಾಗಿಯೂ, ಯುದ್ಧ ಮಾಡದೆ ಹಿಂದಕ್ಕೆ ಹೋದರೆ ನಾರಾವಿ ಮಾಗಣೆಯನ್ನು ಭೈರವರಾಯನಿಗೆ ಬಿಟ್ಟುಕೊಡುತ್ತೇನೆಂಬದಾಗಿಯೂ, ವೇಣೂರು ಪೇಟೆಯ ನಾರಾಯಣಶೆಟ್ಟಿ ಎಂಬ ರಾಯಭಾರಿಯೊಡನೆ ಹೇಳಿಕಳುಹಿಸಿದಳು. ಭೈರವರಾಯನು ಇದಕ್ಕೆ ಒಪ್ಪಿ ಹಿಂದಕ್ಕೆ ಕಾರ್ಕಳಕ್ಕೆ ಹೋದನು. ಗೋಮಟೇಶ್ವರನ ಅಭಿಷೇಕವು ಬಹಳ ಸಂಭ್ರಮದಿಂದ ನಡಿಯಿತು.

6. **3ನೇ ಪಾಂಡ್ಯಪ್ಪಾಜಿಲ.** ಕ್ರಿ. ಶ. 1647—1683 ವರೆಗೆ ಆಳಿದನು.

7. **2ನೇ ಪದುಮಲಾದೇವಿ.** ಕ್ರಿ. ಶ. 1683—1721. ಈ ರಾಣಿಯು ಶಾ. ಶ. 1632ನೇ ವಿಕೃತಿ ಸಂ।ದ ಮಾರ್ಗಶಿರ ಮಾಸದಲ್ಲಿ ವೇಣೂರು ನಿರ್ವಾಣಸ್ವಾಮಿಯವರ ಮಠದ ಚನ್ನವೀರ ದೇವರಿಗೆ ಒಂದು ಉಂಬಳಿಬಿಟ್ಟಳೆಂದು ಒಂದು ತಾಮ್ರಶಾಸನದಲ್ಲಿದೆ.

8. **5ನೇ ತಿಮ್ಮಣ್ಣಾಜಿಲ.** ಕ್ರಿ. ಶ. 1721—1765. ಈ ಅರಸನು ಆಳಿಕೊಂಡಿರುವಾಗ ಚಿತ್ರಭಾನು ಸಂ।ದ ಶಾ. ಶ. 1684 (ಕ್ರಿ ಶ. 1762)ರಲ್ಲಿ ನವಾಬ ಹೈದರಲ್ಲಿಯು ನಗರಸಂಸ್ಥಾನವನ್ನು ಹಿಡಿದು ಮಂಗಳೂರಿಗೆ ಬಂದನು. ಆಗ ತಿಮ್ಮಣ್ಣಾಜಿಲನು ಮಂಗಳೂರಿಗೆ ಹೋಗಿ ಹೈದರನ ಭೇಟಿಮಾಡಿ ಉಡಿಗೆಉಚಿತಗಳನ್ನು ಸ್ವೀಕರಿಸಿ ಸರಕಾರಕ್ಕೆ ೭,೦೦೦ ವರಹ ಕಪ್ಪಕೊಡುವದಕ್ಕೆ ಒಪ್ಪಿದನು.

ಇಕ್ಕೇರಿಯವರ ಕಾಲದಲ್ಲಿದ್ದ ೩,೦೦೦ ವರಹವು ಹೈದರನ ಕಾಲದಲ್ಲಿ ೭,೦೦೦ವಾಯಿತು.

ಈ ಸಮಯದಲ್ಲಿ ಮಂಗಳೂರು ಜಿಲ್ಲೆಯ ಅಧಿಕಾರವು ದಾಮಾಜಿಪಂತನ ಕೈಯಲ್ಲಿತ್ತು. ಅನಂತರ ಕ್ರಿ. ಶ. 1764ನೇ (ಶಾ. ಶ. 1686)ನೇ ತಾರಣ ಸಂ|ದಲ್ಲಿ ದಾಮಾಜಿಪಂತನ ಅಧಿಕಾರವು ಕಣ್ಣಾನೂರಿನ ಅರಸು ಸುಲ್ತಾನ ಅಲಿರಾಜನ ತಮ್ಮನಾದ ಶೇಕಾಲಿಯ ಕೈಗೆ ಸಿಕ್ಕಿತು. ಇವನು ಬಂಗರು, ಚೌಟರು ಮುಂತಾದ ಎಲ್ಲಾ ಮನೆತನದವರ ರಾಜ್ಯಗಳನ್ನು ಸೆಳಕೊಂಡನು. ವೇಣೂರು ಶೀಮೆಯನ್ನು ಸ್ವಾಧೀನಪಡಿಸಿಕೊಂಡು ಅರಮನೆಯನ್ನು ಸುಲಿಗೆಮಾಡಿ ತಿಮ್ಮಣ್ಣಾಜಿಲನನ್ನು ಸೆರೆಯಲ್ಲಿಟ್ಟನು. ಆಗ ತಿಮ್ಮಣ್ಣಾಜಿಲನು ಮಂಗಳೂರು ಕೋಟೆಯ ಖಿಲ್ಲೆದಾರ ಮಿಜರ್ಯಾಸಾಹೇಬನ ಮುಖಾಂತರ, ಶೇಕಲ್ಲಿಯು ಮಾಡಿದ ಅನ್ಯಾಯಗಳನ್ನು ಹೈದರಲ್ಲಿಗೆ ಬರೆದುಕಳುಹಿಸಿದನು. ಹೈದರಲ್ಲಿಯು ತಿಮ್ಮಣ್ಣಾಜಿಲನನ್ನು ನಗರಕ್ಕೆ ಕರೆಯಿಸಿ ೧೧,೦೦೦ ವರಹಗಳನ್ನು ಕಪ್ಪಕೊಡುವ ಶರ್ತದ ಮೇಲೆ ವೇಣೂರು ಸೀಮೆಯನ್ನು ಬಿಟ್ಟುಕೊಟ್ಟನು. ಈ ಹಣಕ್ಕೆ ಮಂಗಳೂರು ಸಾಹುಕಾರ ಲಾಲಾಸಾಹೇಬನು ಜಾಮಿನಾಗಿ ನಿಂತನು. ಅನಂತರ ನಗರದಿಂದ ವೇಣೂರಿಗೆ ಬಂದು ಬಹಳ ವ್ಯಸನದಿಂದ ಕ್ರಿ. ಶ. 1765ರಲ್ಲಿ ಕಾಲವಾದನು.

**9. 4ನೇ ಪಾಂಡ್ಯಪ್ಪ ಅಜಿಲ.** ಕ್ರಿ. ಶ. 1765–1786. ತಿಮ್ಮಣ್ಣಾಜಿಲನ ಅಳಿಯ ಪಾಂಡ್ಯಪ್ಪ ಅಜಿಲನು ಶಾ. ಶ. 1687ನೇ ಪಾರ್ಥಿವ ಸಂ|ದ ಕಾರ್ತಿಕ ಶು. ೭ರಲ್ಲಿ ಪಟ್ಟಕ್ಕೆ ಬಂದನು. ಶೇಕಲ್ಲಿಯು ತಿರಿಗಿ ವೇಣೂರು ಶೀಮೆಯನ್ನು ತನ್ನ ಸ್ವಾಧೀನಪಡಿಸಿಕೊಂಡನು. ಕ್ರಿ. ಶ. 1767ರಲ್ಲಿ ಇಂಗ್ಲೀಷರು ಮಂಗಳೂರನ್ನು ಹಿಡಿದುಕೊಂಡಾಗ ಹೈದರನು ಮಂಗಳೂರನ್ನು ಪುನಃ ಸ್ವಾಧೀನಪಡಿಸಿಕೊಳ್ಳಲಿಕ್ಕೆ ಮೂಡಬಿದರೆಯ ದಾರಿಯಾಗಿ ಬಂದು ಪೊನ್ನಾಚಾರು

ಮಠದಲ್ಲಿದ್ದನು. ಆಗ ತಿಮ್ಮಣ್ಣಾಜಿಲನು ಅಲ್ಲಿಗೆ ಹೋಗಿ ಹೈದರನ ಭೇಟಿಮಾಡಿ ತನ್ನ ಬಡತನವನ್ನು ಹೇಳಿಕೊಳ್ಳಲು ಹೈದರನು ಶಾ. ಶ. 1690ನೇ ಸರ್ವಧಾರಿ ಸಂ|ದ ಜ್ಯೇಷ್ಠ ಶು. ೯ಲ್ಲಿ ೬೦ ವರಹದ ತೋಟ, ಗದ್ದೆ ಇವನ್ನು ಬಿಟ್ಟುಕೊಡಬೇಕೆಂದು ಮಂಗಳೂರು ಅಧಿಕಾರಿಯಾಗಿದ್ದ ಶೇಕಲ್ಲಿಗೆ ಪರವಾನೆಯನ್ನು ಕೊಟ್ಟನು. ವರುಷಕ್ಕೆ ೬೦ ವರಹ ಪ್ರಕಾರ ಶಾ. ಶ. 1708ನೇ ಪರಾಭವ ಸಂ|ದ (ಕ್ರಿ. ಶ. 1786) ವರೆಗೆ ಸಿಕ್ಕಿತು. ಪಾಂಡ್ಯಪ್ಪ ಅಜಿಲನು 1786ರಲ್ಲಿ ಕಾಲವಾದನು.

ಟೀಪುವು ತನ್ನ ಆಳಿಕೆಯಲ್ಲಿ ೬೦ ವರಹದಲ್ಲಿ ೧೦ ವರಹ ಕಡಿಮೆ ಮಾಡಿದನು. ಕ್ರಿ ಶ. 1799ರಲ್ಲಿ ಕನ್ನಡ ಜಿಲ್ಲೆಯು ಇಂಗ್ಲೀಷರ ಸ್ವಾಧೀನಬಂದ ಕೂಡಲೇ ೫೦ ವರಹವನ್ನು ಅಜಿಲನಿಗೆ ಕೊಡಲಾರಂಭಿಸಿ ಈಗಲೂ 200 ರೂಪಾಯಿ ಪ್ರಕಾರ ಮಲ್ಲಿಖಾನೆಯನ್ನು ಕೊಡುತ್ತಾ ಬರುತ್ತಾರೆ. ಈಗಿನ ಅಜಿಲರು ಅಳದಂಗಡಿ ಅರಮನೆಯಲ್ಲಿಯೇ ವಾಸವಾಗಿರುತ್ತಾರೆ.

## 27ನೇ ಅಧ್ಯಾಯ.

## ಕಾರ್ಕಳ ಭೈರರಸ ಒಡೆಯರು.

ಕಾರ್ಕಳ (ಪಾಂಡ್ಯನಗರ)ದ ಹಿರಿಯಂಗಡಿಯಲ್ಲಿ ಸುಮಾರು 500 ವರುಷಗಳ ವರೆಗೆ ಆಳಿದ ಭೈರರಸ ಒಡೆಯರು ಮೈಸೂರಿನಲ್ಲಿರುವ ಕಳಸದ ಹತ್ತಿರವಿರುವ ಹುಂಬುಚ್ಚದಲ್ಲಿ ಆಳಿಕೊಂಡಿದ್ದ ಜಿನದತ್ತರಾಯನ ವಂಶದವರು. ಇಷ್ಟರವರೆಗೆ ಸಿಕ್ಕಿದ ಶಾಸನಗಳ ಆಧಾರದಿಂದಲೂ ಬೇರೆ ಅನುಭವಗಳಿಂದಲೂ ಈ ವಂಶದ ವಿಷಯ ಬರೆದಿದೆ.

### ಭೈರರಸರ ವಂಶದ ಮೂಲ ಚರಿತ್ರೆ.

ಉತ್ತರ ಮಧುರೆಯಲ್ಲಿ ಉಗ್ರವಂಶ ಶ್ರೇಷ್ಠರಾದ ವೀರ ನಾರಾಯಣ ಮೊದಲಾಗಿ ಅನೇಕ ಅರಸುಗಳು ಹುಟ್ಟಿದರು. ಈ

ವಂಶದಲ್ಲಿ ಹುಟ್ಟಿದ ಸಾಕಾರಮಹಾರಾಯನೆಂಬ ಅರಸನು ಉತ್ತರ ಮಧುರೆ (ಮಧುರಾ ಪಟ್ಟಣ)ಯಲ್ಲಿ ಆಳುತ್ತಿದ್ದನು. ಅವನು ಒಂದು ದಿವಸ ಬೇಟೆಯಾಡಲು ಹೋದಾಗ ಬೇಡರ ಜಾತಿಯ ಒಬ್ಬ ಕನ್ನಿಕೆಯನ್ನು ನೋಡಿ ಅವಳನ್ನು ಮದುವೆಯಾಗಬೇಕೆಂದು ಆಸೆಹುಟ್ಟಿ ಅವಳ ತಂದೆಯನ್ನು ಕೇಳಲು ಅವನು ತನ್ನ ಮಗಳಲ್ಲಿ ಹುಟ್ಟಿದ ಮಗನಿಗೆ ಪಟ್ಟಕಟ್ಟುವದಾದರೆ ಮದುವೆಮಾಡಿಕೊಡುತ್ತೇನೆಂದು ಹೇಳಿದನು. ಸಾಕಾರಮಹಾರಾಯನು ಅದಕ್ಕೆ ಒಪ್ಪಿ ಅವಳನ್ನು ಮದುವೆಯಾದನು. ಕಾಲದೋಷದಿಂದ ಈ ಅರಸನು ಆ ಬೇಡಸ್ತ್ರೀಯಾದ ಪದ್ಮಿನಿಯಲ್ಲಿಯೇ ಆಸಕ್ತನಾಗಿ ಆಕೆಯೊಡನೆ ಮಾಂಸವನ್ನು ಭಕ್ಷಿಸುತ್ತಾ ಬಂದು ಕೆಲವು ದಿವಸಗಳ ಮೇಲೆ ನರಮಾಂಸವನ್ನು ಸಹ ತಿನ್ನಲಾರಂಭಿಸಿದನು. ಹೀಗಿರುವಲ್ಲಿ ಈತನ ಪಟ್ಟದ ರಾಣಿಯಾದ ಶ್ರೀಯಳಾದೇವಿಯ ಮಗನಾದ ಜಿನದತ್ತರಾಯನು ಒಂದು ದಿವಸ ರಾಜಬೀದಿಯಲ್ಲಿ ಬರುತ್ತಿರಲು ಈತನ್ಯಾರೆಂದು ಬೇಡಸ್ತ್ರೀಯಾದ ಪದ್ಮಿನಿಯು ಕೇಳಲು ಸಮೀಪದಲ್ಲಿರುವವರು ಈತನು ಸಾಕಾರ ಮಹಾರಾಯನ ಪಟ್ಟದರಸಿಯ ಮಗನೆಂದು ಹೇಳಿದರು. ಆಗ ಪದ್ಮಿನಿಯು ರಾಜ್ಯಭಾರಕ್ಕೆ ಯೋಗ್ಯನಾದ ಇಂಥ ಮಗನಿರುವಾಗ ತನ್ನ ಮಗನಿಗೆ ರಾಜ್ಯವನ್ನು ಕೊಡುವದಾಗಿ ಹೇಳಿದ ರಾಜನ ಮಾತು ಸುಳ್ಳೆಂತಲೂ, ಈ ಮಗನಿರುವ ಪಕ್ಷಕ್ಕೆ ತನ್ನ ಮಗನಾದ ಮಾರಿದತ್ತನಿಗೆ ರಾಜ್ಯದೊರಕುವದಿಲ್ಲವಾದ್ದರಿಂದಲೂ ಈತನನ್ನು ಕೊಲ್ಲಿಸಬೇಕೆಂದು ಆಲೋಚಿಸಿದಳು. ಪದ್ಮಿನಿಯು ಆಹಾರಾದಿಗಳನ್ನು ಬಿಟ್ಟು ದುಃಖಪಡುತ್ತಿರಲು ಸಾಕಾರಮಹಾರಾಯನು ಈ ಸಮಾಚಾರವನ್ನು ಕೇಳಿ, ಆ ಬೇಡಸ್ತ್ರೀಗೆ ನಿನ್ನ ಇಷ್ಟದಂತೆ ಮಾಡುತ್ತೇನೆಂದು ಭರವಸೆಕೊಟ್ಟು ಪಟ್ಟದರಾಣಿಯ ಮಗನನ್ನು ಕೊಲ್ಲಿಸಲು ಪ್ರಯತ್ನಿಸಿದನು. ಒಂದುದಿನ ಜಿನದತ್ತನು ಬೇಟೆಯಾಡಿ ಆನೆಯ ಮೇಲೆ ಕುಳಿತು ಬರುವಾಗ ಒಬ್ಬ ದೂತನು ಬಂದು ಒಂದು ಲಿಂಬೆಹಣ್ಣನ್ನು

ಕೊಟ್ಟು ಅದನ್ನು ಬೇಡಸ್ತ್ರೀಯಾದ ಪದ್ಮಿನಿಯು ಅಡಿಗೆಮನೆಗೆ ಕೊಂಡು ಹೋಗಿ ಕೊಡಬೇಕೆಂದು ಸಾಕಾರಮಹಾರಾಯನು ಹೇಳಿದ್ದಾನೆಂದು ಅವನೊಡನೆ ಹೇಳಿದನು. ಜಿನದತ್ತನು ಕೂಡಲೇ ಆನೆಯಿಂದ ಇಳಿದು ಲಿಂಬೆಹಣ್ಣನ್ನು ಕೊಡಲು ಹೊರಟನು. ಆಗ ಅದೇ ದಾರಿಯಲ್ಲಿ ಬರುತ್ತಿದ್ದ ಮಾರಿದತ್ತನು ಯಾವ ಸಂಗತಿಯೂ ತಿಳಿಯದವನಾದ್ದರಿಂದ ಬಹಳ ಅಸಹ್ಯವಾಗಿರುವ ಮಾಂಸತಿನ್ನುವವರ ಅರಮನೆಗೆ ನೀನು ಹೋಗುವದು ಯೋಗ್ಯವಲ್ಲವೆಂದು ಅಣ್ಣನಿಗೆ ಹೇಳಿ, ಅವನಿಂದ ಆ ಹಣ್ಣನ್ನು ತೆಗೆದುಕೊಂಡು ತನ್ನ ತಾಯಿಯ ಅಡಿಗೆಯವನ ಹತ್ತರ ಕೊಡಲು ಹೋದನು. ನಿಂಬೆಹಣ್ಣನ್ನು ಯಾರು ತಂದುಕೊಡುತ್ತಾರೋ–ಅವನು ಅರಸನ ಮಗನಾದರೂ ಯಾರಾದರೂ ಸರಿ—ಅವನನ್ನು ಕೊಲ್ಲಲೇಬೇಕೆಂದು ಅರಸನ ಅಪ್ಪಣೆ ಇತ್ತು. ಮಾರಿದತ್ತನನ್ನು ಕೂಡಲೇ ಕಡಿದರು. ಊಟದ ಸಮಯದಲ್ಲಿ ಮಾರಿದತ್ತನು ಬಾರದಿರುವ ಕಾರಣವನ್ನು ವಿಚಾರಿಸಲು ಅಡಿಗೆಯವನು ಎಲ್ಲವನ್ನೂ ಇದ್ದಂತೆಯೇ ಹೇಳಿದನು. ಆಗ ಬೇಡಸ್ತ್ರೀಯು ದುಃಖದಿಂದಲೂ ಸಿಟ್ಟಿನಿಂದಲೂ ಅರಸನನ್ನು ತುಚ್ಛೀಕರಿಸಿಮಾತಾಡಲು ಸಾಕಾರಮಹಾರಾಯನು ಜಿನದತ್ತನನ್ನೂ ಕೊಲ್ಲಿಸಲು ಕೂಡಲೇ ಸಿದ್ಧಪಡಿಸಿದನು.

ಆದರೆ ಈ ಸಂಗತಿಯು ಗುರುಗಳಾದ ಸಿದ್ಧಾಂತ ಮುನೀಶ್ವರರ ಮುಖಾಂತರ ಶ್ರೀಯಳಾದೇವಿಗೆ ತಿಳಿದುಬರಲು ಅವಳು ಮಗನಿಗೆ ತಮ್ಮ ಕುಲದೇವಿಯಾದ ಪದ್ಮಾವತಿ ಅಮ್ಮನವರ ವಿಗ್ರಹವನ್ನು ಕೊಟ್ಟು ಕುದುರೆಯ ಮೇಲೆ ಕುಳ್ಳಿರಿಸಿ ಪಲಾಯನಮಾಡಿಸಿದಳು. ಸಾಕಾರಮಹಾರಾಯನಿಗೆ ಈ ಸಂಗತಿಯು ಗೊತ್ತಾಗಿ ಅವನನ್ನು ಬೆನ್ನಟ್ಟಿ ಹಿಡಿಯುವದಕ್ಕಾಗಿ ಕುದುರೆಸವಾರರನ್ನು ಕಳುಹಿಸಿದನು. ಜಿನದತ್ತನು ಕಾಡುದಾರಿಯಾಗಿ ಓಡಿಬಂದು ಮೈಸೂರು ಮಲೆನಾಡಿನಲ್ಲಿರುವ, ಈಗ ಹುಂಬುಚ್ಚ ಇರುವ ಸ್ಥಳಕ್ಕೆ ಬಂದು ಸೇರಿದನು.

ಆ ಸಮಯದಲ್ಲಿ ಅಲ್ಲಿ ಆಳುತ್ತಿದ್ದ ಬೇಡರ ಅರಸನು ಇವನ ಚರಿತ್ರೆಯನ್ನು ವಿಚಾರಿಸಿ ಇವನಿಗೆ ಯಾರೂ ಬಾಧಿಸದ ಹಾಗೆ ರಕ್ಷಿಸಿದನು. ಜಿನದತ್ತರಾಯನು ಪದ್ಮಾವತ್ಯಮ್ಮನವರ ಪ್ರತಿಮೆಯನ್ನು ಒಂದು ಲೊಕ್ಕಿಯ ವೃಕ್ಷ (ಎಂಜಿರ ಮರ)ದ ಬುಡದಲ್ಲಿ ಇಟ್ಟಿದ್ದನು. ಅಲ್ಲಿಯೇ ಬಸದಿಯನ್ನು ಕಟ್ಟಿ, ರಾಜಧಾನಿಯನ್ನು ಕಟ್ಟಬೇಕೆಂದು ಸ್ವಪ್ನವಾಗಲು ಆ ಸ್ಥಳದಲ್ಲಿಯೇ ಬಸದಿ, ಅರಮನೆ, ರಾಜಧಾನಿ ಕಟ್ಟಿಸಿ ತನ್ನ ತಾಯಿಯನ್ನೂ ಬಂಧುಗಳನ್ನೂ ಸಹ ಕರೆಯಿಸಿಕೊಂಡು ತನ್ನ ರಾಜಧಾನಿಗೆ ಪಟ್ಟಪೊಂಬುಚ್ಚಪುರ ಎಂಬ ಹೆಸರಿಟ್ಟನು. ಅಮ್ಮನವರ ಪ್ರತಿಷ್ಠೆಯು "ಕಲ್ಯಬ್ದೇಶಕಪಂಚಶತೇ ಪ್ರಭವ ಸಂವತ್ಸರೇ" ಎಂದು ಹೇಳುವ ಪ್ರಕಾರ ಕಲಿವರ್ಷ 500ರಲ್ಲಿ ಯುಕ್ಷಿಣಿದೇವಿಯಾದ ಪದ್ಮಾವತ್ಯಮ್ಮನವರ ಪ್ರತಿಷ್ಠೆಯಾಯಿತು. ಜಿನದತ್ತರಾಯನು ಕಳಸದ ಸೀಮೆಯನ್ನು ಆಳತೊಡಗಿದನು. ಅನಂತರ ಕೊಪ್ಪ, ಬೆಳ್ಳರೆ, ಖಾಂಡ್ಯ, ಮೊಳಕಾಡ, ಹೊಳೆಯ, ಬೈಲೂರು ಶೀಮೆಗಳು ಇವನ ಸ್ವಾಧೀನವಾದವು.

ಈ ಜಿನದತ್ತರಾಯನು ದಕ್ಷಿಣಮಧುರೆಯ ಪಾಂಡ್ಯದೇಶದ ವೀರಪಾಂಡ್ಯನೆಂಬ ಅರಸನ ಪುತ್ರಿಯರಾದ ಪದ್ಮಿನಿ, ಮನೋರಾಧೆ ಎಂಬ ಇಬ್ಬರು ಕನ್ನಿಕೆಯರನ್ನು ಮದುವೆಯಾದನು. ಈ ಜಿನದತ್ತ ರಾಯನಿಗೆ ಪಾರ್ಶ್ವಚಂದ್ರ, ನೇಮಿಚಂದ್ರ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಪಾರ್ಶ್ವಚಂದ್ರನು ಆಳುವ ಕಾಲದಲ್ಲಿ ತನ್ನ ತಂದೆಯನ್ನು ಭೈರವಿಯಾದ ಪದ್ಮಾವತಿಯೇ ರಕ್ಷಿಸಿದ್ದರಿಂದ ತನ್ನ ಹೆಸರಿಗೆ ಭೈರವ ಎಂಬ ಹೆಸರನ್ನೂ ತನ್ನ ತಾಯಿಯು ಪಾಂಡ್ಯರಾಜನ ಕುಮಾರಿಯಾದ್ದರಿಂದ ಪಾಂಡ್ಯ ಎಂಬ ಬಿರುದನ್ನೂ ಧರಿಸಿದನು. ಹೀಗೆ ಇವನಿಗೆ ಪಾರ್ಶ್ವಚಂದ್ರ ಪಾಂಡ್ಯಭೈರವ ಅರಸ ಎಂಬ ಹೆಸರಾಯಿತು. ಇವನ ಬಳಿಕ ಆಳಿದ ಅರಸರೆಲ್ಲಾ "ಪಾಂಡ್ಯಭೈರವ ಅರಸ" ಎಂಬದನ್ನು ತಮ್ಮ ಹೆಸರಿಗೆ ಕೂಡಿಸುತ್ತಾ ಬಂದರು. ಇದೇ ವಂಶದಲ್ಲಿ ಶಾ. ಶ. 847 (ಕ್ರಿ. ಶ. 925)ರಲ್ಲಿ ಪ್ರಮುಖ ಸಂ।ದಲ್ಲಿ ಶ್ರೀವರ್ಮರಾಯನು ಹುಟ್ಟಿದನು.

ದ್ವಾರಸಮುದ್ರದಲ್ಲಿ ಕ್ರಿ. ಶ. 1104—1141ರ ವರೆಗೆ ಆಳಿದ ಹೊಯಿಸಳರಾಜನಾದ ಬಿಟ್ಟಿದೇವ (ಬಿಟ್ಟಿಗ) ಎಂಬ ಬಲಿಷ್ಠನಾದ ಅರಸನು ಜೈನಮತವನ್ನು ಬಿಟ್ಟು ರಾಮಾನುಜಾಚಾರ್ಯರ ಶ್ರೀ ವೈಷ್ಣವಮತವನ್ನು ಅವಲಂಬಿಸಿದನು. ಇವನು ಹೊಂಬುಚ್ಚದ ಜೈನ ಅರಸನನ್ನು ಜಯಿಸಿದನೆಂದು ಕ್ರಿ. ಶ. 1123ನೇ ಇಸವಿಯ ಶ್ರಾವಣ ಬೆಳುಗುಳದ ಶಾಸನದಲ್ಲಿದೆ. ಅಂದಿನಿಂದ ಇವರು ಹೊಯಿಸಳರ ಒಳ ಅರಸರಾಗಿ ಆಳಿದರು. ಈ ಸಮಯದಲ್ಲಿ ಕನ್ನಡಜಿಲ್ಲೆಯ ಏಳು ನಾಡು ಕಾಪಿಟ್ಟು ಹೆಗ್ಗಡೆಯು ಕಾರ್ಕಳ, ಐದೂರು, ಪಡಂಗಡಿ, ಕೆವರ್ಾಸೆ, ಆರೂರು, ನಾಲ್ಕೂರು, ಮೂರುರು ಎಂಬ 7 ನಾಡುಗಳನ್ನು ಆಳಿಕೊಂಡಿದ್ದನು. ಈ ಏಳುನಾಡು ಹೆಗ್ಗಡೆಯು ಪ್ರಜೆಗಳನ್ನು ಬಹಳ ಪೀಡಿಸತೊಡಗಿದನು. ಪ್ರಜೆಗಳು ತಮ್ಮ ಕಪ್ಪವನ್ನು ಕೊಡಲು ಹೋದ ಸಮಯದಲ್ಲಿ ತಾನು ಮಂಚದ ಮೇಲೆ ಮಲಗಿ ಕಪ್ಪವನ್ನು ತೆಗೆದುಕೊಳ್ಳುತ್ತೇನೆಂದು ಹೇಳಿದನು. ಪ್ರಜೆಗಳು ಅದು ತಮಗೆ ಅಪಮಾನಕರವೆಂದು ಹೇಳಲು ಹೆಗ್ಗಡೆಯು "ನಾನು ಮಲಗಿ ಕಪ್ಪ ತೆಗೆದುಕೊಳ್ಳುವದಾದರೆ ನೀವು ಕೂತುಕೊಂಡು ಕಪ್ಪಕೊಡಿ" ಎಂದು ಹೇಳಿದನು. ಆದಕ್ಕೆ ಅವರು ಒಪ್ಪಿ ಮರುದಿವಸ ಕಪ್ಪವನ್ನು ತೆಗೆದು ಕೊಂಡು ಬಂದರು. ಹೆಗ್ಗಡೆಯು ಇವರನ್ನು ಅಪಮಾನಪಡಿಸಬೇ ಕೆಂದು ಕೆಸರಿರುವ ಒಂದು ಸ್ಥಳದಲ್ಲಿ ಮಂಚವನ್ನು ಇಟ್ಟು ಮಲಗಿ ದ್ದನು. ಈ ಸ್ಥಿತಿಯನ್ನು ನೋಡಿ ತಮಗೆ ರಾಜನೇ ಬೇಡವೆಂದು ಹೊರಟುಹೋದರು. ಅ ಸಮಯದಲ್ಲಿ ತಮ್ಮ ಪವಿತ್ರಸ್ಥಳವಾದ ಜೈನಕಾಶಿ ಎನ್ನಿಸುವ ಮೂಡಬಿದರೆಗೆ ಭೈರವರಾಯನು ಯಾತ್ರಾರ್ಥಿ ಯಾಗಿ ಬಂದಿದ್ದನು. ಆಗ ಏಳುನಾಡಿನ ಪ್ರಜೆಗಳು ಭೈರವರಾಯನಿಗೆ ಈ ಸಂಗತಿಯನ್ನು ತಿಳಿಸಿದರು. ಭೈರವರಾಯನು ಏಳುನಾಡು ಹೆಗ್ಗಡೆಯನ್ನು ಮರ್ಯಾದೆಯಿಂದ ಹೇಳಿಕಳುಹಿಸಿ ಅವನನ್ನು ಕರೆಸಿ ಪ್ರಜೆಗಳ ಮನಸ್ಸನ್ನು ನೋಯಿಸಬಾರದೆಂದು ಹೇಳಿದನು. ಹೆಗ್ಗಡೆಯು

ಇವನ ಮಾತಿಗೆ ಕಿವಿಕೊಡಲಿಲ್ಲ. ಈ ಹೆಗ್ಗಡೆಯ ಅರಮನೆಯು ಕಾರ್ಕಳದ ಹಿರೇಬಸದಿಯ ವಾಯುವ್ಯದಿಕ್ಕಿಗೆ ಅರಂತಲಾಯಿ ಎಂಬ ಸ್ಥಳದಲ್ಲಿತ್ತು. ಆಗ ಭೈರವರಾಯನು ಹುಂಬುಚ್ಚದಿಂದ ಸೈನ್ಯವನ್ನು ತರಿಸಿ ಯುದ್ಧದಲ್ಲಿ ಏಳುನಾಡು ಹೆಗ್ಗಡೆಯನ್ನು ಸೋಲಿಸಿ ಆ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನು. ಭೈರವರಾಯನು ಈಗ ಅರಮನೆ ಬಸದಿ ಇರುವಲ್ಲಿ ಹಿರಿಯಂಗಡಿಯಲ್ಲಿ ಸುಮಾರು 4-5 ಎಕ್ರೆ ವಿಸ್ತೀರ್ಣದ ಸ್ಥಳದಲ್ಲಿ ಅರಮನೆಯನ್ನೂ ಅರಮನೆಯ ಮಧ್ಯದಲ್ಲಿ ಬಸದಿಯನ್ನೂ ಕಟ್ಟಿಸಿದನು. ಗಟ್ಟದ ಕೆಳಗಣ ಈ ರಾಜಧಾನಿಗೆ ಪಾಂಡ್ಯನಗರ ಎಂದು ಹೆಸರಿಟ್ಟನು. ಅನಂತರ 1. ಕಾರ್ಕಳ ಮಾಗಣೆ, 2. ಕೆರ್ವಾಶೆ ಮಾಗಣೆ, 3. ಮೂರೂರು ಮಾಗಣೆ, 4. ನಾಲ್ಕೂರು ಮಾಗಣೆ, 5. ಐದೂರು ಮಾಗಣೆ, 6. ಆರೂರು ಮಾಗಣೆ ಈ 6 ಮಾಗಣೆಗಳನ್ನು ಒಳಕೊಂಡಿರುವ ಕಾರ್ಕಳ ಏಳುನಾಡು ಸೀಮೆಯು ಇವನ ಸ್ವಾಧೀನವಾಯಿತು. ಭೈರವರಾಯನು ಹುಂಬುಚ್ಚ ರಾಜಧಾನಿಯಿಂದಲೇ ಈ ಶೀಮೆಯನ್ನು ಆಳುತ್ತಿದ್ದನು.

**1. ಪಾಂಡ್ಯ ದೇವರಸ ಅಥವಾ ಪಾಂಡ್ಯ ಚಕ್ರವರ್ತಿ.** ಕ್ರಿ. ಶ. 1262. ಕುಂದಾಪುರ ನರಶಿಂಹಸ್ವಾಮಿ ದೇವಸ್ಥಾನದಲ್ಲಿರುವ ಶಾ. ಶ. 1184 (ಕ್ರಿ. ಶ. 1262)ರ ಶಾಸನ ಪ್ರಕಾರವೂ ಕೋಟೇಶ್ವರ ವೀರಭದ್ರ ದೇವಸ್ಥಾನದ ಶಾ. ಶ. 1183 (ಕ್ರಿ. ಶ. 1261)ರ ಶಾಸನ ಪ್ರಕಾರವೂ ಮೂಡಬಿದರೆ ಬೆಳುವಾಯಿ ಗ್ರಾಮದ ಲೋಕಯ ಶೆಟ್ಟಿಯ ಮನೆಯ ಹತ್ತರವಿರುವ ಶಾ. ಶ. 1183 (ಕ್ರಿ. ಶ. 1261)ರ ಶಾಸನ ಪ್ರಕಾರವೂ ಪಾಂಡ್ಯ ದೇವರಸ ಅಥವಾ ಪಾಂಡ್ಯ ಚಕ್ರವರ್ತಿ ಎಂಬ ಈ ವಂಶದ ಅರಸನು ಕನ್ನಡ ಜಿಲ್ಲೆಯ ಉತ್ತರ ಭಾಗವನ್ನು ಆಳುತ್ತಿದ್ದನೆಂದು ಕಾಣುತ್ತದೆ. ಈ ಅರಸನು ಕಾರ್ಕಳ ಆನೆಕೆರೆಯನ್ನು ಮಾಡಿಸಿದನು.

**2. ಲೋಕನಾಥ ದೇವರಸ.** ಕಾರ್ಕಳ ಹಿರಿಯಂಗಡಿ ಗುರುಗಳ ಬಸದಿಯ ಪಶ್ಚಿಮ ಗೋಡೆಗೆ ತಾಗಿರುವ ಶಾ. ಶ. 1256

(ಕ್ರಿ. ಶ. 1334)ರ ಶಾಸನದಲ್ಲಿ ಶಾಂತಿನಾಥಬಸದಿಯನ್ನು ಶ್ರಾವಕರು ಕಟ್ಟಿಸಿದರೆಂತಲೂ, ಆ ಸಮಯದಲ್ಲಿ ಮಹಾರಾಜಾಧಿರಾಜ ರಾಜ ಪರಮೇಷ್ಠಿತಂ, ಪರಮಭಟ್ಟಾರಕಂ, ಮಹಾಮಂಡಲೇಶ್ವರಂ, ಲೋಕ ನಾಥ ದೇವರಸನು ಕಾರ್ಕಳ ರಾಜ್ಯವನ್ನು ಆಳುತ್ತಿದ್ದನೆಂದೂ, ಇವನು ಬೊಮ್ಮಿದೇವರಸ ಮತ್ತು ಸಿದ್ದಲದೇವಿಯರ ಮಗನೆಂದೂ ಬರೆದಿದೆ. ಇದರಿಂದ ಇವನು ಹೊಯ್ಸಳ ರಾಜರ ಕೈಕೆಳಗೆ ಮಹಾ ಮಂಡಲೇಶ್ವರನಾಗಿ ಜಿಲ್ಲೆಯ ಉತ್ತರ ಭಾಗವನ್ನು ಆಳುತ್ತಿದ್ದನೆಂದು ತಿಳುಕೊಳ್ಳಬಹುದು. ಇದೇ ಅರಸನ ಇನ್ನೊಂದು ಶಾಸನವು ಉಡುಪಿ ಅದಮಾರು ಮಠದಲ್ಲಿದೆ. ಇದರಲ್ಲಿ ಈ ಅರಸನು ಶಾ. ಶ. 1261ನೇ ಪ್ರಮಾದಿ ಸಂ|ದಲ್ಲಿ (ಕ್ರಿ. ಶ. 1339) ಆ ಮಠಕ್ಕೆ ಸುವರ್ಣದಾನ ಮಾಡಿದನೆಂದು ಇದೆ. ಈ ಅರಸನು ಮಹಾಮಂಡಲೇಶ್ವರನಾಗಿ ಆಳು ತ್ತಿದ್ದಾಗ ಇವನ ಸೈನ್ಯದಲ್ಲಿ ಹೆಚ್ಚಾಗಿ ತಿಗಳರೆಂಬ ತಮಿಳು ಜನರು ಸೈನಿಕರಾಗಿದ್ದರು. ಇವರ ವಂಶದವರು ವಾಸಿಸುವ ತಿಗಳರಕೇರಿಯು ಕಾರ್ಕಳದಲ್ಲಿ ಈಗಲೂ ಇದೆ. ಈ ಅರಸನಿಗೆ ಪಾಳಿಧ್ವಜವು ಇತ್ತು. ಇದು ಈಗಲೂ ಕಾರ್ಕಳ ದಾನಸಾಲೆಮಠದಲ್ಲಿ ಇದೆ.

3. **ವೀರಪಾಂಡ್ಯ ದೇವರಸ.** ಈ ಅರಸನು ಆಳುವಾಗ ಕನ್ನಡ ಜಿಲ್ಲೆಯು ವಿಜಯನಗರದ ಅರಸರ ಸ್ವಾಧೀನವಾಯಿತು. ಅಷ್ಟರ ವರೆಗೆ ವೀರಪಾಂಡ್ಯನು ಮಹಾಮಂಡಲೇಶ್ವರನಾಗಿದ್ದನು. ಇವನ ಕಾಲದಲ್ಲಿ ಈ ಅಧಿಕಾರವು ತಪ್ಪಿಹೋಗಿ ಬಾರಕೂರು ಹೋಬಳಿಗೆ ವಿಜಯನಗರದ ಕಡೆಯಿಂದ ಒಬ್ಬ ಒಡೆಯರು ನೇಮಿಸಲ್ಪಟ್ಟರು. ಶಾ. ಶ. 1318 (ಕ್ರಿ. ಶ. 1396)ರಲ್ಲಿ ಈ ಅರಸನು ಮೂಡಬಿದರೆ ಪ್ರಾಂತ್ಯ ಗೌರಿದೇವಸ್ಥಾನಕ್ಕೆ ಒಂದು ದಾನಮಾಡಿರುತ್ತಾನೆಂದು ಅಲ್ಲಿರುವ ಶಾಸನದಿಂದ ತಿಳಿಯುತ್ತದೆ.

4. **ರಾಮನಾಥ ಅರಸನು.** ಈ ಅರಸನು ಕಾರ್ಕಳದಲ್ಲಿ ಆಳಿಕೊಂಡಿರುವಾಗ ಕುಂದಾಪುರ ತಾಲೂಕಿನ ವಿಲ್ಲಪುಂದ ದುರ್ಗಾ

ದೇವಸ್ಥಾನಕ್ಕೆ ಒಂದು ದಾನಮಾಡಿರುತ್ತಾನೆಂದೂ, ವೀರಪ್ರತಾಪ ಒಡೆಯನು ಬಾರಕೂರು ಒಡೆಯನಾಗಿದ್ದನೆಂದೂ ಆ ದೇವಸ್ಥಾನದಲ್ಲಿರುವ ಶಾ. ಶ. 1338 (ಕ್ರಿ. ಶ. 1416) ಶಾಸನದಿಂದ ತಿಳಿಯುತ್ತದೆ. ಈ ಅರಸನು ಕಾರ್ಕಳದ ಪೂರ್ವದಿಕ್ಕಿಗೆ ಅಣೆಕಟ್ಟನ್ನು ಕಟ್ಟಿಸಿ ಒಂದು ಜಲಾಶಯವನ್ನು ಉಂಟುಮಾಡಿ ಅದಕ್ಕೆ ತನ್ನ ಹೆಸರನ್ನಿಟ್ಟು ರಾಮಸಮುದ್ರವೆಂದು ಕರೆದನು. ಇದನ್ನು ರೆಂಜಾಳ ಗ್ರಾಮದಲ್ಲಿ ಮಾಡಿಸಬೇಕೆಂದು ಆಲೋಚನೆಯಿತ್ತು. ಆದರೆ ಅಲ್ಲಿ ಅಣೆಕಟ್ಟು ಕಟ್ಟಲಿಕ್ಕೆ ಯೋಗ್ಯ ಸ್ಥಳ ಸಿಕ್ಕಲಿಲ್ಲ. ಈ ರಾಮಸಮುದ್ರ ಮಾಡಿಸಿದ್ದರಿಂದ ಕಾರ್ಕಳ ಪುರವಾಸಿಗಳಿಗೂ ಬೇಸಾಯಕ್ಕೂ ಬಹಳ ಪ್ರಯೋಜನವಾಯಿತು.

5. **ಭೈರರಸ ಒಡೆಯನು.** ಕ್ರಿ. ಶ. 1418. ಕಾರ್ಕಳ ಹಿರೇನೇಮೀಶ್ವರ ಬಸದಿಯ ಬಾಗಲಲ್ಲಿರುವ ಶಾಸನದಲ್ಲಿ ಶಾ. ಶ. 1340ನೇ ವಿಳಂಬಿ ಸಂ|ದಲ್ಲಿ (ಕ್ರಿ. ಶ. 1418) ಭೈರರಸ ಒಡೆಯನು ಆಳುತ್ತಿದ್ದನೆಂದು ಇದೆ. ಇವನು ರಾಮನಾಥ ಅರಸನ ತರುವಾಯ ಆಳಿದ ಅರಸನು. ಭೈರವರಾಯನು ಆಳುತ್ತಿರುವಾಗ ಇವನ ಮಗನಾದ ವೀರಪಾಂಡ್ಯನು ಯಾತ್ರಾರ್ಥಿಯಾಗಿ ಹೊರಟು ಬೀಹಾರ ಮುಂತಾದ ಜೈನರ ಪವಿತ್ರಸ್ಥಳಗಳಿಗೆ ಹೋಗಿ ಹಿಂತಿರುಗಿ ಬರುವಾಗ ಶ್ರಾವಣ ಬೆಳುಗುಳದಲ್ಲಿದ್ದ ಗೋಮಟೇಶ್ವರ ಪ್ರತಿಮೆಯ ಹಾಗಿರುವ ಭುಜಬಲಿಯ ಇನ್ನೊಂದು ಪ್ರತಿಮೆಯನ್ನು ಗಟ್ಟದ ಕೆಳಗಣ ರಾಜಧಾನಿಯಾದ ಕಾರ್ಕಳ ದಲ್ಲಿಯೂ ಪ್ರತಿಷ್ಠಿಸಬೇಕೆಂದು ನಿಶ್ಚಯಿಸಿದನು.

6. **ವೀರಪಾಂಡ್ಯ ಭೈರರಸ ಒಡೆಯ.** ತಂದೆಯು ಕಾಲವಾದನಂತರ ವೀರಪಾಂಡ್ಯನು ಪಟ್ಟಕ್ಕೆ ಬಂದನು. ಕೂಡಲೇ ತಾನು ನಿರ್ಧರಿಸಿದ ಕೆಲಸವನ್ನು ಮಾಡಲುಪಕ್ರಮಿಸಿ ಶಿಲ್ಪಿಗರನ್ನು ಕರೆಯಿಸಿ ಆ ಕಾರ್ಯವನ್ನು ಕೈಕೊಂಡನು. ಶಿಲ್ಪಿಯ ನಿಜವಾದ ಹೆಸರು ತಿಳಿದು ಬರುವದಿಲ್ಲ. ಆದರೆ ಈ ಸಮಯದಲ್ಲಿ ಬುದ್ಧಿವಂತರಾದ ಅನೇಕ

ಶಿಲ್ಪಿಗಳು ತುಳುರಾಜ್ಯದಲ್ಲಿ ಇದ್ದರು. ಈ ಪ್ರತಿಮೆಯನ್ನು ಗುಮಟೇಶ್ವರನ ಬೆಟ್ಟದ ದಕ್ಷಿಣ ಭಾಗದಲ್ಲಿರುವ ಶಿಲೆಯಿಂದ ಕಡಿದು ತೆಗೆದರು. ಆ ಸ್ಥಳವನ್ನು ಅಲ್ಲಿ ಈಗಲೂ ನೋಡಬಹುದು. ಕೆತ್ತನೆಯ ಕೆಲಸಕ್ಕೆ ಬಹುಕಾಲ ಹಿಡಿದಿರಬೇಕು. ಈ ಪ್ರತಿಮೆಯು ಸುಮಾರು 400 ಖಂಡಿ ಭಾರ ಇರಬೇಕೆಂದು ಅಂದಾಜುಮಾಡಿದ್ದಾರೆ. ಪ್ರತಿಮೆಯನ್ನು ಕಡಿದು ತೆಗೆದ ಸ್ಥಳದಿಂದ ಗೋಮಟೇಶ್ವರನ ಬಸದಿಯು ದಕ್ಷಿಣಕ್ಕೆ ಕ್ರಮದಲ್ಲಿ ಇಳಿ



ಕಾರ್ಕಳ ಗೋಮಟೇಶ್ವರನ ಮುಂದಿರುವ ಬ್ರಹ್ಮದೇವರ ಸ್ತಂಭ.

ಜಾರು ಸ್ಥಳವಾದ್ದರಿಂದ ಆ ಪ್ರತಿಮೆಯನ್ನು ಅಲ್ಲಿ ಕೆತ್ತಿದರೆ ಮೇಲಕ್ಕೆಳಿಯುವದು ಸುಲಭವೆಂದು ಆಲೋಚಿಸಿ ಅಲ್ಲಿಯೇ ತಯಾರಿಸಿರಬೇಕೆಂದು ಊಹಿಸಬಹುದು. ಇಪ್ಪತ್ತು ಚಕ್ರಗಳುಳ್ಳ ಬಂಡಿಯ ಮೇಲಿಟ್ಟು

ಈ ಪ್ರತಿಮೆಯನ್ನು ಬಹಳ ಸಂಭ್ರಮದಿಂದ ಪ್ರತಿಷ್ಠಿಸಿದರು. ಈ ಗೋಮಟೇಶ್ವರನ ಪ್ರತಿಷ್ಠೆಯ ಮಹೋತ್ಸವಕ್ಕೆ ವಿಜಯನಗರದ ರಾಜನಾದ 2ನೇ ದೇವರಾಯನು ಕಾರ್ಕಳಕ್ಕೆ ಬಂದಿದ್ದನು. ಗೋಮಟೇಶ್ವರನ ಪ್ರತಿಮೆಯು ಪ್ರತಿಷ್ಠೆಯಾದಂದಿನಿಂದ ಕಾರ್ಕಳವು ಜೈನರ ಪವಿತ್ರಸ್ಥಳವಾಗಿ ಪ್ರಸಿದ್ಧಿಗೆ ಬಂತು. ಈ ಪ್ರತಿಮೆಯ ಬಲಭಾಗದಲ್ಲಿರುವ ಸಂಸ್ಕೃತ ಶಾಸನದಲ್ಲಿ ಹೀಗೆ ಬರೆದಿದೆ:—"ಶಾ. ಶ. 1353 (ಕ್ರಿ. ಶ. 1431-'32)ನೇ ವಿರೋಧಿಕೃತು ಸಂ|ದ ಫಾಲ್ಗುಣ ಶು. ೧೧ಯು ಬುಧವಾರದಲ್ಲಿ "ಭುಜಬಲಿಯು" (ಗೋಮಟೇಶ್ವರನ) ಪ್ರತಿಮೆಯನ್ನು ಕಾರ್ಕಳ ಅರಸರ ಗುರುಗಳಾದ ಮೈಸೂರಲ್ಲಿರುವ ಹಣಸೋಗೆ ಲಲಿತಕೀರ್ತಿ ಮತ್ತು ದೇಶಿಗನ ಎಂಬ ಗುರುಗಳ ಅಪ್ಪಣೆ ಪ್ರಕಾರ ಚಂದ್ರವಂಶದ ಭೈರವ ಅರಸನ ಮಗನಾದ ವೀರ ಪಾಂಡ್ಯನು ಸ್ಥಾಪಿಸಿದನು". ಎಡಭಾಗದಲ್ಲಿರುವ ಕನ್ನಡ ಪದ್ಯರೂಪದ ಶಾಸನದಲ್ಲಿ ಮೇಲಿನ ಸಂಗತಿಯನ್ನೇ ಬರೆದದೆ. ಆದರೆ "ಭುಜಬಲಿ" ಎಂಬದರ ಬದಲಾಗಿ "ಗುಮಟಜಿನಪತಿ" ಎಂದು ಬರೆದಿದೆ. ಶಾ. ಶ. 1358ನೇ ರಾಕ್ಷಸ ಸಂ|ದ ಫಾಲ್ಗುಣ ಶು. ೧೦ (ಕ್ರಿ. ಶ. 1437ನೇ ಫೆಬ್ರವರಿ 15)ರಲ್ಲಿ ಗೋಮಟೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಸ್ತಂಭ ಸ್ಥಾಪನೆ ಮಾಡಿಸಿದನು. ಅದರ ಮೇಲೆ ಬ್ರಹ್ಮನ ಆಶೀರ್ವಾದವನ್ನು ಬೇಡಿಕೊಳ್ಳುವದಕ್ಕಾಗಿ ಜಿನದತ್ತರಾಯನ ಕುಟುಂಬದ ಭೈರವ ಅರಸನ ಮಗ ವೀರಪಾಂಡ್ಯನು ಬ್ರಹ್ಮದೇವರ ಪ್ರತಿಮೆಯನ್ನು ಪ್ರತಿಷ್ಠಿಸಿದನು. ಈ ಸಂಗತಿಯನ್ನು ಅದೇ ಕಂಬದ ಮೇಲಿರುವ ಶಾಸನದಿಂದ ತಿಳಿದು ಬರುತ್ತದೆ.

**7. ಅಭಿನವ ಪಾಂಡ್ಯದೇವ ಒಡೆಯ.** ಈ ಅರಸನು ಶಾ. ಶ. 1379ನೇ ಈಶ್ವರ ಸಂವತ್ಸರ (ಕ್ರಿ. ಶ. 1457)ದಲ್ಲಿ ಕಾರ್ಕಳ ಹಿರೇನೇಮಿಶ್ವರಬಸದಿಗೆ ಭತ್ತದಾನ ಮಾಡಿರುತ್ತಾನೆಂದು ಅಲ್ಲಿರುವ ಶಾಸನದಿಂದಲೂ, ಬಸರೂರು ಕೋಟೇಶ್ವರ ದೇವರಿಗೆ ಶಾ. ಶ. 1377ರಲ್ಲಿ ಕೆಲವು ಸಾಹುಕಾರರು ಇವನ ಆಳಿಕೆಯಲ್ಲಿ

ಉಂಬಳಿಬಿಟ್ಟಿರುತ್ತಾರೆಂದು ಅಲ್ಲಿರುವ ಶಾಸನದಿಂದಲೂ ತಿಳಕೊಳ್ಳ ಬಹುದು. ಈ ಅರಸನಿಗೆ ಪಾಂಡ್ಯಚಕ್ರವರ್ತಿ ಎಂಬ ಬಿರುದು ಇತ್ತು.

**8. ಹಿರಿಯ ಭೈರವದೇವ ಒಡೆಯ.** ಈ ಅರಸನು ಕಾರ್ಕಳದಲ್ಲಿ ಆಳುತ್ತಿರುವಾಗ ಶಾ. ಶ. 1384ನೇ ವಿಷು ಸಂ|ದಲ್ಲಿ (ಕ್ರಿ. ಶ. 1462) ಮೂಡಬಿದರೆಯ ಹೊಸಬಸದಿ (ಸಾವಿರ ಕಂಬದ ಬಸದಿ)ಯ ಗದ್ದಿಗೆಮಂಟಪದ ಎಡಭಾಗದಲ್ಲಿರುವ ಶಿಲಾ ಶಾಸನದ ಪ್ರಕಾರ ಈ ಬಸದಿಗೆ ಉಂಬಳಿಬಿಟ್ಟನೆಂದು ಇದೆ. ಈ ಅರಸನ ಕಾಲದಲ್ಲಿ ಭೈರರಸನ ವಂಶವು ಸ್ವಲ್ಪ ಕಳೆಗುಂದಿತ್ತೆಂದೂ, ಮೂಡಬಿದರೆಯ ಚೌಟರು ಉನ್ನತಸ್ಥಿತಿಯಲ್ಲಿದ್ದರೆಂದೂ ಕೆಳಗಿನ ಸಂಗತಿಯಿಂದ ತಿಳಿಯಬಹುದು. ಒಂದು ಸಾರಿ ಭೈರವರಾಯನು ಸೌಭಾಗ್ಯ ನೋಂಪಿಯನ್ನು ತನ್ನ ಅರಮನೆಯಲ್ಲಿ ಮಾಡಿಸುವದಕ್ಕಾಗಿ ಹುಂಬುಚ್ಚದಿಂದ ಗುರುಗಳನ್ನು ಕರಿಸಲು ಸಾಧ್ಯವಿಲ್ಲದ್ದರಿಂದ ಮೂಡಬಿದರೆಯ ಚಾರುಕೀರ್ತಿಭಟ್ಟಾರಕರಿಗೆ ಬಿನ್ನವತ್ತಲೆಯನ್ನು ಕಳುಹಿಸಲು ತಾವು ಹೋಗದೆ ನಿರ್ವಾಣದವರನ್ನು ಕಳುಹಿಸಿಕೊಡಲು, ಭೈರವರಾಯನು ಬೇಸರಪಟ್ಟು ನಿರ್ವಾಣದವರಿಗೆನೇ ಸ್ವಾಮಿಪಟ್ಟ ವನ್ನು ಕಟ್ಟಿ ಲಲಿತಕೀರ್ತಿ ಭಟ್ಟಾರಕರೆಂಬ ಬಿರುದನ್ನು ಕೊಟ್ಟು ಅವರಿಂದ ತನ್ನ ವ್ರತವನ್ನು ಆಚರಿಸಿಕೊಂಡನು. ಅಂದಿನಿಂದ ಕನ್ನಡ ಜಿಲ್ಲೆಯಲ್ಲಿ ಜೈನರ ಎರಡು ಗುರುಗಳ ಮಠಗಳಾದವು.

**9. ಇಮ್ಮಡಿ ಭೈರವರಾಯ.** ಭೈರವರಾಯನ ತರುವಾಯ ಪಟ್ಟವು ಅವನ ತಂಗಿಯಾಗಿಯೂ ವೀರನರಸಿಂಹ ಕಾಮರಾಯ ಬಂಗ ರಾಜನ ರಾಣಿಯಾಗಿಯೂ ಇರುವ ಗೋಮಟಾಂಬಿಕೆಯ ಮಗನಾದ ಇಮ್ಮಡಿ ಭೈರವರಾಯನಿಗೆ ಸಿಕ್ಕಿತು. ಇಮ್ಮಡಿ ಭೈರವರಾಯನು ಹಿಂದೆ ಗೋಮಟೇಶ್ವರನ ಪ್ರತಿಮೆಯನ್ನು ಪ್ರತಿಷ್ಠೆಮಾಡಿಸಿದ ವೀರಪಾಂಡ್ಯ ನಷ್ಟೇ ಪ್ರಸಿದ್ಧಿಪಡೆದವನು. ಜಿನಧರ್ಮದಲ್ಲಿಯೂ ಬ್ರಾಹ್ಮಣಧರ್ಮ

ದಲ್ಲಿ ಯೂ ಒಂದೇರೀತಿ ಆದರವುಳ್ಳವನಾಗಿದ್ದನು. ಕ್ರಿ. ಶ. 1505—1509ರ ವರೆಗೆ ವಿಜಯನಗರದಲ್ಲಿ ಆಳಿದ ವೀರನರಶಿಂಹನ ಕಾಲದಲ್ಲಿ ವಿಜಯನಗರದ ಅಧಿಕಾರವು ಕುಗ್ಗಿಹೋಯಿತು. ಇಮ್ಮಡಿ ಭೈರವರಾಯನು ಕಪ್ಪಕೊಡದೆ ಸ್ವತಂತ್ರನಾಗಲಿಕ್ಕೆ ಪ್ರಯತ್ನಿಸಿದನು ವೀರನರಶಿಂಹ (ಭುಜಬಲರಾಯ)ನು ದೊಡ್ಡ ಸೈನ್ಯವನ್ನು ತೆಗೆದು ಕೊಂಡು ಕಾರ್ಕಳಕ್ಕೆ ಬಂದು ದಂಗೆ ಅಣಗಿಸಿದನೆಂದು ಕಡೂರು ಜಿಲ್ಲೆಯಲ್ಲಿ ಸಿಕ್ಕಿದ ಒಂದು ಶಾಸನದಿಂದ ತಿಳಿಯಬಹುದು.

ಕ್ರಿ. ಶ. 1510ರಲ್ಲಿ ಪೋರ್ತುಗೀಸರು ಗೋವೆಯನ್ನು ಹಿಡಿದಾಗ ಅನೇಕ ಗೌಡಸಾರಸ್ವತರ ಕುಟುಂಬಗಳು ಈ ಜಿಲ್ಲೆಗೆ ಓಡಿ ಬಂದಾಗ ಈ ಅರಸನು ಅವರಿಗೆ ಒಳ್ಳೇ ಆಶ್ರಯವನ್ನು ಕೊಡುತ್ತಿದ್ದನು. ಇಮ್ಮಡಿ ಭೈರವರಾಯನು ಇವರಿಗೆ ಶಾ. ಶ. 1459 (ಕ್ರಿ. ಶ. 1537ರಲ್ಲಿ) ತನ್ನ ರಾಜಧಾನಿಯಾದ ಕಾರ್ಕಳದಲ್ಲಿ ವೆಂಕಟರಮಣ ದೇವಸ್ಥಾನವನ್ನು ಕಟ್ಟಿಸಿಕೊಟ್ಟನು. ಅನಂತರ ಭೈರವ ಅರಸನ ವಂಶವು ನಾಶವಾಗಿ ಅರಮನೆಯು ಬಿದ್ದುಹೋದ ಮೇಲೆ ಅದರ ಕಂಬದ ಬೋಧಿಗೆ, ಪಾದಟಿಗೆ, ಬಾಗಲು, ಚೌಕ ಮುಂತಾದ ಅನೇಕ ಚಂದ ವಾದ ಶಿಲೆಯ ತುಂಡುಗಳಿಂದ ಇದೇ ವೆಂಕಟರಮಣ ದೇವಸ್ಥಾನದ ಮುಂದುಗಡೆ ಇರುವ ಕೆರೆಯ ದಂಡೆಯನ್ನೂ ಮಧ್ಯದಲ್ಲಿರುವ ಮಂಟಪವನ್ನೂ ಕಟ್ಟಿಸಿದರು. ಅದನ್ನು ಈಗಲೂ ನೋಡಬಹುದು.

ಕ್ರಿ ಶ 1584ರಲ್ಲಿ ಶೃಂಗೇರಿಯ ನರಶಿಂಹ ಭಾರತಿ ಸ್ವಾಮಿಗಳು ಕಾರ್ಕಳ ಮಾರ್ಗವಾಗಿ ಹೋಗುತ್ತಿರಲು ಇಮ್ಮಡಿ ಭೈರವ ರಾಯನು ಅವರನ್ನು ರಾಜಮರ್ಯಾದೆಯಿಂದ ಕಂಡನು. ಅರಸನು ಬಹಳಾಗಿ ಕಟ್ಟಿಸಿ ಪ್ರತಿಷ್ಠೆಯಾಗಲಿಕ್ಕಿರುವ ಅಂದವಾದ ಕಟ್ಟಡದಲ್ಲಿ ಅವರನ್ನು ಸ್ವಾಗತಮಾಡಿದನು. ಆದರೆ ಗುರುಗಳು ದೇವಸ್ಥಾನ ವಿಲ್ಲದ ಊರಿನಲ್ಲಿ ತಾನು ನಿಲ್ಲಲಿಕ್ಕಿಲ್ಲವೆಂದು ಹೇಳಲು ಅರಸನು ಬಹಳ ಬೇಸರಪಟ್ಟನು. ಆಗ ಯಾವನೋ ಒಬ್ಬನು ನೆಲ್ಲಿಕಾರು

ಗ್ರಾಮದಲ್ಲಿ ಹಿಂದೆ ಅತ್ರಿಋಷಿಯು ಪ್ರತಿಷ್ಠೆಮಾಡಿದ ಶೇಷಶಾಹಿಯಾದ ಅನಂತೇಶ್ವರನ ಶಿಲಾಪ್ರತಿಮೆಯು ಒಂದು ಕೆರೆಯಲ್ಲಿದೆ ಎಂದು ಹೇಳಲು ಅರಸನು ಕೂಡಲೆ ಜನರನ್ನು ಕಳುಹಿಸಿ ಆ ಪ್ರತಿಮೆಯನ್ನು ತರಿಸಿ ಬಸದಿಗಾಗಿ ಕಟ್ಟಿಸಿದ ಮಂದಿರದಲ್ಲಿ ಪ್ರತಿಷ್ಠೆಮಾಡಿಸಿದನು. ಇದೇ ಕಾರ್ಕಳ ಅನಂತೇಶ್ವರ ದೇವಸ್ಥಾನ. ಇಮ್ಮಡಿ ಭೈರವರಾಯನು ಇಡೀ ನೆಲ್ಲಿಕಾರು ಗ್ರಾಮವನ್ನು ಅದೇ ದೇವಸ್ಥಾನಕ್ಕೆ ಉಂಬಳಿಯಾಗಿ ಬಿಟ್ಟನು. ಈಗ ಈ ದೇವಸ್ಥಾನಕ್ಕೆ 800 ರೂಪಾಯಿ ತಸದೀಕು ಸಿಕ್ಕುತ್ತದೆ. ಅನಂತಶಯನ ಮೂರ್ತಿಯು ಒಂದೇ ಕಲ್ಲಿನಲ್ಲಿ ಕೆತ್ತಲ್ಪಟ್ಟು ಮನಸ್ಸಿಗೆ ಬಹಳ ಆನಂದವನ್ನು ಉಂಟುಮಾಡುವಂಥಾದ್ದಾಗಿದೆ. ಮಹಾಶೇಷನ ಸುಕ್ಕುಗಟ್ಟಿ ಸಿಂಬಸಿದ ಮೈಯ ಹಾಸಿಗೆಯ ಮೇಲೆ ವಿಷ್ಣುವು ಶಯನಮಾಡಿರುತ್ತಾನೆ. ತಲೆಯ ಮೇಲ್ಗಡೆ ಶೇಷನ ಬಿಚ್ಚಿದ ಹೆಡೆಗಳು, ನಾಭಿಕಮಲದಿಂದ ಮೇಲಕ್ಕೆದ್ದ ಬ್ರಹ್ಮ, ಕಾಲಬುಡದಲ್ಲಿ ಕೂತು ಕಾಲನ್ನು ಒತ್ತುತ್ತಿರುವ ಲಕ್ಷ್ಮಿ ಇವೆಲ್ಲ ಒಂದೇ ಕಲ್ಲಿನಿಂದ ಮಾಡಿದ ವಿಚಿತ್ರವಾದ ಕೆತ್ತನೆಕೆಲಸವಾಗಿದೆ. ಶಿಲ್ಪಕಲೆಯ ಸೌಂದರ್ಯಾಭಿರುಚಿಯುಳ್ಳವರು ಈ ಶಿಲ್ಪಕಲೆಯನ್ನು ನೋಡಿದರೆ ಬೆರಗಾಗದೆ ಇರಲಾರರು. ಅನಂತೇಶ್ವರ ದೇವಸ್ಥಾನದ ಗರ್ಭಗೃಹವು ಬಸದಿಯ ಆಕಾರದಲ್ಲಿರುವದನ್ನು ಈಗಲೂ ನೋಡಬಹುದು.

ಚೈತ್ಯಾಲಯಕ್ಕಾಗಿ ಕಟ್ಟಿಸಿದ ಮಂದಿರವನ್ನು ದೇವಸ್ಥಾನವನ್ನಾಗಿ ಮಾಡಿದಂಥ ಇಮ್ಮಡಿ ಭೈರವರಾಯನ ಬ್ರಾಹ್ಮಣಧರ್ಮದ ಪಕ್ಷಪಾತವನ್ನು ಕಂಡು, ಕಾರ್ಕಳದ ಜೈನ ಗುರುಗಳಾದ ಲಲಿತಕೀರ್ತಿ ಭಟ್ಟಾರಕರು ಕೋಪಗೊಂಡಿರಲು, ಅದನ್ನು ತಿಳಿಯದೆ ಅರಸನು ಎಂದಿನಂತೆ ಗುರುಗಳ ದರ್ಶನಕ್ಕೆ ಹೋಗಿ ಸಾಷ್ಟಾಂಗವೆರಗಿದನು. ಗುರುಗಳು ತಮ್ಮ ಆವಿಗೆಯ ಕಾಲುಗಳಿಂದ ಅರಸನನ್ನು ತುಳಿದುಬಿಟ್ಟು, "ನೀನು ಜೈನಮತದ್ರೋಹಿ" ಎಂದು ಶಪಿಸಲು, ಅರಸನು "ಮಹಾಸ್ವಾಮಿ,

ಎಲ್ಲಾ ಮತಗಳನ್ನು ಅರಸನು ಸಮದೃಷ್ಟಿಯಿಂದ ನೋಡತಕ್ಕದ್ದು. ಅದುಕಾರಣ ಬಸದಿಯನ್ನು ಹಿಂದೂಗಳ ದೇವಮಂದಿರಕ್ಕಾಗಿ ಕೊಟ್ಟೆನು. ನನ್ನ ಅಪರಾಧವನ್ನು ಕ್ಷಮಿಸಬೇಕು'' ಎಂದು ಬಿನ್ನವಿಸಿ, ಕೂಡಲೆ ಇನ್ನೊಂದು ಬಸದಿಯನ್ನು ಕಟ್ಟಿಸುವದಾಗಿ ಪ್ರತಿಜ್ಞೆಯನ್ನು ಕೊಟ್ಟು, ಒಂದು ವರುಷದೊಳಗೆ ಇನ್ನೊಂದು ಮಂದಿರವನ್ನು ಕಟ್ಟಿಸಿ, ತನಗೆ ಅಭ್ಯುದಯ, ಶ್ರೇಯಸ್ಸು, ಲಕ್ಷ್ಮೀಸುಖ ಸಂಪ್ರಾಪ್ತಿಯಾಗಲೆಂದು ಪಾಂಡ್ಯನಗರಿಯಲ್ಲಿ ಶ್ರೀಗುಮಟೇಶ್ವರನ ಸನ್ನಿಧಿಯಲ್ಲಿ ಚಿಕ್ಕಬೆಟ್ಟದ ಮೇಲೆ ಶಾ. ಶ. 1508ನೇ ವ್ಯಯ ಸಂ|ರದ ಚೈತ್ರ ಶು| ೬ (ಕ್ರಿ. ಶ. 1586ನೆಯ ಮಾರ್ಚಿ 16)ನೇ ಬುಧವಾರ ದಿವಸ ತ್ರಿಭುವನ ತಿಲಕ ಜಿನಚೈತ್ಯಾಲಯ ಎಂಬ ಹೆಸರನ್ನಿಟ್ಟು 24 ತೀರ್ಥಂಕರರನ್ನು ಪ್ರತಿಷ್ಠಿಸಿದನು. ಈ ಬಸದಿಯು ಪೂರ್ಣ ಶಿಲೆಕಲ್ಲಿನಿಂದಲೇ ಕಟ್ಟಲ್ಪಟ್ಟಿದೆ. ಇದಕ್ಕೆ ನಾಲ್ಕು ಕಡೆಗಳಲ್ಲಿಯೂ ಒಂದೊಂದು ದ್ವಾರವು, ದ್ವಾರವನ್ನು ತೆರಿಯುತ್ತಲೇ ಒಳಗೆ ಮೂರು ಮೂರು ವಿಗ್ರಹಗಳು, ನಾಲ್ಕು ದಿಕ್ಕಿನಲ್ಲೂ ಏಕಪ್ರಕಾರವಾಗಿ ಅರ, ಮಲ್ಲಿ, ಮುನಿ, ಸುವ್ರತ, ಎಂಬ ಪ್ರತಿಮೆಗಳೂ, ಪಶ್ಚಿಮ ದಿಕ್ಕಿನಲ್ಲಿ 24 ತೀರ್ಥಂಕರರ ಪ್ರತಿಮೆಗಳೂ ಉಭಯ ಮಂಟಪದ ಗುಂಡಗಳೊಳಗೆ ಜಿನಬಿಂಬಗಳು, ಎಡಬಲದಲ್ಲಿ ಬ್ರಹ್ಮ, ಪದ್ಮಾವತಿ ಇವುಗಳೆಲ್ಲಾ ಮನಸ್ಸಿಗೆ ಬಹಳ ಆನಂದವನ್ನುಂಟುಮಾಡುತ್ತವೆ. ಬಸದಿಯ ಕಲ್ಲುಕಂಬಗಳಲ್ಲಿಯೂ ಕಲ್ಲುಗೋಡೆಗಳಲ್ಲಿಯೂ ಅಂದವಾಗಿ ಕೆತ್ತಿದ ಹೂಗಳು, ಗೊಂಬೆಗಳು ಇವೆಲ್ಲಾ ಇಮ್ಮಡಿ ಭೈರವರಾಯನ ಕಾಲದ ಶಿಲ್ಪಕೌಶಲ್ಯವನ್ನೂ ಮಹತ್ವವನ್ನೂ ವ್ಯಕ್ತಗೊಳಿಸುತ್ತವೆ. ಈ ಬಸದಿಗೆ ವಾಡಿಕೆಯಾಗಿ ಚತುರ್ಮುಖ ಬಸದಿ ಎಂದು ಹೇಳುತ್ತಾರೆ. ಇದಕ್ಕೆ ಇನ್ನೆರಡು ಮಾಳಿಗೆಗಳನ್ನು ಕಟ್ಟಿಸುವ ಆಲೋಚನೆ ಇತ್ತಂತೆ. ಆದರೆ ವೃದ್ಧಾಪ್ಯದ ದೆಶೆಯಿಂದ ಈ ಆಲೋಚನೆಯನ್ನು ನಿಲ್ಲಿಸಿ ಕೆಲಸವನ್ನು ಅವಸರದಿಂದ ಮುಗಿಸಲ್ಪಾಯಿತು. ಈ ಅವಸರದ ಸಂಗತಿಯು ನಿಜವೆಂದು ಇದರ ಮೇಲೆ

ಕೆತ್ತದೆ ಮುಚ್ಚಿದ ಕಲ್ಲುಗಳನ್ನು ನೋಡಿದರೆ ತಿಳಿಯಬಹುದು. ಭೈರವರಾಯನು ತೋಳಾರ ಗ್ರಾಮವನ್ನು ಈ ಬಸದಿಗೆ ಉಂಬಳಿ



ಚತುರ್ಮುಖ ಬಸದಿ.

ಯಾಗಿ ಬಿಟ್ಟಿರುತ್ತಾನೆಂದು ಆ ಬಸದಿಯ ಪಶ್ಚಿಮ ದಿಕ್ಕಿನ ಬಾಗಲಿನ ಬಲಭಾಗದಲ್ಲಿರುವ ಶಾಸನದಿಂದ ತಿಳಿಯಬಹುದು.

**10 ಪಾಂಡ್ಯಪ್ಪ ಒಡೆಯ**. ಇವನು ವೀರಭೈರರಸ ಒಡೆಯನ ಮಗನು. ಇವನು ಶಾ. ಶ. 1514ನೇ ವಿಜಯ ಸಂ|ದಲ್ಲಿ (ಕ್ರಿ. ಶ. 1592) ಕಾರ್ಕಳದಲ್ಲಿ ಆಳುತ್ತಿದ್ದನೆಂದು ಹಿರಿಯಂಗಡಿಯ ಗುರುರಾಯ ಬಸದಿಯ ಉತ್ತರ ಗೋಡೆಯಲ್ಲಿರುವ ಶಾಶನದಿಂದ ತಿಳಿಯಬಹುದು.

**11. ಇಮ್ಮಡಿ ಭೈರವರಾಯ.** ಇಮ್ಮಡಿ ಭೈರವರಾಯನಿಗೆ ಮಲ್ಲಿದೇವಿ ಎಂಬ ರಾಣಿಯಲ್ಲಿ ದಾವಣ ಇಮ್ಮಡಿ ಭೈರವರಾಯ, ಭುವನೈಕ ವೀರಪಾಂಡ್ಯ, ಚಂದ್ರಶೇಖರ ಎಂಬ ಮೂವರು

ಮಕ್ಕಳು ಹುಟ್ಟಿದರು. ಈ ಅರಸನ ಕಾಲದಲ್ಲಿ ಈ ವಂಶವು ಉನ್ನತ ಸ್ಥಿತಿಯಲ್ಲಿತ್ತು. ಕ್ರಿ. ಶ. 1602ರಲ್ಲಿ ವೇಣೂರಿನಲ್ಲಿ ಆಳುತ್ತಿದ್ದ ವೀರತಿಮ್ಮಣ್ಣಾಜಿಲನು ಕಾರ್ಕಳ ಗೋಮಟೇಶ್ವರನ ಪ್ರತಿಮೆಯ ಹಾಗೆಯೇ ಒಂದು ಪ್ರತಿಮೆಯು ತನ್ನ ರಾಜಧಾನಿಯಾದ ವೇಣೂರಿನಲ್ಲಿಯೂ ಇರಬೇಕೆಂದು ಆಲೋಚಿಸಿ ಕಾರ್ಕಳದ ಪ್ರತಿಮೆಗಿಂತಲೂ ಚಂದವಾದ ಪ್ರತಿಮೆಯನ್ನು ತಯಾರಿಸಿದನು. ವೇಣೂರಿನಲ್ಲಿ ಇದೇ ತರದ ಪ್ರತಿಮೆಯು ಇದ್ದರೆ ತನ್ನ ರಾಜಧಾನಿಯ ಕೀರ್ತಿಯು ಕಡಿಮೆಯಾಗುತ್ತದೆಂದು ಅದನ್ನು ಪ್ರತಿಷ್ಠಿಸಕೂಡದೆಂದು ಭೈರವರಾಯನು ಹೇಳಿಕಳುಹಿಸಿದನು. ವೇಣೂರಿನ ತಿಮ್ಮಣ್ಣಾಜಿಲನು ಭೈರವರಾಯನಿಗಿಂತಲೂ ಉನ್ನತ ಸ್ಥಿತಿಯಲ್ಲಿದ್ದುದರಿಂದ ಈ ಮಾತಿಗೆ ಲಕ್ಷ್ಯಕೊಡದೆ ಯುದ್ಧಕ್ಕೆ ಸಿದ್ಧನಾದನು. ನಾಂರಾವಿಯ ಕಾಂತು ಸಾಮಣಿ ಎಂಬ ಸೇನಾಧಿಪತಿಯು ದೊಡ್ಡ ಸೈನ್ಯದೊಡನೆ ನಾಂರಾವಿಗೆ ಬಂದು ಯುದ್ಧದಲ್ಲಿ ಭೈರವರಾಯನನ್ನು ಸೋಲಿಸಿ ಓಡಿಸಿದನು.

ಇದೇ ಸಮಯದಲ್ಲಿ ಭೈರವರಾಯನು ಮೂಡಬಿದರೆಯ ಚೌಟ ರಾಣಿ ತಿರುಮಲಾದೇವಿಯನ್ನು ಸಾಣೂರಿನ ಕಣಿವೆಯ ಬಳಿ ಆದ ಯುದ್ಧದಲ್ಲಿ ಸೋಲಿಸಿ ಅವಳನ್ನು ಕೊಂದು ಅವಳ ತಲೆಯನ್ನು ಕಡಿದು ಶೂಲಕ್ಕೆ ಹಾಕಿಸಿದನು. ನಂದಾವರದ ಕಾಮರಾಯ ಬಂಗರಾಜನ ತಂಗಿ ಕಾಮಲಾದೇವಿಯನ್ನು ಈ ಅರಸನಿಗೆ ವಿವಾಹಮಾಡಿಕೊಡುವದೆಂತ ನಿಶ್ಚಯಿಸಿ ತಾಳಿಬಂದಿ ಸಹ ಆಗಿರಲು ಕಾಮರಾಯನು ಸ್ತ್ರೀಹತ್ಯಮಾಡಿದವನಿಗೆ ತನ್ನ ತಂಗಿಯನ್ನು ಕೊಡುವದಿಲ್ಲವೆಂದು ಹೇಳಲು ಭೈರವರಾಯನು ಸೈನ್ಯದೊಡನೆ ಕ್ಯೊಲದ ವರೆಗೆ ಬಂದು ಕಾಮರಾಯನನ್ನು ಯುದ್ಧದಲ್ಲಿ ಸೋಲಿಸಿದನು. ಬಂಗರಾಜನು ಕೇರಳದೇಶಕ್ಕೆ ಓಡಿಹೋದನು.

ತಿರುಮಲಾದೇವಿಯನ್ನು ಕೊಂದುದಕ್ಕಾಗಿ ಅವಳ ಮಗ ಚಿಕ್ಕರಾಯ ಚೌಟನು ಇಕ್ಕೇರಿ ವೆಂಕಟಪ್ಪನಾಯಕನಿಗೆ ದೂರುಕೊಟ್ಟನು.

ಅನಂತರ ಸುರಾಲ ತೋಳಾರ, ವೆಂಕಟಪ್ಪನಾಯಕ, ಚಿಕ್ಕರಾಯ ಚೌಟ ಈ ಮೂವರು ಕೂಡಿ ಸೈನ್ಯದೊಡನೆ ಕಾರ್ಕಳಕ್ಕೆ ಹೋಗಿ ಯುದ್ಧ ದಲ್ಲಿ ಇಮ್ಮಡಿ ಭೈರವರಾಯನನ್ನು ಸೋಲಿಸಿ, ಕಾರ್ಕಳ ಹೋಬಳಿ ಯನ್ನು ವೆಂಕಟಪ್ಪನಾಯಕನು ತನ್ನ ಸ್ವಾಧೀನಪಡಿಸಿಕೊಂಡು, ಅರ ಮನೆಯ ಎದುರುಗಡೆ ಪೂರ್ವಕ್ಕೆ ಒಂದು ಕೋಟೆಯನ್ನು ಕಟ್ಟಿಸಿ ದೊಡ್ಡ ಸೈನ್ಯವನ್ನು ಅದರಲ್ಲಿ ಇಟ್ಟನು. ಈ ಅರಸನ ತರುವಾಯ ಇವರ ಕೀರ್ತಿಯು ಕಳೆಗುಂದಿತು.

12. **ರಾಮನಾಥ ಒಡೆಯ.** ಈ ರಾಮನಾಥ ಅರಸನು ವೇಣೂರಿನ ಅಜಿಲರಾಣಿ ಮಧುರಕ್ಕದೇವಿಯನ್ನು ಮದುವೆಯಾಗಿದ್ದನು. ಇವನು ಶಾ. ಶ. 1544ನೇ ದುರ್ಮುಖಿ ಸಂ|ದಲ್ಲಿ (ಕ್ರಿ. ಶ. 1622) ವೇಣೂರಿನ ತೀರ್ಥಂಕರರ ಬಸದಿಗೆ ಉಂಬಳಿಬಿಟ್ಟಿರುತ್ತಾನೆಂದು ಅಲ್ಲಿ ರುವ ಶಾಸನದಿಂದ ತಿಳಿಯುತ್ತದೆ.

13. **ವೀರಪಾಂಡ್ಯ.** ಈ ಅರಸನ ಕಾಲದಲ್ಲಿ ವೇಣೂರಿ ನಲ್ಲಿ ಆಳುತ್ತಿದ್ದ ಅಜಿಲರಾಣಿ ಮಧುರಕ್ಕದೇವಿಯು ವೇಣೂರಿನ ಗೋಮಟೇಶ್ವರನಿಗೆ ಅಭಿಷೇಕಮಾಡುವದಕ್ಕೆ ಸನ್ನಾಹಮಾಡಲು ವೀರ ಪಾಂಡ್ಯನು ಅಭಿಷೇಕಮಾಡಕೂಡದೆಂದು ಹೇಳಿಕಳುಹಿಸಿದನು. ಅವಳು ಇದಕ್ಕೆ ಒಪ್ಪದಿರಲು ಭೈರವರಾಯನು ಯುದ್ಧಕ್ಕೆ ಹೊರಡಲು ಮಧುರ ಕ್ಕದೇವಿಯು ಹೆದರಿ ನಾರಾವಿ ಸಾವಿರ ಸೀಮೆಯನ್ನು ವೀರಪಾಂಡ್ಯನಿಗೆ ಬಿಟ್ಟುಕೊಟ್ಟು ಅಭಿಷೇಕವನ್ನು ಮಾಡಿಸಿದಳು.

ಇದರ ನಂತರದ ಸಂಗತಿಯು ಏನೊಂದೂ ತಿಳಿಯುವದಿಲ್ಲ. ಈ ಸಂತತಿಯವರು ಈಗ ಯಾರೂ ಇರುವದಿಲ್ಲ.

# 28ನೇ ಅಧ್ಯಾಯ.

## ಮೂಲಿಕೆ ಸಾವಂತರು.

ಮೂಲಿಕೆ ಸಾವಂತರ ರಾಜ್ಯವು ಮೂಲಿಕೆ ಹೊಳೆಯಿಂದ ಪಾವಂಜೆ ಹೊಳೆಯ ವರೆಗೂ, ಪಶ್ಚಿಮ ಸಮುದ್ರದಿಂದ ಪೂರ್ವಕ್ಕೆ ಪುತ್ತಿಗೆ ಚೌಟರ ರಾಜ್ಯದ ವರೆಗೂ ವಿಸ್ತರಿಸಿಕೊಂಡಿತ್ತು. ಇದರ ಉತ್ತರಕ್ಕೆ ಪಡುಬಿದರೆ ರಾಜ್ಯವೂ, ಪೂರ್ವಕ್ಕೆ ಚೌಟರ ರಾಜ್ಯವೂ, ದಕ್ಷಿಣಕ್ಕೆ ಕುತ್ತೆತ್ತೂರು ಹೆಗ್ಗಡೆಯ ರಾಜ್ಯವೂ ಇತ್ತು. ಈ ರಾಜ್ಯಕ್ಕೆ 9 ಮಾಗಣೆಗಳು ಸೇರಿದ್ದವು. (1) ಅಯಿಕಳ (2) ಅತ್ತೂರು (3) ಕುಡೆತ್ತೂರು (4) ಪಂಜ (5) ವಳಲಂಕೆ (6) ಕಾರ್ನಾಡು (7) ಕುಬೆಉೂರು (8) ಬಪ್ಪನಾಡು (9) ತಾಳಿಪಾಡಿ

ಸಾವಂತರ ಮೊದಲನೇ ರಾಜಧಾನಿಯು ಶೀಮಂತೂರಿನಲ್ಲಿತ್ತು. ಅಲ್ಲಿಯೇ ಅರಮನೆಯೂ ಸೀಮೆ ದೇವಸ್ಥಾನವೂ ಇದ್ದವು ಅದರ ನಂತರ ಅರಮನೆಯನ್ನು ಮೂಲಿಕೆ ಕೋಟೆಕೇರಿಯಲ್ಲಿ ಬಸದಿಯ ಪೂರ್ವ ದಿಕ್ಕಿನಲ್ಲಿ ಕಟ್ಟಿದರು. ಹಾಳುಬಿದ್ದಿರುವ ಅರಮನೆಯ ಅಡಿಸ್ಥಳವನ್ನೂ, ಕ್ರಿ. ಶ. 1608ರಲ್ಲಿ ವೆಂಕಟಪ್ಪನಾಯಕನು ಕಟ್ಟಿಸಿದ ಕೋಟೆಯ ಗೋಡೆಯ ಕುರುಹುಗಳನ್ನೂ, ಹನುಮಂತನ ದೇವಸ್ಥಾನವನ್ನೂ, ಒಂದು ಕೆರೆಯನ್ನೂ ಬಸದಿಯ ಪೂರ್ವದಿಕ್ಕಿನಲ್ಲಿ ಈಗಲೂ ನೋಡಬಹುದು. ಮೂರನೇ ಅರಮನೆಯನ್ನು ವಳಲಂಕೆಯಲ್ಲಿ ಕಟ್ಟಿದರು. ಈ ಅರಮನೆಯ ಹಾಳುಬಿದ್ದ ಸ್ಥಳವು ಸುಮಾರು 2½ ಎಕ್ರೆ ವಿಸ್ತೀರ್ಣವಾಗಿದೆ. ಈಗ ಅರಮನೆಯ ಒಂದು ಸಣ್ಣ ತುಂಡು ಮಾತ್ರ ಉಳಿದಿದೆ. ಅದರಲ್ಲಿ ಈಗಿನ ಸಾವಂತ ಅರಸರು ವಾಸಮಾಡಿಕೊಂಡಿದ್ದಾರೆ. ಅರಮನೆಯ ಮುಂದುಗಡೆ ಉತ್ತರ ದಿಕ್ಕಿನಲ್ಲಿ ಒಂದು ದೊಡ್ಡ ಬಾಕಿಮಾರುಗದ್ದೆ ಇದೆ. ಇದರಲ್ಲಿ

20 ಸಾವಂತರ ಸಮಾಧಿಗಳು ಇವೆ. ವಳಲಂಕೆಯು ರಾಜಧಾನಿಯಾದ ಮೇಲೆ 20 ಮಂದಿ ಸಾವಂತರಸರು ಆಳಿದರೆಂದು ಈ ಸಮಾಧಿಗಳ ಆಧಾರದಿಂದ ತಿಳಿದುಕೊಳ್ಳಬಹುದು. ಒಬ್ಬೊಬ್ಬ ಸಾವಂತನು 30 ವರುಷ ಆಳಿದನೆಂದು ಆಲೋಚಿಸಿದರೆ 600 ವರುಷಗಳಿಂದ ವಳಲಂಕೆ ಅರಮನೆಯು ಇತ್ತೆಂದು ಹೇಳಬಹುದು. ಇದರಿಂದ 12ನೇ ಶತಮಾನದ ಅಂತ್ಯದಲ್ಲಿ ವಳಲಂಕೆಯಲ್ಲಿ ರಾಜಧಾನಿಯನ್ನು ಸ್ಥಾಪಿಸಿರಬೇಕೆಂದು ನಿಶ್ಚಯಿಸಬಹುದು. 12ನೇ ಶತಮಾನದಿಂದ 17ನೇ ಶತಮಾನದ ವರೆಗೂ ವಳಲಂಕೆಯು ದೊಡ್ಡ ಪಟ್ಟಣವಾಗಿತ್ತು. ಅರಮನೆಯ ಮುಂದುಗಡೆಯಲ್ಲಿ ಅರಮನೆಗೂ ಬಾಕಿಮಾರುಗದ್ದೆಗೂ ನಡುವೆ ಅಗಲವಾಗಿಯೂ ನೆಟ್ಟಗಾಗಿಯೂ ಇರುವ ಮಾರ್ಗವು ಪೂರ್ವದಿಂದ ಪಶ್ಚಿಮಕ್ಕೆ ಚಾಚಿಕೊಂಡಿದೆ. ಅರಮನೆಯ ಪಶ್ಚಿಮ ದಿಕ್ಕಿನಿಂದ ಒಂದು ಮಾರ್ಗವು ಮೇಲಿನ ಮಾರ್ಗದಿಂದ ದಕ್ಷಿಣಕ್ಕೆ ಚಾಚಿಕೊಂಡು ಮಂಗಳೂರಿಗೆ ಹೋಗುವ ಈಗಿನ ಮಾರ್ಗಕ್ಕೆ ಕೂಡಿಯದೆ. ಈ ಮಾರ್ಗದಲ್ಲಿ ಅರಮನೆಯಿಂದ ಸುಮಾರು ½ ಮೈಲು ದಕ್ಷಿಣಕ್ಕೆ ಮಾರ್ಗದ ಪೂರ್ವ ದಿಕ್ಕಿನಲ್ಲಿ ಅರಮನೆಯ ಶಿಲಾಮಯ ಬಸದಿಯು ಇದೆ. ಈ ಬಸದಿಯ ಒಳಗಡೆ ಸುತ್ತಿನಲ್ಲಿ 4 ಮೂಲೆಯಲ್ಲಿದ್ದ 4 ಸಣ್ಣ ಬಸದಿಗಳು ಬಿದ್ದುಹೋಗಿಯವೆ. ಇಲ್ಲಿ ದುಗ್ಗಣ್ಣ ಸಾವಂತನು ಶಾ. ಶ. 1300ರಲ್ಲಿ ಬಸದಿಗೆ ಉಂಬಳಿಬಿಟ್ಟ ಒಂದು ಶಾಸನವಿದೆ. ಈ ಬಸದಿಯಿಂದ ಪಶ್ಚಿಮಕ್ಕೆ ಇನ್ನೊಂದು ನೆಟ್ಟಗಾದ ಮಾರ್ಗವು ಚಾಚಿಕೊಂಡಿದೆ. ಈ ಮಾರ್ಗದಲ್ಲಿ ಸುಮಾರು ¼ ಮೈಲು ದೂರ ದಲ್ಲಿ ಉತ್ತರ ದಿಕ್ಕಿನಲ್ಲಿ ಇನ್ನೊಂದು ಶಿಲೆಯ ಬಸದಿಯು ಇದೆ. ಈ ಮಾರ್ಗಗಳಲ್ಲದೆ ಇನ್ನೂ ಅನೇಕ ಮಾರ್ಗಗಳು ಇವೆ. ಎಲ್ಲಾ ಮಾರ್ಗಗಳ 2 ಕಡೆಗಳಲ್ಲಿಯೂ ಹಾಳುಬಿದ್ದ ಮನೆಯ ಅಡಿಸ್ಥಳಗಳು ಈಗಲೂ ಇವೆ. ಅರಮನೆಯ ಪಶ್ಚಿಮಕ್ಕೆ ಒಬ್ಬ ಜೈನಗುರುವಿನ ಸಮಾಧಿಯು ಇದೆ.

ಇವರ ಕೈಕೆಳಗೆ ಇದ್ದ ದೇವಸ್ಥಾನಗಳು ಯಾವವೆಂದರೆ (1) ಶಿವುಂತೂರು ಜನಾರ್ಧನ ದೇವಸ್ಥಾನ. ಈಗಲೂ ಪಟ್ಟಾಭಿಷೇಕವು ಇದೇ ದೇವಸ್ಥಾನದಲ್ಲಿಯೇ ಆಗಬೇಕು. (2) ಬಪ್ಪನಾಡು ದುರ್ಗಾ ಪರಮೇಶ್ವರಿ ಅಮ್ಮನವರ ದೇವಸ್ಥಾನ. ಇದು 9 ಮಾಗಣೆಗಳವರಿಗೂ ಹಕ್ಕಿರುವ ದೇವಸ್ಥಾನ. ಈ ದೇವಸ್ಥಾನದ ಉತ್ಸವಾದಿಗಳಿಗೆ ಸಾವಂತರು ಈಗಲೂ ಬರುವ ಪದ್ಧತಿ ಉಂಟು. ಈ ಸ್ಥಳದಲ್ಲಿದ್ದ ಹಳೇ ದೇವಸ್ಥಾನವು ಅನೇಕ ವರುಷಗಳ ವರೆಗೆ ನೀರಿನಲ್ಲಿ ಮುಳುಗಿಕೊಂಡಿತ್ತು. ದೇವಸ್ಥಾನವು ಬಿದ್ದುಹೋಗಿ ಐದು ಲಿಂಗಗಳೂ ಒಂದು ಪೀಠವೂ ಮಾತ್ರವೇ ಉಳಿದಿದ್ದವು. ಒಂದು ದಿವಸ ಬಾಪುಬ್ಯಾರಿ ಎಂಬವನು ದೋಣಿ ಒತ್ತಿಕೊಂಡು ಹೋಗುವಾಗ ಆ ಲಿಂಗಗಳ ತಲೆಗೆ ತಾಗಿತು. ಅನಂತರ ನೀರು ಆರಿಹೋಗಿ ಸರಿಯಾದ ನೆಲವು ಕಂಡ ಮೇಲೆ ಅದೇ ಬಾಪುಬ್ಯಾರಿಯು ಈ ದೇವರಿಗೆ ಒಂದು ಸಣ್ಣ ದೇವಸ್ಥಾನವನ್ನು ಕಟ್ಟಿಸಿ ಕೊಟ್ಟನಂತೆ. ಆ ಮೇಲೆ ಆ ಸ್ಥಳಕ್ಕೆ ಆ ಬಾಪುಬ್ಯಾರಿಯಿಂದ ಬಪ್ಪನಾಡು ಎಂದು ಹೆಸರಾಯಿತಂತೆ. ಈಗ ಇರುವ ದೇವಸ್ಥಾನವನ್ನು ಸೀಮೆಯವರು ಕೂಡಿ ದೊಡ್ಡದಾಗಿ ಕಟ್ಟಿಸಿದರು. ಈ ದೇವಸ್ಥಾನಕ್ಕೆ ವಿಜಯನಗರದ 1ನೇ ದೇವರಾಯನು ಶಾ. ಶ. 1333 (ಕ್ರಿ. ಶ. 1411)ರಲ್ಲಿ ಭೂಮಿ ಉಂಬಳಿಬಿಟ್ಟ ಒಂದು ಶಾಸನವು ಮುಖಮಂಟಪದ ಹತ್ತಿರ ಇದೆ. (3) ಪಾವಂಜೆ ಮಹಾಲಿಂಗೇಶ್ವರ ದೇವಸ್ಥಾನ. ಈ ದೇವಸ್ಥಾನದಲ್ಲಿ ವಿಜಯನಗರದ ವೀರ ಇಮ್ಮಡಿ ದೇವರಾಯನು ಶಾ. ಶ. 1340 (ಕ್ರಿ. ಶ. 1418)ರಲ್ಲಿ ಭೂಮಿ ಉಂಬಳಿಬಿಟ್ಟ ಶಾಸನವಿದೆ.

ಇವರಲ್ಲಿ ಪಟ್ಟದ ಹೆಸರುಗಳು ಎರಡು. (1) ದುಗ್ಗಣ್ಣ ಸಾವಂತ (2) ಚನ್ನರಾಯ ಸಾವಂತ. ಇವರಿಗೆ ಪಟ್ಟಕಟ್ಟುವದು ಗುರುರಾಯಭಟ್ಟರ ಮನೆಯವರು. ಪಟ್ಟದ ಉಂಗುರ ಕೈಗೆ ಹಾಕಿ ಹೆಸರು ಕರೆಯುವವರು ಗುಂಡಾಲ (ಕಾರ್ನಾಡ) ಕರಾಡ ಬ್ರಾಹ್ಮಣ

ರಾದ ಕಾಸಪ್ಪಯ್ಯನ ಮನೆಯವರು. ಸೇನಾಧಿಪತಿಗಳು ಬಂಟರಲ್ಲಿ ಪುತ್ತೂರು ಬಾವದವರು. ಬಿಲ್ಲವರಲ್ಲಿ ಬಂಕಿನಾಯಕ ಮತ್ತು ಗುಡ್ಡೆನಾಯಕ. ಮುಂಡಾಲ ಹೊಲೆಯರಲ್ಲಿ 9 ಮಾಗಣೆಗಳ ಮುಂಡಾಲರ ಗುರಿಕಾರನಾದ ವಳಲಂಕೆಯಲ್ಲಿರುವ ತುಕ್ರಮುಖಾರಿ ಕುಟುಂಬದವರಾಗಿರುತ್ತಾರೆ. ಮುಖಾರಿಯನ್ನು ನೇಮಿಸಿ ಹೆಸರು ಕರಿಯುವ ಕೆಲಸವು ಈಗಲೂ ವಳಲಂಕೆಯ ಅರಮನೆಯ ಬಾಗಲಲ್ಲಿಯೇ ಆಗಬೇಕು. "ತುಕ್ರಮುಖಾರಿ" ಎಂಬ ಹೆಸರನ್ನು ಸಾವಂತರೇ ಇಡಬೇಕು. ಇದರಿಂದ ಪುರಾತನಕಾಲದಲ್ಲಿ ಈ ತುಕ್ರ ಮುಕಾರಿಯ ಕುಟುಂಬದವರೇ ಮೂಲಿಕೆ ರಾಜ್ಯವನ್ನು ಆಳುತ್ತಿದ್ದರೆಂದು ಊಹಿಸಬಹುದು.

ಈ ಸಾವಂತರ ಮೂಲಚರಿತ್ರೆಯು ಅರಮನೆಯಲ್ಲಿ ಸಹ ಇಲ್ಲದಿರುವದರಿಂದ ಬರಿಯಲು ಸಾಧ್ಯವಾಗಲಿಲ್ಲ. ಇವರ ರಾಜಧಾನಿಯು ಕಾರ್ನಾಡಿ (ಕಾರಸ್ಯಾರಪುರ)ನಲ್ಲಿರುವಾಗ ದುಗ್ಗಣ್ಣ ಸಾವಂತನು ಆಳುತ್ತಿದ್ದನೆಂದೂ, ಅವನ ತರುವಾಯ ಅವನ ತಂಗಿ ದೇವಪೂಜಮ್ಮ ಮತ್ತು ಆಕೆಯ ಗಂಡನಾದ ಪಶ್ಚಿಮ ವೇಣುಪುರ (ಪಡುಬಿದರೆ) ದ ಮಾಲಿಂಗರಸ ಕಿನ್ಯಕ್ಕ ಬಲ್ಲಾಳ ಇವರಿಂದ ಜನಿಸಿದ ತಿರುಮಲ ಸಾವಂತನು ಶಾ. ಶ. 1632 (ಕ್ರಿ. ಶ. 1710)ರಲ್ಲಿ ಆಳಿಕೊಂಡಿರುವಾಗ ಭಂಡಾರದ ಕೋಶಾಧ್ಯಕ್ಷನಾದ ಪದ್ಮನಾಭ ಭಟ್ಟನೆಂಬವನು ಸಾವಂತರ ಕುಲದೇವಿಯಾದ "ಪದ್ಮಾವತಿ ಅಮ್ಮನವರ ಚರಿತ್ರೆ ಅಥವಾ ಪದ್ಮಾವತಿ ಮಹಿಮೆ" ಎಂಬ ಪುಸ್ತಕವನ್ನು ರಚಿಸಿದನು. ಈ ಪುಸ್ತಕದ ಆಧಾರದಿಂದ ಮೂಲಿಕೆ ಸಾವಂತರ ಕುಟುಂಬದವರು ಹುಂಬುಚ್ಛದ ಜಿನದತ್ತರಾಯನ ಕುಟುಂಬದವರೆಂದು ಹೇಳಬಹುದು.

ಪೋರ್ತುಗೀಸರು ಕ್ರಿ. ಶ. 1510ರಲ್ಲಿ ಗೋವೆಯನ್ನು ಹಿಡಿದು ಅಲ್ಲಿಯ ಹಿಂದುಗಳನ್ನು ಕ್ರಿ. ಶ. 1560ರ ವರೆಗೆ ಕ್ರೈಸ್ತಮತಕ್ಕೆ

ಬಲಾತ್ಕಾರದಿಂದ ಕೂಡಿಸುವಾಗ ಅನೇಕ ಗೌಡಸಾರಸ್ವತರೂ, ಸಾರಸ್ವತರೂ ತಲೆತಪ್ಪಿಸಿಕೊಂಡು, ಹಡಗುಹತ್ತಿ, ತಮ್ಮ ಜಾತಿ ಮತ್ತು ಮತದ ರಕ್ಷಣೆಗಾಗಿ ಕನ್ನಡ, ಮಲೆಬಾರು, ಕೊಚ್ಚಿ, ತಿರುವಾಂಕೂರು ಜಿಲ್ಲೆಗಳಿಗೆ ಓಡಿಹೋಗುವಾಗ ಕೆಲವರು ಮೂಲಿಕೆ ಬಂದರಲ್ಲಿ ಇಳಿದು ತಮಗೆ ಬಂದ ಕಷ್ಟವನ್ನು ಸಾವಂತರೊಡನೆ ಹೇಳಿಕೊಳ್ಳಲು, ಅವನು ಈ ಭಯಭ್ರಾಂತರಾದ ಗೌಡಸಾರಸ್ವತರಿಗೆ ಜಾತಿ, ಮತ, ಆಚಾರ ವಿಚಾರಗಳಿಗೆ ಈ ಪೋರ್ತುಗೀಸರಿಂದ ಯಾವ ತರದ ಬಾಧೆಯೂ ಬಾರದ ಹಾಗೆ ತಾನು ಜವಾಬ್ದಾರನಾಗಿರುತ್ತೇನೆಂದು ಮಾತುಕೊಟ್ಟು, ಅವರಿಗೆ ನಿಲ್ಲುವದಕ್ಕೆ ತನ್ನ ಮೂಲಿಕೆ ರಾಜಧಾನಿಯಲ್ಲಿ ಕೋಟೆಯ ಹತ್ತರ ಸ್ಥಳ ಕೊಟ್ಟನು. ಕೋಟೆಯಿಂದ ಪೂರ್ವ ದಿಕ್ಕಿಗಿರುವ ಖಾಲಿಸ್ಥಳದಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸಿಕೊಟ್ಟನು. ಆಗ ಸಾವಂತರ ಅರಮನೆಯು ವಳಲಂಕೆಯಲ್ಲಿತ್ತು. ವಳಲಂಕೆ ಅರಮನೆಯಿಂದ ನರಶಿಂಹದೇವರ ಒಂದು ಪ್ರತಿಮೆಯನ್ನು ಮಾಡಿಸಿ ಕೊಟ್ಟು ಮೂಲಿಕೆ ದೇವಸ್ಥಾನದಲ್ಲಿ ಪ್ರತಿಷ್ಠೆಮಾಡಿಸಿ ಎಲ್ಲಾ ತರದ ಸಹಾಯವನ್ನು ಮಾಡಿದನು. ಇದಕ್ಕಾಗಿ ಪೋರ್ತುಗೀಸರು ಕ್ರಿ. ಶ. 1524ರಲ್ಲಿ ಕಾನೂರಿಗೆ ಬಂದು ಬಾಧೆಕೊಡಲಾರಂಭಿಸಿದರು. ಆದರೆ ಈ ರಾಜನು ಪೋರ್ತುಗೀಸರಿಂದ ತನ್ನ ಪ್ರಜೆಗಳಿಗೆ ಬಾಧೆಬಾರದ ಹಾಗೆ ವರ್ಷಕ್ಕೆ 800 ಮುಡಿ ಅಕ್ಕಿಯನ್ನು ಪೋರ್ತುಗೀಸರಿಗೆ ಕೊಟ್ಟು ಅವರ ಹಾವಳಿಯನ್ನು ಕಡಿಮೆಮಾಡಿದನು. ಗೌಡಸಾರಸ್ವತರೂ ಸಾರಸ್ವತರೂ ಮೂಲಿಕೆಯಲ್ಲಿ ಬಲವಾಗಿರಲು ಇದೇ ಕಾರಣವೆಂದು ಹೇಳಬಹುದು. ಈಗಲೂ ನರಶಿಂಹ ದೇವರ ಉತ್ಸವವು ವರ್ಷಕ್ಕೊಂದಾವರ್ತಿ ದೀಪೋತ್ಸವದ ಸಮಯ ವಳಲಂಕೆ ಅರಮನೆ ವರೆಗೆ ಹೋಗಿ, ಅದರ ಮೂಡದಿಕ್ಕಿಗಿರುವ ಕಟ್ಟೆಯ ಮೇಲೆ ಕೂತು ಪೂಜೆಯಾಗುವ ವಾಡಿಕೆ ಇದೆ. ಅದೇ ಅರಮನೆಯಿಂದ ಕೊಟ್ಟ ದೇವರಾದ್ದರಿಂದ ಅರಮನೆಯಿಂದ ಕಾಣಿಕೆ ಇಡುವ ಪದ್ಧತಿ ಇಲ್ಲವಂತೆ.

# 29ನೇ ಅಧ್ಯಾಯ.

## ಬೈಲಂಗಡಿ ಮೂಲರು.

ದಕ್ಷಿಣಕನ್ನಡ ಜಿಲ್ಲೆಯ ತುಳುರಾಜ್ಯಗಳಲ್ಲಿ ಬೈಲಂಗಡಿ ರಾಜ್ಯವು ಒಂದಾಗಿದೆ. ಬಂಗರಾಜರ ಹಾಗೆಯೇ ಇವರಿಗೂ 12 ಮಾಗಣೆಗಳ ಅಧಿಕಾರವಿತ್ತು. ಇವರು ಚಾರ್ಮಾಡಿ, ಮುಂಡಾಜೆ, ಉಜ್ರೆ, ಲ್ಯಾಲ, ಮುಂಡೂರು, ಪಡಂಗಾಡಿ, ಗರಡಾಡಿ, ಸೋಣಂದೂರು, ಮಾಲಾಡಿ, ಕಲ್ಮಡ್ಕ, ತೋಟತಾಡಿ, ನೆರಿಯೆ, ಧರ್ಮಸ್ಥಳ, ಚಿಬಿದ್ರೆ, ಪುದುವೆಟ್ಟು, ಪಟ್ರಮೆ, ನಿಡ್ಲೆ, ಕೊಕ್ಕಡ, ಹತ್ತಿಯಡ್ಕ, ಕೌಕ್ರಾಡಿ, ರೆಕ್ಯ, ಶಿರಾಡಿ, ಶಿಬಾಜೆ, ಶಿಶಿಲ, ಕಳಂಜೆ, ಇಜ್ಜಿತೊಟ್ಟು ಬಲ್ಲಾಳನ ಶೀಮೆ, ರಾಯಿಬಲ್ಲಾಳನ ಶೀಮೆ ಇವುಗಳನ್ನು ಆಳಿಕೊಂಡಿದ್ದರು. ಸೋಮಳಾದೇವಿಯ ಕಾಲದಲ್ಲಿ ಇಜ್ಜಿತೊಟ್ಟು (ಕಾರಂಜೆ) ಮತ್ತು ರಾಯಿಶೀಮೆಗಳು ಇವರ ಕೈಯಿಂದ ತಪ್ಪಿದವು. ಇವರಿಗೆ 4 ಅರಮನೆಗಳಿದ್ದವು. ಬೈಲಂಗಡಿಯಲ್ಲಿ 2 ಅರಮನೆಗಳು. ಇದರಲ್ಲಿ ಒಂದು ಪೂರ್ಣ ಹಾಳಾಗಿ ಅದರ ಮೇಲೆ ಒಂದು ಸಣ್ಣಮನೆ ಇದೆ. ಮೆಟ್ಲುಗಳ ಶಿಲೆಯ ಕೆಲಸದಿಂದ ಅರಮನೆ ಇದ್ದ ಸ್ಥಳವೆಂದು ತಿಳಿಯಬಹುದು. ಅರಸುಮನೆತನದವರು ಇರುವ ಅರಮನೆಯು ಹಳೇ ಅರಮನೆಯಿಂದ ಸುಮಾರು ½ ಮೈಲು ಪೂರ್ವಕ್ಕಿದೆ. ಹಾಳು ಬಿದ್ದ ಈ ಅರಮನೆಯ ಅಡಿಸ್ಥಳವು ಸುಮಾರು 3 ಎಕ್ರೆ ವಿಸ್ತೀರ್ಣವಿದೆ. ಒಂದು ಮಾಳಿಗೆಯೂ, ಅಡಿಗೆ ಕೋಣೆಯೂ, ದೇವರ ಕೋಣೆಯೂ ಉಳಿದಿದೆ. ಅರಮನೆಯ ದೊಡ್ಡ ಶಿಲೆಯ ಬಾಗಿಲ ಚೌಕವು ಈಗಲೂ ಅಲ್ಲಿಯೇ ಉಳಿದಿದೆ. ಅರಮನೆಯ ಮುಂದುಗಡೆಯಲ್ಲಿರುವ ಬಾಕಿಮಾರು ಗದ್ದೆಯಲ್ಲಿ ಮೂಲರರಸರ 15 ಸಮಾಧಿಗಳು ಸಾಲುಸಾಲಾಗಿವೆ. ಅರಮನೆಯ ಮೆಟ್ಲುಗಳನ್ನು ಇಳಿದ ಕೂಡಲೇ ಸೋಮಳಾದೇವಿ (ಶಂಕರದೇವಿ)ಯು ಮತ್ತು ವೀರನರಶಿಂಹ

ಲಕ್ಷ್ಮಪ್ಪರಸನ, ಕಗ್ಗಲ್ಲಿನಿಂದ ನಿರ್ಮಿತವಾದ ಬಹಳ ಅಂದವಾದ ಕಲ್ಲು ಮಂಟಪಗಳ ಹಾಗಿರುವ 2 ಸಮಾಧಿಗಳು ಒಂದೇ ಸಾಲಿನಲ್ಲಿ ಹತ್ತಿರಹತ್ತಿರ ಕಂಗೊಳಿಸುತ್ತಿವೆ. ಈ ಸೋಮಳಾದೇವಿ ಮತ್ತು ವೀರನರಶಿಂಹ ಲಕ್ಷ್ಮಪ್ಪರಸ ಬಂಗರಾಜನು ಗಂಡಹೆಂಡರಾಗಿದ್ದರು. ಹದಿನೈದು ಸಮಾಧಿಗಳಿರುವದರಿಂದ 15 ಮಂದಿ ಮೂಲರು ಆಳಿರಬೇಕೆಂದು ತಿಳಕೊಳ್ಳಬಹುದು. 3ನೇ ಅರಮನೆಯು ಶಿಶಿಲದಲ್ಲಿತ್ತು. 4ನೇ ಅರಮನೆಯು ನಿಡ್ಲಿನಲ್ಲಿ ಇದೆ. ಇದರ ಸ್ವಲ್ಪ ಭಾಗವು ಬಿದ್ದು ಹೋಗಿದೆ. ಬೈಲಂಗಡಿಯು ರಾಜಧಾನಿಯಾಗಿತ್ತು. ಈ ಬೈಲಂಗಡಿ ಪಟ್ಟಣವು ಬೈಲಂಗಡಿ ಮೈದಾನಿನಲ್ಲಿದೆ. ರಾಜಧಾನಿಯ ಪೂರ್ವಕ್ಕೆ ಕಾಡುಗಳಿಂದ ನಿಬಿಡವಾದ ಗುಡ್ಡಗಳೂ ಏಲಕ್ಕಿ ಮಲೆಯೂ, ಪಶ್ಚಿಮಕ್ಕೆ ಬಲ್ಲಾಳರಾಯ ದುರ್ಗದಿಂದ ಧರ್ಮಸ್ಥಳದ ವರೆಗೆ ಚಾಚಿಕೊಂಡಿದ್ದು, ಕಾಡುಗಳಿಂದ ತುಂಬಿದ ಚಿಬಿದ್ರೆ ಗುಡ್ಡಗಳೂ, ಉತ್ತರಕ್ಕೆ ಏರ್ಕಲ್ಲೂ ಇದ್ದು ರಾಜಧಾನಿಯು ಭದ್ರವಾಗಿದೆ. ದಕ್ಷಿಣ ದಿಕ್ಕಿನಲ್ಲಿ ಮಾತ್ರ ಮೈದಾನಿದೆ. ಈ ದಾರಿಯಾಗಿಯೇ ಕೊಡಗರು ಬಂದು ಈ ಪಟ್ಟಣವನ್ನು ಸುಲಿಗೆಮಾಡುತ್ತಿದ್ದರು. ಈ ಪಟ್ಟಣದ ಪೂರ್ವಕ್ಕಿರುವ ಗಾಟಿಯಿಂದ ಹೇರೆತ್ತುಗಳ ಮೇಲೆ ವ್ಯಾಪಾರವು ಇಲ್ಲಿಗೆ ಇಳಿಯುತ್ತಿತ್ತು. ಇಲ್ಲಿ ಜೈನರ ಸುಮಾರು 1000 ಮನೆಗಳಿದ್ದವಂತೆ. ಇವಲ್ಲದೆ ಕಂಚಿಗಾರರೂ, ಲಿಂಗಾಯತರೂ ಇತರ ತುಳು ಜನರ ಮನೆಗಳೂ ಇದ್ದವಂತೆ. ಅರಮನೆಯಿಂದ ಬೈಲಂಗಡಿ ಬಸದಿಯು ನೈರುತ್ಯಕ್ಕೆ ಇದೆ. ಅರಮನೆಯಿಂದ ಬಸದಿಯ ವರೆಗೆ ಇದ್ದ ಪಟ್ಟಣವು ಹಾಳಾಗಿ ಈಗ ಕಾಡು ಬೆಳದಿದೆ. ಬಸದಿಯು ಎತ್ತರವಾದ ಸ್ಥಳದಲ್ಲಿ ಪೂರ್ವಕ್ಕೆ ಮುಖ ಮಾಡಿಕೊಂಡಿದೆ. ಇದು ಪೂರ್ಣ ಶಿಲೆಕಲ್ಲಿನಿಂದ ಕಟ್ಟಿದ ಬಸದಿ. ಇದನ್ನು ಕ್ರಿ. ಶ. 1611 (ಶಾ. ಶ. 1533)ರಲ್ಲಿ ಬಂಗರು ದುರುಸ್ತಿ ಮಾಡಿಸಿದರೆಂದು ಎಡದಿಕ್ಕಿನ ಕಂಬದ ಮೇಲಿರುವ ಶಾಸನದಿಂದ ತಿಳಿದುಬರುತ್ತದೆ. ಇದರಲ್ಲಿ ಬಹಳ ಅಂದವಾದ ಕೆತ್ತನೆಯ ಕೆಲಸಗಳು ಇವೆ.

ಅರಮನೆಯಲ್ಲಿ ಇವರ ವಂಶಾವಳಿಯ ವಿಷಯ ಏನೊಂದು ದಾಖಲೆಗಳು ಇಲ್ಲದ್ದರಿಂದಲೂ ಬೇರೆ ಕಡೆಯಲ್ಲಿ ಸಹ ಸಿಕ್ಕದಿರುವದರಿಂದಲೂ ಈ ಅರಸರ ವಿಷಯ ಹೆಚ್ಚಿಗೆ ಬರಿಯಲು ಸಾಧ್ಯವಾಗಲಿಲ್ಲ. ಒಂದು ಕಥೆಯು ಮಾತ್ರ ಅರಮನೆಯವರಿಗೆ ನೆನಪಿನಲ್ಲಿದೆ. ಬೈಲಂಗಡಿಯ ರಾಣಿಯಾದ ಸೋಮಳಾದೇವಿ (ಶಂಕರದೇವಿ)ಯನ್ನು ವೀರ ನರಶಿಂಹ ಲಕ್ಷ್ಮಪ್ಪರಸ ಬಂಗರಾಜನು ಮದುವೆಮಾಡಿಕೊಂಡು ಇಬ್ಬರೂ ಬೈಲಂಗಡಿ ಬಂಗಾಡಿ ರಾಜ್ಯವನ್ನು ಆಳಿಕೊಂಡಿದ್ದರು. ಆಗ ಒಂದು ಅನಂತನೋಹಿಯ ದಿವಸ ವ್ರತಮಾಡಲಿಕ್ಕೆ ಕುಳಿತುಕೊಂಡಿದ್ದರು. ಇದಕ್ಕೆ ಕೂತುಕೊಳ್ಳುವದಾದರೆ ಗಂಡಸರು ದೇವರ ಬಲಭಾಗದಲ್ಲಿಯೂ ಹೆಂಗಸರು ಎಡಭಾಗದಲ್ಲಿಯೂ ಕೂತುಕೊಳ್ಳುವ ಪದ್ಧತಿ. ಸೋಮಳಾದೇವಿಯು ತಾನು ಬಂಗರಾಜನ ಹೆಂಡತಿಯಾಗಿದ್ದರೂ, ಬೈಲಂಗಡಿಯ ರಾಣಿಯಾದ್ದರಿಂದ ಬಲದಿಕ್ಕಿನಲ್ಲಿ ತನಗೆ ಕೂತುಕೊಳ್ಳಲಿಕ್ಕೆ ಹಕ್ಕಿದೆ ಎಂದು ಚರ್ಚಿಸಿದಳು. ಅದಕ್ಕೆ ಬಂಗರಾಜನು ಒಪ್ಪಲಿಲ್ಲ. ಸೋಮಳಾದೇವಿಯು ತನ್ನ ಜಡೆಯನ್ನು ಬಿಚ್ಚಿ, ಕೂಡಲೇ ಬಸದಿಯಿಂದ ಹೊರಟು, ಅರಮನೆಗೆ ಹೋಗದೆ, ತಾನು ಬೈಲಂಗಡಿಗೆ ಹೋಗಿ ಒಂದು ತಿಂಗಳೊಳಗೆ ಬಸದಿಯನ್ನು ಕಟ್ಟಿಸಿ ಅಲ್ಲಿ ಅನಂತನೋಹಿಯನ್ನು ಮಾಡುವಳಾಗಿ ಶಪಥಹಾಕಿಕೊಂಡು ಬೈಲಂಗಡಿಗೆ ಹೊರಟು ಹೋದಳು.

ಅನಂತರ ಬೈಲಂಗಡಿಯಲ್ಲಿ ಮೇಲೆ ಹೇಳಿದ ಬಸದಿಯನ್ನು ಕಟ್ಟಿಸಿ ಅನಂತನೋಹಿವ್ರತವನ್ನು ಮಾಡಿದಳು. ಬಂಗರಾಜನು ಸಿಟ್ಟುಗೊಂಡು ಸೈನ್ಯ ತೆಗೆದುಕೊಂಡು ಬಂಗಾಡಿಯಿಂದ ಹೊರಟು ಬೈಲಂಗಡಿಗೆ ಬಂದು ಯುದ್ಧವಾಗಿ ಬಂಗರಾಜನು ಅರಮನೆಯ ಪಶ್ಚಿಮ ದಿಕ್ಕಿನ ಮೆಟ್ಲು ಹತ್ತಿ ಮೇಲಕ್ಕೆ ಬರುವಾಗ ಸೋಮಳಾದೇವಿಯ ಸೈನಿಕರು ಬಂಗರಾಜನ ತಲೆಕಡಿದು ಬಿಟ್ಟರು. ಸೋಮಳಾದೇವಿಯು ಯುದ್ಧದಲ್ಲಿ ಗೆದ್ದರೂ ತನ್ನ ಪತಿಯನ್ನು ಕೊಂದುದಕ್ಕಾಗಿ ಪಶ್ಚಾ

ತ್ತಾಪಪಟ್ಟು ಕೂಡಲೇ ಆತ್ಮಹತ್ಯವಮಾಡಿಕೊಂಡಳು. ಅಂದಿನಿಂದ ಈ ವರೆಗೂ ಯಾವ ಬಂಗರಾಜರೂ ಆ ಮೆಟ್ಲು ಹತ್ತಿಕೊಂಡು ಬರುವ ಪದ್ಧತಿ ಇಲ್ಲವಂತೆ. ಅವರ ಸ್ಮಾರಕಕ್ಕಾಗಿ ಮೇಲೆ ಹೇಳಿದ ಎರಡೂ ಸಮಾಧಿಗಳು ಕಟ್ಟಲ್ಪಟ್ಟವೆ. ಇವರಿಬ್ಬರ ಹೆಸರಿನಲ್ಲಿ ಬೈಲಂಗಡಿ ಬಸದಿಯೂ ಜೀರ್ಣೋದ್ಧಾರವಮಾಡಲ್ಪಟ್ಟಿದೆಂದು ಅದೇ ಬಸದಿಯ ಶಾಸನದಲ್ಲಿದೆ.

ಇಕ್ಕೇರಿ ಅರಸರ ಕಾಲದಲ್ಲಿ ಇವರು ಏಲಕ್ಕಿಯನ್ನು ನಗರ ಸಂಸ್ಥಾನಕ್ಕೆ ಒದಗಿಸಿಕೊಡುತ್ತಿದ್ದುದರಿಂದ ಇವರಿಗೆ ಏಲಕ್ಕಿ ಮೂಲರೆಂದು ಕರಿಯುತ್ತಿದ್ದರಂತೆ. ಇವರಲ್ಲಿ ಪಟ್ಟದ ಹೆಸರುಗಳು ಮೂರು. ದೇವಪ್ಪರಸಮೂಲ, ಚನ್ನಪ್ಪರಸಮೂಲ, ಸೋಮುಳಾದೇವಿ.

## 30ನೇ ಅಧ್ಯಾಯ.

## ಸುರಾಲ ತೊಳಹಾರ ಅರಸರು.

ಈ ವಂಶದವರು ಉಡುಪಿ ಮತ್ತು ಕುಂದಾಪುರ ತಾಲೂಕಿನ ಹೆಚ್ಚಿನ ಭಾಗವನ್ನು ಆಳುತ್ತಿದ್ದರು. ಈ ವಂಶದವರೂ, ಚೌಟರ ವಂಶದವರೂ ಒಂದೇ ರಾಜಕುಟುಂಬಕ್ಕೆ ಸೇರಿದವರು. ಇವರು ಸುರಾಲು, ಶಿರಿಯರ, ನಾಲ್ವತ್ತನಾಡು, ಕೆಲನಾಡು, ಶಂಕರನಾರಾಯಣ, ಬಸರೂರು, ಹಳ್ಳಿಗೇರಿ, ಬೈಂದೂರು ಶೀಮೆಗಳನ್ನು ಒಳಕೊಂಡಿರುವ (1) ಶಂಕರನಾರಾಯಣ, (2) ಬಸರೂರು, (3) ಹೊರಳಾಡಿ, (4) ಪಜಮಂಗೂರು, (5) ಜಡ್ಡು, (6) ಹಲುವಳ್ಳಿ, (7) ಕೆಂಜೂರು, (8) ಹೊಸೂರು, (9) ನಾಲ್ಕೂರು, (10) ಕುಜಿ, (11) ಪೆರ್ಡೂರು, (12) ನೀಲಾವರ, (13) ವಡ್ಡರ್ಸೆ, (14) ನಾಲ್ವತ್ತನಾಡು, (15) ಹಳ್ಳಿಗೇರಿ, (16) ಬೈಂದೂರು, (17) ಕಿರಿಮಂಜೇಶ್ವರ, ಮತ್ತು (18) ಕಾಲ್ತೊಡು ಮಾಗಣೆಗಳನ್ನು ಆಳುತ್ತಿದ್ದರು.

ತುಳುರಾಜ್ಯದ ರಾಜಧಾನಿಯಾದ ಬಾರಕೂರು ಪಟ್ಟಣದಿಂದ ಸುಮಾರು 6 ಮೈಲು ಪೂರ್ವಕ್ಕಿರುವ ಸುರಾಲು ಇವರ ರಾಜಧಾನಿಯಾಗಿತ್ತು. ಸೀತಾನದಿಯ ಮೇಲೆ ಇರುವ ಕೊಕ್ಕರಣೆಯು ಇವರ ಒಂದು ಬಂದರವಾಗಿತ್ತು. ಬಸರೂರು ಇನ್ನೊಂದು ಬಂದರವಾಗಿತ್ತು. ಈಗಿನ ಅರಮನೆಯನ್ನು ಕ್ರಿ. ಶ. 15ನೇ ಶತಮಾನದಲ್ಲಿ ಕಟ್ಟಿಸಿದರಂತೆ. ಈ ಅರಮನೆ ಇರುವ ಸ್ಥಳವು ಸುಮಾರು 3 ಎಕ್ರೆಯಷ್ಟಿದೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಇರುವ 12 ಮಂದಿ ದೊಡ್ಡ ಜೈನರಾಜರ ಅರಮನೆಗಳಲ್ಲಿ ಏನೂ ಹಾಳಾಗದೆ ದುರುಸ್ತಿಯಲ್ಲಿರುವ ಅರಮನೆಯು ಇದು ಒಂದೇ. ಅರಮನೆಯ ಮುಂದುಗಡೆ ಪಶ್ಚಿಮದಿಕ್ಕಿಗೆ 2 ಎಕ್ರೆ ವಿಸ್ತಾರವಾದ ರಾಜಾಂಗಣವು ಇದೆ. ಈ ಅಂಗಳವನ್ನು ದಾಟುತ್ತಲೇ ಸಣ್ಣ ಅಂಗಳವು ಇದೆ. ಈ ಅಂಗಳದಿಂದ ಹೆಬ್ಬಾಗಲನ್ನು



ಸುರಾಲ ಅರಮನೆಯ ಹೆಬ್ಬಾಗಲು.

ದಾಟುತ್ತಲೇ ಸುಮಾರು ½ ಎಕ್ರೆ ವಿಸ್ತೀರ್ಣವಿರುವ ಅಂಗಣವು ಇದೆ. ಇದರ ಪೂರ್ವದಿಕ್ಕಿಗಿರುವ ಬಾಗಲನ್ನು ದಾಟುತ್ತಲೇ ಪೆರ್ಡೂರು ಗುತ್ತಿನವರು ಕಟ್ಟಿಸಿದ ರಾಜಾಂಗಣವಿರುವ ದೊಡ್ಡ ಚೌಕದ ಚಾವಡಿಯು ಇದೆ. ಇದರಲ್ಲಿ ಮೊದಲು ಅರಸನು ಮಂತ್ರಿ, ಸೇನಾಧಿಪತಿ

ಗಳೊಡನೆ ರಾಜಸಭೆಯನ್ನು ಮಾಡುತ್ತಿದ್ದನು. ಅರಮನೆಯ ದಕ್ಷಿಣ ದಿಕ್ಕಿಗೆ ಬಾಕಿಮಾರುಗದ್ದೆಯು ಇದೆ. ಅರಸನು ಈ ಗದ್ದೆಯಲ್ಲಿ ಆಗುವ ಕಂಬಳವನ್ನೂ ಯುದ್ಧದ ಸಮಯದಲ್ಲಿ ಯುದ್ಧಕ್ಕೆ ಸಿದ್ಧವಾದ ಸೈನ್ಯವನ್ನೂ ನೋಡಲಿಕ್ಕೆ ಕಟ್ಟಿಸಿದ ಒಂದು ಸಣ್ಣ ಮಾಳಿಗೆಯು ಇದೆ. ಹೆಬ್ಬಾಗಲಿನ ಒಳಗಿರುವ ಅಂಗಣದ ಉತ್ತರ ದಿಕ್ಕಿನ ಬಾಗಲನ್ನು ದಾಟುತ್ತಲೇ ಪಟ್ಟದ ಚಾವಡಿಯು ಪೂರ್ವಕ್ಕೆ ಮುಖ ಮಾಡಿ ಕಟ್ಟಲ್ಪಟ್ಟಿದೆ. ಇದಕ್ಕೆ ಬಣ್ಣದಚಾವಡಿ ಎಂದು ಹೆಸರು. ಇಲ್ಲಿಯೂ ಸಣ್ಣ ಅಂಗಳವಿದೆ. ಈ ಚಾವಡಿಯ ಮಧ್ಯದಲ್ಲಿ ಸಿಂಹಾಸನವು ಇದೆ. ದಕ್ಷಿಣಕ್ಕೆ ನವರಾತ್ರಿಯ ಸಮಯ ಅಮ್ಮನವರನ್ನು ಪೂಜಿಸುವ ಕೋಣೆಯಿದೆ. ಉತ್ತರಕ್ಕೆ ಶಾರದೆಯನ್ನು ಪೂಜಿಸುವ ಕೋಣೆಯಿದೆ. ಬಣ್ಣದಚಾವಡಿಯ ಪೂರ್ವದಿಕ್ಕಿನ ದ್ವಾರವನ್ನು ಪ್ರವೇಶಿಸಿ ಒಳಗೆ ಹೋಗುತ್ತಲೇ ಅಂತಃಪುರವಿದೆ. ಇದರ ದಕ್ಷಿಣಕ್ಕಿರುವ ಬಾಗಲನ್ನು ದಾಟುತ್ತಲೇ ತೋಳಹಾರರ ಕುಲದೇವಿಯಾದ ಪದ್ಮಾವತಿ ಅಮ್ಮನವರ ಬಸದಿಯಿದೆ. ಅಂತಃಪುರದ ಉತ್ತರದಿಕ್ಕಿಗೆ ಪಾಕಶಾಲೆ, ಭೋಜನಶಾಲೆ ಮುಂತಾದ್ದು ಇವೆ. ಈ ಅರಮನೆಯಲ್ಲಿ ಕೆತ್ತನೆ ಕೆಲಸಗಳು ವಿಶೇಷವಾಗಿವೆ.

ಹಳೇ ಅರಮನೆಯು ಈಗಿರುವ ಅರಮನೆಯಿಂದ ಸುಮಾರು ¼ ಮೈಲು ಪೂರ್ವಕ್ಕಿದೆ. ಅಡಿಸ್ಥಳವು 5 ಎಕ್ರೆ ವಿಸ್ತೀರ್ಣವುಳ್ಳದ್ದಾಗಿದೆ. ಈಗ ಇದರಲ್ಲಿ ಹಾಡಿಯು ಬೆಳದಿದೆ. ಕಟ್ಟೋಣದ ಕಲ್ಲುರಾಶಿಗಳು ಅಲ್ಲಲ್ಲಿ ಇವೆ. ಅರಮನೆಯ ಮಧ್ಯದಲ್ಲಿ ಕಲ್ಕುಟಿಯ ಗುಡಿಯು ಅಲ್ಲಿಯೇ ಹಾಳಾಗಿ ಬಿದ್ದಿದೆ. ಅದಕ್ಕೆ ಆಗಬೇಕಾದ ಪರ್ವಗಳು ಅಲ್ಲಿಯೇ ಆಗಬೇಕಂತೆ. ಹೊಸ ಅರಮನೆಯ ಪಶ್ಚಿಮಕ್ಕೆ ತೊಟ್ಟಾಡಿ ಎಂಬ ಸ್ಥಳದಲ್ಲಿ ಇನ್ನೊಂದು ಅರಮನೆಯೂ ಕೋಟೆಯೂ ಹಾಳಾಗಿ ಹಾಡಿ ಬೆಳೆದಿದೆ. ಅರಮನೆಯ ನೈರುತ್ಯಕ್ಕೆ ಪೂರ್ಣ ಶಿಲೆಯಿಂದಲೇ ಕಟ್ಟಿಸಿದ ಸೀಮೆಯ ದೇವಸ್ಥಾನವಾದ ಮಹಾದೇವದೇವಸ್ಥಾನವು ಇದೆ.

ಇದರ ಮಾಡಿನ 4 ಮೂಲೆಗಳಿಂದ ತೂಗಾಡಿಸಿದ ಶಿಲೆಕಲ್ಲಿನ ಸಂಕಲೆಗಳು ನೆಲಕ್ಕೆ ತಾಗುವ ವರೆಗೆ ಮುಂಚೆಯಿದ್ದವಂತೆ. ಈಗ ಒಂದೆರಡು ಗೊಣಸುಗಳು ಮಾತ್ರವೇ ಇವೆ. ಮಂಜೇಶ್ವರ ರಥದಷ್ಟೇ ದೊಡ್ಡದಾಗಿ ಅದೇ ಕ್ರಮದಲ್ಲಿ ಕಟ್ಟಲ್ಪಟ್ಟ ಒಂದು ದೊಡ್ಡ ರಥವು ಇದೆ. ಇವರ ಇನ್ನೊಂದು ಅರಮನೆಯು ಕೆಂಜೂರಿನಲ್ಲಿ ಇತ್ತು. ಅದು ಈಗ ಹಾಳಾಗಿ ಹಾಡಿ ಬೆಳದಿದೆ

(1) ಉಳ್ತಾಯ, (2) ಬಾಯರಿ, (3) ಮಡಶಿ, (4) ಚಕ್ಕರೇ ಈ ನಾಲ್ಕು ಮನೆತನದವರು ಇವರ ಪ್ರಧಾನಿಗಳಾಗಿದ್ದರು. (1) ಪೆಡೂರ್ರುಗುತ್ತಿನವರು, (2) ಕೆಂಜೂರುನಾಯಕ, (3) ಹೊರಳಾಡಿನಾಯಕ ಇವರು ಸೇನಾಧಿಪತಿಗಳು.

ಇವರ ಕೈಕೆಳಗಿನ ದೇವಸ್ಥಾನಗಳು. (1) ಸುರಾಲ, (2) ಪಾದೆಮಠ, (3) ಕರ್ಜೆ, (4) ವಡ್ಡಂಬೆಟ್ಟು, (5) ಮಾರಾಡಿ, (6) ಅಮಾಜಿ, (7) ನೀಲಾವರ, (8) ಪೆಡೂರ್ರು, (9) ಶಂಕರನಾರಾಯಣ, (10) ಬಸರೂರು. ಪೆಡೂರ್ರು ಮತ್ತು ನೀಲಾವರ ದೇವರಿಗೆ ಇವರು ಹೆಚ್ಚು ಉಂಬಳಿಬಿಟ್ಟು ಆಭರಣಗಳನ್ನು ಮಾಡಿಸಿ ಕೊಟ್ಟಿರುತ್ತಾರೆ. ಈಗಲೂ ಇರುವ ಕವಚಗಳಲ್ಲಿ ಅವುಗಳನ್ನು ಮಾಡಿಸಿಕೊಟ್ಟ ತೊಳಹಾರರ ಹೆಸರುಗಳು ಕೆತ್ತಲ್ಪಟ್ಟವೆಯಂತೆ. ಅರಮನೆಯಲ್ಲಿ ಮೂರು ತಾಮ್ರಶಾಸನಗಳು ಇವೆ. ಒಂದರಲ್ಲಿ ಕಾಣುವ ಪ್ರಕಾರ ಶಾ. ಶ. 1610 (ಕ್ರಿ. ಶ. 1688)ರಲ್ಲಿ ಮಹಾಲಿಂಗ ತೊಳಹಾರನು ಆಳುತ್ತಿದ್ದನೆಂದೂ, ಇನ್ನೊಂದರ ಪ್ರಕಾರ ಶಾ. ಶ. 1613 (ಕ್ರಿ. ಶ. 1691)ರಲ್ಲಿ ಮದನದೇವಿ ತೊಳಹಾರತಿಯು ಆಳುತ್ತಿದ್ದಳೆಂದೂ, ಮತ್ತೊಂದರ ಪ್ರಕಾರ ಶಾ. ಶ. 1637 (ಕ್ರಿ. ಶ. 1715)ರಲ್ಲಿ ಚಲುವಮ್ಮದೇವಿ ತೊಳಹಾರತಿಯು ಆಳುತ್ತಿದ್ದಳೆಂದೂ ತಿಳಕೊಳ್ಳಬಹುದು.

ಪೋರ್ತುಗೀಸರು ಕನ್ನಡಜಿಲ್ಲೆಯ ಕರಾವಳಿಗೆ ಬಂದು ಬಹಳ ಹಾವಳಿಮಾಡುತ್ತಿದ್ದಾಗ ಈ ತೊಳಹಾರ ಅರಸರು ಬಹಳ ಸಾಹಸ ದಿಂದ ಕಾದಿ ಅವರನ್ನು ಬಂದಹಾಗೆ ಓಡಿಸಿ ಅವರ ಬಾಧೆಯಿಂದ ಪ್ರಜೆಗಳನ್ನು ರಕ್ಷಿಸಿದ ಸಂಗತಿಯು ಪೋರ್ತುಗೀಸ ಚರಿತ್ರೆಯಿಂದ ಕಂಡುಬರುತ್ತದೆ.

ಕ್ರಿ. ಶ. 1569ರಲ್ಲಿ ಪೆದ್ರು-ಡಿ-ಸಿಲ್ವ ಮಿನೇಜಸನು 13 ಹಡ ಗಗಳಲ್ಲಿ ಸೈನ್ಯವನ್ನು ತೆಗೆದುಕೊಂಡು ಬಾರ್ಸೆಲೋರ್ (ಬಸರೂರು)ನಲ್ಲಿ ಇಳಿದನು. ಬಾರ್ಸೆಲೋರಿನಲ್ಲಿ ತೊಳಹಾರ ಅರಸನು ಕಟ್ಟಿಸಿದ ಬಲವಾದ ಕೋಟೆಯು ಇತ್ತು. ಈ ಕೋಟೆಯಲ್ಲಿ ದೊಡ್ಡ ಸೈನ್ಯ ವಿತ್ತು. ಆದರೆ ಪೋರ್ತುಗೀಸ ಹಡಗುಪಡೆಯುವನು ಈ ಕೋಟೆಯ ಸೇನಾಧಿಪತಿಗೆ ಹಣವನ್ನು ಕೊಟ್ಟು ತಾನು ಬಂದ ಕೂಡಲೇ ಕೋಟೆ ಯನ್ನು ಬಿಟ್ಟುಕೊಡಬೇಕೆಂದು ಒಳಸಂಚು ನಡಿಸಿದ್ದನು. ಈ ಸಮ ಯದಲ್ಲಿ ತೊಳಹಾರರ ಸೀಮೆಗೆ ಸೇರಿದ ಬೈಂದೂರು ಸೀಮೆ, ಹಳ್ಳಿ ಗೇರಿ ಸೀಮೆ ಈ ಎರಡು ಸೀಮೆಗಳು ಬಿಜಾಪುರದ ಅದಿಲಶಾಹನ ವಶದಲ್ಲಿದ್ದವು. ತೊಳಹಾರರ ಸೇನಾಧಿಪತಿಯು ರಾತ್ರಿಯಲ್ಲಿ ಕೋಟೆ ಯನ್ನು ಪೋರ್ತುಗೀಸರಿಗೆ ಬಿಟ್ಟುಕೊಟ್ಟೊಡನೆಯೇ ಕೋಟೆಯನ್ನು ಪೋರ್ತುಗೀಸರು ಪ್ರವೇಶಿಸಿದರು. ಬಸರೂರನ್ನು ಸುಲಿಗೆಮಾಡಿದರು. ಈ ವರ್ತಮಾನವು ಅರಸನಿಗೆ ತಲಪುತ್ತಲೇ ಹೊಸಂಗಡಿ ಅರಸನಾದ ಹೊನ್ನೆಯಕಂಬಳಿಗೆ ಹೇಳಿಕಳುಹಿಸಿದನು. ಇಬ್ಬರೂ ಕೂಡಿ ಮರುದಿನ ರಾತ್ರಿ 1503 ಮಂದಿ ಸೈನಿಕರೊಡನೆ ಯುದ್ಧಕ್ಕೆ ಬಂದರು. ಮರು ದಿನ ರಾತ್ರಿ ಪೆರ್ಡೂರು ಗುತ್ತಿನ ಸೇನಾಧಿಪತಿಯು 5000 ಸೈನ್ಯವನ್ನು ತೆಗೆದುಕೊಂಡು ಬಂದನು. ಪೋರ್ತುಗೀಸರಿಗೂ, ಇವರಿಗೂ ಆದ ಯುದ್ಧದಲ್ಲಿ ತೊಳಹಾರ ಮತ್ತು ಹೊನ್ನೆಯಕಂಬಳಿಯ ಸೈನ್ಯದಲ್ಲಿ ಅನೇಕ ಮಂದಿ ಮಡಿದುಬಿದ್ದರು. ಆದರೆ ಪೋರ್ತುಗೀಸರು ಸೋತು 20 ಫಿರಂಗಿಗಳನ್ನೂ ಮದ್ದುಗುಂಡುಗಳನ್ನೂ ಉಳಿದ ಸೈನ್ಯವನ್ನೂ ತೆಗೆದುಕೊಂಡು ಹಡಗಹತ್ತಿ ಓಡಿಹೋದರು.

ಪೋರ್ತುಗೀಸರು ಇನ್ನೊಮ್ಮೆ ಬಸರೂರನ್ನು ಹಿಡಿದರು. ತೊಳಹಾರ ಅರಸನೂ ಕಂಬಳಿ ಅರಸನೂ 11,000 ಸೈನ್ಯದೊಡನೆ ಯುದ್ಧಕ್ಕೆ ನಿಂತರು. ಆದರೆ ಯುದ್ಧದಲ್ಲಿ ಸೋತು ಪೋರ್ತುಗೀಸರಿಗೆ ಕಪ್ಪಕೊಡುವದಕ್ಕೆ ಒಪ್ಪಬೇಕಾಯಿತು. ಪೋರ್ತುಗೀಸರು ಬಸರೂರಿನಲ್ಲಿ ಒಂದು ಕೋಟೆಯನ್ನು ಕಟ್ಟಿಸಿದರು.

ಕ್ರಿ. ಶ. 1571ರಲ್ಲಿ ಪೋರ್ತುಗೀಸರು ಬಾರ್ಸಲೋರ ಕೋಟೆಯನ್ನು ಬಲಪಡಿಸುತ್ತಿರಲು ತೊಳಹಾರ ಅರಸನು 6000 ಸೈನ್ಯದೊಡನೆ ಬಂದು ಕೋಟೆಗೆ ಮುತ್ತಿಗೆಹಾಕಿದನು ಕಡೆಗೆ ಇಬ್ಬರಿಗೂ ಒಪ್ಪಂದವಾಯಿತು.



ಪೋರ್ತುಗೀಸರು ತೊಳಹಾರ ಅರಸನೊಡನೆ
ಒಪ್ಪಂದಕ್ಕೆ ಬರುವುದು.

ಕ್ರಿ. ಶ. 1608ರಲ್ಲಿ ಇಕ್ಕೇರಿ ಅರಸನಾದ ಹಿರಿಯ ವೆಂಕಟಪ್ಪನಾಯಕನು ದಕ್ಷಿಣಕನ್ನಡ ಜಿಲ್ಲೆಗೆ ಬಂದು ರಾಜ್ಯವನ್ನು ನೋಡಿ

ಎಲ್ಲಾ ಅರಸರ ಸಂಗಡ ಕೌಲುಮಾಡಿ ಬಾರಕೂರಿಗೆ ಬಂದಾಗ ಈ ಅರಸನೂ ಅವನೊಡನೆ ಕೌಲುಮಾಡಿ ಕಪ್ಪಕೊಡುವುದಕ್ಕೆ ಒಪ್ಪಿದನು. ಈ ಸಮಯದಲ್ಲಿ ಇವರ ರಾಜ್ಯವು ಬಹಳ ವಿಸ್ತಾರವಾಗಿತ್ತು. ಬೈಂದೂರುಸೀಮೆ, ಹಳ್ಳಿಗೇರಿಸೀಮೆ, ನಾಲವತ್ತನಾಡು ಸಹ ಇವರ ಕೈಕೆಳಗಿತ್ತು. ಪೋರ್ತುಗೀಸರ ಹಾವಳಿಯು ಹೆಚ್ಚಾಗುತ್ತಾ ಬಂದದರಿಂದ ವೆಂಕಟಪ್ಪನಾಯಕನು ಬಾರಕೂರು, ಕಲ್ಯಾಣಪುರ, ಮಲ್ಲಿಕಾರ್ಜುನಗಿರಿ, ಕಂಡಲೂರು (ಕಂಬೊಳಿಯಮ) ಕೋಟೆಗಳನ್ನು ಕಟ್ಟಿಸಿದನು. ಶಾ. ಶ 1574ನೇ ನಂದನ ಸಂ|ದಲ್ಲಿ (ಕ್ರಿ. ಶ. 1652)ರಲ್ಲಿ ಶಿವಪ್ಪನಾಯಕನ ರಾಜ್ಯದ ಭದ್ರತೆಗಾಗಿ ಕೆಳಗಿನ ಬಾರ್ಸೆಲೊರ್ (ಕುಂದಾಪುರ) ಮತ್ತು ಗಂಗೋಳಿ ಊರುಗಳಲ್ಲಿ ಬಲವಾದ 2 ಕೋಟೆಗಳನ್ನು ಕಟ್ಟಿಸಿದನು.

ವೀರಭದ್ರನಾಯಕನ ಮಗನಾದ ಬಸವಪ್ಪನಾಯಕನು ಕನ್ನಡ ಜಿಲ್ಲೆಗೆ ಶಾ. ಶ. 1664ರಲ್ಲಿ ಬಂದಾಗ ತೊಳಹಾರ ಅರಸನು ಪೋರ್ತುಗೀಸರ ಬಾಧೆಯು ಸಹಿಸಲಾರದಷ್ಟು ಹೆಚ್ಚಾಗಿ ಪ್ರಜೆಗಳು ಬಹಳ ಕಷ್ಟಪಡುತ್ತಾರೆಂದು ಹೇಳಲು ಶಾ. ಶ. 1665ನೇ ರುಧಿರೋದ್ಗಾರಿ ಸಂ|ದಲ್ಲಿ (ಕ್ರಿ. ಶ. 1742) ಉಡುಪಿಯ ಹತ್ತರ ಮಲ್ಪೆ ಸಮುದ್ರಕರಾವಳಿಯ ಹತ್ತರವಿರುವ ಬಂಡೆಕಲ್ಲಿನ ಮೇಲೆ ಗರಿಯಾಬಾದಿನಗಡ ಎಂಬ ಕೋಟೆಯನ್ನೂ, ಕಲ್ಯಾಣಪುರದ ಹತ್ತರವಿರುವ ತೊನಸೆಯಲ್ಲಿ ಒಂದು ಕೋಟೆಯನ್ನೂ, ಕುಂದಾಪುರದಲ್ಲಿ ಬೆಣ್ಣೆಗೆರೆ ಎಂಬ ಕೋಟೆಯನ್ನೂ, ಅದರ ಹತ್ತರ ಒಂದು ಅರಮನೆಯನ್ನೂ ಕಟ್ಟಿಸಿದನು. ತೊಳಹಾರ ಅರಸನು ಈ ಬಸವಪ್ಪನಾಯಕನಿಗೆ ಬಹಳ ಸಹಾಯಮಾಡುತ್ತಿದ್ದನು.

ಇಕ್ಕೇರಿ ಅರಸರ ಕಾಲದಲ್ಲಿ ತೊಳಹಾರ ಅರಸರು ಬಹಳ ವೈಭವದಿಂದ ಇದ್ದರು. ರಾಜ್ಯವು ಹೈದರನಿಗೆ ಸಿಕ್ಕಿದ ಮೇಲೆ ಅವನು ಇವರ ರಾಜ್ಯವನ್ನು ತನ್ನ ವಶಮಾಡಿಕೊಂಡನು. ಆದರೆ ಇವರು

ಮಲ್ಲಿಖಾನೆಯನ್ನು ತಮಗೆ ಬೇಡವೆಂದು ಬಿಟ್ಟುಬಿಟ್ಟದ್ದರಿಂದ ಇವರಿಗೆ ಇಂಗ್ಲೀಷರ ಕಾಲದಲ್ಲಿಯೂ ಮಲ್ಲಿಖಾನೆಯು ಸಿಕ್ಕುವದಿಲ್ಲ. ಪಟ್ಟಾಭಿಷೇಕವು ಕ್ರಮಪ್ರಕಾರ ಆಗುತ್ತದೆ. ಅರಮನೆಯಲ್ಲಿ ನವರಾತ್ರಿಯ ಸಮಯ ಪೂರ್ವಕಾಲದಲ್ಲಿ ನಡಿಯುತ್ತಿದ್ದಂತೆ ಏನೊಂದು ಲೋಪವಾಗದೆ ಮಹಾನವಮಿಯ ಉತ್ಸವಗಳೂ, ವಿಜಯದಶಮಿಯ ದಿವಸ ನಡಿಯುವ ವಿಜಯಯಾತ್ರೆಯೂ, ಬ್ರಾಹ್ಮಣ ಸಂತರ್ಪಣೆ ಸುವಾಸಿನಿಯರಿಗೆ ಪೂಜೆ ಉಡಿಗೆ ಉಚಿತಗಳೂ ಮುಂತಾದ ಶಾಸ್ತ್ರೋಕ್ತ ವಿಧಿಗಳು ಈಗಲೂ ನಡಿಯುತ್ತವೆ.

## 31ನೇ ಅಧ್ಯಾಯ.

### 1. ಹೊನ್ನೆಯಕಂಬಳಿ ಅರಸರು.

ಈ ವಂಶದವರು ಕುಂದಾಪುರ ತಾಲೂಕಿನ ಕೊಲ್ಲೂರು, ಹೊಸಂಗಡಿ, ಬಗ್ಗವಾಡಿ, ಮುಗಿನಾಡು, ಆರುನಾಡು, ಕದರಿ, ಕಬ್ಬುನಾಡು, ಸೀಮೆಗಳನ್ನೂ ಈ ಪ್ರದೇಶಕ್ಕೆ ತಾಗಿರುವ ಗಟ್ಟದ ಮೇಲಿನ ಎಡವೂರು, ಪಟ್ಟಗುಪ್ಪೆ ಮತ್ತು ಚಿನ್ನಬಿದರೂರು ಸೀಮೆಗಳನ್ನೂ ಆಳಿಕೊಂಡಿದ್ದರು. ಇವರ ರಾಜಧಾನಿಯು ಹೊಸಂಗಡಿಗಟ್ಟದ ಬುಡದಲ್ಲಿರುವ ಹೊಸಂಗಡಿಯಾಗಿತ್ತು. ಕೊಲ್ಲೂರು ಮೂಕಾಂಬಿಕೆ ದೇವಸ್ಥಾನವು ಇವರ ಸೀಮೆ ದೇವಸ್ಥಾನವಾಗಿತ್ತು.

ಈ ವಂಶದ ಅರಸರಲ್ಲಿ ಹೊನ್ನೆಯಕಂಬಳಿ ಪಂಡರಿದೇವ ಒಡೆಯ ಎಂಬವನು ಶಾ. ಶ. 1444ನೇ ಪ್ಲವ ಸಂ\|ದಲ್ಲಿ (ಕ್ರಿ. ಶ. 1522) ಗುಡ್ಡೆದೇವರಿಗೆ 207 ಮುಡಿ ಅಕ್ಕಿ ಹುಟ್ಟುವಳಿ ಇರುವ ಸ್ಥಳವನ್ನು ಉಂಬಳಿಬಿಟ್ಟಿದ್ದಾನೆಂದು ಕೊಲ್ಲೂರು ಮೂಕಾಂಬಿಕೆ ದೇವಸ್ಥಾನದಲ್ಲಿರುವ ಒಂದು ಶಾಸನದಿಂದಲೂ, ಶಾ. ಶ. 1482ನೇ ಸಿದ್ಧಾರ್ಥಿ

ಸಂ।ದಲ್ಲಿ (ಕ್ರಿ. ಶ. 1560) ಹೊನ್ನೆಯಕಂಬಳಿ ಬುಕಒಡೆಯನು ಕೊಲ್ಲೂರು ಮೂಕಾಂಬಿಕೆ ದೇವಸ್ಥಾನಕ್ಕೆ 40 ಮುಡಿ ಭತ್ತ ಉತ್ಪತ್ತಿಯಿರುವ ಗದ್ದೆಯನ್ನು ಉಂಬಳಿಬಿಟ್ಟಿದ್ದಾನೆಂದೂ ಅದೇ ದೇವಸ್ಥಾನದಲ್ಲಿರುವ ಶಾಸನದಿಂದ ತಿಳಿಯಬಹುದು. ಮೇಲೆ ಹೇಳಿದ ಪಂಡರಿದೇವ ಒಡೆಯ ಮತ್ತು ಬುಕಒಡೆಯ ಎಂಬ ಎರಡು ಹೆಸರುಗಳಲ್ಲದೆ ಬೇರೆ ಅರಸರ ಹೆಸರುಗಳು ತಿಳಿದುಬರುವದಿಲ್ಲ.

ಹೊನ್ನೆಯಕಂಬಳಿ ಬುಕರಾಯನಿಗೆ ಶಂಕರನಾರಾಯಣ ಭಟ್ಟನೆಂಬವನು ಪ್ರಧಾನಿಯಾಗಿದ್ದನು. ಈ ಪ್ರಧಾನಿಗೆ ಅರಸನು ರಾಜ್ಯಭಾರದ ಕೆಲಸವನ್ನೆಲ್ಲಾ ವಹಿಸಿಕೊಟ್ಟಿದ್ದನು. ಕಾಲಕ್ರಮೇಣ ಈ ಶಂಕರನಾರಾಯಣಭಟ್ಟನು ಬಹಳ ಪ್ರಬಲನಾಗಿ ಹೊನ್ನೆಯಕಂಬಳಿಯನ್ನು ಲಕ್ಷಿಸದೆ ಆರುನಾಡು, ಕಬ್ಬಿನಾಡು, ಮುಗಿನಾಡು, ಚಿನ್ನಬಿದರೂರು ಸೀಮೆಗಳನ್ನು ತನ್ನ ಸ್ವಾಧೀನಪಡಿಸಿಕೊಂಡು, ಚಿನ್ನಬಿದರೂರನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದನು. ಬುಕಒಡೆಯನು ಈ ಸಂಗತಿಯನ್ನು ತನ್ನ ಅರಸನಾದ ಇಕ್ಕೇರಿ ವೆಂಕಟಪ್ಪನಾಯಕನಿಗೆ ತಿಳಿಸಿದನು. ವೆಂಕಟಪ್ಪನಾಯಕನು ಕ್ರಿ. ಶ. 1608ರಲ್ಲಿ ತನ್ನ ದಳವಾಯಿಯಾದ ಲಿಂಗಣ್ಣನಾಯಕನೊಡನೆ ದೊಡ್ಡ ಸೈನ್ಯ ತೆಗೆದುಕೊಂಡು ಹೊರಟು ಚಿನ್ನಬಿದರೂರಿನ ಹತ್ತರ ಸೈನ್ಯವನ್ನು ನಿಲ್ಲಿಸಿ ಬುಕಒಡೆಯನ ರಾಜ್ಯವನ್ನು ಅವನಿಗೆ ಬಿಟ್ಟುಕೊಡಬೇಕೆಂದು ಶಂಕರನಾರಾಯಣ ಭಟ್ಟನಿಗೆ ಹೇಳಿ ಕಳುಹಿಸಿದನು. ಆದರೆ ಅವನು ಇದಕ್ಕೆ ಕಿವಿಗೊಡಲಿಲ್ಲ. ವೆಂಕಟಪ್ಪನಾಯಕನು ಚಿನ್ನಬಿದರೂರು ಕೋಟೆಗೆ ಮುತ್ತಿಗೆಹಾಕಿ ಹೊರಗಿನಿಂದ ಯಾವ ತರದ ಸಾಮಗ್ರಿಗಳೂ ಒಳಗೆ ಹೋಗದಹಾಗೆ ಮಾಡಿದನು. ಶಂಕರನಾರಾಯಣ ಭಟ್ಟನು ಈ ಸಂಗತಿಯನ್ನು ಮೊದಲೇ ತಿಳಿದ್ದಿದರಿಂದ 6 ತಿಂಗಳಿಗೆ ಬೇಕಾದ ಆಹಾರಸಾಮಗ್ರಿಗಳನ್ನು ಪಟ್ಟಣದೊಳಗೆ ಕೂಡಿಸಿಟ್ಟಿದ್ದನು. ವೆಂಕಟಪ್ಪನಾಯಕನು ಚಿನ್ನಬಿದರೂರು

ಕೋಟೆಯ ಹೊರಗಡೆಯಲ್ಲಿ ಕೋಟೆಯನ್ನು ಒಡೆಯುವದಕ್ಕಾಗಿ ಬತ್ತೇರಿಗಳನ್ನು ಕಟ್ಟಿಸಿ ಅವುಗಳ ಮೇಲೆ ಫಿರಂಗಿಗಳನ್ನು ಇಡಿಸಿದನು. ಒಳಗಿನಿಂದ ಕೋಟೆಯನ್ನು ಶಂಕರನಾರಾಯಣ ಭಟ್ಟನು ಬಲಪಡಿಸಿದನು. ಆದರೆ ವೆಂಕಟಪ್ಪನಾಯಕನು ಚಿನ್ನಬಿದರೂರು ಕೋಟೆಯನ್ನು ಒಡೆದು ಅದನ್ನು ಹಿಡಿದನು. ಶಂಕರನಾರಾಯಣಭಟ್ಟನು ಶರಣಾಗತನಾದನು. ಅನಂತರ ಚಿನ್ನಬಿದರೂರಿನಲ್ಲಿ ಕಲಾವತಿನದಿಯ ತೀರದಲ್ಲಿ ವೇಣುವನ ಮಧ್ಯದಲ್ಲಿದ್ದ ನೀಲಕಂಠೇಶ್ವರ ಲಿಂಗಕ್ಕೆ ಒಂದು ದೇವಸ್ಥಾನವನ್ನು ಕಟ್ಟಿಸಿದನು. ಬಳಿಕ ಗಟ್ಟಯಿಳಿದು ಹೊಸಂಗಡಿಗೆ ಬಂದು ಹೊಸಂಗಡಿ, ಕಡರಿ, ಬಗ್ಗವಾಡಿ, ಕೊಲ್ಲೂರು ಹೋಬಳಿಗಳ ಸೀಮೆಯ ಪ್ರಜಿಪರಿವಾರಗಳನ್ನು ಕಾಣಿಸಿಕೊಂಡು ಅವರಿಂದ ಕಪ್ಪಕಾಣಿಕೆಗಳನ್ನು ಪಡೆದು ಇನ್ನು ಮುಂದೆ ಸೀಮೆಗೆ ಕೊಡಬೇಕಾದ ಕಪ್ಪವನ್ನು ನಿಶ್ಚಯಿಸಿ, ಹೊಸಂಗಡಿ, ಬಗ್ಗವಾಡಿ ಎಂಬ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿಸಲಿಕ್ಕೆ ಹೇಳಿ ಕೊಲ್ಲೂರಿಗೆ ಹೋದನು. ಅಲ್ಲಿ ಮುಕಾಂಬಿಕೆಯ ದರುಶನಮಾಡಿ ಪೂಜಾದಿಗಳು ನಡಿಸುವುದರಲ್ಲಿ ಲೋಪವಾಗದ ಹಾಗೆ ಉಂಬಳಿಬಿಟ್ಟು ಇಕ್ಕೇರಿಗೆ ಹೋದನು.

ಅನಂತರ ಪೋರ್ತುಗೀಸರ ಬಾಧೆಯು ಹೆಚ್ಚಾಗುತ್ತಾ ಬರುತ್ತಿರಲು ಬಸರೂರಿನ ಎದುರುಗಡೆಯ ಹೊಳೆಯ ದಡದಲ್ಲಿರುವ ಕಂಡಲೂರಿನಲ್ಲಿ ಒಂದು ಕೋಟೆಯನ್ನು ಕಟ್ಟಿಸಿದನು. ಹೊನ್ನೆಯಕಂಬಳಿಯ ರಾಜ್ಯದಲ್ಲಿರುವ ಈ ಕಂಡಲೂರು ಕೋಟೆಯನ್ನು ಪೋರ್ತುಗೀಸರು ಕಂಬೊಳಿಯುಮ್‌ಕೋಟೆ ಎಂದು ಕರೆಯುತ್ತಿದ್ದರು. ಕ್ರಿ. ಶ. 1652ರಲ್ಲಿಯೂ 1653ರಲ್ಲಿಯೂ ಪೋರ್ತುಗೀಸರು ಈ ಕೋಟೆಯನ್ನು ಹಿಡಿದಾಗ ಈ ಕಂಬಳಿ ಅರಸನು ದೊಡ್ಡ ಸೈನ್ಯದೊಡನೆ ಅವರ ಸಂಗಡ ಯುದ್ಧಮಾಡಿ ಶಿವಪ್ಪನಾಯಕನಿಗೆ ಬಹಳ ಸಹಾಯವಮಾಡಿದನು.

## 2. ಬಿನ್ನಾಣವಂಶದ ಅರಸರು.

ಈ ವಂಶದ ಅರಸರು (1) ಪಡುವರ್ಮಾನಾಡು, (2) ಮೂಡುವರ್ಮಾನಾಡು, (3) ಕಲ್ಬಟ್ಟು, (4) ಕರಂಜೆ, (5) ಮಾರೂರು,

(6) ಪುಚ್ಚಮೊಗರು, (7) ಹೊಸಬೆಟ್ಟು, (8) ಪ್ರಾಂತ್ಯ, (9) ಮರ್ಪಾಡಿಯ ಒಂದಂಶ, (10) ಕರ್ಪೆ (11) ತೊಡಾರ ಇಷ್ಟು ಗ್ರಾಮಗಳನ್ನು ಆಳಿಕೊಂಡಿದ್ದನು. ಫಲಗುಣೀ ನದಿಯ ಉಪನದಿಯಾದ ಹೊಸಂಗಡಿ ಹೊಳೆಯ ದಡದಲ್ಲಿರುವ ಹೊಸಂಗಡಿಯು ಇವರ ರಾಜಧಾನಿಯಾಗಿತ್ತು. ಅನಂತರ ವೇಣೂರು ಅಜಿಲರಿಗೂ ಇವರಿಗೂ ಯುದ್ಧವಾಗಿ ಬಿನ್ನಾಣ ಅರಸನು ಸೋತುಹೋದ್ದರಿಂದ ನದಿಯ ಮತ್ತೊಂದು ದಡದಲ್ಲಿರುವ ಸೊಪ್ಪಿನಂಗಡಿಯಲ್ಲಿ ಅರಮನೆಯನ್ನು ಕಟ್ಟಿಸಿದರು. ಈಗಲೂ ಈ ಅರಮನೆಯು ಇದೆ. ಇವರಿಗೆ ಈ ಅರಮನೆ ಅಲ್ಲದೆ ಕರಿಂಜಗ್ರಾಮದಲ್ಲಿ ಒಂದು, ಹೊಸಬೆಟ್ಟು ಗ್ರಾಮದಲ್ಲಿ ಒಂದು, ಮಾರ್ನಾಡು ಗ್ರಾಮದಲ್ಲಿ ಒಂದು ಹೀಗೆ ಮೂರು ಅರಮನೆಗಳಿದ್ದವು. ಇವರ ರಾಜ್ಯದಲ್ಲಿ ಲಾಡಿಯ ಬಲ್ಲಾಳ ಎಂಬೊಬ್ಬ ಬಲ್ಲಾಳನು ಮಾತ್ರವೇ ಇದ್ದನು. ಕರಿಂಜ, ಮಾರೂರು, ಹೊಸಬೆಟ್ಟು, ತೊಡಾರ, ಪುಚ್ಚಮೊಗರು, ಕರ್ಪೆ, ಕಲ್ಬೆಟ್ಟು, ಮಾರ್ನಾಡು ಗುತ್ತುಗಳು ಇವೆ. ಇವರಲ್ಲಿ ಪಟ್ಟದಹೆಸರುಗಳು:—(1) ಭೋಜಪ್ಪರಸು ಬಿನ್ನಾಣ ಮತ್ತು (2) ಪಾಂಡ್ಯಪ್ಪರಸ ಬಿನ್ನಾಣ. ಸೊಪ್ಪಿನಂಗಡಿ ಅರಮನೆಯ ಪೂರ್ವಕ್ಕಿರುವ ಗೋಪಾಲಕೃಷ್ಣ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಪಾರಿಶ್ವನಾಥ ಬಸದಿಯು ಅರಮನೆಯ ಉತ್ತರದಿಕ್ಕಿಗೆ ಎತ್ತರವಾದ ಸ್ಥಳದಲ್ಲಿದೆ. ಅರಮನೆಯ ಉತ್ತರದಿಕ್ಕಿಗೆ ಗುಡ್ಡದ ಮೇಲಿರುವ ಕೋಟೆಯಲ್ಲಿ ಈಗ ಕಾಡು ಬೆಳೆದಿದೆ.

## 3. ಪಣಪಿಲ ಕೊನ್ನಾರ ಅರಸರು.

ಈ ಸೀಮೆಯು ಬಿನ್ನಾಣರ ಸೀಮೆಗೂ ಅಜಿಲರ ಸೀಮೆಗೂ ಮಧ್ಯದಲ್ಲಿದೆ. ಈಗಿನ ಕಾರ್ಕಳ ತಾಲೂಕಿಗೆ ಸೇರಿದ (1) ನೆಲ್ಲಿಕಾರು, (2) ಪಣಪಿಲ, (3) ದರೆಗುಡ್ಡೆ, (4) ಕೆಲ್ಲಪುತ್ತಿಗೆ, (5) ಪಣಪಿಲು, (6) ಮೂಡುಕೊಣಜೆ, (7) ಪಡುಕೊಣಜೆ, (8) ಮಾಂಟ್ರಾಡಿ, (9) ಶಿರ್ತಾಡಿ ಗ್ರಾಮಗಳು ಇವರ ಕೈಕೆಳಗೆ

ಇದ್ದವು. ಈ ವಂಶದವರ ಅರಮನೆಯು ಪಣಪಿಲದಲ್ಲಿದೆ. ಈ ಸೀಮೆಯು ಮೊದಲು ಸ್ವತಂತ್ರವಾಗಿದ್ದು ಅನಂತರ ಕಾರ್ಕಳ ಭೈರವ ಅರಸರ ಅಧೀನವಾಯಿತು. ಈ ಸೀಮೆಯಲ್ಲಿ ಕೆಲ್ಲಪುತ್ತಿಗೆಯಲ್ಲಿ ಅನಂತನಾಥ ಬಸದಿಯೂ ನೆಲ್ಲಿಕಾರಿನಲ್ಲಿ ಅನಂತನಾಥ ಬಸದಿಯೂ ಹೀಗೆ 2 ಬಸದಿಗಳು ಇವೆ.

## 4. ಎಲಿಯ ಐನಾಡು ಅರಸರು.

ಈ ವಂಶದವರು ಬಲ್ಲಾಳರಲ್ಲ. ಕೊನ್ನಾರು, ಬಿನ್ನಾಣರು ಇವರ ಹಾಗೆಯೇ ಸಣ್ಣ ಅರಸರು. ಇವರು (1) ಕುಕ್ಕಿಪಾಡಿ, (2) ಕಣಿಯೂರು, (3) ಸಂಗಬೆಟ್ಟು, (4) ಎಲಿಯ ನಡುಗೋಡು, (5) ಆರಂಬೊಡಿ ಎಂಬ ಐದು ನಾಡುಗಳನ್ನು ಆಳುತ್ತಿದ್ದರು. ಅರಮನೆಯು ಎಲಿಯದಲ್ಲಿದೆ. ಎಲಿಯ ನಡುಗೋಡಿನ ಪೂಂಜದುರ್ಗಪರಮೇಶ್ವರಿ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಬಸದಿಯು ಅಲ್ಲಿಯೇ ನಲ್ಲೂರಂಗಡಿಯಲ್ಲಿದೆ. ಈ ವಂಶವು ಈಗಲೂ ಇದೆ.

# 32ನೇ ಅಧ್ಯಾಯ.

## ವಿಟ್ಲದ ಅರಸರು.

ವಿಟ್ಲದ ಅರಸರ ವಂಶವು ವಿಟ್ಲದಲ್ಲಿ ಯಾವ ಸಮಯದಲ್ಲಿ ಆಳತೊಡಗಿತೆಂದು ಕಂಡಿತವಾಗಿ ಹೇಳುವದಕ್ಕೆ ಯಾವ ಆಧಾರವೂ ಕಂಡುಬರುವದಿಲ್ಲ. ಈಗ ವಿಟ್ಲ ಅರಮನೆಯಲ್ಲಿರುವ ವಿಟ್ಲ ಪಂಚಲಿಂಗೇಶ್ವರ ದೇವಸ್ಥಾನದ ಧ್ವಜಸ್ತಂಬದ ಮೇಲೆ ಇದ್ದ ತಾಮ್ರದ "ಒಂದು ತಗಡಿನ ಮೇಲೆ ಶ್ರೀ ಶಾಲಿವಾಹನ ಶಕ ವರುಷ 1358ನೇ (ಕ್ರಿ. ಶ. 1436) ರಾಕ್ಷಸ ಸಂ|ದ ವಿೂನಮಾಸ ದಿನ ೧೫ರಲ್ಲು ಭೂಯಿಷ್ಮಕಾಪುರ (ವಿಠಲ)ದ ಶ್ರೀ ಪಂಚಲಿಂಗ ದೇವರಿಗೆ ಕುಂಞಶೇಖರಾದ ಡೊಂಬಹೆಗಡೆಯರ ಮಗ ಐದ್ಯಸ್ವಾಮಿಯು ಶ್ರೀಅೃಯ ಮುಂಡಿ

ಶಿದ್ದಿಶೇಖರು ಕಿಂಞಣ್ಣಾಕಾವರಾದ ಡೊಂಬಹೆಗಡೆಯರ ಅಳಿಯ ಮಾಣಿಮ್ಯೆದನ ವ್ಯಾಧಿಪರಿಹಾರಾರ್ಥವಾಗಿ ಮಾಡಿಸಿದ ಸುವರ್ಣ ಕಲಶಕ್ಕೆ ಮಂಗಲಂ" ಎಂದು ಇದೆ. ಈ ಶಿದ್ದಿಶೇಖನು ಎಷ್ಟು ವರುಷ ಆಳಿದನೆಂದು ತಿಳಿಯುವದಿಲ್ಲ. ವಿಟ್ಲ ರಾಜ್ಯದ ಕಾಡುಮಠದ ವೀರಶೈವರಾದ ರಾಮಯ್ಯಶೆಟ್ರಲ್ಲಿರುವ ಶಾ. ಶ. 1641ನೇ (ಕ್ರಿ. ಶ. 1719)ನೆಯ ಶಾಸನದಲ್ಲಿ ವಿಟ್ಲದ ಡೊಂಬಹೆಗಡೆಯು ಇಕ್ಕೇರಿ ಆಸ್ಥಾನಕ್ಕೆ ಕೊಡತಕ್ಕ ಕಪ್ಪವನ್ನು ಕೊಡದೆ ಇದ್ದುದಕ್ಕಾಗಿ ಆ ಹೆಗಡೆಯನ್ನು ಸೆರೆಹಿಡಿದು ನಗರಕ್ಕೆ ಕೊಂಡುಹೋದಾಗ ನಗರ ಸಂಸ್ಥಾನದಲ್ಲಿ ಪ್ರಧಾನಿಯಾಗಿದ್ದ ಸಂಗಪ್ಪ ಶೆಟ್ಟಿಯ ಮಗ ನಿರ್ವಾಣ ಶೆಟ್ಟಿಯು ಆ ಹಣಕ್ಕೆ ಜಾಮೀನು ನಿಂತದ್ದಕ್ಕಾಗಿ ಅರಸನಾದ ನರಸಿಂಹರಸ ಡೊಂಬಹೆಗಡೆಯು ಅದೇ ಮೋಟಿಗೆ ನಿರ್ವಾಣ ಶೆಟ್ಟಿಗೆ ಕೊಲ್ನಾಡು ಮತ್ತು ವಿಟ್ಲ ಗ್ರಾಮಗಳಲ್ಲಿ ಚಂದಪ್ಪಾಡಿ, ಕಾಡುಮಠ, ನರ್ಕಳ ಈ ಮೂರು ಕಡೆ ಉಂಬಳಿ ಬಿಟ್ಟನೆಂದು ಕಾಣುತ್ತದೆ. ಆ ಆಸ್ತಿಯನ್ನು ಈಗಲೂ ಕಾಡುಮಠದವರು ಅನುಭವಿಸಿಕೊಂಡು ಬರುತ್ತಾರೆ. ಈ ಶಾಸನದಿಂದ ಕ್ರಿ. ಶ. 1719ರಲ್ಲಿ ನರಸಿಂಹ ಅರಸನಾದ ಡೊಂಬಹೆಗಡೆಯು ಆಳುತ್ತಿದ್ದನೆಂದು ಕಾಣುತ್ತದೆ.

ಶಾ. ಶ. 1652 ಕ್ರೋಧಿ ಸಂ|ದ ಮಾಘ ಶು. ೭ಯು ಚಂದ್ರವಾರದಿನ (ಕ್ರಿ. ಶ. 1730) ಉಡುಪಿಯ ವಿದ್ಯಾಧಿರಾಜ ತೀರ್ಥ ಶ್ರೀಪಾದಂಗಳ ಕರಕಮಲ ಸಂಜಾತರಾದ ವಿದ್ಯಾರಾಜ ಶ್ರೀ ಪಾದಂಗಳವರು ವಿಟ್ಲಕ್ಕೆ ಬಂದಾಗ ಅವರಿಗೆ ಎಲ್ಲಾ ತರದ ಸತ್ಕಾರಮಾಡಿ ಆ ಗುರುಗಳು ಪೂಜಿಸುವ ನರಸಿಂಹ ದೇವರಿಗೆ ಉಂಬಳಿಬಿಟ್ಟ ಒಂದು ಶಾಸನದಲ್ಲಿ ಹೀಗೆ ಹೇಳಿಯದೆ:—ಶ್ರೀಮತ್ ಪಂಚಲಿಂಗೇಶ್ವರ ಪಾರ್ವತಿವಿನಾಯಕ ದೇವರ ಭಕ್ತಿಯುಕ್ತರಾದ ಚೌಟರಪಕ್ಷ ದೋರ್ದಂಡ ವಿಡಕಾಯ ಪ್ರತಾಪ ಹನುಧ್ವಜಾಂಕಿತ ಶೈವ ವೈಷ್ಣವ ಸಾಧಾರಣ ದೇವಬ್ರಾಹ್ಮಣ ಭಕ್ತಿಯುಕ್ತರಾದ ಪಾರ್ಥಂಪಾಡಿ ಸಿಂಹಾಸನಸ್ಥರಾದ ಸಾಲೆ ಬಳಿಯ ವಿಠಲದ ದೇವರಸರ ಪೌತ್ರರಾದ ರಂಗನಾಥರಸರ ಪುತ್ರರಾದ ನರಸಿಂಹ ಅರಸರ ಅಳಿಯರಾದ ನರಸಿಂಹ ಶ್ರೀ ಕೃಷ್ಣಪ್ಪರಸರ ಅನುಜರಾದ

ನರಸಿಂಹರಸರಾದ ಡೊಂಬಹೆಗಡೆರು ಬರಸಿಕೊಟ್ಟ ಭೂಸ್ವಾಸ್ತಿ ದಾನಪಟ್ಟಿ. ಈ ಶಾಸನದಿಂದ ಕ್ರಿ. ಶ. 1730ರಲ್ಲಿ ನರಸಿಂಹರಸನಾದ ಡೊಂಬ ಹೆಗಡೆಯು ಆಳುತ್ತಿದ್ದನೆಂದೂ, ಈ ಅರಸರ ಕುಟುಂಬಕ್ಕೆ "ಸಾಲೆ" ಬಳಿ (ಗೋತ್ರ)ಎಂದೂ ಸಿಂಹಾಸನಕ್ಕೆ "ಪಾರ್ಥಂಪಾಡಿ" ಸಿಂಹಾಸನ ವೆಂದೂ, ಇವರಿಗೆ ಹನುಮದ್ಧ್ವಜವೆಂದೂ ಹೇಳಬಹುದು. ಅದಲ್ಲದೆ ಬೇರೆ ಬೇರೆ ಅರಸರ ಹೆಸರುಗಳನ್ನೂ ತಿಳಕೊಳ್ಳಬಹುದು. ಇವುಗಳಲ್ಲಿ ನರಸಿಂಹರಸ ಡೊಂಬಹೆಗಡೆ ಎಂಬದು ಪಟ್ಟದ ಹೆಸರು. ಹುಟ್ಟು ಹೆಸರುಗಳು ಬೇರೆ ಇರಬಹುದು. ಇವರ ಪಟ್ಟದ ಚಾವಡಿಗೆ "ಪಾರ್ಥಂ ಪಾಡಿ ಚಾವಡಿ" ಎಂದು ಹೆಸರು.

ಮೇಲಿನ ಶಾಸನಗಳಿಂದ ವಿಜಯನಗರದಲ್ಲಿ ಕ್ರಿ. ಶ. 1421—1451ರ ವರೆಗೆ ಆಳಿದ 2ನೇ ದೇವರಾಯನ ಕಾಲದಲ್ಲಿ ವಿಟ್ಲದ ರಾಜ್ಯಭಾರವು ಉನ್ನತ ಸ್ಥಿತಿಯಲ್ಲಿತ್ತೆಂದೂ ಇಕ್ಕೇರಿ ಅರಸರ ಕಾಲದಲ್ಲಿ ಇವರು ಕಷ್ಟದಲ್ಲಿದ್ದರೆಂದೂ ಹೇಳಬಹುದು.

ಕ್ರಿ. ಶ. 1768ರಲ್ಲಿ ವಿಟ್ಲದ ಹೆಗಡೆಯು ಇಂಗ್ಲೀಷರ ಕಡೆ ಸೇರಿದನೆಂದು ಹೈದರಲ್ಲಿಯು ಇವನನ್ನು ವಿಟ್ಲದಿಂದ ಓಡಿಸಿದನು. ಇಂಗ್ಲೀಷರು ಈ ಅರಸನ ಕುಟುಂಬವನ್ನು ತಲಚೇರಿಯಲ್ಲಿಟ್ಟು ತಿಂಗ ಳಿಗೆ, ರೂ. 100 ಪೆನಶನು ಕೊಡುತ್ತಿದ್ದರೆಂದು ಮಲಬಾರು 'ಮೆನ್ಯು ವೇಲಿ'ನ 2ನೇ ಸಂಚಿಕೆಯಲ್ಲಿ ಕಾಣುತ್ತದೆ. *ಈ ಹೆಗಡೆಯು ಇಂಗ್ಲೀಷ ರಿಗೆ ಸಹಾಯಮಾಡುತ್ತೇನೆಂದು ಆಗಾಗ್ಗೆ ವಿಟ್ಲಕ್ಕೆ ಬಂದು ಸುಲಿಗೆ ಮಾಡುತ್ತಿದ್ದನು. ಈ ಅರಸನ ಹೆಸರು ಅಚ್ಯುತ ಹೆಗಡೆ. ಹೈದರನ ನಂತರ ಆಳಿದ ಟೀಪುವು ಈ ಹೆಗಡೆಯು ತಲಚೇರಿಯಿಂದ ವಿಟ್ಲಕ್ಕೆ ಬಂದಾಗ ಅವನನ್ನು ಹಿಡಿದು ಭಾದ್ರಪದ ಶು| ೪ಯ ದಿವಸ ಅವನ ತಲೆಯನ್ನು ಕಡಿಸಿದನು. ಕುಟುಂಬದವರು ಓಡಿಹೋಗಿ ಎಂಬುರ್ ಅರ ಮನೆಯಲ್ಲಿ ನಿಂತರು. ವಿಟ್ಲದ ಅರಮನೆಯನ್ನು ಟೀಪುವು ಸುಟ್ಟು ಹಾಕಿದನು.

---

*(ಕರಾರಿನ ಯಥಾನಕಲು ಪ್ರತ್ಯೇಕ ಕೊಟ್ಟಿದೆ).

ಕ್ರಿ. ಶ 1799ರಲ್ಲಿ ಶ್ರೀರಂಗಪಟ್ಟಣದ ಯುದ್ಧದ ಸಮಯದಲ್ಲಿ ವಿಟ್ಲ ದೊಡ್ಡಮ್ಮ ಹೆಗ್ಗಡ್ತಿಯ ಅಣ್ಣ ರವಿವರ್ಮ ನರಸಿಂಹರಸ ಡೊಂಬ ಹೆಗಡೆಯು ವಿಟ್ಲಕ್ಕೆ ಬಂದು ತನ್ನ ರಾಜ್ಯವನ್ನು ಸ್ವಾಧೀನಪಡಿಸಿ ಕೊಂಡು ಅನಂತರ ಮಂಜೇಶ್ವರಕ್ಕೆ ಹೋಗಿ ಅಲ್ಲಿಯ ಮದನಂತೇಶ್ವರ ದೇವಸ್ಥಾನವನ್ನು ಸುಲಿಗೆಮಾಡಿ, ಅಲ್ಲಿಯ ದೊಡ್ಡ ರಥವನ್ನು ಕಳಚಿ ಅದರ ತುಂಡುಗಳನ್ನೂ, ಬಂಡಿಯ ಮೇಲಿಡುವ ಗರುಡ, ಹನು ಮಂತರ ಎರಡು ಮರದ ಪ್ರತಿಮೆಗಳನ್ನೂ, ಸುಬ್ರಹ್ಮಣ್ಯ ದೇವರು ಕೂತುಕೊಳ್ಳುವ ಮರದ ಮಯೂರಾಸನವನ್ನೂ ವಿಟ್ಲಕ್ಕೆ ಕೊಂಡು ಹೋದನು. ಅವುಗಳಲ್ಲಿ. ಗರುಡ ಹನುಮಂತ ಈ ಎರಡು ಪ್ರತಿಮೆ ಗಳು ವಿಟ್ಲ ಪಂಚಲಿಂಗೇಶ್ವರ ದೇವಸ್ಥಾನದ ಹೊರಗಿನ ಚಾವಡಿಯ ಹೆಬ್ಬಾಗಲಿನ ಎರಡೂ ಕಡೆಗಳಲ್ಲಿ ಈಗಲೂ ಇವೆ. ಈಗ ಅವುಗಳ ತಲೆಯ ಮೇಲೆ ಎರಡು ಹಣತೆಗಳನ್ನು ಇಟ್ಟು ದೀಪ ಉರಿಸುತ್ತಾರೆ. ರಥದ ತುಂಡುಗಳಿಂದ ವಿಟ್ಲದ ದೇವಸ್ಥಾನದ ರಥ ಕಟ್ಟಿಸಿದರೆಂದು ಹೇಳುತ್ತಾರೆ. ಮಯೂರಾಸನವು ಹಾಳಾಗಿ ಅದರ ತುಂಡುಗಳು ದೇವಸ್ಥಾನದ ಹೊರಸುತ್ತಿನಲ್ಲಿ ಅಲ್ಲಲ್ಲಿ ಕಾಣುತ್ತಿದ್ದವು.

ಅನಂತರ ರವಿವರ್ಮ ನರಸಿಂಹ ಡೊಂಬಹೆಗಡೆಯು ಇಂಗ್ಲೀಷರು ತನ್ನನ್ನು ರಾಜನಾಗಿ ಇಡುವರೋ ಇಲ್ಲವೋ ಎಂಬ ಸಂಶಯಹುಟ್ಟಿ ವಿಟ್ಲದಲ್ಲಿ 1799ರಲ್ಲಿ ದಂಗೆಯನ್ನು ಎಬ್ಬಿಸಿದನು. ಟೀಪುವು ಶ್ರೀರಂಗಪಟ್ಟ ಣದ ಯುದ್ಧದಲ್ಲಿ ಮಡಿದುಹೋದ ನಂತರ ಕನ್ನಡಜಿಲ್ಲೆಯು ಇಂಗ್ಲೀಷರ ಸ್ವಾಧೀನಕ್ಕೆ ಬಂತು. ಈ ಹೆಗಡೆಯು ಟೀಪುವಿನ ಸಂಗಡ ಯುದ್ಧ ದಲ್ಲಿ ಇಂಗ್ಲೀಷರಿಗೆ ಒಳ್ಳೇ ಸಹಾಯಮಾಡಿದ್ದನು. ಇದಕ್ಕಾಗಿ ಈ ಹೆಗಡೆಗೆ ರಾಜ್ಯವನ್ನು ಬಿಟ್ಟುಕೊಟ್ಟರೆ ಈ ಮೊದಲೇ ತಮ್ಮ ಹಕ್ಕನ್ನು ಕಳಕೊಂಡ ಅನೇಕ ಒಳಅರಸುಗಳು ತಮ್ಮ ರಾಜ್ಯಗಳನ್ನು ಬಿಟ್ಟು ಕೊಡಬೇಕೆಂದು ಕೇಳುವರೆಂದು ರಾಜ್ಯವನ್ನು ಬಿಟ್ಟುಕೊಡುವ ಆಲೋ ಚನೆಯನ್ನು ನಿಲ್ಲಿಸಿದರು. ಈ ಹೆಗಡೆಯು ದಂಗೆಯನ್ನು ಎಬ್ಬಿಸಿದ್ದನ್ನು

ನೋಡಿ ಈ ಸಮಯದಲ್ಲಿ ಜಿಲ್ಲೆಯ ಅಧಿಕಾರಿಯಾಗಿದ್ದ ಕೆಪ್ಟನ್ ಮನ್ರೋ, ಕರ್ನಲಹಾರ್ಟ ಎಂಬ ಸೇನಾಧಿಪತಿಯನ್ನು ವಿಟ್ಲಕ್ಕೆ ಕಳು ಹಿಸಿ ರವಿವರ್ಮ ನರಸಿಂಹ ಅರಸನನ್ನೂ ದೊಡ್ಡಮ್ಮ ಹೆಗಡ್ತಿಯನ್ನೂ ಈ ಕುಟುಂಬದ ಬೇರೆ ಜನರನ್ನೂ ಸೆರೆಹಿಡಿದು, ರಾಜ್ಯವನ್ನು ಸ್ವಾಧೀನ ಪಡಿಸಿಕೊಂಡು, ಅರಮನೆಯ ಖಾಸಗೀ ಆಸ್ತಿಯನ್ನು ಮಾತ್ರವೇ ಅವರಿಗೆ ಬಿಟ್ಟುಕೊಟ್ಟು, ಆ ಸಮಯದಲ್ಲಿ ವಿಟ್ಲಸೀಮೆಯಿಂದ ಸಿಕ್ಕು ತ್ತಿದ್ದ 30,000 ರೂಪಾಯಿ ತೀರ್ವೆಯಲ್ಲಿ ಐದನೇ ಒಂದಂಶ ಎಂದರೆ 6,000 ರೂಪಾಯಿ ಅವರಿಗೆ ಮಲ್ಲಿಖಾನೆಯಾಗಿ ಬಿಟ್ಟು ಕುಟುಂಬದವರೆಲ್ಲರನ್ನೂ 12 ವರುಷ ಪ್ರಾಯದ ದೊಡ್ಡಮ್ಮ ಹೆಗಡ್ತಿ ಯನ್ನೂ ತಲಚೇರಿಯಲ್ಲಿಯೂ ರವಿವರ್ಮ ನರಸಿಂಹ ಡೊಂಬಹೆಗಡೆಗೆ ತಿಂಗಳಿಗೆ 200 ರೂಪಾಯಿ ಪೆನ್ಶನ್ ಕೊಟ್ಟು ಪ್ರಿನ್ಸ ಎಡ್ವರ್ಡ ದ್ವೀಪದಲ್ಲಿಯೂ ನಿಲ್ಲಿಸಿದರು. ಸಾಯಲಿಕ್ಕೆ ಒಂದೆರಡು ವರುಷಗಳಿ ರುವಾಗ ಈ ಹೆಗಡೆಯನ್ನೂ ದೊಡ್ಡಮ್ಮ ಹೆಗಡ್ತಿಯನ್ನೂ ವಿಟ್ಲಕ್ಕೆ ತಂದುಬಿಟ್ಟರು. ಅನಂತರ ಈಗ ಇರುವ ಅರಮನೆಯನ್ನು ಕಟ್ಟಿ ಈಗಿನ ಅರಸರಾದ ರವಿವರ್ಮ ನರಸಿಂಹರಾಜರಿಗೆ ಪಟ್ಟವಾಯಿತು. ಈಗಿನ ಅರಮನೆಯನ್ನು ಕಟ್ಟಿ 40 ವರುಷಗಳಾದವಂತೆ.

ವಿಟ್ಲ ರಾಜ್ಯದ ಗ್ರಾಮಗಳು :—1. ವಿಟ್ಲ ಕಸಬಾ, 2. ಪಡ್ನೂರು, 3. ಮೂಡನ್ನೂರು, 4. ಬಾಯಾರು, 5. ಚಿಪ್ಪಾರು, 6. ಎರುಂಬು, 7. ಅಳಕೆ, 8. ಪೆರುವಾಯಿ, 9. ಮಾಣಿಲ, 10 ಪುಣಚಾ, 11. ಕೇಪು, 12. ಕನ್ಯಾನ, 13. ಕರೋಪಾಡಿ, 14. ಕುಡಾಲ ಮರ್ಕಳ, 15. ಸಾಲೆತೂರು, 16. ಕುಳ, 17. ವಕ್ಕೆತ್ತೂರು, 18. ಪೈವಳಿಕೆ, 19. ಕೊಲನಾಡು.

ಈ ಹೆಗಡೆಯರ ಕೈಕೆಳಗಿರುವ ದೇವಸ್ಥಾನಗಳು:—1. ವಿಟ್ಲ ಪಂಚಲಿಂಗೇಶ್ವರ (ಸೀಮೆ ದೇವಸ್ಥಾನ). 2. ಕೇಪು ಸುಬ್ರಾಯ

ಮತ್ತು ದುರ್ಗಾಪರಮೇಶ್ವರೀ ದೇವಸ್ಥಾನಗಳು. 3. ಮೂಡ್ನೂರು ವಿಷ್ಣುಮೂರ್ತಿ, 4. ಪುಣಚಾ ಮಹೇಶಮರ್ದಿನಿ. 5. ಮಾಣಿಲ ವಿಷ್ಣುಮೂರ್ತಿ. 6. ವಕ್ಕೆತ್ತೂರು ಉಮಾಮಹೇಶ್ವರ. 7. ಬಾಯಾರು, ಪಂಚಲಿಂಗೇಶ್ವರ. 8. ಚಿಪ್ಪಾರು ವಿಷ್ಣುಮೂರ್ತಿ 9. ಎಂಬುರ್ ಶಂಕರನಾರಾಯಣ ಮತ್ತು ವಿಷ್ಣುಮೂರ್ತಿ. 10. ಪಡ್ನೂರು (ಚಳಿಲ) ದುರ್ಗಾಪರಮೇಶ್ವರೀ. 11. ಕಡಂಬ ವಿಷ್ಣುಮೂರ್ತಿ. 12. ದೇಲಂತಬೆಟ್ಟು ವಿಷ್ಣುಮೂರ್ತಿ. ಇನ್ನು 4 ದೇವಸ್ಥಾನಗಳು ಇವೆ. ಇವರ ಕೈಕೆಳಗೆ 18 ದೇವಸ್ಥಾನ 18 ದೈವಸ್ಥಾನಗಳು ಇರುವವು.

ಮುಖ್ಯಪಟ್ಟಣ ವಿಟ್ಲ. ಅರಮನೆಗಳು 4 ಇದ್ದವು. ಎಲ್ಲವೂ ಹಾಳಾಗಿವೆ. (1) ವಿಟ್ಲದ ಅರಮನೆಯನ್ನು ಕ್ರಿ. ಶ. 1784ರಲ್ಲಿ ಟೀಪುವು ಸುಟ್ಟುಹಾಕಿದನು ಈಗಿನ ಅರಮನೆಗೆ ಹೋಗುವ ದಾರಿಯಲ್ಲಿ ಈ ಅರಮನೆಯ ಕುರುಹುಗಳು ಇವೆ. ಇದರ ಅಡಿಸ್ಥಳವೂ ಸುತ್ತಲೂ ಇದ್ದ ಕೋಟೆಯೂ ಕೂಡಿ ಸುಮಾರು 2 ಎಕ್ರೆ ವಿಸ್ತೀರ್ಣದ ಸ್ಥಳವಿದೆ. ಕೋಟೆಯ ಮಣ್ಣಿನ ಗೋಡೆಯು ಈಗಲೂ ಇದೆ. ಆಗ್ನೇಯ ಮತ್ತು ನೈರುತ್ಯ ದಿಕ್ಕಿನಲ್ಲಿ ಕೊತ್ತಳ (ಬತ್ತೇರಿ)ಗಳು ಇವೆ. ಅರಮನೆಯ ಶಿಲೆಯ ಹೆಬ್ಬಾಗಲು ಈಗಲೂ ಅಲ್ಲಿಯೇ ನಿಂತುಕೊಂಡಿದೆ. ಅರಮನೆಯ ಮಧ್ಯದಲ್ಲಿ ನಾಗರಬನವು ಬೆಳದದೆ. ಅದರ ಉತ್ತರ ದಿಕ್ಕಿನಲ್ಲಿ ಬಾಕಿಮಾರುಗದ್ದೆ ಇದೆ. ಈ ಗದ್ದೆಯಲ್ಲಿ ಅರಸರಲ್ಲಿ ಒಬ್ಬನು ತನ್ನ ಮಂತ್ರಿಯಾದ ನಿಡ್ಲೆ ಶಂಬು ಲಿಂಗಭಟ್ಟನಲ್ಲಿ ವೈಮನಸ್ಸು ಹುಟ್ಟಿದ ನಿಮಿತ್ಯ ಅವನನ್ನು ಹಿಡಿದು ಕುತ್ತಿಗೆ ಮಾತ್ರ ಬಿಟ್ಟು ಸಜೀವವಾಗಿ ಹುಣಿಟ್ಟಿದ್ದನಂತೆ. ಅನಂತರ ಅದೇ ಸ್ಥಳದಲ್ಲಿ ಒಂದು ಗುಡಿ ಕಟ್ಟಿಸಿ ಅರಮನೆಯಿಂದ ವರುಷಕ್ಕೊಂದು ನೇಮಕೊಡುತ್ತಾರೆ. (2) ಎರುಂಬು, (3) ಕನ್ಯಾನನಂದರಿಬೆಟ್ಟು, (4) ಚಿಪ್ಪಾರು ಈ ಮೂರು ಅರಮನೆಗಳೂ ಹಾಳಾಗಿವೆ. ಈಗಿನ ಅರಸರಿಗೆ ತಿಂಗಳಿಗೆ

ರೂ. 501—9—5 ಮಲ್ಲಿಖಾನೆ ಸಿಕ್ಕುತ್ತದೆ. ಈಗ ರಾಜ್ಯದ ಅಧಿಕಾರವು ಇಲ್ಲದಿದ್ದರೂ ಮೇಲೆ ಹೇಳಿದ 19 ಗ್ರಾಮಗಳ ಜನರು ಈಗಲೂ ಮಾನಮರ್ಯಾದೆಯನ್ನು ಇವರಿಗೆ ಕೊಡುತ್ತಾರೆ. ತನ್ನ ಸೀಮೆಯ ಜನರನ್ನು ವೃದ್ಧಿಪಡಿಸಲಿಕ್ಕೆ ಈಗಲೂ ಸಾಹಸಪಡುತ್ತಾರೆ. ಸೀಮೆಯ ಪಂಚಲಿಂಗೇಶ್ವರ ದೇವಸ್ಥಾನದಲ್ಲಿ ಯಾವದೊಂದು ಪಂಚ ಪರ್ವಕಾಲದಲ್ಲೂ ಇವರನ್ನು ಬಿರುದಾವಳಿ ಸಹಿತ ರಾಜ ವೈಭವದಿಂದ ಕರತರುವ ಪದ್ಧತಿ ಈಗಲೂ ಉಂಟು.

## 33ನೇ ಅಧ್ಯಾಯ.

## ಕುಂಬಳೆ ಅರಸರು.

ಈ ವಂಶದವರೂ ಕೊಚ್ಚಿರಾಜರ ಕುಟುಂಬದವರೂ ಒಂದೇ ವಂಶದವರಾಗಿರುತ್ತಾರೆ. ಇವರು ಉಪ್ಪಳಹೊಳೆಯ ದಕ್ಷಿಣದಿಂದ ಚಂದ್ರ ಗಿರಿಹೊಳೆಯ ಉತ್ತರಕ್ಕಿರುವ ಸೀಮೆಯಲ್ಲಿ ಮಂಜೇಶ್ವರ ಮಾಗಣೆಯ ಒಂದು ಭಾಗವನ್ನೂ, ಕುಂಬಳೆಮಾಗಣೆ, ಅಡೂರುಮಾಗಣೆ, ಪೆರ್ಡಾಲ ಮಾಗಣೆ, ಅಂಗಡಿಮೊಗರುಮಾಗಣೆ, ಕಾಸರಗೋಡುಮಾಗಣೆ, ಮೊಗ್ರಾಲ್ ಮಾಗಣೆಗಳನ್ನೂ ಮಂಗಳೂರು ತಾಲೂಕಿನ ವಾಮಂಜೂರುಮಾಗಣೆ ಯನ್ನೂ ಆಳಿಕೊಂಡಿದ್ದರು. ಆಲೂಪಅರಸರು ವಾಮಂಜೂರುಮಾಗಣೆ ಯನ್ನು ಈ ರಾಜಕುಟುಂಬಕ್ಕೆ ಬಿಟ್ಟುಕೊಟ್ಟಿದ್ದರು. ಆಗ ಇವರು ಆ ಮಾಗಣೆಯ ಉಳ್ಳಾಬೆಟ್ಟು ಗ್ರಾಮದಲ್ಲಿ ಒಂದು ಅರಮನೆಯನ್ನೂ ದೇವ ಸ್ಥಾನವನ್ನೂ ಕಟ್ಟಿಸಿದ್ದರು. ಬಂಗರಾಜನಿಗೂ, ಕುಂಬಳೆರಾಜನಿಗೂ ಯುದ್ಧವಾದಾಗ ಚೌಟರಾಜನು ಕುಂಬಳೆರಾಜನಿಗೆ ಸಹಾಯಮಾಡಿದ್ದ ಕ್ಕಾಗಿ ವಾಮಂಜೂರು ಸೀಮೆಯನ್ನು ಚೌಟರಾಜನಿಗೆ ಬಿಟ್ಟುಕೊಟ್ಟನು. ಹಾಳುಬಿದ್ದಿರುವ ಅರಮನೆಯ ಅಡಿಸ್ಥಳವನ್ನು ಉಳ್ಳಾಬೆಟ್ಟು

ಗ್ರಾಮದಲ್ಲಿ ಈಗಲೂ ನೋಡಬಹುದು. ದೇವಸ್ಥಾನದಲ್ಲಿ ಪ್ರತಿಷ್ಠಿಸಿದ ಮಯಿಲಾರ ಲಿಂಗವು ಈಗ ಉಳ್ಳಾಬೆಟ್ಟಿನಲ್ಲಿರುವ ಅವರ ಪುರೋಹಿತರ ಮನೆಯಲ್ಲಿದೆ. ವೇಲಾಪುರವೆಂಬ ಐಲದೇವಸ್ಥಾನದ ಮಹಾತ್ಮೆಯಲ್ಲಿಯೂ ಮಂಗಳೂರು ಶರಭೇಶ್ವರ ಗಣಪತಿ ದೇವಸ್ಥಾನದ ಮಹಾತ್ಮೆಯಲ್ಲಿಯೂ ಈ ವಂಶದವರ ಮೂಲಪುರುಷನ ವಿಷಯ ಈ ಕೆಳಗೆ ಬರೆದ ರೀತಿಯಲ್ಲಿದೆ.

ಹಂಗಳದ ಕದಂಬವಂಶದ ರಾಜನಾದ ಕಾಮದೇವನು (ಇನ್ನೊಂದರ ಪ್ರಕಾರ ಮಯೂರವರ್ಮನು) ತನ್ನ ರಾಜ್ಯವನ್ನು ಸಂಚರಿಸಲಿಕ್ಕೆ ಬಂದು ಕನ್ನಡಜಿಲ್ಲೆಯ ಒಳಅರಸುಗಳಿಂದ ಕಪ್ಪಕಾಣಿಕೆಗಳನ್ನು ಪಡೆದು ಇಲ್ಲಿರುವ ಪುಣ್ಯಕ್ಷೇತ್ರಗಳನ್ನು ನೋಡಿ ಅನಂತರ ಕನ್ಯಾಕುಮಾರಿಯ ವರೆಗೆ ಯಾತ್ರಾರ್ಥಿಯಾಗಿ ಹೋದನು. ಕನ್ಯಾಕುಮಾರಿ ಮುಂತಾದ ಯಾತ್ರಾಸ್ಥಳಗಳನ್ನು ಸಂಚರಿಸಿ ತಿರಿಗಿ ಕನ್ನಡಜಿಲ್ಲೆಗೆ ಬಂದನು. ಒಂದು ದಿವಸ ಕುಂಬಳೆಹೊಳೆಯಲ್ಲಿ ಸ್ನಾನಮಾಡುವಾಗ ಸುಶೀಲೆ ಎಂಬ ಅವನ ಮಗಳು ಗಂಧರ್ವಪೀಡೆಯಿಂದ ಮೂರ್ಛಿತಳಾಗಿ ಬಿದ್ದಳು. ಆಗ ಅದೇ ನದಿಯಲ್ಲಿ ಸ್ನಾನಕ್ಕಾಗಿ ಬಂದಿರುವ ಒಬ್ಬ ಬ್ರಾಹ್ಮಣನು ಆ ಹುಡುಗಿಯನ್ನು ತನ್ನ ಮಂತ್ರಶಕ್ತಿಯಿಂದ ಸೌಖ್ಯಪಡಿಸಿದನು. ಆಗ ಅವಳ ತಂದೆಯಾದ ಕಾಮದೇವನು (ಮಯೂರವರ್ಮನು) ಸುಶೀಲೆಯನ್ನು ಆ ಬ್ರಾಹ್ಮಣನಿಗೆ ಮದುವೆಮಾಡಿಕೊಟ್ಟು ಅವಳಿಗೆ ರಾಜ್ಯವನ್ನು ಬಿಟ್ಟುಕೊಟ್ಟನು. ಅದರ ಗಡಿಗಳು ಯಾವವಂದರೆ:—ಉತ್ತರದಲ್ಲಿ ನೇತ್ರಾವತೀನದಿ, ಪೂರ್ವದಲ್ಲಿ ಪಶ್ಚಿಮಗಟ್ಟಗಳು, ದಕ್ಷಿಣದಲ್ಲಿ ಪಯಸ್ವಿನಿನದಿ, ಪಶ್ಚಿಮದಲ್ಲಿ ಸಮುದ್ರ. ಈ ಸುಶೀಲೆಗೋಸ್ಕರ ಕುಂಬಳೆ ನದಿಯ ಎಡ ದಡದಲ್ಲಿ ಕೋಟೆಕಟ್ಟಿಸಿ, ಕೋಟೆಯ ಮಧ್ಯದಲ್ಲಿ ಅರಮನೆಯನ್ನು ಕಟ್ಟಿಸಿಕೊಟ್ಟನು. ಕಾಮದೇವನು ಹಂಗಳಕ್ಕೆ ರಾಣಿ ಪರಿವಾರ ಸಹಿತ ಹೋದನು. ಅರಮನೆ ಮತ್ತು ಕೋಟೆ ಕಟ್ಟಿದ ಸ್ಥಳಕ್ಕೆ ಈಗ ಕೋಟೆಕಾರು ಎಂದು ಹೆಸರಿದೆ. ಇದು ಕುಂಬಳೆ

ಯಿಂದ ಸುಮಾರು 1½ ಮೈಲು ಪೂರ್ವಕ್ಕಿದೆ. ಅರಮನೆ ಇದ್ದ ಸ್ಥಳವನ್ನು ಈಗಲೂ ನೋಡಬಹುದು. ಕಂಚಿಕಟ್ಟೆ ಎಂದು ಸ್ಥಳದ ಹೆಸರು. ಸುಶೀಲೆಯು ಸ್ವಲ್ಪ ಸಮಯದ ಬಳಿಕ ಗರ್ಭಧರಿಸಿ ಒಂದು ಗಂಡು ಮಗುವನ್ನು ಹೆತ್ತಳು. ಅವಳು ಆ ಮಗುವಿಗೆ ತನ್ನ ತಂದೆಯ ಕುಟುಂಬದ ಕದಂಬ ಅರಸರ ಹೆಸರಲ್ಲಿ ಒಂದಾದ ಜಯ ಸಿಂಹನೆಂಬ ಹೆಸರನ್ನು ಇಟ್ಟಳು.

ಜಯಸಿಂಹನು ದಿನೇ ದಿನೇ ಪ್ರವರ್ಧಮಾನನಾಗುತ್ತಾ ಬಂದು ಪ್ರಾಯಭರಿತನಾದ ಮೇಲೆ ಪಟ್ಟವಾಗಿ ಸುಖದಿಂದ ರಾಜ್ಯವಾಳಿಕೊಂಡು ಬರುತ್ತಿದ್ದನು. ಆ ಸಮಯದಲ್ಲಿ ಮಧುರೆ ಪಾಂಡ್ಯದೇಶದ ಅರಸನು ತಿರುವಾಂಕೂರು ಕೊಚ್ಚಿ ಮಲಯಾಳ ರಾಜ್ಯಗಳನ್ನು ಜಯಿಸಿ ಪಯ ಸ್ವಾನಿ ನದಿಯ ತೀರಕ್ಕೆ ಬಂದು ತನ್ನ ಸೈನ್ಯವನ್ನು ಈಗ ಚಂದ್ರಗಿರಿ ಕೋಟೆ ಇರುವ ಮೈದಾನಿನಲ್ಲಿ ಇಳಿಸಿದನು. ಆಗ ಪಯಸ್ವಾನಿ ನದಿಯ ತೀರ ದಲ್ಲಿ ಕಾಯುತ್ತಿದ್ದ ಜಯಸಿಂಹನ ಸೈನಿಕರು ಓಡಿಬಂದು ಪಾಂಡ್ಯ ದೇಶದ ಅರಸನು ದಂಡೆತ್ತಿಬಂದುದನ್ನು ತಿಳಿಸಿದರು. ಜಯಸಿಂಹನು ಕೂಡಲೇ ದೊಡ್ಡ ಸೈನ್ಯವನ್ನು ಕೂಡಿಸಿಕೊಂಡು ಪಯಸ್ವಾನಿನದೀ ತೀರಕ್ಕೆ ಹೋಗಿ ಅಲ್ಲಿ ಇಬ್ಬರಿಗೂ ಘೋರವಾದ ಯುದ್ಧವು 10 ದಿವಸಗಳ ವರೆಗೆ ನಡೆಯಿತು. ಕಡೆಗೆ ಪಾಂಡ್ಯ ದೇಶದ ಅರಸನ ಸೇನಾ ಧಿಪತಿಯು ಸೋತುಹೋದನು. ಜಯಸಿಂಹನು ಅವನನ್ನು ಸೆರೆಹಿಡಿದು ಸೈನ್ಯಸಹಿತ ಕುಂಬಳೆಗೆ ತಂದು ಅವನನ್ನು ತನ್ನ ತಾಯಿಗೆ ಒಪ್ಪಿಸಿದನು. ಆಗ ತಾಯಿಯು ಮಗನಿಗೆ ಬುದ್ಧಿ ಹೇಳಿ ಪಾಂಡ್ಯರಾಜನ ಸೇನಾಧಿಪತಿ ಯನ್ನು ಬಂಧನದಿಂದ ಬಿಡಿಸಿ ಮರ್ಯಾದೆಪೂರ್ವಕವಾಗಿ ಹಿಂದಕ್ಕೆ ಕಳುಹಿಸಿಕೊಟ್ಟಳು.

ಸ್ವಲ್ಪ ಸಮಯದನಂತರ ಸುಬ್ರಹ್ಮಣ್ಯ ಪ್ರಾಂತ್ಯದ ಪ್ರಜೆಗಳು ಕುಂಬಳೆಗೆ ಬಂದು ಕಾಡುಮೃಗಗಳ ಹಾವಳಿಯು ಬಹಳ ವಿಶೇಷ ವಾಗಿರುವದರಿಂದ ಆ ಪ್ರಾಂತ್ಯದಲ್ಲಿ ನಿಲ್ಲುವದು ಅಸಾಧ್ಯವಾಗಿದೆಂದು

ಹೇಳಲು ಜಯಸಿಂಹನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಮೃಗ ಬೇಟೆಯಾಡಲಿಕ್ಕೆ ಕೂಡಲೇ ಹೊರಟನು. ಆ ಕಾಡುಗಳಲ್ಲಿ ಮೃಗ ಗಳನ್ನು ಕೊಲ್ಲುವಾಗ ಅಲ್ಲಿ ತಪಸ್ಸುಮಾಡುತ್ತಿದ್ದ ಉದ್ದಾಲಕನೆಂಬ ಬ್ರಾಹ್ಮಣನಿಗೆ ಬಾಣವು ತಾಗಿ ಅವನು ಪ್ರಾಣಬಿಡುವ ಸಮಯದಲ್ಲಿ ಅವನ ಹೆಂಡತಿಯು ಬಂದು ಜಯಸಿಂಹನಿಗೆ ರಾಜಭ್ರಷ್ಟನಾಗೆಂದು ಶಾಪವನ್ನು ಕೊಟ್ಟು ಗಂಡನೊಡನೆ ಚಿತೆಯಲ್ಲಿ ಬಿದ್ದು ಮೃತಪಟ್ಟಳು. ಜಯಸಿಂಹನು ಸುಬ್ರಹ್ಮಣ್ಯದ ಹತ್ತರವಿರುವ ಧಾರಾನದೀ (ಕುಮಾರ ಧಾರಾನದಿಯು) ತೀರದಲ್ಲಿ ಅವರ ಉತ್ತರಕ್ರಿಯೆಗಳನ್ನು ಮಾಡಿ ಶಾಪ ನಿವಾರಣಾರ್ಥವಾಗಿ ಕೊಡಗು ಜಿಲ್ಲೆಯಲ್ಲಿ ಕಾವೇರಿನದಿಯ ತೀರದಲ್ಲಿ ರಾಮಸ್ವಾಮಿ ಕಣಿವೆಯಲ್ಲಿ ವಾಯುಪ್ರಸಾದ ಕ್ಷೇತ್ರವೆಂಬ ರಾಮನಾಥ ಪುರದಲ್ಲಿ ಒಂದು ವರುಷದ ವರೆಗೆ ತಪಸ್ಸುಮಾಡುತ್ತಾ ಕೂತನು. ಸೈನಿಕರೂ ಮಂತ್ರಿಗಳೂ ಹಿಂತಿರುಗಿ ಕುಂಬಳೆಗೆ ಬಂದರು.

ಜಯಸಿಂಹನು ತನ್ನ ರಾಜ್ಯದಲ್ಲಿ ಇಲ್ಲದಿರುವ ಸಮಯವನ್ನು ನೋಡಿ ಮಂಜುಳಾಪುರ (ಮಂಜೇಶ್ವರ)ದ ಆಗ್ನೇಯಕ್ಕೆ ಸುಮಾರು 3 ಮೈಲು ದೂರವಿರುವ ಪಟ್ಟದಮೊಗರು (ಪತ್ತಮೊಗರು) ಎಂಬಲ್ಲಿ ಆಳುತ್ತಿದ್ದ ಮೊಗರಾಖ್ಯನೆಂಬ ಬಾಕುಡ ಹೊಲೆಯರ ಅರಸನೂ, ಅವನ ಭಾವನೆಂಟನಾಗಿಯೂ ಮುಖ್ಯ ಸೇನಾಧಿಪತಿಯಾಗಿಯೂ ಆಗಿದ್ದ ಮಂಜೇಶ್ವರದ ಹತ್ತರವಿರುವ ಬಡಾಜೆಯಲ್ಲಿದ್ದ ಬಡಜನೂ, ಮಯೂರ ವರ್ಮನು ತಂದು ನಿಲ್ಲಿಸಿದ ಬ್ರಾಹ್ಮಣರನ್ನು ಪೀಡಿಸಲಾರಂಭಿಸಿದರು. ಆಗ ಬ್ರಾಹ್ಮಣರು ರಾಮನಾಥಪುರದಲ್ಲಿ ತಪಸ್ಸುಮಾಡುತ್ತಿದ್ದ ಜಯ ಸಿಂಹನಿದ್ದಲ್ಲಿಗೆ ಹೋಗಿ ಮೊರೆಯಿಟ್ಟರು. ಆಗ ಜಯಸಿಂಹನು ತಪಸ್ಸು ಮಾಡುವದನ್ನು ಬಿಟ್ಟು, ತನ್ನ ಪ್ರಜೆಗಳಾದ ಬ್ರಾಹ್ಮಣರನ್ನು ರಕ್ಷಣೆ ಮಾಡಬೇಕೆಂದು ಕೂಡಲೇ ಅಲ್ಲಿಂದ ಹೊರಟು ಕುಂಬಳೆಗೆ ಬಂದು ಮಂತ್ರಿಸೇನಾಧಿಪತಿ ಮುಂತಾದವರನ್ನು ಕೂಡಿಕೊಂಡು ಮಂಜೇಶ್ವರಕ್ಕೆ ಹೋಗಿ ಮೊಗರಾಖ್ಯನ ಭಾವನೆಂಟನಾದ ಬಡಜನನ್ನು ಸೋಲಿಸಿ ಅವನ

ರಾಜ್ಯವನ್ನು ಸೆಳಕೊಂಡನು. ಅನಂತರ ಪಟ್ಟದಮೊಗರಿಗೆ ಹೋಗಿ ಮೊಗರಾಖ್ಯನನ್ನು ಸೋಲಿಸಿ ಅವನ ರಾಜ್ಯವನ್ನೂ ಸ್ವಾಧೀನಪಡಿಸಿ ಕೊಂಡು, ತನ್ನ ತಮ್ಮನಿಗೆ ಪಟ್ಟಗಟ್ಟಿ ಉಪ್ಪಳದ ಹತ್ತರವಿರುವ ವಾಮಂ ಜೂರಿನಲ್ಲಿ ಅರಮನೆಯನ್ನು ಕಟ್ಟಿಸಿ ಅಲ್ಲಿ ಅವನನ್ನು ನಿಲ್ಲಿಸಿದನು.

ಅನಂತರ ಐಲ (ಉಪ್ಪಳದ ಹತ್ತರ ಕುರ್ಚಿಪಳ್ಳ) ಗ್ರಾಮದಲ್ಲಿ ಅಂಬಾವನದಲ್ಲಿ ಮಹಿಶಾಸುರಮರ್ದಿನಿ ಪ್ರತಿಮೆಯನ್ನು ಪ್ರತಿಷ್ಠಿಸಿ ಕುಂಬಳೆ ಉತ್ತಾರಬಿಟ್ಟು, ಅದರ ತಂತ್ರಿತ್ವದ ಕೆಲಸವನ್ನು ಅದೇ ಸಮಯದಲ್ಲಿ ಮಲಯಾಳದೇಶದಿಂದ ಬಂದಿದ್ದ ಚೇಟಕ (ಕೇಶವ) ಎಂಬ ಬ್ರಾಹ್ಮಣನು ಬಹಳ ಬುದ್ಧಿವಂತನೆಂದು ತಿಳಿದು ಅವನಿಗೆ ಕೊಟ್ಟನು. ತನ್ನ ರಾಜ್ಯದಲ್ಲಿರುವ ಎಲ್ಲಾ ದೇವಸ್ಥಾನಗಳ ತಂತ್ರಿತ್ವದ ಕೆಲಸವನ್ನು ಅದೇ ಬ್ರಾಹ್ಮಣನಿಗೆ ಕೊಟ್ಟು ಅವನಿಗೆ ಬಡಾಜೆಯಲ್ಲಿ ನಿಲ್ಲಿಸಿ, ಉಪ್ಪಳದಿಂದ ಉದ್ಯಾವರ ವರೆಗಿನ ಭೂಮಿಯನ್ನು ಉಂಬಳಿ ಯಾಗಿ ಬಿಟ್ಟು ಎಲ್ಲಾ ತರದ ಮಾನಮರ್ಯಾದೆಯನ್ನು ಕೊಟ್ಟನು.

ಕುಂಬಳೆ ಅರಸರಿಗೆ ಪಟ್ಟಕಟ್ಟುವ ಕೆಲಸವನ್ನು ಈ ತಂತ್ರಿಗಳ ಕುಟುಂಬದವರೇ ಮಾಡಬೇಕು. ಈ ಪಟ್ಟಾಭಿಷೇಕವು ಕುಂಬಳೆ ಗೋಪಾಲಕೃಷ್ಣ ದೇವಸ್ಥಾನದಲ್ಲಿಯೇ ಆಗಬೇಕು. ಆ ದಿವಸ ಅರಸರು ಉಪವಾಸವಿರಬೇಕು. ಪಟ್ಟವಾದ ಮೇಲೆ ಮದೂರು ದೇವ ಸ್ಥಾನಕ್ಕೆ ಹೋಗಿ ಅಲ್ಲಿ ಬ್ರಾಹ್ಮಣಸಂತರ್ಪಣೆಯಾಗಿ ಅನಂತರ ಅರಸನು ಊಟಮಾಡಬೇಕು. ಇವರ ಸೇನಾಧಿಪತಿಗಳು ಈಚಲಂಪಾಡಿ ಮತ್ತು ಬೊಂಬ್ರಾಣ ಗುತ್ತಿನವರು.

ಜಯಸಿಂಹನು ರಾಜ್ಯಭಾರಮಾಡಿಕೊಂಡಿರುವಾಗ ಮಧ್ವಾಚಾ ರ್ಯರು ದ್ವೈತಮತವನ್ನು ಬೋಧಿಸುತ್ತಿರುವಾಗ ಅವರ ಮತದ ವಿಷಯ ಸ್ವಲ್ಪ ಅನುಭವಪಡಿಯಬೇಕೆಂದು ವಿಷ್ಣುಮಂಗಲಕ್ಕೆ ಮಧ್ವಾ ಚಾರ್ಯರನ್ನು ಕರೆಯಿಸಿದನು. ಕಾವುಗೋಳಿಯ ಸುಬ್ರಹ್ಮಣ್ಯಾ

ಪಂಡಿತನ ಮಗನಾದ ತ್ರಿವಿಕ್ರಮಪಂಡಿತನು ಅದ್ವೈತಸಿದ್ಧಾಂತವನ್ನು ಓದಿಕೊಂಡು ಬಲುಸಮರ್ಥನಾಗಿದ್ದನು. ಈತನು ಮತಸಂಬಂಧವಾದ ವಾಗ್ವಾದಕ್ಕೆ ಮಧ್ವಾಚಾರ್ಯರು ಸಿಕ್ಕಿದರೆ ಸಾಕೆಂದು ಸಮಯ ಕಾಯುತ್ತಿದ್ದನು. ಇಂಥಾ ಸಮಯವು ದೊರೆತುದರಿಂದ ಇಬ್ಬರಿಗೂ 8 ದಿವಸಗಳ ವರೆಗೆ ಏಕರೀತಿಯಾಗಿ ವಾಗ್ವಾದವು ನಡೆದು ಕಡೆಗೆ ದ್ವೈತಸಿದ್ಧಾಂತವೇ ನ್ಯಾಯಯುಕ್ತವಾದುದೆಂದು ಜಯಸಿಂಹನು ತೀರ್ಮಾನಿಸಿದನು. ತ್ರಿವಿಕ್ರಮಪಂಡಿತನು ದ್ವೈತಮತವನ್ನು ಅವಲಂಬಿಸಿದನು. ಜಯಸಿಂಹನೂ ಆ ದ್ವೈತಮತವನ್ನು ಅವಲಂಬಿಸಿದನು. ಒಟ್ಟುಕೂಡಿ ವಾಗ್ವಾದ ನಡೆದ ಸ್ಥಳಕ್ಕೆ ಕೂಡಲು ಎಂದು ಹೆಸರಾಯಿತು.

ಜಯಸಿಂಹನು ಸಂಸ್ಕೃತಪಂಡಿತನಾಗಿ ಕಾವ್ಯಗಳನ್ನು ಬರೆದುದರಿಂದ ಅವನಿಗೆ ಕವಿಸಿಂಹನೆಂಬ ಹೆಸರು ಬಂತು. ಈಗಲೂ ಈ ಕುಟುಂಬದ ಅರಸರಿಗೆ ಸಂಸ್ಕೃತ ವಿದ್ಯೆಯು ಚನ್ನಾಗಿ ತಿಳಿದಿದೆ. ಈ ಅರಸನು ಬೇಳಗ್ರಾಮದಲ್ಲಿರುವ ಕುವಾರಮಂಗಲದಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸಿದನು.

ಜಯಸಿಂಹನ ಬಳಿಕ ಆಳಿದ ಕೆಲವು ಅರಸರ ಹೆಸರುಗಳು ಮಾತ್ರವೇ ಗೊತ್ತಿವೆ. ಅವರ ಆಳಿಕೆಯ ವಿಷಯ ಏನೊಂದೂ ತಿಳಿದು ಬರುವದಿಲ್ಲ. ಈ ಹೆಸರುಗಳು ಯಾವುವೆಂದರೆ:—1. ರಾಮಂತರಸು, 2. ಬೋಳದೇಶಿಂಗರಾಯ, 3. ಪ್ರೌಢರಾಯ, 4. ವೀರ ನರಸಿಂಹರಾಯ, 5. ಪಾಳ್ಯದ ನರಸಿಂಗರಾಯ, 6. ಅಚ್ಯುತ ರಾಯ, 7. ಸದಾಶಿವರಾಯ, 8. ರಾಮರಾಯ, 9. ಕೃಷ್ಣ ರಾಯ.

ಈ ಕೃಷ್ಣರಾಯನ ಕಾಲದಲ್ಲಿ ಇಕ್ಕೇರಿಯ ಶಿವಪ್ಪನಾಯಕನು ದಕ್ಷಿಣಕನ್ನಡ ಜಿಲ್ಲೆಯ ದಕ್ಷಿಣಭಾಗಕ್ಕೆ ಬಂದಾಗ ಇವನು ಯುದ್ಧಕ್ಕೆ ನಿಂತುದರಿಂದ ಶಿವಪ್ಪನಾಯಕನು 1654ರಲ್ಲಿ ಇವನನ್ನು ಸೋಲಿಸಿ

ಇವನ ರಾಜ್ಯವನ್ನು ಸಣ್ಣದಾಗಿ ಮಾಡಿದನು. ಅಡೂರು, ಮದೂರು, ಕಾವು, ಕಣಿಪುರ (ಕುಂಬಳೆ) ಎಂಬ 4 ಸೀಮೆಗಳು ಮಾತ್ರವೇ ಇವನಿಗೆ ಕೊಡಲ್ಪಟ್ಟವು. ಮಂಜೇಶ್ವರ ಮುಂತಾದ ಸೀಮೆಗಳು ಮೊದಲೇ ತಪ್ಪಿಹೋಗಿದ್ದವು. ಶಿರೆಹೊಳೆಯಿಂದ ಪಯಸ್ವಾನಿ ನದಿಯ ವರೆಗೂ, ಅಡೂರಿನಿಂದ ಸಮುದ್ರದ ವರೆಗೂ ಇರುವ ಪ್ರದೇಶವು ಉಳಿಯಿತು. ಕುಂಬಳೆ ನದೀ ತೀರದ ಅರಮನೆಯನ್ನು ಬಿಟ್ಟು ಮಾಯಪಾಡಿಯಲ್ಲಿ ಅರಮನೆಕಟ್ಟಿ ನಿಂತರು. ಶಿವಪ್ಪನಾಯಕನು, ಈ ಅರಸನು ಮುಂದೆ ದಂಗೆ ಎಬ್ಬಿಸದ ಹಾಗೆ ತೆಂಕುಂಬಳೆಯಲ್ಲಿ ದೊಡ್ಡದಾದ ಒಂದು ಕೋಟೆಯನ್ನು ಕಟ್ಟಿಸಿ ಅದರಲ್ಲಿ ರಾಮರಾಜಕ್ಷತ್ರಿಯರೆಂಬ ಜಾತಿಯವರನ್ನು ಇಕ್ಕೇರಿ ಸಂಸ್ಥಾನದಿಂದ ತಂದು ಸೈನಿಕರಾಗಿ ಮಾಡಿ ಅವರನ್ನು ಆ ಕೋಟೆಯ ಪೂರ್ವ ಭಾಗದಲ್ಲಿ ನಿಲ್ಲಿಸಿದನು ಈ ಕೃಷ್ಣರಾಯನ ಕುಟುಂಬದ ಒಬ್ಬ ರಾಣಿಯು ಮಾತ್ರ ಹಳೆಅರಮನೆಯನ್ನು ಬಿಡುವದಿಲ್ಲವೆಂದು ಹೇಳಿ ತನ್ನ ಮಗುವಿನೊಡನೆ ಅಲ್ಲಿಯೇ ನಿಂತಳು. ಈ ಹೆಂಗಸಿನ ಸಂತತಿಯವರು ಈಗ ಕೋಟೆಕಾರಿನ ಹತ್ತರ ಕೊಡ್ಯಮೆಯಲ್ಲಿರುತ್ತಾರೆ. ಇವರಿಗೆ ಕೊಡ್ಯಮೆ ಅರಸರೆಂದು ಹೆಸರು.

1784ರಲ್ಲಿ ಕುಂಬಳೆ ಅರಸನು ಇಂಗ್ಲೀಷರ ಕಡೆಗೆ ಸೇರಿ ಟೀಪುವಿಗೆ ವಿರೋಧವಾಗಿ ನಿಂತದ್ದರಿಂದ ಟೀಪುವು ರಾಜನ ಖಾಸಗಿ ಆಸ್ತಿಯನ್ನು ಮಾತ್ರವೆ ಬಿಟ್ಟು ರಾಜ್ಯವನ್ನು ಸೆಳಕೊಂಡನು. ಅನಂತರ ಇವನ ಅಳಿಯನು 1794ರಲ್ಲಿ ವಿರೋಧವಾಗಿ ನಿಂತುದ್ದರಿಂದ ಅವನನ್ನು ಗಲ್ಲಿಗೆ ಹಾಕಿಸಿದನು. ಇವನ ಉತ್ತರಾಧಿಕಾರಿಯು ತಲಚೇರಿಗೆ ಓಡಿಹೋಗಿ ಇಂಗ್ಲೀಷರ ಮರೆಹೊಕ್ಕಿದನು.

1799ರಲ್ಲಿ ಶ್ರೀರಂಗಪಟ್ಟಣದ ಯುದ್ಧಕಾಲದಲ್ಲಿ ಈ ರಾಜನು ಕುಂಬಳೆಗೆ ಬಂದು ಅಲ್ಲಲ್ಲಿ ಸುಲಿಗೆಮಾಡುತ್ತಿದ್ದನು. ಈ ಅರಸನು ತಮಗೆ ಸಹಾಯಮಾಡಿದಕ್ಕಾಗಿ ಇಂಗ್ಲೀಷರು ಅವನ ರಾಜ್ಯವನ್ನು ಅವನಿಗೆ ಬಿಟ್ಟುಕೊಟ್ಟರು. ಈ ಅರಸನು ಇಂಗ್ಲೀಷರ ಸ್ನೇಹಿತನಾದ್ದರಿಂದ

ಅವರ ವಿರೋಧಿಯಾಗಿದ್ದ ಕೊಡಗುರಾಜನು ಕುಂಬಳೆ ಸೀಮೆಯನ್ನು ಆಗಾಗ್ಗೆ ಸುಲಿಗೆಮಾಡುತ್ತಿದ್ದನು.

ಅನಂತರ ಈ ಜಿಲ್ಲೆಯು ಇಂಗ್ಲೀಷರ ಸ್ವಾಧೀನಕ್ಕೆ ಬಂದ ಮೇಲೆ ಈ ರಾಜನ ರಾಜ್ಯದಲ್ಲಿ 60 ಸಾವಿರ ಕಂದಾಯ ಸಿಕ್ಕುತ್ತಿದ್ದು ದರಿಂದ ಅದರಲ್ಲಿ ಐದನೇ ಒಂದಂಶ ಎಂದರೆ ಒಂದು ವರುಷಕ್ಕೆ 12 ಸಾವಿರ ರೂಪಾಯಿ ಮಲ್ಲಿಖಾನೆಯನ್ನು ಕೊಟ್ಟು ರಾಜ್ಯವನ್ನು ಸ್ವಾಧೀನಪಡಿಸಿಕೊಂಡರು.

ಈಗ ಮಾಯಪಾಡಿಯಲ್ಲಿ ಮೂಡು ಮತ್ತು ಪಡು ಅರಮನೆ ಗಳೆಂದು ಎರಡು ಅರಮನೆಗಳಿವೆ. ಮೂಡು ಅರಮನೆಯಲ್ಲಿ ಅರಸರು ಇರುತ್ತಾರೆ. ಪಡುಅರಮನೆ ಎಂಬ ದೊಡ್ಡ ಅರಮನೆಯಲ್ಲಿ ರಾಜ ಕುಟುಂಬದವರು ಇರುತ್ತಾರೆ. ಈ ಅರಸುಗಳು ನಾಯರರ ಹೆಂಗಸ ರನ್ನು ಮದುವೆಮಾಡಿಕೊಳ್ಳುತ್ತಾರೆ. ಹೆಂಗಸರು ಪ್ರಾಕಾರಾಭ್ಯ ನಿಶ್ಚ ಯಿಸಿಕೊಂಡ ಮನೆಯ ಬ್ರಾಹ್ಮಣರನ್ನು ಮದುವೆಮಾಡಿಕೊಳ್ಳುತ್ತಾರೆ. ಮುಖ್ಯ ರಾಣಿಯ ಹೆಸರು ಈಗಲೂ ಸುಶೀಲೆಯೆಂತಲೇ ಇರಬೇಕಂತೆ. ಈಗಿರುವ ರಾಣಿಯ ಹೆಸರೂ ಸುಶೀಲೆಯಂತಲೇ ಇದೆ. ಇವರು ತುಳು ಮಲೆಯಾಳ, ಕನ್ನಡಭಾಷೆಗಳನ್ನು ಆಡುತ್ತಾರೆ. ಅಳಿಯ ಸಂತಾನಕಟ್ಟನ್ನು ಆಚರಿಸುತ್ತಾರೆ. ಕುಂಬಳೆ ಗೋಪಾಲಕೃಷ್ಣನೇ ಇವರ ಕುಲದೇವರು.

## 34ನೇ ಅಧ್ಯಾಯ.

### 1. ಕೋಲತ ಅರಸರು.

ಪರಶುರಾಮನು, ಕೇರಳದೇಶವನ್ನು ಆಳಲಿಕ್ಕೆ ಚೇರದೇಶದ ಅರ ಸನ ಕುಟುಂಬದವರಲ್ಲಿ ನಾಲ್ಕು ಮಂದಿ ಅಣ್ಣತಮ್ಮಂದಿಯರನ್ನು ಕೇರಳ ದೇಶಕ್ಕೆ ಕರತಂದು ಅವರಲ್ಲಿ ಹಿರಿಯವನಾದ ಭಾನುವಿಕ್ರಮನನ್ನು

ಕೇರಳದೇಶದ ರಾಜನಾಗಿ ಮಾಡಿ ತಾನೇ ಅವನಿಗೆ ಪಟ್ಟಕಟ್ಟಿದನು. ಇವನ ತಮ್ಮಂದಿಯರಲ್ಲಿ ಒಬ್ಬನನ್ನು ಗೋಕರ್ಣದಲ್ಲಿ ನಿಲ್ಲಿಸಿ ಅವನನ್ನು ಬಡಗರೆಯಿಂದ ಗೋಕರ್ಣದ ವರೆಗಿರುವ ಪ್ರದೇಶಕ್ಕೆ ಅರಸನನ್ನಾಗಿ ಮಾಡಿದನು. ಕೊಲತನಾಡಿನ ರಾಜವಂಶವು ಎಂದರೆ ಇದೇ. ಇವರ ರಾಜಧಾನಿಯು ಚಿರಕಲವಾಗಿತ್ತು. ಉದಯವರ್ಮನು ಕೊಲತ ನಾಡನ್ನು ಆಳುವ ಸಮಯದಲ್ಲಿ ಪರಶುರಾಮನು ತಾನೇ ಬಂದು ಇವನಿಗೆ ಪಟ್ಟಾಭಿಷೇಕಮಾಡಿದನು. ಉತ್ತರದೇಶದಿಂದ ಬೇರೆ ಬೇರೆ ಆರ್ಯವಂಶದ ಅರಸರು ದಕ್ಷಿಣಕ್ಕೆ ಬಂದು ರಾಜ್ಯ ಸ್ಥಾಪನೆಮಾಡಿದ ನಂತರ ಹಾಗೆಯೇ ಕೊಲತನಾಡಿನ ಅರಸನ ಕೈಯಿಂದ ಗೋಕರ್ಣದಿಂದ ಪಯಸ್ವಾನಿ ನದಿಯ ವರೆಗಿನ ಭಾಗವು ತಪ್ಪಿಹೋಯಿತು. ಗೋಕರ್ಣ ಮಹಾಬಲೇಶ್ವರ ದೇವಸ್ಥಾನವು ಕೊಲತನಾಡಿನ ಸೀಮೆ ದೇವಸ್ಥಾನ ವಾಗಿತ್ತು. ಈಗಲೂ ಮಲಬಾರು ದೇಶದ ಜನರು ಯಾತ್ರೆಗಾಗಿ ಗೋಕರ್ಣಕ್ಕೆ 12 ತಿಂಗಳಲ್ಲಿಯೂ ಹೋಗಿ ಬರುತ್ತಾ ಇದ್ದಾರೆ. ವಿಜಯನಗರದ ಕಾಲದಲ್ಲಿ ಪಯಸ್ವಾನಿ ನದಿಯ ದಕ್ಷಿಣಕ್ಕಿರುವ ಪಡುವನ್ನಾಡು, ಅಲವತ್ತನಾಡು, ತ್ಯಾಕಾಟು, ನೀಲೇಶ್ವರ ಎಂಬ ನಾಲ್ಕು ನಾಡುಗಳು ಈ ಅರಸನಿಗೆ ಅಧೀನವಾಗಿಯೇ ಇದ್ದವು. ಇಕ್ಕೇರಿ ವಂಶದ ಎರಡನೇ ಅರಸನಾದ ಸದಾಶಿವರಾಯನಾಯಕನು ತನ್ನ ಆಳಿ ಕೆಯ ಕಡೆಯ ಭಾಗದಲ್ಲಿ ಕನ್ನಡಜಿಲ್ಲೆಗೆ ಬಂದಾಗಲೂ ಪಯಸ್ವಾನಿ ನದಿಯ ದಕ್ಷಿಣಕ್ಕಿರುವ ಪ್ರಾಂತ್ಯವು ಕೊಲತ ಅರಸನ ಅಧೀನದಲ್ಲಿಯೇ ಇತ್ತು. ಅರಬ್ಬಿಯವರು ಪಶ್ಚಿಮ ಕರಾವಳಿಗೆ ಬಂದು ವ್ಯಾಪಾರಮಾಡ ತೊಡಗಿದಾಗ ಕೊಲತ ಅರಸನ ಬಂದರವಾದ ಕಣ್ಣಾನೂರು ದೊಡ್ಡ ವ್ಯಾಪಾರ ಸ್ಥಳವಾಗಿತ್ತು. ದೊಡ್ಡ ದೊಡ್ಡ ಅರಬ್ಬಿ ಸಾವಕಾರರು ಅರಮನೆಗೆ ಬರುತ್ತಾ ಹೋಗುತ್ತಾ ಇದ್ದರು. ಈ ಅರಸನ ಮಗ ಳಲ್ಲಿ ಒಬ್ಬಳು ಒಬ್ಬ ಅರಬ್ಬಿ ಸಾವಕಾರನನ್ನು ಮದುವೆಯಾದಳು. ತಂದೆಯು ಮಗಳ ಮೇಲಿನ ಪ್ರೀತಿಯಿಂದ ಮಾಡಾಯಿ ಗ್ರಾಮದಲ್ಲಿ ಅವಳಿಗೊಂದು ಅರಮನೆಯನ್ನು ಕಟ್ಟಿಸಿಕೊಟ್ಟನು. ಇವಳಲ್ಲಿ ಹುಟ್ಟಿದ

ಮಗನಿಗೆ ತನ್ನ ಸೈನ್ಯದಲ್ಲಿ ಸೇನಾಧಿಪತಿಯಾಗಿ ನೇಮಿಸಿದನು. ಆ ಮೇಲೆ ಈ ಮೊಮ್ಮಗನಿಗೆ ಲಕ್ಷದ್ವೀಪಗಳಲ್ಲಿ ಕೆಲವನ್ನು ಕೊಟ್ಟು ಕಣ್ಣಾನೂರಿನ ಹತ್ತರ ಅರ್ಕಲಿನಲ್ಲಿ ಒಂದು ಅರಮನೆಯನ್ನೂ ಕಟ್ಟಿಸಿ ಕೊಟ್ಟನು. ಕೊಲತ ಅರಸನು ಸಿಂಹಾಸನದಲ್ಲಿ ಕುಳಿತಿರುವಾಗ ಈ ಸೇನಾಧಿಪತಿಯು ಅರಸನ ಹತ್ತರವೇ ತನ್ನ ಕತ್ತಿಯನ್ನು ಒಂದು ಪೆಟ್ಟಿಗೆಗೆ ಊರಿಕೊಂಡು ನಿಲ್ಲುತ್ತಿದ್ದನಂತೆ. ಕೊಲತ ಅರಸನಿಗೆ ಹಣದ ಅವಶ್ಯವಿದ್ದರೆ ತಾನು ಯಾವ ತರದಿಂದಲಾದರೂ ಹಣವನ್ನು ಕೂಡಿಸಿಕೊಡುತ್ತೇನೆಂದು ಇದರ ಅರ್ಥವಂತೆ.

ಇಕ್ಕೇರಿಯ ವೆಂಕಟಪ್ಪನಾಯಕನು ಕ್ರಿ. ಶ. 1608ರಲ್ಲಿ ಕನ್ನಡ ಜಿಲ್ಲೆಗೆ ಬಂದು ಪಡುವನ್ನಾಡು, ಅಲವತ್ತನಾಡನ್ನು ಹಿಡಿದು ತನ್ನ ರಾಜ್ಯದ ಭದ್ರತೆಗಾಗಿ ಕಾಸರಗೋಡು, ಬಂದ್ಯಡ್ಕ, ಕಾಂತಮಂಗಲ, ಕುಂಡಂಕುಳಿ, ಚಂದ್ರಗಿರಿ, ಫಣಿಯಾಲ ಇಷ್ಟು ಕಡೆಗಳಲ್ಲಿ ಕೋಟೆ ಗಳನ್ನು ಕಟ್ಟಿಸಿದನು. ಶಿವಪ್ಪನಾಯಕನು ಆಳುವ ಕಾಲದಲ್ಲಿ ಪೋ ರ್ತುಗೀಸರ ಹಾವಳಿಯು ಬಹಳ ಹೆಚ್ಚಾಗುತ್ತಾ ಬರಲು ಈ ಅರ ಸನು ಅವರಿಗೆ ಸಹಾಯಮಾಡುತ್ತಾನೆಂದೂ, ತನಗೆ ಕಪ್ಪಕೊಡದೆ ಬಾಧಿಸುತ್ತಿರುವ ಬಂಗರಾಜನಿಗೆ ಯಾವಾಗಲೂ ಈ ಅರಸನು ಆಶ್ರಯ ಕೊಡುತ್ತಾನೆಂದೂ ಶಿವಪ್ಪನಾಯಕನು ದೊಡ್ಡ ಸೈನ್ಯದೊಡನೆ ಬಂದು ಕೊಲತ ಅರಸನನ್ನು ಯುದ್ಧದಲ್ಲಿ ಸೋಲಿಸಿ ಅವನ ರಾಜ್ಯದಲ್ಲಿ ಬೇಕಲ, ಚಿತ್ತಾರಿ ವರೆಗಿನ ಪ್ರದೇಶವನ್ನು ಸ್ವಾಧೀನಪಡಿಸಿಕೊಂಡನು. ಅನಂತರ ಚಂದ್ರಗಿರಿ ಕೋಟೆಯನ್ನು ಮುಂಚಿಗಿಂತಲೂ ಬಲವಾಗಿ ಕಟ್ಟಿಸಿದನು. ಆ ಮೇಲೆ ಬೇಕಲದಲ್ಲಿ ಸಮುದ್ರದ ಬಳಿಯಲ್ಲಿ ಎತ್ತ ರವಾದ ಸ್ಥಳದ ಮೇಲೆ ಸುಮಾರು 13 ಎಕ್ರೆ ವಿಸ್ತೀರ್ಣವುಳ್ಳ ಕೋಟೆ ಯನ್ನು ಕಟ್ಟಿಸಿದನು. ಸಮುದ್ರದಿಂದ ಶತ್ರುಗಳ ಹಡಗುಗಳು ಬರು ವಾಗ ಅವುಗಳ ಮೇಲೆ ಫಿರಂಗಿ ಹಾರಿಸಿ ನಾಶಪಡಿಸುವದಕ್ಕಾಗಿ ಸಮುದ್ರದಲ್ಲಿ ಒಂದು ಬತ್ತೇರಿಯನ್ನು ಕಟ್ಟಿಸಿದನು. ಈ ಬತ್ತೇರಿಯಿಂದ

ಕೋಟೆಗೆ ಬರಲಿಕ್ಕೆ ದಾರಿಯು ಇದೆ. ಈ ದಾರಿಯಿಂದ ಸ್ವಲ್ಪ ದೂರ ಕೋಟೆಯಿಂದ ಹೊರಗೆ ಬರುವ ಇನ್ನೊಂದು ಕಳ್ಳ ದಾರಿಯೂ ಇದೆ. ವೈರಿಗಳು ಬರುವದನ್ನು ನೋಡಲಿಕ್ಕಾಗಿ ಪೂರ್ವದಿಕ್ಕಿನಲ್ಲಿ ಕೋಟೆಯ ಒಳಗಡೆ ಒಂದು ಎತ್ತರವಾದ ಬತ್ತೇರಿಯು ಇದೆ. ಪೂರ್ವಕ್ಕೆ ಇದಕ್ಕೆ ತಾಗಿ ತಗ್ಗಾದ ಇನ್ನೊಂದು ಕೋಟೆಯೂ ಬತ್ತೇರಿಗಳೂ ಇವೆ. ಮದ್ದುತುಂಬಿಸುವ ಕೋಣೆಯನ್ನು ಕಾಯುವದಕ್ಕಾಗಿ ಅದಕ್ಕೆ ತಾಗಿ ಎತ್ತರವಾದ ಒಂದು ಬತ್ತೇರಿಯು ಇದೆ. ಬಂಟರೂ, ನಾಯರರೂ, ಬಿಲ್ಲವರೂ, ತೀಯರರೂ ಈ ಜಿಲ್ಲೆಯಲ್ಲಿ ಆಳುತ್ತಿದ್ದ ಜೈನರಾಜರ ಮತ್ತು ಈ ಕೊಲತನಾಡಿನ ಅರಸನ ಸೈನಿಕರಾಗಿದ್ದದರಿಂದ ಅವರಲ್ಲಿ ನಂಬಿಕೆ ಇಲ್ಲದೆ ಶಿವಪ್ಪನಾಯಕನು ರಾಮರಾಜಕ್ಷತ್ರಿಯರೆಂಬ ಜಾತಿಯವರನ್ನು ಉತ್ತರಕನ್ನಡದಿಂದಲೂ, ಇಕ್ಕೇರಿಯಿಂದಲೂ ಕರತಂದು ಅವರಲ್ಲಿ ಕೆಲವರಿಗೆ ಜಮೇದಾರ, ಹವಾಲದಾರ, ಸುಬೇದಾರ ಮುಂತಾದ ದೊಡ್ಡ ಹುದ್ದೆಗಳಿಗೆ ನೇಮಿಸಿದನು. ಆ ಕುಟುಂಬದವರ ಮನೆಗಳು ಬೇಕಲದಲ್ಲಿಯೂ ಇತರ ಕೋಟೆಗಳ ಹತ್ತರವೂ ಈಗಲೂ ಇವೆ. ಚಿತ್ತಾರಿಯಲ್ಲಿಯೂ ಒಂದು ಕೋಟೆಯನ್ನು ಕಟ್ಟಿಸಿದನು. ಹೀಗೆ ಶಿವಪ್ಪನಾಯಕನ ಕಾಲದಲ್ಲಿ ಚಿತ್ತಾರಿಯಿಂದ ದಕ್ಷಿಣಕ್ಕಿರುವ ಭಾಗ ಮಾತ್ರವೇ ಕೊಲತ ಅರಸನ ಕೈಕೆಳಗೆ ಉಳಿಯಿತು. ಚಿತ್ತಾರಿಯಿಂದ ದಕ್ಷಿಣಕ್ಕೆ ಕವಾಯಿ ವರೆಗಿನ ನಿಲೇಶ್ವರ ಮತ್ತು ತ್ಯಾಕಾಟು ಈ ಎರಡು ನಾಡುಗಳನ್ನು ಈ ಅರಸರಲ್ಲಿ ಒಬ್ಬನು ತನ್ನ ಮಗಳಲ್ಲಿ ಒಬ್ಬಳಿಗೆ ಕೊಟ್ಟು ನೀಲೇಶ್ವರದಲ್ಲಿ ಅರಮನೆಯನ್ನು ಕಟ್ಟಿಸಿ ಅವಳನ್ನು ಅಲ್ಲಿ ನಿಲ್ಲಿಸಿದನು. ಪಟ್ಟಣದ ಭದ್ರತೆಗಾಗಿ ಒಂದು ಕೋಟೆಯನ್ನೂ ಕಟ್ಟಿಸಿ ಕೊಟ್ಟನು. ಬಸವಪ್ಪನಾಯಕನು ಆಳುವ ಸಮಯದಲ್ಲಿ ಕೊಲತ್ತರಸನು ದೊಡ್ಡ ಸೈನ್ಯವನ್ನು ಕಳುಹಿಸಿ ಚಂದ್ರಗಿರಿ ಕೋಟೆಗೆ ಮುತ್ತಿಗೆಹಾಕಿ ಹಿಡಿದನು. ಕ್ರಿ. ಶ. 1753ರಲ್ಲಿ ಬಸವಪ್ಪನು ಈ ಕೋಟೆಯನ್ನು ತಿರಿಗಿ ಹಿಡಿದನು. ಕೊಲತ್ತರಸನು ಯುದ್ಧದ ನಷ್ಟಕ್ಕಾಗಿ ಬಸವಪ್ಪನಾಯಕನಿಗೆ 1000 ವರಹವನ್ನು ಕೊಟ್ಟನು. ಅನಂತರ

ಇಂಗ್ಲೀಷರೂ ಫ್ರೆಂಚರೂ ಬಂದು ಏಳಿಮಲೆ, ಮಾಡಾಯಿ ಮುಂತಾದ ಸ್ಥಳಗಳನ್ನು ತಮ್ಮ ಸ್ವಾಧೀನಪಡಿಸಿಕೊಂಡರು. ಇಕ್ಕೇರಿಯುವರು ಬಲಿಯಪಟ್ಟಣದ ಹೊಳೆಯುವರೆಗಿನ ಪ್ರದೇಶವನ್ನು ಹಿಡಿದರು. ಹೀಗೆ ಕನ್ನಡ ಜಿಲ್ಲೆಯಲ್ಲಿ ಕೊಲತ್ತರಸನಿಗೆ ಇದ್ದ ಅಂಶವು ಪೂರಾ ಇಕ್ಕೇರಿ ಯುವರ ವಶವಾಯಿತು.

---

## 2. ನೀಲೇಶ್ವರದ ಅರಸರು.

ಕೊಲತ್ತನಾಡಿನ ಅರಸನು ತನ್ನ ಮಗಳಲ್ಲಿ ಒಬ್ಬಳಿಗೆ ತನಗೆ ಇದ್ದ ರಾಜ್ಯದಲ್ಲಿ ಬೇಕಲ ಹೊಳೆಯಿಂದ ಕವ್ವಾಯಿ ಹೊಳೆಯುವರೆಗಿರುವ ನಿಲೇಶ್ವರ ಮತ್ತು ತ್ರ್ಯಕಾಟು ಎಂಬ ಎರಡು ನಾಡುಗಳನ್ನು ಬಿಟ್ಟು ಕೊಟ್ಟು ನೀಲೇಶ್ವರದಲ್ಲಿ ಅವಳಿಗೆ ಒಂದು ಅರಮನೆಯನ್ನು ಕಟ್ಟಿಸಿ ಅರಮನೆಯ ಭದ್ರತೆಗಾಗಿ ಒಂದು ಕೋಟೆಯನ್ನು ಕಟ್ಟಿಸಿಕೊಟ್ಟನು. ನೀಲಕಂಠೇಶ್ವರ ದೇವಸ್ಥಾನವನ್ನೂ ಕಟ್ಟಿಸಿಕೊಟ್ಟನು. ವಿಜಯನಗರದ ರಾಜ್ಯಭಾರಕಾಲದಲ್ಲಿ ಈ ರಾಜ್ಯಕ್ಕೆ ಏನೊಂದೂ ಅಪಾಯ ಬರಲಿಲ್ಲ. ಶಿವಪ್ಪ ನಾಯಕನ ಕಾಲದಲ್ಲಿ ಬೇಕಲದಿಂದ ಚಿತ್ತಾರಿವರೆಗಿನ ಅಂಶವು ಈ ಅರಸನ ಕೈಯಿಂದ ತಪ್ಪಿತು. ಕೊಲ್ಲಂ 905 ಕ್ರಿ. ಶ. 1729-'30ರಲ್ಲಿ ಇಕ್ಕೇರಿ ಸೋಮಶೇಖರ ನಾಯಕನ ಸೇನಾಧಿಪತಿಯೂ ದಕ್ಷಿಣಕನ್ನಡ ರಾಜ್ಯದ ಅಧಿಕಾರಿಯೂ ಆಗಿದ್ದ ಬಾರಕೂರು ಸೂರಪ್ಪಯ್ಯನು ಚಿತ್ತಾರಿ ಯಿಂದ ಮುಂದರಿಸಿ ಹೋದನು. ಹದಿನೆರಡು ವರುಷಗಳವರೆಗೂ ಯುದ್ಧ ವಾಯಿತು. ಸೂರಪ್ಪಯ್ಯನು ಕ್ರಿ. ಶ. 1737ರಲ್ಲಿ ಕಾಂಞಂಗಾಡು ಗ್ರಾಮವನ್ನು ಹಿಡಿದು ಅಲ್ಲಿಯ ಮೈದಾನಿನ ಮೇಲೆ ಒಂದು ಬಲವಾದ ಕೋಟೆಯನ್ನು 1737ರಲ್ಲಿ ಕಟ್ಟಿಸಿದನು. ಕ್ರಿ. ಶ. 1742ರ ವರೆಗೆ ಈ ರಾಮವರ್ಮ ರಾಜನು ಯುದ್ಧಮಾಡಿ ಕಡೆಗೆ ಒಪ್ಪಂದವಾಗಿ ನೀಲೇಶ್ವರದ ರಾಜ್ಯವನ್ನು ಆ ರಾಜನಿಗೆ ಬಿಟ್ಟುಕೊಟ್ಟನು. ಅವನ ರಾಜ್ಯಗಳನ್ನು 3 ನಾಡು (ಜಿಲ್ಲೆ) ಗಳಾಗಿ ಮಾಡಿದರು. ಒಂದೊಂದು ನಾಡಿನಿಂದ

580 ಇಕ್ಕೇರಿ ವರಹ (2120 ರೂಪಾಯಿ) ಕಪ್ಪವನ್ನು ಇಕ್ಕೇರಿಯವರಿಗೆ ಕೊಡಬೇಕಾಯಿತು.

ಅರಸನು ಈ ಕಪ್ಪವನ್ನು ಕೊಡುವದಕ್ಕಾಗಿ ವಾರಿಸುದಾರರು ಇಲ್ಲದೆ ಸತ್ತವರ ಆಸ್ತಿಗಳನ್ನೆಲ್ಲಾ ಬಂಡಾರಕ್ಕೆ ತೆಗೆದುಕೊಂಡು ಮಾರಿದನು. ಜಿಮ್ಮೆಯವರು ಸರಕಾರಕ್ಕೆ ಕೊಡಬೇಕಾದ ಕಂದಾಯವನ್ನು ಶೇಕಡಾ 50ರಷ್ಟು ಹೆಚ್ಚಿಸಿದನು. ತೋಟಗಾರರ ಮೇಲೆ ಶೇಕಡಾ 20ರಷ್ಟು ಕಂದಾಯವನ್ನು ಹೆಚ್ಚಿಸಿದನು.

ಇಕ್ಕೇರಿಯವರನಂತರ ಬಂದ ಹೈದರನು ಈ ನೀಲೇಶ್ವರ ಅರಸನು ಕೊಡಬೇಕಾದ ಕಂದಾಯವನ್ನು ಶೇಕಡಾ 33ರಷ್ಟು ಹೆಚ್ಚಿಸಿದನು. ಪ್ರತಿಯೊಂದು ಜಿಲ್ಲೆಯಿಂದ 1500 ವರಹ (ರೂ. 6000) ಕೊಡಬೇಕೆಂದು ನಿಯಮಿಸಿದನು. ಇಕ್ಕೇರಿಯವರ ಕಾಲದಲ್ಲಿ 1590 ಇಕ್ಕೇರಿ ವರಹವನ್ನು ಕೊಡುವದಿತ್ತು. ಹೈದರನ ಕಾಲದಲ್ಲಿ 4500 ಇಕ್ಕೇರಿ ವರಹ ಕೊಡಬೇಕಾಯಿತು. ಆದರೆ ಕಂದಾಯ ವಸೂಲಿಗಾಗಿ ಪ್ರತಿಯೊಂದು ಜಿಲ್ಲೆಯಿಂದ 650 ಇಕ್ಕೇರಿ ವರಹವನ್ನು ಅರಸನು ಇಟ್ಟುಕೊಳ್ಳಬಹುದೆಂದು ಹೇಳಿದನು. ಇದರಂತೆ ಮೂರು ಜಿಲ್ಲೆಗಳ ವಸೂಲಿ ಖರ್ಚನ್ನು ಕಳೆದು 2550 ಇಕ್ಕೇರಿ ವರಹವನ್ನು ಹೈದರನಿಗೆ ಕೊಡಬೇಕಾಯಿತು. ಹೈದರನು ಕಪ್ಪವನ್ನು ಹೆಚ್ಚಿಸಿದ್ದರಿಂದ ರಾಜನು ಪ್ರಜೆಗಳಿಂದ ಬಲಾತ್ಕಾರದಿಂದ ಹೆಚ್ಚಿಗೆ ಹಣ ವಸೂಲುಮಾಡಲಾರಂಭಿಸಿದನು. ಪ್ರಜೆಗಳು ಹೈದರನೊಡನೆ ದೂರುಕೊಟ್ಟರು. ಹೈದರನು ಕೂಡಲೇ ಈ ಸಂಗತಿಯನ್ನು ವಿಚಾರಿಸುವದಕ್ಕಾಗಿ ಅಧಿಕಾರಿಗಳನ್ನು ಕಳುಹಿಸಿದನು. ರಾಜನು ಅವರು ಬಾರದ ಹಾಗೆ ಸಾಧಿಸಿದನು. ಎರಡುಕಡೆಯವರೂ ಯುದ್ಧಕ್ಕೆ ಸಿದ್ಧರಾದರು. ಬೇಕಲ ಕೋಟೆಯಿಂದ ದೊಡ್ಡ ಸೈನ್ಯವು ಹೋಗಿ ಯುದ್ಧವಾಗಿ ನೀಲೇಶ್ವರದ ರಾಜನು ಸೋತು ತಿರುವಾಂಕೂರಿಗೆ ಓಡಿಹೋದನು. ಹೈದರನು ರಾಜ್ಯವನ್ನು ಸ್ವಾಧೀನಪಡಿಸಿಕೊಂಡು ಕಂದಾಯವನ್ನು ವಸೂಲುಮಾಡಲಾರಂಭಿಸಿದನು. ಪ್ರಜೆಗಳ ಮನಸ್ಸು ನೋಯದ ಹಾಗೆ

ದೇವಸ್ಥಾನಗಳಿಗೆ ಉಂಬಳಿಯನ್ನೂ, ಬ್ರಾಹ್ಮಣರಿಗೆ ಬ್ರಹ್ಮಾದಾಯವನ್ನೂ ಕೊಟ್ಟನು. ಅನಂತರ ಟೀಪುವು ಇದನ್ನು ನಿಲ್ಲಿಸಿದನು. ಜನರಲ್ ಮೆಥೂಸನು ಬೆಂಗಳೂರನ್ನು ಹಿಡಿದಾಗ ಈ ರಾಜನು ತಿರುವಾಂಕೂರಿನಿಂದ ಹಿಂತಿರುಗಿ ತನ್ನ ರಾಜ್ಯಕ್ಕೆ ಬಂದನು. ಬಳಿಕ ತನ್ನ ರಾಜ್ಯವನ್ನು ಸರಿಯಾಗಿ ಆಳಿ ಹೈದರನಿಗೆ ಕೊಟ್ಟಹಾಗೆಯೇ ಟೀಪುವಿಗೂ ಕಪ್ಪವನ್ನು ಕೊಡುತ್ತಾ ತನ್ನ ರಾಜ್ಯವಾಳುತ್ತಿದ್ದನು.

ಕ್ರಿ. ಶ. 1785-86ರಲ್ಲಿ ಬೇಕಲ ಕೋಟೆಯ ಅಸೋಫನಾಗಿದ್ದ ಬದ್ರೂಜ್-ಜವಮಾನ್‌ಖಾನನು ಈ ಅರಸನ ಬಾಧೆಯನ್ನು ತಡೆಯಲಾರದೆ ಸ್ನೇಹಿತನಂತೆ ನಟಿಸಿಕೊಂಡು ಅರಸನನ್ನು ಬೇಕಲ ಕೋಟೆಗೆ ಕರೆಸಿ ಕೂಡಲೇ ಗಲ್ಲಿಗೆ ಹಾಕಿಸಿದನು. ಅನಂತರ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಹೋಗಿ ನೀಲೇಶ್ವರವನ್ನು ಹಿಡಿದು ನೀಲೇಶ್ವರ ಕೋಟೆಯನ್ನು ಹಾಳುಕೆಡವಿದನು. ಜನರು ಓಡಿಹೋದರು. ರಾಜಧಾನಿಯು ಹಾಳಾಯಿತು. ಅರಸನ ತಮ್ಮನು ತಿರುವಾಂಕೂರಿಗೆ ಓಡಿಹೋದನು. ಲೋರ್ಡ ಕೋರ್ನವಾಲಿಸನು ಟೀಪುವಿನ ರಾಜಧಾನಿಯಾದ ಶ್ರೀರಂಗಪಟ್ಟಣವನ್ನು ಹಿಡಿಯುವವರೆಗೆ ಅಲ್ಲಿಯೇ ಇದ್ದನು. ಅನಂತರ ತಿರುವಾಂಕೂರಿನಿಂದ ತಲಚೇರಿಗೆ ಬಂದು ಅಲ್ಲಿಂದ 1790-91ರಲ್ಲಿ ನೀಲೇಶ್ವರಕ್ಕೆ ಬಂದು ದೊಡ್ಡ ಸೈನ್ಯವನ್ನು ಕೂಡಿಸಿ ಕಪ್ಪಕೊಡುವ ಶರ್ತದ ಮೇಲೆ ತನ್ನ ರಾಜ್ಯವನ್ನು ಬಿಟ್ಟುಕೊಡಬೇಕೆಂದು ಟೀಪುವಿಗೆ ಒತ್ತಾಯಪಡಿಸಿದನು. 1799ರಲ್ಲಿ ಟೀಪುವು ಶ್ರೀರಂಗಪಟ್ಟಣದ ಯುದ್ಧದಲ್ಲಿ ಮಡಿದುಹೋದ ಮೇಲೆ ಇಂಗ್ಲೀಷರು ಈ ರಾಜ್ಯವನ್ನು ತಮ್ಮ ಸ್ವಾಧೀನವಿಟ್ಟುಕೊಂಡು ಅರಮನೆಗೆ ಸಂಬಂಧಪಟ್ಟ ಭೂಮಿಗಳನ್ನು ಮಾತ್ರ ರಾಜನಿಗೆ ಬಿಟ್ಟು ಸ್ವಲ್ಪ ಮಲ್ಲಿಖಾನೆಯನ್ನು ಕೊಡುತ್ತಾ ಬರುತ್ತಾರೆ. ನೀಲೇಶ್ವರ ಅರಮನೆಯು ರೈಲ್ವೆ ಸ್ಟೇಶನಿನ ಹತ್ತರವಿದೆ.

## 35ನೇ ಅಧ್ಯಾಯ.

## ಜೈನ ಬಲ್ಲಾಳರೂ ಹೆಗ್ಗಡೆಯರೂ.

ಬಹಳ ಪುರಾತನಕಾಲದಲ್ಲಿ ಈ ಜಿಲ್ಲೆಯನ್ನು ಗ್ರಾಮಗಳಾಗಿಯೂ, ನಾಲ್ಕು ಅಥವಾ ಐದು ಗ್ರಾಮಗಳನ್ನೂ, ಕೆಲವು ಸಂಗತಿಯಲ್ಲಿ ಹತ್ತು ಹದಿನೆರಡು ಗ್ರಾಮಗಳನ್ನೂ ಕೂಡಿಸಿ ಒಂದು ಮಾಗಣೆ ಎಂಬದಾಗಿಯೂ, ಹತ್ತುಹದಿನೆರಡು ಮಾಗಣೆಗಳನ್ನು ಕೂಡಿಸಿ ಒಂದು ರಾಜ್ಯ ಎಂಬ ದಾಗಿಯೂ ಮಾಡಿ ಇಲ್ಲಿಯ ನಿವಾಸಿಗಳು ರಾಜ್ಯಭಾರಮಾಡಿಕೊಂಡಿದ್ದರು. ಪ್ರತಿಯೊಂದು ಗ್ರಾಮವನ್ನು ನಾಲ್ಕು ಮಂದಿ ಗುರಿಕಾರರು ಆಳುತ್ತಿದ್ದರು. ಇದಕ್ಕಾಗಿ ಪ್ರತಿ ಗ್ರಾಮವನ್ನು ನಾಲ್ಕು ಪಾಲು ಮಾಡಿ ಆ ನಾಲ್ಕು ಮಂದಿ ಗುರಿಕಾರರೊಳಗೆ ಹಂಚಿ ಅದಕ್ಕೆ ಗಡಿಹಾಕಿ ಕೊಡುತ್ತಿದ್ದರು. ಮತ್ತು ಆ ಗಡಿಯೊಳಗಿರುವ ಭೂಮಿಯ ಕಂದಾಯವನ್ನು ಕೂಡಿಸಿ ಕೊಡಬೇಕಿತ್ತು. ಆದ್ದರಿಂದ ಈ ಪ್ರತಿಯೊಬ್ಬ ಗುರಿಕಾರನಿಗೆ ಗಡಿಹಿಡಿದ ಗುತ್ತಿನವನು ಎಂದು ಹೆಸರು ಬಂತು. ಆಯಾ ಜಾತಿಯ ನ್ಯಾಯಗಳನ್ನು ತೀರಿಸುವದಕ್ಕಾಗಿಯೂ, ಜಾತಿನೀತಿಯ ವಿಷಯವಾಗಿ ಮೇಲ್ವಿಚಾರ ನೋಡುವದಕ್ಕಾಗಿಯೂ ಆಯಾ ಜಾತಿಯ ಗುರಿಕಾರರು ಇದ್ದರು. ತಮ್ಮಿಂದ ತೀರಿಸಲಿಕ್ಕೆ ಸಾಧ್ಯವಾಗದ ನ್ಯಾಯವನ್ನು ಆಯಾ ಗಡಿಯ ಗುತ್ತಿನವನಿಂದ ಅಥವಾ ಗುರಿಕಾರನ ಮುಖಾಂತರ ತೀರಿಸುತ್ತಿದ್ದರು. ಗ್ರಾಮಗಳಲ್ಲಿಯ ನ್ಯಾಯಗಳನ್ನು ತೀರ್ಮಾನಿಸುವುದಕ್ಕಾಗಿ ಆಯಾ ಗ್ರಾಮಗುರಿಕಾರರು ಆಯಾ ಗ್ರಾಮಗಳಲ್ಲಿರುವ ದೈವಸ್ಥಾನ ಅಥವಾ ದೇವಸ್ಥಾನಗಳ ಮುಂದುಗಡೆಯಿರುವ ಚಾವಡಿಯಲ್ಲಾಗಲಿ, ಅಶ್ವತ್ಥಕಟ್ಟೆಯಲ್ಲಾಗಲಿ ಒಟ್ಟಿಗೆಕೂಡಿಬಂದು ನ್ಯಾಯಗಳನ್ನು ತೀರ್ಮಾನಿಸುತ್ತಿದ್ದರು. ಮರಣದಂಡನೆಯನ್ನು ವಿಧಿಸುವ ಅಧಿಕಾರವು ಈ ಗ್ರಾಮ ಗುರಿಕಾರರಿಗೆ ಇರಲಿಲ್ಲ.

ಮಾಗಣೆಗಳ ನ್ಯಾಯುವನ್ನು ತೀರಿಸುವದಕ್ಕಾಗಿ ಪ್ರತಿಯೊಂದು ಗ್ರಾಮದಿಂದ ಅಥವಾ ಹೆಚ್ಚು ಗ್ರಾಮಗಳು ಇರುವಲ್ಲಿ ಎರಡು ಅಥವಾ ಮೂರು ಗ್ರಾಮಗಳಿಂದ ಒಬ್ಬನ ಪ್ರಕಾರ ಒಬ್ಬ ಮಾಗಣೆಗುರಿಕಾರನನ್ನು ಆರಿಸಿ ತೆಗೆಯುತ್ತಿದ್ದರು. ಪ್ರತಿಯೊಂದು ಮಾಗಣೆಯಲ್ಲಿಯೂ ನಾಲ್ಕು ಮಂದಿ ಗುರಿಕಾರರು ಇದ್ದರು. ಮಾಗಣೆಗೆ ಕೆಲವು ಕಡೆ ನಾಡು ಎಂದೂ ಕೆಲವು ಕಡೆ ಸೀಮೆ ಎಂದೂ ಹೆಸರುಗಳು ಇದ್ದವು. ಮಾಗಣೆಯ ನ್ಯಾಯು ಗಳನ್ನು ಆಯಾ ಮಾಗಣೆಯ ದೈವಸ್ಥಾನ ಅಥವಾ ದೇವಸ್ಥಾನಗಳ ಮುಂದುಗಡೆಯಿರುವ ಚಾವಡಿಯಲ್ಲಾಗಲಿ, ಕಟ್ಟೆಗಳಲ್ಲಿಯಾಗಲಿ ಕೂತು ಮಾಗಣೆಗುರಿಕಾರರು ತೀರ್ಮಾನಿಸುತ್ತಿದ್ದರು. ಇಂಥಾ ಕಟ್ಟೆ ಮುಂತಾದ ಸ್ಥಳಗಳನ್ನು ಈಗಲೂ ಅನೇಕ ಕಡೆಗಳಲ್ಲಿ ನೋಡಬಹುದು.

ಕ್ರಿಸ್ತಶಕದ ಒಂದನೇ ಶತಮಾನದಲ್ಲಿ ಜೈನರು ಈ ಜಿಲ್ಲೆಗೆ ಬಂದು ರಾಜ್ಯಸ್ಥಾಪನೆಮಾಡಿದ ಮೇಲೆ, ಒಂದೊಂದು ಮಾಗಣೆಗೆ ಒಬ್ಬೊಬ್ಬ ಜೈನ ಬಲ್ಲಾಳ ಅಥವಾ ಹೆಗ್ಗಡೆಯನ್ನು ನಿಯಮಿಸಿದರು. ಮೊದಲಿದ್ದ ನಾಲ್ಕು ಮಂದಿ ಮಾಗಣೆಗುರಿಕಾರರ ಅಧಿಕಾರವನ್ನು ತೆಗೆದುಹಾಕದೆ ಅವರಲ್ಲಿ ಮೊದಲನೇ ಎರಡನೇ ಗುರಿಕಾರನನ್ನು ಬಾವದವರೆಂಬದಾಗಿಯೂ, ಮೂರನೇ ಗುರಿಕಾರನನ್ನು ಬಾಳಿಕೆಯವನೆಂಬದಾಗಿಯೂ, ನಾಲ್ಕನೇ ಗುರಿಕಾರನನ್ನು ಪರಾರಿಯುವನು ಎಂಬುದಾಗಿಯೂ ಕರೆದರು. ಬಲ್ಲಾಳನಿಗೆ ಅಥವಾ ಹೆಗ್ಗಡೆಗೆ ಪಟ್ಟವಾಗುವ ಸಮಯದಲ್ಲಿ ಒಂದನೇ ಬಾವದವನಿಗೆ ಬಲ್ಲಾಳನ ಅಥವಾ ಹೆಗ್ಗಡೆಯ ಕೈಹಿಡಿದು ಪಟ್ಟದಮಂಚದ ಮೇಲೆ ಕುಳಿತುಕೊಳ್ಳಿಸುವ ಅಧಿಕಾರವನ್ನೂ ಎರಡನೇ ಬಾವದವನಿಗೆ ಬಲ್ಲಾಳನ ಕೈಗೆ ಪಟ್ಟದ ಉಂಗುರವನ್ನು ಇಡುವ ಅಧಿಕಾರವನ್ನೂ ಮೂರನೇ ಗುರಿಕಾರನಿಗೆ ಬಲ್ಲಾಳನ ಕೈಯಲ್ಲಿ ಪಟ್ಟದ ಕತ್ತಿಯನ್ನು ಕೊಡುವ ಅಧಿಕಾರವನ್ನೂ, ನಾಲ್ಕನೇ ಗುರಿಕಾರನಿಗೆ ಬಲ್ಲಾಳನ ಪಟ್ಟದ ಹೆಸರನ್ನು ಕರಿಯುವ ಅಧಿಕಾರವನ್ನೂ ಕೊಟ್ಟು ಈ ಮಾಗಣೆಗುರಿಕಾರರು ಬಲ್ಲಾಳನ ಆಲೋಚನೆಗೆ ವಿರೋಧವಾಗಿ ನಿಲ್ಲದ ಹಾಗೆ ಮಾಡಿದರು.

ಈ ಹಕ್ಕುಗಳೆಲ್ಲವೂ ಸಂತಾನಪಾರಂಪರ್ಯವಾಗಿ ನಡೆದು ಬಂದವು. ಆದ್ದರಿಂದ ಜೈನರ ರಾಜ್ಯಭಾರಕಾಲದಲ್ಲಿ ಒಂದೊಂದು ಮಾಗಣೆಗೆ ಒಬ್ಬೊಬ್ಬ ಬಲ್ಲಾಳನೂ ಎರಡು ಬಾವದ ಮನೆತನಗಳೂ, ಒಂದು ಬಾಳಿಕೆ ಮನೆತನವೂ, ಒಂದು ಪರಾರಿ ಮನೆತನವೂ ಉಂಟಾದವು. ಮಾಗಣೆ ದೇವಸ್ಥಾನವು ಸೀಮೆ ದೇವಸ್ಥಾನವಾಯಿತು. ಈ ಸೀಮೆಯ ದೇವರ ಹೆಸರನ್ನು ಬಲ್ಲಾಳನ ಪಟ್ಟದ ಉಂಗುರದ ಮೇಲೆ ಕೆತ್ತಿಸಿದರು. ಸೀಮೆದೇವಸ್ಥಾನಗಳ ವರ್ಷಾವಧಿ ಉತ್ಸವಗಳಾಗಬೇಕಾದರೆ ಬಲ್ಲಾಳ, ಬಾವ, ಬಾಳಿಕೆ, ಪರಾರಿ ಮತ್ತು ಮಾಗಣೆಯವರು ಕೂಡಿ ದಿನ ನಿಶ್ಚಯಿಸಿ ಬಾಳೆಗೊನೆ ಕಡಿಯುವದೆಂಬ ವಾಡಿಕೆಯನ್ನೂ ಕೋಳಿ ಜೂಜಿಗೆ ಗೂಟಹಾಕುವದೆಂಬ ವಾಡಿಕೆಯನ್ನೂ ಮಾಡಿದರು. ಉತ್ಸವಕ್ಕೆ ದಿನ ನಿಶ್ಚಯಿಸಿದ ಮೇಲೆ ಆ ಸೀಮೆಯೊಳಗೆ ಯಾವ ತರದ ಶುಭಾಶುಭ ಕೆಲಸಗಳನ್ನು ಮಾಡಕೂಡದೆಂದೂ ಸೀಮೆ ಬಿಟ್ಟು ಯಾರೂ ಪರ ಊರಿಗೆ ಹೋಗಕೂಡದೆಂದೂ ನಿಶ್ಚಯಿಸಿದರು. ಈ ಜಿಲ್ಲೆಯಲ್ಲಿ ಪುರಾತನ ಕಾಲದಿಂದ ಇದ್ದವರ ವಂಶದವರು ಈಗಲೂ ಈ ಕ್ರಮವನ್ನು ಅನುಸರಿಸುತ್ತಾರೆ. ಪರದೇಶಗಳಿಂದ ಈ ಜಿಲ್ಲೆಗೆ ಬಂದು ನಿಂತ ಜಾತಿಮತದವರು ಈ ಕ್ರಮವನ್ನು ಅನುಸರಿಸುವದಿಲ್ಲ. ದೇವಸ್ಥಾನದ ಕಾಲಾವಧಿ ಉತ್ಸವಾದಿಗಳ ಸಮಯ ಮಾಗಣೆ ಗುರಿಕಾರರು ಮಾಗಣೆ ದೈವದ ಭಂಡಾರ ಸಹಿತ ದೇವಸ್ಥಾನಕ್ಕೆ ಬರುತ್ತಿದ್ದರು. ಅನಂತರ ಮಾಗಣೆಯವರು ಕೂಡಿ ರಾಜವೈಭವಗಳಿಂದ ಬಲ್ಲಾಳನನ್ನು ಬೀಡಿನಿಂದ ಕರಕೊಂಡು ಬರುತ್ತಿದ್ದರು. ಬಲ್ಲಾಳನು ದೇವಸ್ಥಾನದ ಚಾವಡಿಯಲ್ಲಿ ಕೂತುಕೊಳ್ಳುವ ಸ್ಥಳದಲ್ಲಿ ಒಂದು ಹೊಸ ಚಾಪೆಯನ್ನು ಹಾಸಿ ಇಡುತ್ತಿದ್ದರು. ಗ್ರಾಮ ಮಡಿವಾಳನು ಬಲ್ಲಾಳನು ಕೂತುಕೊಳ್ಳುವ ಸ್ಥಳದ ಮೇಲುಗಡೆ ಒಂದು ಮಡಿವಸ್ತ್ರವನ್ನು ಕಟ್ಟಿ ಅದರ ಮಧ್ಯದಲ್ಲಿ ಒಂದು ತೆಂಗಿನ ಕಾಯಿಯ ಜುಟ್ಟಿಗೆ 5 ವೀಳ್ಯದೆಲೆಯನ್ನು ಕಟ್ಟಿ ತೂಗಾಡಿಸುತ್ತಿದ್ದನು. ಬೀಡಿನ ಬಳಿಯಲ್ಲಿ ಆಗುವ ಕಂಬಳದ ಸಮಯ ಬಲ್ಲಾಳನು ಗುರಿಕಾರರಿಗೆ

ಎಲ್ಲಾ ತರದ ಮರ್ಯಾದೆಗಳನ್ನು ಕೊಡುತ್ತಿದ್ದನು. ಗುರಿಕಾರರು ದೈವದ ಭಂಡಾರ ಸಹಿತ ಬಲ್ಲಾಳರ ಬೀಡಿಗೆ ಬರುತ್ತಿದ್ದರು. ಈಗಲೂ ಕೆಲವು ಕಡೆಗಳಲ್ಲಿ ಈ ವಾಡಿಕೆಯು ಪ್ರಕಾರ ಈ ಕ್ರಮಗಳನ್ನು ಅನುಸರಿಸುತ್ತಾರೆ.

ಬಲ್ಲಾಳಿಕೆಗಳಲ್ಲಿ ಪಟ್ಟವು ಗಂಡಸರಿಗೂ ಹೆಂಗಸರಿಗೂ ಆಗುತ್ತಿತ್ತು. ಆದರೆ ಬಾವ, ಬಾಳಿಕೆ, ಪರಾರಿಯುವರು ಹೆಂಗಸರಾಗಿರಲಿಲ್ಲ. ಗ್ರಾಮ ಗುರಿಕಾರರೂ ಹೆಂಗಸರಾಗಿರಲಿಲ್ಲ. ಬಲ್ಲಾಳರಿಗೆ ಎರಡು ಮೂರು ಪಟ್ಟದ ಹೆಸರುಗಳೂ, ಬಾವ, ಬಾಳಿಕೆ, ಪರಾರಿಯುವರಿಗೆ ಎರಡೆರಡು ಪಟ್ಟದ ಹೆಸರುಗಳೂ ನಿಶ್ಚಯಿಸಲ್ಪಟ್ಟವು. ಈ ಸಂಸ್ಥೆಗಳು ಉಂಟಾಗಿ ಸುಮಾರು 2000 ವರುಷಗಳಾದರೂ ಗ್ರಾಮ ದೈವಗಳೂ, ಮಾಗಣೆ ದೈವಗಳೂ ನೇಮದ ಸಮಯದಲ್ಲಿ ಆ ಪಟ್ಟದ ಹೆಸರುಗಳನ್ನೇ ಕ್ರಮಪ್ರಕಾರ ಈಗಲೂ ಕರೆಯುವ ವಾಡಿಕೆಯು ಇದೆ.

ಕ್ರಿಸ್ತಶಕದ 11ನೇ ಶತಮಾನದಲ್ಲಿ ಮೈಸೂರು ಪ್ರಾಂತ್ಯದಲ್ಲಿ ಆಳಿಕೊಂಡಿದ್ದ ದೊಡ್ಡ ಜೈನರಾಜ ಕುಟುಂಬದವರಾದ, ಬಂಗ, ಚೌಟ, ಅಜಿಲ, ಸಾವಂತ, ಮೂಲ, ತೋಳಹಾರ, ಹೊನ್ನೆಯಕಂಬಳಿ, ಭೈರರಸ, ಭಾರಸ, (ಭಟ್ಕಲ ರಾಜಕುಟುಂಬ) ಬಿನ್ನಾಣಿ, ಕೊನ್ನ ಮುಂತಾದವರು ಈ ಜಿಲ್ಲೆಗೆ ಬಂದು ರಾಜ್ಯಸ್ಥಾಪನೆಮಾಡಿದ ಮೇಲೆ ಇವರು ತಮ್ಮ ತಮ್ಮ ರಾಜ್ಯದಲ್ಲಿರುವ ಬಲಿಷ್ಟರಾದ ನಾಲ್ಕು ಮಂದಿ ಗುರಿಕಾರರನ್ನು ರಾಜಗುತ್ತಿನವರಾಗಿ ನಿಯಮಿಸಿದರು. ಮತ್ತು ಇವರನ್ನು ನಾಲ್ಕು ಮಂದಿ ಬಾವದವರೆಂದು ಕರೆದರು. ರಾಜರಿಗೆ ಪಟ್ಟವಾಗುವಾಗ ಪಟ್ಟದ ಮಂಚದ ಮೇಲೆ ಕೂತುಕೊಳ್ಳಿಸುವ, ಕತ್ತಿ ಕೊಡುವ, ಕೈಗೆ ಪಟ್ಟದ ಉಂಗುರ ಇಡುವ ಮತ್ತು ಪಟ್ಟದ ಹೆಸರು ಕರೆಯುವ ಅಧಿಕಾರವನ್ನು ಈ ನಾಲ್ಕು ಮಂದಿ ಬಾವದವರಿಗೆ ಕೊಟ್ಟರು. ಇವರಲ್ಲಿ ಕೆಲವರನ್ನು ಮುನ್ನೂರಾಳ (ಮುನ್ನೂರು ಸೈನ್ಯದ ಸೇನಾಧಿಪತಿ) ನಾನೂರಾಳ (ನಾನ್ನೂರು ಸೈನ್ಯದ ಸೇನಾಧಿಪತಿ) ಸಾಂರಾಳ (ಸಾವಿರ

ಸೈನ್ಯದ ಸೇನಾಧಿಪತಿ) ಐಸಾರಾಳ (ಐದು ಸಾವಿರ ಸೈನ್ಯದ ಸೇನಾಧಿಪತಿ) ಮುಂತಾದ ಹುದ್ದೇದಾರರಾಗಿ ನಿಯಮಿಸಿದರು. ಅಲ್ಲದೆ ಒಂದೊಂದು ರಾಜ್ಯಕ್ಕೆ ಒಂದೊಂದು ರಾಜ್ಯದ ದೇವಸ್ಥಾನವನ್ನು ಕಟ್ಟಿಸಿದರು. ಈ ದೇವಸ್ಥಾನಗಳಲ್ಲಿ ಮೊದಲನೇ ಮರ್ಯಾದೆಯು ರಾಜನಿಗೂ, ಅನಂತರದ್ದು ರಾಜಗುತ್ತಿನವರಿಗೂ ಸಿಕ್ಕುತ್ತಿತ್ತು. ಈ ದೇವರ ಹೆಸರನ್ನು ರಾಜನ ಪಟ್ಟದ ಉಂಗುರದ ಮೇಲೆ ಕೆತ್ತಿಸಿದರು. ಆದ್ದರಿಂದ ಕನ್ನಡ ಜಿಲ್ಲೆಯಲ್ಲಿ ಆಳಿದ ಅರಸರು ಜೈನರಾದರೂ ಅವರ ಪಟ್ಟದ ಉಂಗುರದ ಮೇಲೆ ಹಿಂದೂದೇವರ ಹೆಸರುಗಳೇ ಕೆತ್ತಲ್ಪಟ್ಟಿವೆ.

ಚಾಲುಕ್ಯರ ಕಾಲದ ವರೆಗೆ ಈ ಜಿಲ್ಲೆಯ ಮೇಲಾಧಿಕಾರವನ್ನು ನಡಿಸುತ್ತಿದ್ದ ಅಲೂಪ ಅರಸರ ಕಾಲದಲ್ಲಿ ಅವರ ರಾಜಧಾನಿಯಲ್ಲಿದ್ದ ಉದಿಯಾವರ ಶಂಬುಕಲ್ಲು ಭೈರವದೇವಸ್ಥಾನವು ತುಳುರಾಜ್ಯದ ರಾಜ ದೇವಸ್ಥಾನವಾಯಿತು. ಅನಂತರ ಆಳಿದ ಹೊಯ್ಸಳಬಲ್ಲಾಳರ ಕಾಲದಲ್ಲಿ ಅಲೂಪರ ರಾಜಧಾನಿಯು ಮಂಗಳೂರು ಆಯಿತು. ಆಗ ಕದ್ರಿ ಮಂಜುನಾಥ ದೇವಸ್ಥಾನವು ದಕ್ಷಿಣಭಾಗದ ರಾಜದೇವಸ್ಥಾನವಾಯಿತು. ವಿಜಯನಗರ ಅರಸರ ಕಾಲದಲ್ಲಿ ತುಳುರಾಜ್ಯವನ್ನು ಎರಡು ಭಾಗಗಳಾಗಿ ಮಾಡಿ ಬಾರಕೂರು ಪಂಚಲಿಂಗೇಶ್ವರ ದೇವಸ್ಥಾನವನ್ನು ಬಾರಕೂರು ಹೋಬಳಿಯ ದೇವಸ್ಥಾನವಾಗಿಯೂ, ಕದ್ರಿ ಮಂಜುನಾಥ ದೇವಸ್ಥಾನವನ್ನು ಮಂಗಳೂರು ಹೋಬಳಿಯ (division) ದೇವಸ್ಥಾನವಾಗಿಯೂ ಮಾಡಿದರು. ಆಯಾ ಹೋಬಳಿಯ ನ್ಯಾಯಗಳನ್ನು ತೀರಿಸುವದಕ್ಕಾಗಿ ಹೋಬಳಿಯ ಗುರಿಕಾರರನ್ನು ನಿಯಮಿಸಿದರು. ಬಾರಕೂರು ಹೋಬಳಿಗೆ (1) ಹನೆಹಳ್ಳಿ, (2) ದೊಡ್ಡಮನೆ, (3) ನಡುಮನೆ, (4) ಪಡುಮನೆ ಹೀಗೆ 4 ಮನೆತನದವರನ್ನೂ, ಮಂಗಳೂರು ಹೋಬಳಿಗೆ (1) ಕೊಡಿಯಾಲಗುತ್ತು, (2) ಗುಡ್ಡೆಗುತ್ತು, (3) ಬಡಿಲಗುತ್ತು ಈ ಮೂರು ಮನೆತನದವರನ್ನೂ ನಿಯಮಿಸಿದರು. ಬಾರಕೂರು ಹೋಬಳಿಯ ಗುರಿಕಾರರು ಬಾರಕೂರು ಪಂಚಲಿಂಗೇಶ್ವರ ದೇವಸ್ಥಾನದಲ್ಲಿಯೂ,

ಮಂಗಳೂರು ಹೋಬಳಿಯು ಗುರಿಕಾರರು ಕದ್ರೆ ಮಂಜುನಾಥ ದೇವಸ್ಥಾನ ದಲ್ಲಿಯೂ ಹೋಬಳಿಯ ನ್ಯಾಯಗಳನ್ನು ತೀರ್ಮಾನಿಸುತ್ತಿದ್ದರು.

ಈ ಜಿಲ್ಲೆಯಲ್ಲಿ ಆಳಿದ ಬಲ್ಲಾಳರ ಮತ್ತು ಹೆಗ್ಗಡೆಯರ ವಿಷಯ ಸಂಕ್ಷೇಪವಾಗಿ ಈ ಕೆಳಗೆ ಬರೆದಿದೆ.

---

## ಮಂಗಳೂರು ತಾಲೂಕಿನ ಬಲ್ಲಾಳರು.

1. **ಮೂನಾರ್ಡು ಮದೂರಿಪ್ಪೆಯ ಹೆಗ್ಗಡೆ:**—ಈ ವಂಶ ದವರು ಕುತ್ತೆತ್ತೂರು, ಸುರತಕಲ್ಲು ಮತ್ತು ಎಕ್ಕಾರು ಎಂಬ ಮೂರು ನಾಡುಗಳನ್ನು ಆಳಿಕೊಂಡಿದ್ದರು. ಈ ಮೂರು ನಾಡುಗಳೆಂದರೆ: (1) ಕುತ್ತೆತೂರು, (2) ಇಡ್ಯ, (3) ಸುರತಕಲ್ಲು, (4) ಸಸಿಹಿತ್ಲು, (5) ಚೇಳಾರು, (6) ಸುರೆಯ, (7) ದೇಲಂತಬೆಟ್ಟು, (8) ಮದ್ಯ ಈ ಎಂಟು ಗ್ರಾಮಗಳನ್ನು ಒಳಕೊಂಡಿರುವ ಪ್ರದೇಶವಾಗಿತ್ತು. ಇವರ ಬೀಡು ಕುತ್ತೆತ್ತೂರಿನಲ್ಲಿತ್ತು. ಭೂತಾಳಪಾಂಡ್ಯನ ಕಟ್ಟಿನಲ್ಲಿ ಈ ಮನೆತನಕ್ಕೆ ಕಿನ್ನರಿ ಅರಸು ಎಂಬ ಹೆಸರು ಇದೆ. ಸುರತಕಲ್ಲಿನ ಸದಾಶಿವ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಅರಮನೆಯ ಹತ್ತರ ಮಹಾಲಿಂಗೇಶ್ವರ ದೇವಸ್ಥಾನವು ಇದೆ. ಬಸದಿಯು ಬಿದ್ದುಹೋಗಿಯದೆ. ಈ ಮನೆತನವು ಈಗ ನಾಶವಾಗಿಯದೆ. ಕುತ್ತೆತ್ತೂರು, ಕಂಡಿಗೆ, ಚೇಳಾರು ಈ ಮೂರು ಮಾಗಣೆ ಗುತ್ತುಗಳು. 4ನೇ ಗುತ್ತು ಯಾವ ದೆಂದು ತಿಳಿಯುವದಿಲ್ಲ. ಸುರತಕಲ್ಲು ದೇವಸ್ಥಾನವು ಹಾಳುಬಿದ್ದ ಸ್ಥಿತಿಯಲ್ಲಿದೆ. ಕಟೀಲು ದುರ್ಗಾಪರಮೇಶ್ವರೀ ದೇವಸ್ಥಾನವು ಉನ್ನತ ಸ್ಥಿತಿಯಲ್ಲಿದೆ.

2. **ಪೇಜಾವರ ಬಲ್ಲಾಳ:**—ಈ ವಂಶದವರು (1) ತೋಕೂರು, (2) ಬಾಳ, (3) ಕಳವಾರು, (4) ಬಜಪೆ, (5) ಕೆಂಜಾರ, (6) ಮಳ ವೂರು, (7) ಪೆರ್ಮುದೆ ಈ ಏಳು ಗ್ರಾಮಗಳನ್ನು ಒಳಕೊಂಡಿರುವ ಪೇಜಾವರ ಸೀಮೆಯನ್ನು ಆಳುತ್ತಿದ್ದರು. ಇವರ ಬೀಡು ಪೇಜಾವರದಲ್ಲಿತ್ತು.

ಬಸದಿಯು ಸಹ ಅಲ್ಲಿಯೇ ಇತ್ತು. ಈಗ ಬಸದಿಯೂ ಬೀಡೂ ನೆಲಸಮವಾಗಿವೆ. ಈ ಸೀಮೆಯಲ್ಲಿ ತೋಕೂರುಗುತ್ತು ಮುಖ್ಯ ಗುತ್ತಾಗಿತ್ತು.

3. **ಬೈಲುಬಲ್ಲಾಳ:**— ಈ ವಂಶದವರು (1) ಮೂಡಕರೆ, (2) ಕೊಳಂಬೆ, (3) ಅದ್ಯಪಾಡಿ, (4) ಕಂದಾವರ ಗ್ರಾಮಗಳನ್ನು ಆಳುತ್ತಿದ್ದರು. ಬೀಡು ಬೈಲಿನಲ್ಲಿತ್ತು. ಹಾಳುಬಿದ್ದಿರುವ ಈ ಸ್ಥಳವನ್ನು ಈಗಲೂ ನೋಡಬಹುದು. ಅದ್ಯಪಾಡಿ ಆದಿನಾಥೇಶ್ವರ ದೇವಸ್ಥಾನವು ಸೀಮೆ ದೇವಸ್ಥಾನವಾಗಿತ್ತು. ಬಸದಿಯು ಬೈಲಿನಲ್ಲಿಯೇ ಇತ್ತು. ಇದೂ ಬಿದ್ದು ಹೋಗಿಯದೆ. ಈ ಸೀಮೆಯಲ್ಲಿ ನಾಲ್ಕು ಮಾಗಣೆಗುತ್ತುಗಳು ಯಾವವೆಂದರೆ: (1) ಎತಮೊಗರುಗುತ್ತು, (ಕೊಳಂಬೆಗ್ರಾಮ) (2) ಕೊಳಂಬೆಗುತ್ತು, (3) ಮೂಡಕರೆ, (4) ಅದ್ಯಪಾಡಿಗುತ್ತು. ಈ ಬಲ್ಲಾಳನಿಗೆ ಪಟ್ಟಕಟ್ಟುವಾಗ ಬಲ್ಲಾಳನ ಕೈಹಿಡಿದು ಪಟ್ಟದ ಮಂಚದ ಮೇಲೆ ಕೂತುಕೊಳ್ಳಿಸುವ ಅಧಿಕಾರವು ಎತಮೊಗರು ಗುತ್ತಿನವರಿಗೂ, (2) ಪಟ್ಟದ ಉಂಗುರವನ್ನು ಬಲ್ಲಾಳನ ಕೈಬೆರಳಿಗೆ ಇಡುವ ಅಧಿಕಾರವು ಮೂಡುಕರೆ ಗುತ್ತಿನವರಿಗೂ, (3) ಪಟ್ಟದ ಕತ್ತಿಯನ್ನು ಬಲ್ಲಾಳನ ಕೈಯಲ್ಲಿ ಕೊಡುವ ಅಧಿಕಾರವು ಕೊಳಂಬೆ ಗುತ್ತಿನವರಿಗೂ, (4) ಪಟ್ಟದ ಹೆಸರನ್ನು ಕರಿಯುವ ಅಧಿಕಾರವು ಅದ್ಯಪಾಡಿ ಗುತ್ತಿನವರಿಗೂ ಇತ್ತು. ಇವರ ಪಟ್ಟದ ಉಂಗುರದ ಮೇಲೆ ಶ್ರೀಆದಿನಾಥೇಶ್ವರ ಎಂದು ಇತ್ತು. ಇವರ ಪಟ್ಟದ ಹೆಸರುಗಳು: (1) ಭದ್ರಯ್ಯ ಬಲ್ಲಾಳ ಮತ್ತು (2) ಚಂದ್ರರಾಜ ಬಲ್ಲಾಳ. ಅದ್ಯಪಾಡಿ ವಾಸುದೇವ ಉಡಿಪನ ಮನೆಯವರು ರಾಜಪುರೋಹಿತರಾಗಿದ್ದರು.

4. **ಪಣಂಬೂರು ಮುದ್ದಹೆಗ್ಗಡೆ:**— ಈ ವಂಶದವರು (1) ಪಣಂಬೂರು, (2) ತಣ್ಣೀರುಬಾವಿ, (3) ಹೊಸಬೆಟ್ಟು, (4) ಬೈಕಂಪಾಡಿ, (5) ಕುಳ್ಯಾ ಈ 5 ಗ್ರಾಮಗಳನ್ನು ಆಳಿಕೊಂಡಿದ್ದರು. ಪಣಂಬೂರು ಮಹಾಲಿಂಗೇಶ್ವರ ದೇವಸ್ಥಾನವು ಸೀಮೆ ದೇವಸ್ಥಾನವಾಗಿತ್ತು. ಬೀಡೂ,

ಬಸದಿಯೂ ಪಣಂಬೂರಿನಲ್ಲಿ ಇದ್ದವು. ಈ ಹೆಗ್ಗಡೆಯವರ ವಂಶವು ಆಳಿಕೊಂಡಿರುವಾಗ ಇಕ್ಕೇರಿ ವಂಶದವರ ಅಂತ್ಯಕಾಲದ ವರೆಗೆ ಪಣಂಬೂರು ಪಟ್ಟಣವು ದೊಡ್ಡದಾಗಿದ್ದು, ಒಳ್ಳೇ ವ್ಯಾಪಾರ ಸ್ಥಳವಾಗಿತ್ತು. ಭೂತಾಳಪಾಂಡ್ಯ ಕಟ್ಟಿನಲ್ಲಿ ಈ ಕುಟುಂಬಕ್ಕೆ ಮುದ್ದಾಳಕಿನ್ನರಿ ಅರಸು ಎಂದು ಹೆಸರು ಇದೆ. ಹಾಳುಬಿದ್ದಿರುವ ಬೀಡಿನ ಸ್ಥಳವನ್ನು ಕಾಂತುನೆಕ್ರಿ ಎಂಬ ಭೂತದ ಸ್ಥಾನದ ಮುಂದುಗಡೆ ಈಗಲೂ ನೋಡಬಹುದು.

5. **ಕೂಳೂರು ದೊರೆಬಲ್ಲಾಳ:**—ಈ ವಂಶದವರು (1) ಪಂಜಿಮೊಗರು, (2) ಪಡುಕೋಡಿ, (3) ಕಾವೂರು, (4) ಕುಂಜತಬೈಲು, (5) ಮರಕಡ, (6) ಕೂಳೂರು ಈ 6 ಗ್ರಾಮುಗಳನ್ನು ಆಳಿಕೊಂಡಿದ್ದರು. ಬೀಡು ಪಡುಕೋಡಿ ಗ್ರಾಮುದಲ್ಲಿದೆ. ಇವರ ಮನೆತನದವರ ಹೆಸರು ಕೂಳೂರು ಕರ್ಣಂತಾಯ ದೊರೆಬಲ್ಲಾಳ. ಈ ಸೀಮೆಯ ಗುತ್ತುಗಳು: (1) ಪಾಣಂಜೆ, (ಮರಕಡ ಗ್ರಾಮುದಲ್ಲಿ) (2) ಪಡುಕೋಡಿ, (3) ಎಮ್ಮರ್ಜಿಲು (ಕುಂಜತಬೈಲುಗ್ರಾಮುದಲ್ಲಿ), (4) ಮಾಲಾಡಿ (ಕಾವೂರು ಗ್ರಾಮುದಲ್ಲಿ). ಈ ಬಲ್ಲಾಳರಿಗೆ ಪಟ್ಟಕಟ್ಟುವಾಗ ಕೈಹಿಡಿದು ಪಟ್ಟದ ಮಂಚದ ಮೇಲೆ ಕೂತುಕೊಳ್ಳಿಸುವ ಅಧಿಕಾರವು ಮಾಲಾಡಿಗುತ್ತಿನವರಿಗೂ (2) ಪಟ್ಟದ ಉಂಗುರವನ್ನು ಕೈಬೆರಳಿಗೆ ಇಡುವ ಅಧಿಕಾರವು ಪಾಣಂಜೆಗುತ್ತಿನವರಿಗೂ, (3) ಪಟ್ಟದ ಕತ್ತಿಯನ್ನು ಕೈಯಲ್ಲಿ ಕೊಡುವ ಅಧಿಕಾರವು ಪಡುಕೋಡಿ ಗುತ್ತಿನವರಿಗೂ, (4) ಪಟ್ಟದ ಹೆಸರನ್ನು ಕರಿಯುವ ಅಧಿಕಾರವು ಎಮ್ಮರ್ಜಿಲ ಗುತ್ತಿನವರಿಗೂ ಇದೆ. ಕಾವೂರು ದೇವಸ್ಥಾನದ ಅರ್ಚಕರು ರಾಜಪುರೋಹಿತರು. ಕಾವೂರು ಮಹಾಲಿಂಗೇಶ್ವರ ದೇವಸ್ಥಾನವು ಸೀಮೆದೇವಸ್ಥಾನವಾಗಿದೆ. ರಾಜಮುದ್ರೆಯಲ್ಲಿ ಶ್ರೀಮಹಾಲಿಂಗೇಶ್ವರ ಪ್ರಸನ್ನಃ ಎಂದು ಇದೆ. ಶಾ. ಶ. 1563ನೇ ವಿಶು ಸಂ|ರದ ಫಾಲ್ಗುಣ ಶು| ೧೦ರಲ್ಲಿ ಕೆಳದಿವೀರ ಭದ್ರಪ್ಪನಾಯಕನಿಗೂ ಶಂಕರದೇವಿ ಬಂಗರಾಣಿಗೂ ಆದ ಕರಾರಿನ ಪ್ರಕಾರ ಈ ಸೀಮೆಗೆ ಸೇರಿದ 210 ವರಹ ಹುಟ್ಟುವಳಿ ಇರುವ ಕೂಳೂರು ಗ್ರಾಮುವು ಶಂಕರದೇವಿಗೆ

ಕೊಡಲ್ಪಟ್ಟಿತು. ಅಂದಿನಿಂದ ಆ ಗ್ರಾಮಕ್ಕೆ ಬಂಗ್ರಕೂಳೂರು ಎಂದು ಹೆಸರಾಯಿತು.

**6 ಮಣೇಲ ಬಲ್ಲಾಳ:**—ಈ ವಂಶದವರು (1) ಅರ್ಕುಳ, (2) ಕೊಡಮಣ್ಣು, (3) ಮೇರಮಜಲು, (4) ಅಮ್ಮುಣಜೆ, (5) ಕರಿಯಂಗಳ, (6) ತೆಂಕ ಎಡಪದವು, (7) ಬಡಗ ಎಡಪದವು, (8) ಅಡ್ಡೂರು, (9) ಕೆಲಿಂಜಾರು, (10) ಕುಳವೂರು, (11) ತೆಂಕ ಉಳಿಪಾಡಿ, (12) ಬಡಗ ಉಳಿಪಾಡಿ, (13) ಮೊಗರು, (14) ಮುತ್ತೂರು, (15) ಮಲ್ಲೂರು ಈ 15 ಗ್ರಾಮಗಳನ್ನು ಒಳಕೊಂಡಿರುವ ಮಣೇಲ ಸಾವಿರ ಸೀಮೆಯನ್ನು ಆಳಿಕೊಂಡಿದ್ದರು. ಮೊದಲು ಈ ಸೀಮೆಯು ಅಲೂಪ ಅರಸರ ಕೈ ಕೆಳಗಿತ್ತು. ಅನಂತರ ಕಡೆಯ ಅಲೂಪ ಅರಸನಾದ ಸೋಯಿದೇವನು ಇದನ್ನು ಬಂಗರಾಜನಿಗೆ ಕೊಟ್ಟನು. ಶಾ. ಶ. 1332ರಲ್ಲಿ ಬಂಗರಾಜನು ಇದನ್ನು ಚೌಟರಾಜನಿಗೆ ಬಿಟ್ಟುಕೊಟ್ಟನು. ಈ ಬಲ್ಲಾಳರ ಬೀಡೂ ಅನಂತನಾಥ ಬಸದಿಯೂ ಮಣೇಲಿನಲ್ಲಿದೆ. ಸೀಮೆ ದೇವಸ್ಥಾನವಾದ ರಾಜರಾಜೇಶ್ವರೀ ದೇವಸ್ಥಾನವು ಪೊಳಲಿಯಲ್ಲಿದೆ. ಈ ಸೀಮೆಯ ಮುಖ್ಯವಾದ ಗುತ್ತುಗಳು: (1) ಅಮ್ಮುಣಜೆ, (2) ಉಳಿಪಾಡಿ, (3) ಕಟ್ಟೆಮಾರು, (4) ಮುತ್ತೂರು, (5) ಕಿರಾಲೆ, (6) ನಿಡ್ಡೋಡಿ, (7) ಮಂಗಾಜೆ.

**7. ಅರ್ಕುಳ ನಾನೂರಾಳ:**— ಈ ಮನೆತನದವರು ಬಂಗ ರಾಜನ ಅರ್ಕುಳ ಕೋಟೆಯ ಸೇನಾಧಿಪತಿಗಳಾಗಿದ್ದರು. ಮಣೇಲ ಸಾವಿರ ಸೀಮೆಯನ್ನು ಬಂಗರಾಜನು ಚೌಟರಾಜನಿಗೆ ಬಿಟ್ಟುಕೊಟ್ಟ ಮೇಲೆ ಚೌಟರಾಜನು ಅರ್ಕುಳ ಗ್ರಾಮವನ್ನು ಗ್ರಾಮದೈವವಾದ ಮಗರಂದಾಯ ದೈವಕ್ಕೆ ಉಂಬಳಿಯಾಗಿ ಬಿಟ್ಟು ಈ ಮನೆತನದವರನ್ನು ತನ್ನ ಸೇನಾಧಿಪತಿಯಾಗಿಯೂ ಈ ದೈವದ ಆಸ್ತಿಯ ಸಂತಾನಪಾರಂಪರ್ಯ ಆಡಳಿತೆದಾರರಾಗಿಯೂ ನಿಯಮಿಸಿದನು. ಕೋಟೆಯು ಬೀಡಿನ ಹತ್ತಿರ ದಕ್ಷಿಣದಿಕ್ಕಿಗಿದೆ. ಮಗರಂದಾಯ ದೈವಸ್ಥಾನವು ಗುಮ್ಮಡದುರ್ಗ ಎಂಬ

ತಗ್ಗಾದ ಗುಡ್ಡದ ಹತ್ತಿರ ಇದೆ. ಬೀಡಿನವರು ಕಟ್ಟಿಸಿದ ಅನಂತನಾಥ ಬಸದಿಯೂ ದೈವಸ್ಥಾನದ ಹತ್ತಿರವೇ ಇದೆ. ಪೋರ್ತುಗೀಸರ ಕಾಲದಲ್ಲಿ ಅರ್ಕುಳ ಪಟ್ಟಣವು ಹಾಳಾಯಿತು. ವರದೇಶ್ವರ ದೇವಸ್ಥಾನವು ಗ್ರಾಮದೇವಸ್ಥಾನವಾಗಿದೆ.

8. **ವಾಮಂಜೂರು ಬಲ್ಲಾಳ:—** ಈ ವಂಶದವರು (1) ತಿರುವೈಲು, (2) ಬೊಂಡಂತಿಲ, (3) ಉಳ್ಯಾಬೆಟ್ಟು, (4) ಮೂಳೂರು, (5) ಮೂಡು ಪೆರಾರ, (6) ಪಡುಪೆರಾರ ಗ್ರಾಮಗಳನ್ನು ಆಳುತ್ತಿದ್ದರು. ಬೀಡು ವಾಮಂಜೂರಿನಲ್ಲಿತ್ತು. ಈಗ ಪೂರ್ಣ ನಾಶವಾಗಿದೆ. ಚಂದ್ರನಾಥ ಬಸದಿಯೂ ವಾಮಂಜೂರಿನಲ್ಲಿ ನುರ್ಲಂಗಡಿ ಎಂಬಲ್ಲಿದೆ. ವಾಮಂಜೂರು ಅಮೃತೇಶ್ವರ ದೇವಸ್ಥಾನವು ಸೀಮೆದೇವಸ್ಥಾನವಾಗಿತ್ತು. ಮಾಗಣೆ ಗುತ್ತುಗಳು ಯಾವವೆಂದರೆ: (1) ತಿರುವೈಲು, (2) ಬೊಂಡಂತಿಲ, (3) ಉಳ್ಯಾಬೆಟ್ಟು, (4) ಪಡುಗುತ್ತು, (5) ಪೆರ್ಮಂಕಿ. ಈ ಸೀಮೆಯನ್ನು ಅಲೂಪ ಅರಸರು ಕುಂಬಳೆ ಅರಸನಿಗೆ ಬಿಟ್ಟು ಕೊಟ್ಟರು. ಆ ಸಮಯದಲ್ಲಿ ಕುಂಬಳೆ ಅರಸನು ಉಳ್ಯಾಬೆಟ್ಟು ಗ್ರಾಮದಲ್ಲಿ ಅರಮನೆಯನ್ನು ಕಟ್ಟಿಸಿದನು. ಅಲ್ಲಿಯೇ ಒಂದು ಸಣ್ಣ ದೇವಸ್ಥಾನವನ್ನು ಕಟ್ಟಿಸಿ ಮೈಲಾರಲಿಂಗವನ್ನು ಪ್ರತಿಷ್ಠಿಸಿದನು. ಅನಂತರ ಚೌಟರರಸನು ಕುಂಬಳೆ ಅರಸನಿಗೆ ಸಹಾಯಮಾಡಿದ್ದಕ್ಕಾಗಿ ಈ ವಾಮಂಜೂರು ಸೀಮೆಯನ್ನು ಚೌಟರಾಜನಿಗೆ ವಹಿಸಿಕೊಟ್ಟನು. ಕುಂಬಳೆ ಅರಸನ ಅರಮನೆ ಮತ್ತು ದೇವಸ್ಥಾನದ ಹಾಳುಬಿದ್ದ ಸ್ಥಳವನ್ನು ಉಳ್ಯಾಬೆಟ್ಟು ಗ್ರಾಮದಲ್ಲಿ ಈಗಲೂ ನೋಡಬಹುದು. ದೇವಸ್ಥಾನದಲ್ಲಿ ಪ್ರತಿಷ್ಠಿಸಿದ ಮೈಲಾರಲಿಂಗವು ಉಳ್ಯಾಬೆಟ್ಟು ಗ್ರಾಮದಲ್ಲಿರುವ ಅವರ ಪುರೋಹಿತರ ಮನೆಯಲ್ಲಿದೆ.

9. **ನೀರುಮಾರ್ಗ ಬಲ್ಲಾಳ:—** ಈ ವಂಶದವರು (1) ಮೂಡುಶೆಡ್ಡೆ, (2) ಪಡುಶೆಡ್ಡೆ, (3) ಪಚ್ಚನಾಡಿ, (4) ಕುಡುಪು,

(5) ಪದವು, (6) ಮರೋಳಿ, (7) ಅಳಪೆ ಈ ಗ್ರಾಮಗಳನ್ನು ಒಳ ಕೊಂಡಿರುವ ನೀರುಮಾರ್ಗ ಸೀಮೆಯನ್ನು ಆಳಿಕೊಂಡಿದ್ದರು. ಇವರ ಬೀಡೂ ಬಸದಿಯೂ ನೀರುಮಾರ್ಗ ಗ್ರಾಮದಲ್ಲಿದ್ದವು. ನೀರುಮಾರ್ಗ ಸುಬ್ರಾಯ ದೇವಸ್ಥಾನವು ಸೀಮೆ ದೇವಸ್ಥಾನವಾಗಿತ್ತು. ಅಲೂಪ ಅರಸನಾದ ಕುಲಶೇಖರನು ತನ್ನ ಅರಮನೆಯನ್ನು ನೀರುಮಾರ್ಗದಲ್ಲಿ ಕಟ್ಟಿಸಿದ ಮೇಲೆ ಅದಕ್ಕೆ ಕೂಲಿಶೇಖರ ಎಂಬ ಹೆಸರು ಬಂತು. ಈ ಅರಮನೆಯು ಈಗ ಕೂಲಿಶೇಖರ ಇಗರ್ಜಿಯು ಕಟ್ಟಿದ ಸ್ಥಳದ ಹತ್ತಿರದಲ್ಲಿತ್ತು. ಕುಡುಪು ಅನಂತಪದ್ಮನಾಭ ಸುಬ್ರಾಯ ದೇವಸ್ಥಾನ ವನ್ನು ಕಟ್ಟಿಸಿದ ಮೇಲೆ ನೀರುಮಾರ್ಗ ಸುಬ್ರಾಯ ದೇವಸ್ಥಾನವು ಬಹಳ ಹೀನ ಸ್ಥಿತಿಗೆ ಬಂದು ಈಗ ಪೂರ್ಣ ಹಾಳುಬಿದ್ದಿದೆ.

**10. ಅತ್ತಾವರ ಬಲ್ಲಾಳ:**—ಈ ವಂಶದವರು (1) ಅತ್ತಾವರ, (2) ಕಂಕನಾಡಿ, (3) ದೇರೆಬೈಲು, (4) ಮಂಗಳೂರುತೋಟ, (5) ಕೊಡಿ ಯಾಲಬೈಲು, (6) ಬೋಳೂರು, (7) ಕಸಬಾಬಜಾರ, (8) ಕದ್ರಿ, (9) ಜಪ್ಪಿನಮೊಗರು ಗ್ರಾಮಗಳನ್ನು ಆಳುತ್ತಿದ್ದರು ಇವರ ಬೀಡು ಒಂದು ಅತ್ತಾವರದಲ್ಲಿ, ಇನ್ನೊಂದು ಜಪ್ಪಿನ ಮೊಗರಿನಲ್ಲಿದ್ದವು. ಎರಡು ಬೀಡು ಗಳಲ್ಲಿ ಜಪ್ಪಿನಲ್ಲಿರುವ ಬೀಡು ಪೂರ್ಣ ನಾಶವಾಗಿ ಈಗ ಅಲ್ಲಿ ರೋಮನ್ ಕೆಥೋಲಿಕರ ಒಂದು ಮನೆಯು ಇದೆ. ಇನ್ನೊಂದರ ಒಂದು ಅಂಶವು ಉಳಿದಿದೆ. ಇದು ಅತ್ತಾವರ ಚಕ್ರಪಾಣಿ ದೇವಸ್ಥಾನದ ದಕ್ಷಿಣಕ್ಕಿದೆ. ಬೋಳಾರ ಮಂಗಳಾದೇವಿ ದೇವಸ್ಥಾನವು ಸೀಮೆ ದೇವಸ್ಥಾನವಾಗಿತ್ತು. ಅತ್ತಾವರ ದೈವಗಳು ಮಾಗಣೆ ದೈವಗಳಾಗಿರುತ್ತವೆ. ಈ ಬಲ್ಲಾಳರ ವಂಶದವರು ಈ ದೈವಗಳಿಗೆ ಅತ್ತಾವರದಲ್ಲಿ ಸ್ಥಾನಕಟ್ಟಿಸಿ ಕೊಟ್ಟರೆಂದು ಅತ್ತಾವರ ದೈವಗಳ ಪಾಡ್ದನದಲ್ಲಿ ಕಾಣುತ್ತದೆ. ಈ ಸೀಮೆಯಲ್ಲಿ (1) ಅತ್ತಾವರ, (2) ಕೊಡಿಯಾಲಬೈಲು ಎಂಬ ಎರಡು ಗುತ್ತುಗಳು ಈಗ ಇವೆ. ಜಪ್ಪಿನಲ್ಲಿದ್ದ ಬಸದಿಯು ಅಳಿದು ಹೋಗಿಯದೆ. ಮಂಗಳೂರು ಶಾಂತೀಶ್ವರ ಬಸದಿಯು ಈಗಲೂ ಬಸದಿಕೇರಿಯಲ್ಲಿ ಇದೆ.

**11. ಬಜಿಲ ಬಲ್ಲಾಳ:**—ಈ ವಂಶದವರು (1) ಅಡ್ಯಾರು, (2) ಕಣ್ಣೂರು, (3) ಬಜಿಲ ಈ ಮೂರು ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡು ಒಂದು ಕಣ್ಣೂರಿನಲ್ಲಿತ್ತು. ಇನ್ನೊಂದು ಬಜಿಲಿನಲ್ಲಿತ್ತು. ಇದು ಈಗ ಕಾಣೆಕರಿಯ ಗುತ್ತಿನವರ ಸ್ವಾಧೀನವಿದೆ. ಈಗ ಎರಡೂ ಇಲ್ಲ. ಈ ಬಲ್ಲಾಳರಿಗೂ, ವಿಟ್ಲ ಅರಸನಿಗೂ, ಪೈವಳಿಕೆ ಬಲ್ಲಾಳರಿಗೂ ಸಂಬಂಧವಿತ್ತು. ಇವರು ಜೈನಬಲ್ಲಾಳರಲ್ಲ. ಬಲ್ಲಾಳ ಜಾತಿಯವರಾಗಿದ್ದರು. ಈ ಸೀಮೆಯಲ್ಲಿ ಬಡಿಲಗುತ್ತು, ಕಾಣೆಕರಿಯಗುತ್ತು, ಗುಡ್ಡೆಗುತ್ತು ಈ ಮೂರು ದೊಡ್ಡ ಗುತ್ತುಗಳು.

**12. ಇನವಳ್ಳಿ ಬಲ್ಲಾಳ:**—ಈ ವಂಶದವರ ಕೈಕೆಳಗೆ (1) ಪಾವೂರು, (2) ಹರೇಕಳ, (3) ಕೊಣಾಜೆ, (4) ಅಂಬಲಮೊಗರು ಗ್ರಾಮಗಳನ್ನು ಒಳಕೊಂಡಿರುವ ಹರೇಕಳ ಸಾವಿರಸೀಮೆಯು ಇತ್ತು. ಬೀಡು ಇನವಳ್ಳಿಯಲ್ಲಿತ್ತು. ಗುತ್ತುಗಳು: (1) ಪಾವೂರು, (2) ಹರೇಕಳ, (3) ಕೋಟೆತಡಿ, (4) ಕೊಟರೆ, (5) ಪಟ್ಣಮೊಗರು, (6) ದಬ್ಬೇಲು, (7) ಸಂಪ್ಯಾಗಡಿ, (8) ಕಡಂಜ, (9) ಪಂಾರಿ, (10) ಕಲ್ಲಿಮಾರು, (11) ಮಾಗಣೆದಡಿ, (12) ಅಂಬಲಮೊಗರು. ಹರೇಕಳ ಸೋಮನಾಥ ದೇವಸ್ಥಾನವು ಸೀಮೆದೇವಸ್ಥಾನವಾಗಿತ್ತು. ಹರೇಕಳ ಗುತ್ತಿನವರು ಬಂಗರಾಜನ 5000 ಸೈನ್ಯದ ಸೇನಾಧಿಪತಿಗಳಾಗಿದ್ದರು. ಈ ಗುತ್ತಿನವರಿಗೆ ಪಡು ಐಸಾರಾಳು ಎಂದು ಹೆಸರಿತ್ತು.

**13. ಇರಬಲ್ಲಾಳ**—ಈ ವಂಶದವರು (1) ಮಂಚಿ, (2) ಬೊಳಂತೂರು, (3) ಇರ, (4) ಕೊಲ್ನಾಡು ಗ್ರಾಮಗಳನ್ನು ಆಳುತ್ತಿದ್ದರು. ಬೀಡು ಇರದಲ್ಲಿದೆ. ಈ ವಂಶವು ಈಗ ಇರುವದಿಲ್ಲ. ಇರ ಗ್ರಾಮದಲ್ಲಿರುವ ಕುಂಡಾವ ಸೋಮನಾಥ ದೇವಸ್ಥಾನವು ಸೀಮೆದೇವಸ್ಥಾನವಾಗಿತ್ತು. ಗುತ್ತುಗಳು: (1) ಎಲದಬಾವ, (ಇರಗ್ರಾಮ) (2) ಇರಗುತ್ತು, (3) ಕಲ್ಯಾಡಿಗುತ್ತು, (4) ಸಂಪಿಲ ಬಾಳಿಕೆ, (2 ಕುರಿಯಾಡಿ ಗ್ರಾಮದಲ್ಲಿ). ಇರದಲ್ಲಿದ್ದ ಚಂದ್ರನಾಥ ಬಸದಿಯು ನಾಶವಾಗಿದೆ.

**14. ಸಜೀಪ ಬಲ್ಲಾಳ:**—ಈ ವಂಶದವರು (1) ಸಜೀಪನಡು, (2) ಸಜೀಪಪಡು, (3) ಸಜೀಪಮೂಡು ಈ ಮೂರು ಗ್ರಾಮಗಳನ್ನು ಆಳುತ್ತಿದ್ದರು. ಬೀಡು ಸಜೀಪ ಮೂಡಗ್ರಾಮದಲ್ಲಿತ್ತು. ಈ ಬಲ್ಲಾಳ ರಲ್ಲಿ ಒಬ್ಬನಾದ ನಂದಿರಾಯ ಬಲ್ಲಾಳನ ಮಗಳಾದ ದಾರಕ್ಕದೇವಿ ಯನ್ನು ಬಂಗರಾಜನು ಮದುವೆಯಾದನೆಂದು ಬಂಗರ ಚರಿತ್ರೆಯಲ್ಲಿ ಕಾಣುತ್ತದೆ. ಸಜೀಪ ನಡುಗ್ರಾಮದ ನಡುಬೈಲ ನಾಲ್ಕೈತ್ತಾಯ ಮತ್ತು ದೈವಗಳು ಮಾಗಣೆ ದೈವಗಳಾಗಿರುತ್ತವೆ. ಸಜೀಪ ನಡುಗುತ್ತಿನ ಮನೆತನದವರು ಬಂಗರಾಜನ 5000 ಸೈನ್ಯದ ಸೇನಾಧಿಪತಿಗಳಾಗಿದ್ದರು. ಈ ಗುತ್ತಿನವರಿಗೆ ಮೂಡು ಐಸ್ರಾಳು ಎಂದು ಹೆಸರಿತ್ತು. ಕಾಂತಾಡಿ ಗುತ್ತು ಮಾಗಣೆಯ ಮೊದಲನೇ ಗುತ್ತಾಗಿರುತ್ತದೆ.

**15. ಬಾಳ್ತಿಲ ಬಲ್ಲಾಳ:**—ಈ ವಂಶದವರು (1) ಬಾಳ್ತಿಲ, (2) ಸುದೆಕಾರು, (3) ಬೊಂಡಾಲ, (4) ಗೊಳ್ತಮಜಲು, (5) ನರಿಕೊಂಬು, (6) ಶಂಬೂರು, 7 ಬರಿಮಾರು, (8) ಮಾಣಿ, (9) ಪೆರಾಜೆ, (10) ಅಮಟೂರು, (11) ಕಡೇಶ್ವಾಲ್ಯ, (12) ಅನಂತಾಡಿ, (13) ವೀರಕಂಬ, (14) ನೆಟ್ಲ, (15) ಕಲ್ಲಡ್ಕ ಈ 15 ಗ್ರಾಮಗಳನ್ನು ಒಳಕೊಂಡಿರುವ ಮೊಗರನಾಡು ಸಾವಿರಸೀಮೆಯನ್ನು ಆಳುತ್ತಿದ್ದರು. ಇವರಿಗೆ 2 ಬೀಡುಗಳಿದ್ದವು. ಒಂದು ಬಾಳ್ತಿಲದಲ್ಲಿದೆ. ಪಟ್ಟವಾಗುವದು ಈ ಬೀಡಿನಲ್ಲಿ. ಇನ್ನೊಂದು ಕೊಳಕೆರೆಯಲ್ಲಿತ್ತು. ಸೀಮೆ ದೇವಸ್ಥಾನಗಳು: (1) ಕಡೇಶ್ವಾಲ್ಯ ನರಸಿಂಹ ದೇವಸ್ಥಾನ (ಮೊದಲು ಶಿವಾಲಯ), (2) ನೆಟ್ಲ ಸದಾಶಿವ ದೇವಸ್ಥಾನ. ಆದೇಶ್ವರ ಬಸದಿಯು ಬಾಳ್ತಿಲದಲ್ಲಿದೆ. ಮಾಗಣೆಗುತ್ತುಗಳು, (1) ಓಡಾಲ (ಕಡೇಶ್ವಾಲ್ಯ ಗ್ರಾಮದಲ್ಲಿ), (2) ಪೂಂಜಲಮಾರು (ಅಮ್ಟೂರು ಗ್ರಾಮದಲ್ಲಿ) (3) ಕೊಳಕೆರೆ. ಈ ಸೀಮೆಯು ಕ್ರಿ. ಶ. 11ನೇ ಶತಮಾನದಲ್ಲಿ ಬಂಗರಾಜರಿಗೆ ಸಿಕ್ಕಿತು. ಶಾ. ಶ. 1563ರಲ್ಲಿ ಕೆಳದಿವೀರ ಭದ್ರಪ್ಪನಾಯಕನಿಗೂ ಶಂಕರದೇವಿ ಬಂಗ ರಾಣಿಗೂ ಆದ ಕರಾರಿನ ಪ್ರಕಾರ ೪೫||ವರಹ ೩||ಹಣ ವರಹ ಉತ್ತಾರ ಇರುವ ನಂಧಾವರ ಗ್ರಾಮ ಮಾತ್ರವೇ ಬಂಗರ ಅರಸನಿಗೆ ಉಳಿಯಿತು.

**16. ಪೆರೋಡಿ ಬಲ್ಲಾಳ:**—ಈ ವಂಶದವರು (1) ಬಂಟವಾಳ ಮೂಡು, (2) ತುಂಬೆ, (3) ಕಳ್ಳಿಗೆ, (4) ಪುದು ಈ ನಾಲ್ಕು ಗ್ರಾಮಗಳನ್ನು ಒಳಕೊಂಡಿರುವ ಕುದಿಗ್ರಾಮ ಮಾಗಣೆಯನ್ನು ಆಳುತ್ತಿದ್ದರು. ಇವರ ಬೀಡು ಪೆರೋಡಿಯಲ್ಲಿತ್ತು. ಪೆರೋಡಿ ವಿಷ್ಣುಮೂರ್ತಿ ದೇವಸ್ಥಾನವು ಸೀಮೆ ದೇವಸ್ಥಾನವಾಗಿತ್ತು. ಈ ಸೀಮೆಯ ಗುತ್ತುಗಳು: (1) ಕಳ್ಳಿಗೆ, (2) ಪಳ್ಳಮಜಲು, (3) ವಳವೂರು, (4) ತುಂಬೆ ಇವು 4 ಮುಖ್ಯ ಗುತ್ತುಗಳು. ಇವುಗಳಲ್ಲದೆ (1) ನೆತ್ತರಕೆರೆ, ಪೆರ್ಲಬೈಲು, ಮುಂಡಾಜೆ, ಕುಪ್ಪಿಲ, ಪರಾರಿ, ಅಗ್ರಬೈಲು, ಅಲೆತ್ತೂರು, ಮರ, ಗಾಣದಪಡ್ಪು, ಬಂಟ್ರಬೈಲು ಮುಂತಾದ ಗುತ್ತುಗಳು ಇದ್ದವು. ಇವರ ಒಂದು ಅರಮನೆಯು ವಳವೂರಿನಲ್ಲಿತ್ತು. ಅರಂತಡೆ ಎಂಬ ಸಣ್ಣ ಅರಮನೆಯು ಪಳ್ಳಮಜಲಿನಲ್ಲಿತ್ತು ಈಗ ಎರಡೂ ಹಾಳಾಗಿ ಅದರ ಕುರುಹುಗಳು ಮಾತ್ರವೇ ಉಳಿದಿವೆ. ಕಣಪಾಡಿತ್ತಾಯ ದೈವವು ಸೀಮೆ ದೈವವಾಗಿರುತ್ತದೆ.

**17. ಅಮಟಾಡಿ ನಂದರಿಬೆಟ್ಟು ಬಲ್ಲಾಳ:**—ಈ ವಂಶದವರು (1) ಅಮಟಾಡಿ, (2) ಕೂರಿಯಾಳ, (3) ಬಂಟವಾಳ ಈ ಮೂರು ಗ್ರಾಮಗಳನ್ನು ಆಳಿಕೊಂಡಿದ್ದರು. ಇವರಿಗೆ ಎರಡು ಬೀಡುಗಳಿದ್ದವು. (1) ಅಮಟಾಡಿ ಗ್ರಾಮದ ನಂದರಿಬೆಟ್ಟು ಎಂಬಲ್ಲಿ ಮೇಲುಬೀಡು. (2) ಮಂಟಮೆ ಗೋಳಿಹತ್ತರ ಐಂದಾಳೆ ಎಂಬಲ್ಲಿರುವ ಕೆಳಬೀಡು. ಈಗ ಇವು ಹಾಳಾಗಿ ಬಿದ್ದಿರುತ್ತವೆ. ಇದರ ಕುರುಹುಗಳನ್ನು ಈಗಲೂ ನೋಡ ಬಹುದು. ಬಂಟವಾಳ ಮಹಾಲಿಂಗೇಶ್ವರ ದೇವಸ್ಥಾನವು ಸೀಮೆ ದೇವಸ್ಥಾನವಾಗಿತ್ತು. ಆದೀಶ್ವರ ಬಸದಿಯು ಬಂಟವಾಳದಲ್ಲಿದೆ. ಅಮಟಾಡಿ ಪಂಜುರ್ಳಿಯು ಸೀಮೆದೈವವಾಗಿರುತ್ತದೆ. ಗುತ್ತುಗಳು: (1) ಎರಿಯ, (2) ಬಡಾಜೆ, (3) ಕಡ್ಯಾಲಿ, (4) ಕೂರಿಯಾಳ, (5) ಅಜಕಳಬಾವ. ಇವರ ಕಾಲದಲ್ಲಿ ಕಟ್ಟಿಸಿದ ಒಂದು ಕೋಟೆಯು, ಅಮಟಾಡಿ ಗ್ರಾಮದಲ್ಲಿ, ಬೀಡುಗಳಿಗೆ ದಕ್ಷಿಣ ಪೂರ್ವದಿಕ್ಕಿಗೆ ಮಾರಿಗುಡಿಯ ಬಳಿಯಲ್ಲಿದೆ.

**18. ಪಡ್ಡಾಯಿಯೂರು ಬಲ್ಲಾಳ:—** ಈ ವಂಶದವರು (1) ಸರ್ಪಾಡಿ, (2) ಮಣಿನಾಲ್ಕೂರು, (3) ನಾವೂರು, (4) ಮಣಿ ಈ ಮೇಲಿನ ಗ್ರಾಮಗಳನ್ನು ಒಳಕೊಂಡಿರುವ ಮಣಿನಾಲ್ಕೂರು ಸೀಮೆಯನ್ನು ಆಳುತ್ತಿದ್ದರು. ಬೀಡು ಪಡ್ಡಾಯಿಯೂರಿನಲ್ಲಿದೆ. ಬಸದಿಗಳು 2 ಇದ್ದವು. (1) ಕೊಡಿಬೈಲು ಪಾರ್ಶ್ವನಾಥ ಬಸದಿ, (2) ಮಣಿಗ್ರಾಮದ ಪಾಡಿ ಎಂಬಲ್ಲಿದ್ದ ಪಾಡದಪಾರ್ಶ್ವನಾಥ ಬಸದಿ. ಸರ್ಪಾಡಿ ಮಹಾಲಿಂಗೇಶ್ವರ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಇದರಲ್ಲಿ ಮಣಿನಾಲ್ಕೂರು ಗ್ರಾಮದ ನಾಲೂರುಗುತ್ತು ಬಂಗರ ಸೀಮೆಯ ನಾಲ್ಕು ರಾಜಗುತ್ತುಗಳಲ್ಲಿ ಒಂದಾಗಿದೆ. ಮಣಿಗ್ರಾಮದ ಮಣಿಗುತ್ತಿನ ಮನೆತನದವರು ಬಂಗರ ಸೇನಾಧಿಪತಿಗಳಲ್ಲಿ ಒಬ್ಬರಾಗಿದ್ದರು

**19. ಇಜ್ಜಿತೊಟ್ಟು ಬಲ್ಲಾಳ:—** ಈ ವಂಶದವರು (1) ಕಾವಳ ಪಡೂರು, (2) ಕಾವಳ ಮೂಡೂರು, (3) ದೇವಶ್ಯ ಪಡೂರು, (4) ದೇವಶ್ಯ ಮೂಡೂರು ಈ ನಾಲ್ಕು ಗ್ರಾಮಗಳನ್ನು ಆಳಿಕೊಂಡಿದ್ದರು. ಇವರ ಬೀಡು ಕಾವಳ ಮೂಡೂರು ಗ್ರಾಮದ ಇಜ್ಜಿತೊಟ್ಟು ಎಂಬಲ್ಲಿತ್ತು. ಈಗ ಈ ಬೀಡು ಬಿದ್ದು ನೆಲಸಮವಾಗಿದೆ. ಅನಂತನಾಥ ಬಸದಿಯು ಕಾವಳ ಮೂಡೂರು ಗ್ರಾಮದ ಕಾವಳಕಟ್ಟೆ ಎಂಬಲ್ಲಿ ಈಗಲೂ ಇದೆ. ಮಾಗಣೆ ದೈವವಾದ ಕೊಡಮಣಿತ್ತಾಯ ಭೂತಸ್ಥಾನವೂ ಅದರ ಹತ್ತರವೇ ಇದೆ. (1) ಇಜ್ಜಿತೊಟ್ಟು, (2) ಆಲಂಪುರಿ, (3) ಮರ್ಯಾತೊಟ್ಟು, (4) ಉಂಡಾರ ಎಂಬ ಈ ನಾಲ್ಕು ಮಾಗಣೆ ಗುತ್ತುಗಳಾಗಿರುತ್ತವೆ. ಈ ಸೀಮೆಯು ಬೈಲಂಗಡಿ ಮೂಲರರಾಜ್ಯಕ್ಕೆ ಸೇರಿತ್ತು. ಹದಿನಾರನೆಯ ಶತಮಾನದಲ್ಲಿ ಬಂಗರಾಜನು ಇದನ್ನು ಹಿಡುಕೊಂಡನು. ಕಾರಂಜೆ ಕಾರಿಂಜೇಶ್ವರ ದೇವಸ್ಥಾನವು ಸೀಮೆದೇವಸ್ಥಾನವಾಗಿದೆ.

**20. ಇರ್ವತ್ತೂರು ಬಲ್ಲಾಳ:—** ಈ ವಂಶದವರು (1) ಪಿಲತಬೆಟ್ಟು, (2) ಮೂಡುಪಡುಕೋಡಿ, (3)* ಇರ್ವತ್ತೂರು ಈ ಮೂರು ಗ್ರಾಮಗಳನ್ನು ಆಳಿಕೊಂಡಿದ್ದರು. ಇವರ ಬೀಡು ಇರ್ವತ್ತೂರಿನಲ್ಲಿದೆ.

ಗುತ್ತುಗಳು: (1) ಇರ್ವತ್ತೂರು (ಎಡ್ತೂರು), (2) ಪಿಲತಬೆಟ್ಟು, (3) ಅರ್ಕೆತೊಟ್ಟು, 4 ಅಂತರ. ಬಸದಿಯು ಇರ್ವತ್ತೂರಿನಲ್ಲಿತ್ತು. ಈ ಸೀಮೆಯು ಅಜಿಲರ ವಶದಲ್ಲಿತ್ತು.

21. **ಕೌಡಾಡಿ ಬಲ್ಲಾಳ:**—ಈ ವಂಶದವರು (1) ಅಜಿಬೆಟ್ಟು, (2) ಪಿಲಿಮೊಗರು, (3) ಚನ್ನೈತೋಡಿ, (4) ಕುಡಂಬೆಟ್ಟು ಈ ನಾಲ್ಕು ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡು ಅಜಿಬೆಟ್ಟು ಗ್ರಾಮದ ಕೌಡಾಡಿ ಎಂಬಲ್ಲಿದೆ. ಆದಿನಾಥ ಬಸದಿಯು ಅಜಿಬೆಟ್ಟಿನಲ್ಲಿದೆ. ಅಜಿಬೆಟ್ಟಿನ ವರದಬೆಟ್ಟು ಪದವು ದುರ್ಗಾಪರಮೇಶ್ವರೀ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಈ ಸೀಮೆಯು ಅಜಿಲರ ಸೀಮೆಯ ಒಂದು ಭಾಗವಾಗಿತ್ತು.

22. **ರಾಯಿಬಲ್ಲಾಳ:**—ಈ ವಂಶದವರ ಕೈಕೆಳಗೆ (1) ರಾಯಿ, (2) ಅರ್ಳ, (3) ಕೊೖಲ, (4) ಬೆಳ್ಳೂರು (ತೆಂಕ, ಬಡಗ), (5) ಪಂಜಿಕಲ, (6) ನಡುಗೋಡು ಗ್ರಾಮಗಳು ಇದ್ದವು. ಬೀಡು ಪಡುರಾಯಿ ಎಂಬಲ್ಲಿ ಈಗಲೂ ಇದೆ. ಅಜಿಲ ಮೂಲರೊಳಗೆ ಜಗಳವಾಗಿ ಬೈಲಂಗಡಿಮೂಲರ ಕೈಕೆಳಗಿದ್ದ ಈ ಸೀಮೆಯಲ್ಲಿ ಬಡಗ ಬೆಳ್ಳೂರು, ತೆಂಕಬೆಳ್ಳೂರು, ಪಂಜಿಕಲ್ಲು, ನಡುಗೋಡು ಈ ನಾಲ್ಕು ಗ್ರಾಮಗಳನ್ನು ಅಜಿಲರು ಹಿಡುಕೊಂಡರು. ಅಜಿಲರು ಬೆಳ್ಳೂರುಗುತ್ತಿನ ಮನೆತನದವರನ್ನು ರಾಜಗುತ್ತಿನವರಾಗಿ ನಿಯಮಿಸಿದರು. ಆದ್ದರಿಂದ ಈ ರಾಯಿಬಲ್ಲಾಳರ ಕೈಕೆಳಗೆ ರಾಯಿ, ಅರ್ಳ, ಕೊೖಲ ಎಂಬ ಮೂರು ಗ್ರಾಮಗಳು ಮಾತ್ರವೇ ಉಳಿದವು. ಅನಂತರ ಸೋಮಳಾದೇವಿಯು ಬೈಲಂಗಡಿ ರಾಜ್ಯವನ್ನು ಆಳುವಾಗ ಬಂಗರಾಜನಿಗೂ ಈ ರಾಣಿಗೂ ಜಗಳವು ಬಂದು ಬಂಗರಾಜನು ರಾಯಿ ಗ್ರಾಮವನ್ನು ತನ್ನ ರಾಜ್ಯಕ್ಕೆ ಕೂಡಿಸಿದನು. ಶಂಕ್ರದೇವಿ ಬಂಗರಾಣಿಯು ಆಳುವ ಕಾಲದಲ್ಲಿ ರಾಯಿ ಗ್ರಾಮವೂ ಬಂಗರ ಕೈಯಿಂದ ತಪ್ಪಿತು. ಆದ್ದರಿಂದ ರಾಯಿಬಲ್ಲಾಳನ ಕೈಕೆಳಗೆ ರಾಯಿ ಗ್ರಾಮ ಮಾತ್ರವೇ ಉಳಿಯಿತು. ಅರ್ಳಕೊೖಲ

ಗ್ರಾಮದವರು ಬೇರೆಯಾದರು. ಆದ್ದರಿಂದ ಸೀಮೆದೇವಸ್ಥಾನವಾದ ರಾಯಿ ಮಹಾಲಿಂಗೇಶ್ವರ ದೇವಸ್ಥಾನವು ರಾಯಿ ಗ್ರಾಮದೇವಸ್ಥಾನವಾಯಿತು. ಈ ಸೀಮೆಗೆ ಸೇರಿದ ಎರಡು ಬಸದಿಗಳಲ್ಲಿ ಒಂದು ಪಂಜಿಕಲ್ಲಿನಲ್ಲಿದೆ. ಇನ್ನೊಂದು ಅರ್ಳಗ್ರಾಮದ ಮೂಲರಪಟ್ಟಣ ಎಂಬಲ್ಲಿದೆ. ಬಳಿಕೆ ಮನೆತನವು ಅರ್ಳದಲ್ಲಿದೆ. ಒಂದನೇ ಗುತ್ತಿನ ಮನೆಯು ಮೂಡುರಾಯಿಯಲ್ಲಿದೆ.

## ಕಾಸರಗೋಡು ತಾಲೂಕಿನ ಬಲ್ಲಾಳರು.

I. **ವರ್ಕಾಡಿ** ಬಲ್ಲಾಳ:—ಈ ವಂಶದವರು ಕಾಸರಗೋಡು ತಾಲೂಕಿನ ವರ್ಕಾಡಿಮಾಗಣೆಯನ್ನು ಎಂದರೆ, (1) ವರ್ಕಾಡಿ, (2) ಕುಡ್ಲಮೊಗರು, (3) ಕುಂಜತ್ತೂರು, (4) ಕಣ್ವತೀರ್ಥ, (5) ಪಾವೂರು, (6) ಪಾತೂರು, (7) ಕೊಳಿಯೂರು, (8) ಕಳಿಯೂರು ಗ್ರಾಮಗಳನ್ನು ಆಳಿಕೊಂಡಿದ್ದರು. ಈ ಸೀಮೆಯಲ್ಲಿ 2 ಸೀಮೆದೇವಸ್ಥಾನಗಳು:— (1) ಕೊಳಿಯೂರು ಶ್ರೀ ಶಂಕರನಾರಾಯಣ ದೇವಸ್ಥಾನ, (2) ವರ್ಕಾಡಿ ಕಾವಿಸುಬ್ರಾಯ ದೇವಸ್ಥಾನ. ವರ್ಕಾಡಿಯಲ್ಲಿದ್ದ ಬೀಡೂ, ಬಸದಿಯೂ ಬಿದ್ದುಹೋಗಿವೆ.

2. **ಮಂಜೇಶ್ವರ ಬಲ್ಲಾಳ**:—ಈ ವಂಶದವರು (1) ಉದ್ಯಾವರ, (2) ಹೊಸಬೆಟ್ಟು, (3) ಬಡಾಜೆ, (4) ತಲೆಕಳ, (5) ಕಡಂಬಾರ, (6) ಮಿಂಜ, (7) ಕುಳೂರು, (8) ಮೂಡಂಬೈಲು (9) ಮಜಬೈಲು (10) ಬಂಗ್ರಮಂಜೇಶ್ವರ ಈ 10 ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡು ಬಂಗರಮಂಜೇಶ್ವರದಲ್ಲಿತ್ತು. ಬೀಡು ಇದ್ದ ಸ್ಥಳದ ಹತ್ತರ ಈಗ ಒಂದು ಶಾಸನಕಲ್ಲು ಇದೆ. ಇದರಲ್ಲಿ ಬರಹ ಕಾಣುವದಿಲ್ಲ. ಬಂಗರ ಮಂಜೇಶ್ವರವು ಜೈನರ ದೊಡ್ಡ ಪೇಟೆಯಾಗಿತ್ತು. ಇಲ್ಲಿ ಗುಡ್ಡೆಯ ಮೇಲೆ ಕೋಟೆಯ ಒಳಗಡೆ ಚಂದ್ರನಾಥ ಬಸದಿಯು ಇದೆ. ಕೆಳಗಡೆ ಪೇಟೆಯಲ್ಲಿ ಶಾಂತಿನಾಥ ಮತ್ತು ಪಾರ್ಶ್ವನಾಥ ಬಸದಿಗಳಿವೆ. ಪೇಟೆಯೂ

ಬಸದಿಗಳೂ ಹಾಳುಬಿದ್ದ ಸ್ಥಿತಿಯಲ್ಲಿವೆ. ಸೀಮೆದೇವಸ್ಥಾನವು ಮಂಜೇಶ್ವರ ಮದನಂತೇಶ್ವರ ದೇವಸ್ಥಾನವಾಗಿತ್ತು. ಮುಸಲ್ಮಾನರ ಹಾವಳಿ ಯಿಂದಲೂ ರಾಜ್ಯಭಾರದ ಅನೇಕ ತೊಂದರೆಗಳಿಂದಲೂ ಈ ಸೀಮೆ ದೇವಸ್ಥಾನವೆಲ್ಲ ಹಾಳುಬಿದ್ದು ಲಿಂಗದ ಸುತ್ತಲೂ ಕಾಡು ಬೆಳದಿತ್ತು. ಕ್ರಿ ಶ. 1510ರಲ್ಲಿ ಪೋರ್ತುಗೀಸರು ಗೋವೆಯನ್ನು ಹಿಡಿದಾಗ ಅಲ್ಲಿಂದ ಮಂಜೇಶ್ವರಕ್ಕೆ ಬಂದ ಕೆಲವು ಗೌಡಸಾರಸ್ವತ ಬ್ರಾಹ್ಮಣ ಕುಟುಂಬದವರು ಹಾಳುಬಿದ್ದ ಈ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿದರು. ಈಗ ಮಂಜೇಶ್ವರ ಸೀಮೆಯವರಿಗೆ ಈ ದೇವಸ್ಥಾನ ದಲ್ಲಿ ಯಾವದೊಂದು ಹಕ್ಕು ಸ್ವಾತಂತ್ರ್ಯಗಳು ಇಲ್ಲ. ಉದ್ಯಾವರ ದೈವಗಳು ಈ ಸೀಮೆಯ ದೈವಗಳಾಗಿದ್ದವು.

3. **ಪೈವಳಿಕೆ ಬಲ್ಲಾಳ:**—ಈ ವಂಶದವರು (1) ಪೈವಳಿಕೆ, (2) ಬಾಯಾರು, (3) ಚಿಪ್ಪಾರು, (4) ಕುಡಾಲಮರ್ಕಳ ಈ ನಾಲ್ಕು ಗ್ರಾಮಗಳನ್ನು ಆಳಿಕೊಂಡಿದ್ದರು. ಇವರು ಜೈನರಲ್ಲ. ವಿಟ್ಲದ ಅರಸರ ಹಾಗೆಯೇ ಬಲ್ಲಾಳ ಜಾತಿಯವರು. ಈ ವಂಶದವರ ಅರಮನೆಯು ಪೈವಳಿಕೆಯಲ್ಲಿತ್ತು. ಈ ಕುಟುಂಬದವರು ಪೈಯರು ಎಂಬ ಕುಲದವರಾದ್ದರಿಂದ ಇವರು ಆಳುತ್ತಿದ್ದ ಗ್ರಾಮಕ್ಕೆ ಪೈಯರ ಆಳಿಕೆ (ಪೈವಳಿಕೆ) ಎಂಬ ಹೆಸರು ಬಂತೆಂದು ಹೇಳುತ್ತಾರೆ. ಕಡೆಗೆ ಈ ಕುಟುಂಬವು ನಿಸ್ಸಂತತಿಯಾಗುವದೆಂದು ತಿಳಿದ ಕೂಡಲೇ ಈ ಬಲ್ಲಾಳನು ಮಂಗಳೂರಿನ ಸಮೀಪವಿರುವ ಬಜಲ ಸೀಮೆಯನ್ನು ಆಳುತ್ತಿದ್ದ ಇದೇ ಜಾತಿಯ ಬಲ್ಲಾಳನ ಕುಟುಂಬದ ಒಂದು ಹುಡುಗಿ ಯನ್ನು ತಂದು ದತ್ತತೆಗೆದುಕೊಂಡನು. ಈ ಹೆಂಗಸಿನ ಕುಟುಂಬ ದವರಲ್ಲಿ ರಂಗರೈ ಬಲ್ಲಾಳ, ತಿರುಮಲರೈ ಬಲ್ಲಾಳ ಎಂಬ ಇಬ್ಬರು ಬಲ್ಲಾಳರು ಒಳ್ಳೇ ರೀತಿಯಿಂದ ರಾಜ್ಯವಾಳಿಕೊಂಡು ವಿಟ್ಲದ ಅರಸನಿಗೆ ಕಪ್ಪಕೊಟ್ಟು ಆ ಅರಸನ ಸಾಮಂತ ಬಲ್ಲಾಳರಾಗಿದ್ದರು. ಈಗ ಅರಮನೆಯೂ ಅದರ ಸುತ್ತಲೂ ಇದ್ದ ಕೋಟೆಯೂ ಪೂರ್ಣ

ನಾಶವಾಗಿ ಬಿದ್ದು ಹೋಗಿಯದೆ. ಅರಮನೆಯ ಮುಂದುಗಡೆ ಬೋಳಂಗಳ ತ್ತಾಯಿ ಮತ್ತು ಮೇಲಕ್ಕಾರತ್ತಾಯಿ ಎಂಬ ಎರಡು ಅಕ್ಕ ತಂಗಿ ದೈವಗಳ ಸ್ಥಾನವಿದೆ. ಅರಮನೆಯು 60 ಕೋಲು ಉದ್ದವಿರುವ ಚಾವಡಿಯು ಒಳ್ಳೇ ಸ್ಥಿತಿಯಲ್ಲಿದೆ. ಈ ದೈವಕ್ಕೆ ಈ ಕುಟುಂಬದವರು ಮಾಡಿಸಿ ಕೊಟ್ಟ ಆಭರಣಗಳೆಲ್ಲವೂ ಹೋದರೂ ಸಾವಿರದ ಒಂದು ಪುತ್ತಳಿ ಗಳಿಂದ ಎರಕಹೊಯ್ದು ಮಾಡಿಸಿದ ಮುಖವು ಈಗಲೂ ಇದೆ.

4. **ತೆಂಕುಂಬಳೆ ಅಡ್ಕ ಹೆಗ್ಗಡೆ:**—ಈ ವಂಶದವರು (1) ಉಪ್ಪಳ, (2) ಮುಳಿಂಜ, (3) ಕೊಡಿಬೈಲ, (4) ಬೆಕೂರು, (5) ಕುಬಣೂರು, (6) ಶಿರಿಯ, (7) ಇಚಲಂಗೋಡು, (8) ಹೇರೂರು, (9) ಕಯ್ಯೂರು, (10) ಇಚಲಂಪಾಡಿ, (11) ಕಿದೂರು, (12) ಉಜಾರ ಉಳ್ವಾರ್, (13) ಬೊಂಬ್ರಾಣ ಈ ಗ್ರಾಮಗಳನ್ನು ಆಳಿಕೊಂಡಿದ್ದರು. ಇವರ ಬೀಡು ತೆಂಕುಂಬಳೆಯಲ್ಲಿ ಈಗ ಕೋಟೆ ಇರುವ ಸ್ಥಳದ ಹಿಂದುಗಡೆ ಇತ್ತು. ತೆಂಕುಂಬಳೆಯು ವಿಜಯನಗರದ ಆಳುವಿಕೆಯ ವರೆಗೆ ಜೈನರ ಪೇಟೆಯಾಗಿತ್ತು. ಬಸದಿಯು ಕೋಟೆಯ ಹತ್ತರ ಹಿಂದೆ ಹಾಳುಬಿದ್ದದೆ. ಅದರ ಕುರುಹುಗಳನ್ನು ಈಗಲೂ ನೋಡಬಹುದು. ಇದು ಇದ್ದ ಸ್ಥಳಕ್ಕೆ ಅಡ್ಕ ಎಂದು ಹೆಸರು ಇಕ್ಕೇರಿಯವರ ಕಾಲದಲ್ಲಿ ಈ ಕುಟುಂಬವು ನಾಶವಾಗಿದೆ. ಈಗ ಈ ಊರಿನಲ್ಲಿ ಒಂದೇ ಒಂದು ಜೈನರ ಮನೆಯಾದರೂ ಇರುವದಿಲ್ಲ. ಈ ಹೆಗಡೆಯ ವಂಶದವರ ರಾಜ್ಯವು ಕುಂಬಳೆ ಅರಸರ ಸ್ವಾಧೀನ ವಾಯಿತು. ಅಡ್ಕ ಚಕ್ರಪದಿ ಬೀರಮರ್ಲ ಎಂಬ ದೈವಗಳು ಸೀಮೆ ದೈವಗಳಾಗಿರುತ್ತವೆ. ಈ ದೈವಗಳಿಗೆ ಮೊದಲು ಸ್ಥಾನವನ್ನು ಈ ಬಲ್ಲಾಳರ ಕುಟುಂಬದ ಬಲ್ಲಾಯ ಪೆರ್ಗಡೆ ಮತ್ತು ಮತ್ತಂಡಮರನ ನಾಯಕ ಮತ್ತು ಇವರ ಅಳಿಯ ಕುಂಞಮ್ಮಕುಲ್ಯಾರ್ ಇವರ ಕಾಲದಲ್ಲಿ ಕಟ್ಟಿಸಿದರೆಂದು ದೈವಗಳ ಪಾಡ್ದನದಲ್ಲಿ ಕಾಣುತ್ತದೆ.

# ಉಪ್ಪಿನಂಗಡಿ ತಾಲೂಕಿನ ಬಲ್ಲಾಳರು.

I. **ಪಡುಮಲೆ (ಪರ್ಮಲೆ) ಬಲ್ಲಾಳ:**—ಈ ವಂಶದವರು (1) ಮುಡ್ನೂರು, (2) ಪಡವನ್ನೂರು, (3) ಇರ್ದೆ, (4) ಬೆಟ್ಟಂ ಪಾಡಿ, (5) ನಿಡ್ಪಳ್ಳಿ, (6) ಬಡಗನ್ನೂರು, (7) ಅರಿಯಡ್ಕ, (8) ನೆಟ್ಟಣಿಗೆ ಮುಡ್ನೂರು, (9) ಕನಕಮಜಲು ಗ್ರಾಮಗಳನ್ನು ಆಳಿಕೊಂಡಿದ್ದರು. ಇವರ ಬೀಡೂ ಬಸದಿಯೂ ಪಡುಮಲೆಯಲ್ಲಿಯೇ ಇದ್ದವು. ಈಗ ಎರಡೂ ಬಿದ್ದುಹೋಗಿಯುವೆ. ನೆಟ್ಟಣಿಗೆ ಮುಡ್ನೂರಿನಲ್ಲಿರುವ ಮಹಾಲಿಂಗೇಶ್ವರ ದೇವಸ್ಥಾನವು ಸೀಮೆದೇವಸ್ಥಾನವಾಗಿತ್ತು. ಕೋಟಿಬೈದ್ಯ, ಚನ್ನಯಬೈದ್ಯ ಎಂಬ ಇಬ್ಬರು ವೀರರು ಈ ಬಲ್ಲಾಳರಲ್ಲಿ ಹುಟ್ಟಿದರು. ಅವರು ಅಲ್ಲಿ ಹುಟ್ಟಲಿಕ್ಕೆ ಒಂದು ಕಾರಣವಿದೆ. ಒಂದು ದಿವಸ ಪರ್ಮಲೆ ಬಲ್ಲಾಳನು ಬೇಟೆಯಾಡಲಿಕ್ಕೆ ಹೋದಾಗ ಒಂದು ಕಾಸರಕಿನ ಮುಳ್ಳು ಕಾಲಿಗೆ ತಾಗಿ ಬಲ್ಲಾಳನು ಬಿದ್ದನು. ಪರಿವಾರದವರು ಬಲ್ಲಾಳನನ್ನು ಹೊತ್ತುಕೊಂಡು ಬೀಡಿಗೆ ಬಂದರು. ಮನೆಯ ಹತ್ತರವಿದ್ದ ಬಿರ್ಮಣ ಬೈದ್ಯನೆಂಬವನ ಮದ್ದಿನಿಂದ ಗುಣವಾಗದೆ ಅಸ್ವಸ್ಥವು ಹೆಚ್ಚೆಚ್ಚಾಗುತ್ತಾ ಬಂತು. ಕೊಂಗ್ರಿತೋಟ ಸಾಯನ ಬೈದ್ಯನ ಮದ್ದು ಮಾಡಿದರೆ ಆದೀತೆಂದು ಹತ್ತರವಿದ್ದವರು ಹೇಳಿದರು. ಸಾಯನ ಬೈದ್ಯನೊಡನೆ ಹೇಳಿದಾಗ ಅವನು, "ನಾನು ಮುದುಕ, ನನಗೆ ಕಣ್ಣುಕಾಣುವದಿಲ್ಲ, ಪೆರಾಜೆಪಲ್ಕೆ ಎಂಬಲ್ಲಿ ನನ್ನ ತಂಗಿ ದೇಯಿ ಇದ್ದಾಳೆ, ಅವಳಿಗೆ ಒಳ್ಳೇ ಮದ್ದು ಗೊತ್ತಿದೆ' ಎಂದು ಹೇಳಿದನು. ಪರಿಚಾರಕರು ಪೆರಾಜೆಪಲ್ಕೆಗೆ ಹೋಗಿ ಅವಳನ್ನು ಕರತಂದರು. ಅವಳ ಮದ್ದಿನಿಂದ ಬಲ್ಲಾಳನಿಗೆ ಗುಣವಾಯಿತು. ಬರುವಾಗ ಅವಳು ನವಮಾಸಭರಿತೆಯಾಗಿದ್ದಳು. ಮನೆಗೆ ಹೋಗಲಿಕ್ಕೆ ಆಗದೆ ಅವಳು ಬಲ್ಲಾಳನ ಪಟ್ಟದ ಚಾವಡಿಗೆ ತಾಗಿರುವ ಕೋಣೆಯಲ್ಲಿ ಅವಳಿಜವಳಿ ಮಕ್ಕಳನ್ನು ಹೆತ್ತಳು. ಒಬ್ಬನಿಗೆ ಕೋಟಿ, ಇನ್ನೊಬ್ಬನಿಗೆ ಚನ್ನಯ ಎಂಬ ಹೆಸರನ್ನು ಬಲ್ಲಾಳನೇ ಇಟ್ಟನು.

ನಾಲ್ವತ್ತನೇ ದಿವಸ ದೇಯಿಯು ಒಂದು ಮುಡ್ಲು ತಲೆಗೆ ಬಿದ್ದು ಕಾಲವಾದಳು. ಮಾವನಾದ ಸಾಯನಬೈದ್ಯನು ಮಕ್ಕಳನ್ನು ಕರಕೊಂಡು ಹೋದನು. ಈ ಹುಡುಗರು ದಿನೇ ದಿನೇ ಬೆಳೆಯುತ್ತಾ ಬಂದರು. ಬಲ್ಲಾಳನು ಇವರಿಗೆ ಬೇಕಾದ ವಸ್ತುಗಳನ್ನು ಒದಗಿಸಿಕೊಡುತ್ತಿದ್ದನು. ಈ ಬಲ್ಲಾಳನಿಗೆ ಬುದ್ಧಿವಂತ ಎಂಬ ಬಂಟನು ಪ್ರಧಾನಿಯಾಗಿದ್ದನು. ಬಲ್ಲಾಳನು ಬಿಲ್ಲವರ ಮಕ್ಕಳನ್ನು ಬಹಳ ಪ್ರೀತಿಯಿಂದ ನಡಿಸುವದನ್ನು ನೋಡಿ ಈ ಹುಡುಗರನ್ನು ಯಾವ ತರದಲ್ಲಿಯಾದರೂ ನಾಶಪಡಿಸ ಬೇಕೆಂದು ಈ ಬುದ್ಧಿವಂತನು ಆಲೋಚಿಸುತ್ತಿದ್ದನು. ಈ ಅಣ್ಣತಮ್ಮಂದಿ ಯರು ಪ್ರಾಯಭರಿತರಾದ ಮೇಲೆ ಬುದ್ಧಿವಂತನನ್ನು ಕೊಂದುಹಾಕಿ ಈ ಬಲ್ಲಾಳನ ಸೀಮೆಯನ್ನು ಬಿಟ್ಟು ಪಂಜಬಲ್ಲಾಳನ ಸೀಮೆಯಲ್ಲಿದ್ದ ತಮ್ಮ ಅಕ್ಕ, ಕಿನ್ನಿದಾರು ಎಂಬವಳ ಮನೆಗೆ ಹೋದರು.

2. **ಪಂಜ ಬಲ್ಲಾಳ:—**ಈ ವಂಶದವರು (1) ಕಲ್ಮಡ್ಕ, (2) ಪಂಬೆತಾಡಿ, (3) ಕುತುಕುಂಜ, (4) ಗುತ್ತಿಗಾರು, (5) ನಾಲ್ಕುರು, (6) ಎಣೆಕಲ್ಲು ಈ 6 ಗ್ರಾಮಗಳನ್ನು ಆಳಿಕೊಂಡಿದ್ದರು. ಇವರ ಬೀಡು ಪಂಜದಲ್ಲಿತ್ತು. ಪಂಜ ದೊಡ್ಡ ಪಟ್ಟಣವಾಗಿದ್ದು ಒಂದು ಸಾವಿರಕ್ಕಿಂತ ಹೆಚ್ಚು ಜೈನರ ಮನೆಗಳಿದ್ದವು. ಎಂಟು ಬಸದಿಗಳಿ ದ್ದವು. ಈಗ ಒಂದೂ ಇರುವದಿಲ್ಲ. ಕೇಮರ ಬಲ್ಲಾಳನೆಂಬವನು ಆಳುವ ಕಾಲದಲ್ಲಿ ಒಂದು ದಿವಸ ಕೋಟಿಬೈದ್ಯ ಮತ್ತು ಚನ್ನಯಬೈದ್ಯ ಎಂಬ ಇಬ್ಬರು ಅಣ್ಣತಮ್ಮಂದಿಯರು ಈ ಸೀಮೆಯಲ್ಲಿರುವ ತಮ್ಮ ಅಕ್ಕನ ಮನೆಗೆ ಬಂದಿದ್ದರು. ಇವರಿಬ್ಬರೂ ಪರ್ಮಲೆ ಬಲ್ಲಾಳನ ಪ್ರಧಾನಿಯನ್ನು ಕೊಂದು ತಮ್ಮನ್ನು ಸಾಕಿ ಸಲಹಿದ ಆ ಬಲ್ಲಾಳನನ್ನು ಲಕ್ಷಿಸದೆ ಅವನ ಸೀಮೆಯನ್ನೇ ಬಿಟ್ಟುಬಂದಿದ್ದಾರೆಂಬ ವರ್ತಮಾನವನ್ನು ಬಲ್ಲಾಳನು ಕೇಳಿದ್ದನು. ಇಂಥಾ ವೀರರು ಇದ್ದರೆ ತನಗೆ ಅಪಾಯ ಕರವೆಂದು ತಿಳಿದು, ಇವರಿಬ್ಬರನ್ನು ತನ್ನ ರಾಜ್ಯದಲ್ಲಿ ನಿಲ್ಲದ ಹಾಗೆ ಮಾಡಬೇಕೆಂದು ಆಲೋಚಿಸುತ್ತಿದ್ದನು. ಒಂದು ದಿವಸ ಬೀಡನ್ನು

ನೋಡಬೇಕೆಂದು ಅಣ್ಣತಮ್ಮಂದಿಯರು ಬಂದರು. ಬಲ್ಲಾಳನು ಪಟ್ಟದ ಚಾವಡಿಯಲ್ಲಿ ಜಾಲು ಕೊಟ್ವಾರಿಗೆ ತನ್ನ ಉಡುಪನ್ನು ಹಾಕಿ ಕುಳ್ಳಿರಿಸಿ ತಾನು ನೆಲಮಾಳಿಗೆಯಲ್ಲಿ ಅಡಗಿಕೂತನು. ಅವರು ಈ ಮನುಷ್ಯನು ಬಲ್ಲಾಳನಲ್ಲವೆಂದು ಅವನ ಮಾತಿನಿಂದ ತಿಳಿದು, ಬಲ್ಲಾಳನನ್ನು ನೋಡ ಬೇಕೆಂದು ತಮಗೆ ಆಸೆಯುಂಟೆಂದು ಹೇಳಿದರು. ಬಲ್ಲಾಳನು ಹೊರಗೆ ಬಂದು ಇವರಿಗೆ ಸತ್ಕಾರಮಾಡಿ ತನ್ನ ಏಳದೆ ಬೀಡನ್ನು ತೋರಿಸುತ್ತೇನೆಂದು ಹೇಳಿ, ಅವರನ್ನು ನೆಲಮಾಳಿಗೆಯಲ್ಲಿ ಹಾಕಿ ಬಾಗಲು ಮುಚ್ಚಿದನು. ಅವರು ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಎಣ್ಮೂರು (ಎಡಂಬೂರು) ಬಲ್ಲಾಳರಲ್ಲಿ ಸೇನಾಧಿಪತಿಗಳಾಗಿ ನಿಂತರು.

3. **ಎಣ್ಮೂರು (ಎಡಂಬೂರು) ಬಲ್ಲಾಳ**:—ಈ ವಂಶದ ವರು (1) ಎಣ್ಮೂರು, (2) ಎಡಮಂಗಲ, (3) ದೋಲಪಾಡಿ, (4) ಐವತ್ತೊಕ್ಲು ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡೂ ಬಸದಿಯೂ ಎಣ್ಮೂರಲ್ಲಿ ಇದ್ದವು. ಬೀಡು ಈಗಲೂ ಇದೆ. ಬಸದಿಯು ಬಿದ್ದುಹೋಗಿ ಯದೆ. ಮಂಜುಪೆರ್ಗಡೆ ಎಂಬವನೂ ಮತ್ತು ಅವನ ಅಳಿಯನಾದ ದೇವಣಗಿರಿ ಬಲ್ಲಾಳನೂ ಆಳಿಕೊಂಡಿರುವಾಗ ಕೋಟಿಬೈದ್ಯ ಮತ್ತು ಚನ್ನಯಬೈದ್ಯ ಎಂಬ ವೀರಪುರುಷರು ಇವರ ಸೀಮೆಗೆ ಬಂದು ತಾವು ಸೇನಾಧಿಪತಿಗಳಾಗಿ ನಿಲ್ಲುತ್ತೇವೆಂದು ಮಂಜುಪೆರ್ಗಡೆಯೊಡನೆ ಹೇಳಿ ದರು. ಈ ಮಂಜು ಪೆರ್ಗಡೆಗೂ ಪಂಜಸೀಮೆಯ ಕೇಮರ ಬಲ್ಲಾಳ ನಿಗೂ ಯಾವಾಗಲೂ ಜಗಳಗಳು ಇದ್ದೆ ಇದ್ದವು. ಈ ಇಬ್ಬರು ಅಣ್ಣ ತಮ್ಮಂದಿಯರಿಗೂ ತಮ್ಮನ್ನು ಕೊಲ್ಲಲು ಯತ್ನಿಸಿದ ಕೇಮರ ಬಲ್ಲಾ ಳನನ್ನು ಕೊಲ್ಲಬೇಕೆಂದು ಆಲೋಚನೆ ಇತ್ತು. ಈ ವರ್ತಮಾನ ವನ್ನು ಕೇಳಿ ಪಂಜಬಲ್ಲಾಳನು ಯುದ್ಧಕ್ಕೆ ಬಂದನು. ಯುದ್ಧದಲ್ಲಿ ಮಂಜುಪೆರ್ಗಡೆಗೆ ಜಯವಾಯಿತು. ಕೇಮರ ಬಲ್ಲಾಳನು ಸೋತು ಓಡಿಹೋದನು. ಆದರೆ ಕೋಟಿ ಮತ್ತು ಚನ್ನಯ ಎಂಬ ಸೇನಾಧಿ ಪತಿಗಳಿಬ್ಬರಿಗೂ ಕಠಿಣ ತರದ ಗಾಯವಾಗಿ ಇಬ್ಬರೂ ಎಣ್ಮೂರು

ಬೀಡಿನಲ್ಲಿಯೇ ಕಾಲವಾದರು. ಇವರ ಸಮಾಧಿಗಳು ಈಗಲೂ ಬೀಡಿನಿಂದ ಸುಮಾರು ½ ಮೈಲು ದೂರದಲ್ಲಿವೆ. ಅಲ್ಲಿ ಅವರಿಗೆ ಗರಡಿಯನ್ನು ಕಟ್ಟಿಸಿರುತ್ತಾರೆ. ಇದೇ ಇವರ ಮೂಲ ಸಮಾಧಿಗಳಾಗಿರುತ್ತವೆ.

4. **ಅಮರ ಸೂಳ್ಯ ಬಲ್ಲಾಳ:**—ಈ ವಂಶದವರು ಅಮರ ಸೂಳ್ಯ ಎಂಬ ಏಳು ಸಾವಿರ ಸೀಮೆಯನ್ನು ಆಳಿಕೊಂಡಿದ್ದರು. ಇವರ ಕೈಕೆಳಗೆ (1) ಅಮರ ಮುಡ್ನೂರು, (2) ಅಮರ ಪಡ್ನೂರು, (3) ದೇವಚಳ್ಳ, (4) ಹರಿಹರ ಪಳ್ಳತಡ್ಕ, (5) ಕೊಲ್ಲಮೊಗರು, (6) ಬಾಳಗೋಡು, (7) ಕಲ್ಮಕಾರ, (8) ಮಡಪಾಡಿ, (9) ಸಂಪಾಜೆ, (10) ತೊಡಿಕಾನ, (11) ಮರಕಂಜ, (12) ನಲ್ಲೂರು ಕೆಮ್ರಾಜೆ, (13) ಉಬ್ರಡ್ಕಮಿತ್ತೂರು, (14) ಸುಳ್ಯ, (15) ಜಾಲ್ಸೂರು (16) ಮಂಡೆಕೋಲು, (17) ಆಲೆಟ್ಟಿ ಎಂಬ 17 ಗ್ರಾಮಗಳು ಇದ್ದವು. ಬೀಡು ಸುಳ್ಯದಲ್ಲಿತ್ತು. ಸೀಮೆ ದೇವಸ್ಥಾನವು ಸುಳ್ಯದಲ್ಲಿಯೇ ಇದೆ. ಇಕ್ಕೇರಿ ಸೋಮಶೇಖರನಾಯಕನು ಈ ಎರಡು ಮಾಗಣೆಗಳನ್ನು ಕೊಡಗು ರಾಜನಾದ ದೊಡ್ಡ ವೀರಪ್ಪನಿಗೆ ಬಿಟ್ಟುಕೊಟ್ಟನು.

5. **ಬೆಳ್ಳಾರೆ ಬಲ್ಲಾಳ:**—ಈ ವಂಶದವರು (1) ಬೆಳ್ಳಾರೆ, (2) ಮುಂಡೂರು, (3) ಸರ್ವೆ, (4) ಕೆದಂಬಾಡಿ, (5) ಕೆಯ್ಯೂರು, (6) ಕಣಿಯೂರು, (7) ಐವರನಾಡು, (8) ಪಾಲ್ತಾಡಿ, (9) ಪುಣ್ಚಪಾಡಿ, (10) ಸವಣೂರು, (11) ಚಾರ್ವಕ, (12) ಪೆರುವಾಜೆ, (13) ಕೆದಿಲ, (14) ಬಾಳಿಲ, (15) ಕಳಂಜ, (16) ಮುಪ್ಪಿರ್ಯ, (17) ಮುರುಳಿಯಾ, (18) ಬಳ, (19) ಕ್ಯಾಮಣ, (20) ಕುದ್ಮಾರ, (21) ಕೊಳ್ತಿಗೆ ಈ 21 ಗ್ರಾಮಗಳನ್ನು ಒಳಕೊಂಡಿರುವ ಸೀಮೆಯನ್ನು ಆಳಿಕೊಂಡಿದ್ದರು. ಬೀಡು ಬೆಳ್ಳಾರೆಯಲ್ಲಿತ್ತು. ಆದೀಶ್ವರ ಬಸದಿ ಬೆಳ್ಳಾರೆಯಲ್ಲಿ ಈಗಲೂ ಇದೆ. ಈ ಸಂತತಿಯು ಅಳಿದುಹೋಯಿತು. ವೆಂಕಟಪ್ಪನಾಯಕನು ಬೆಳ್ಳಾರೆಯಲ್ಲಿ ಒಂದು ಕೋಟೆಯನ್ನು ಕ್ರಿ. ಶ.

1608ರಲ್ಲಿ ಕಟ್ಟಿಸಿದನು. ಸೋಮಶೇಖರನಾಯಕನು ಈ ಸೀಮೆಯನ್ನು ಕೊಡಗು ಅರಸನಿಗೆ ಬಿಟ್ಟುಕೊಟ್ಟ ಮೇಲೆ ಬೆಳ್ಳಾರೆಯು ಅಮರ, ಸೂಳ್ಯ, ಪಂಜ, ಬೆಳ್ಳಾರೆ ಈ ಸೀಮೆಗಳಿಗೆ ಮುಖ್ಯ ಪಟ್ಟಣವಾಯಿತು.

6. **ಕಡಬ ಬಲ್ಲಾಳ:**—ಈ ವಂಶದವರು (1) ಕೊಡಿಂಬಳ, (2) ಕುಟ್ರುಪಾಡಿ, (3) ಕಡಬ ಈ ಮೂರು ಗ್ರಾಮಗಳನ್ನು ಆಳುತ್ತಿದ್ದರು. ಬೀಡು ಕಡಬದಲ್ಲಿತ್ತು. ಈಗ ಅದು ಪೂರಾ ನಾಶವಾಗಿ ಹಾಳು ಬಿದ್ದ ಸ್ಥಳದ ಮಧ್ಯದಲ್ಲಿ ಒಂದು ಶಿಲೆಯ ಕಂಬ ಮಾತ್ರವೇ ಇದೆ. ಕಡಬದ ಬಸದಿಯೂ ಬಿದ್ದುಹೋಗಿಯದೆ. ಕಡಬವು 8ನೇ ಶತಮಾನ ದಿಂದ ಉಪ್ಪಿನಂಗಡಿ ತಾಲೂಕಿನ ಅಧಿಕಾರಿಯ ಮುಖ್ಯ ಪಟ್ಟಣ ವಾಗಿತ್ತು. ಕನ್ನಡ ಜಿಲ್ಲೆಯು ಇಂಗ್ಲೀಷರಿಗೆ ಸಿಕ್ಕಿದ ಮೇಲೆಯೂ ಇಲ್ಲಿ ತಾಲೂಕು ಕಚೇರಿಯು 1834ರ ವರೆಗೆ ಇತ್ತು.

7. **ಮುದರ್ಾಳ ಬಲ್ಲಾಳ:**—ಈ ವಂಶದವರು (1) ಬಂಟ್ರ, (2) ನೆಕ್ಕಿಲಾಡಿ, (3) ಐತೂರು, (4) ಕೆನ್ಯೆ, (5) ಬಳ್ಪ ಈ ಐದು ಗ್ರಾಮ ಗಳನ್ನು ಆಳಿಕೊಂಡಿದ್ದರು. ಬೀಡು ಮುದರ್ಾಳದಲ್ಲಿದೆ. ಬೀಡಿನ ಹತ್ತರವೇ, ಸೀಮೆ ದೇವಸ್ಥಾನವಾದ ಮಹಾಲಿಂಗೇಶ್ವರ ದೇವಸ್ಥಾನವೂ ಚಂದ್ರನಾಥ ಬಸದಿಯೂ ಇವೆ. ಈ ವಂಶವು ಈಗಲೂ ಇದೆ. ಇವರ ಪಟ್ಟಣದ ಹೆಸರುಗಳು (1) ಕೋಟಿ ಬಲ್ಲಾಳ, (2) ಲಕ್ಷ್ಮಣ ಬಲ್ಲಾಳ.

8. **ಇಂಜಾಡಿ ಬಲ್ಲಾಳ:**—ಈ ವಂಶದವರು (1) ಸುಬ್ರ ಮಣ್ಯ, (2) ಐನಕಿದು, (3) ಬಿಳಿನೆಲೆ ಈ ಮೂರು ಗ್ರಾಮಗಳನ್ನು ಆಳಿಕೊಂಡಿದ್ದರು. ಈ ವಂಶವು ಈಗ ಇರುವದಿಲ್ಲ. ಈ ವಂಶದವರು ಕಟ್ಟಿಸಿದ ಕೋಟೆಗಳಲ್ಲಿ ಸುಬ್ರಮಣ್ಯ ಗ್ರಾಮದಿಂದ 3 ಮೈಲು ದಕ್ಷಿ ಣಕ್ಕೆ ಈಗಿನ ಐನಕಿದು ಎಂಬ ಗ್ರಾಮದಲ್ಲಿ ಒಂದು ಕೋಟೆಯೂ, ಸುಬ್ರಮಣ್ಯ ಗ್ರಾಮದಿಂದ ಪಶ್ಚಿಮೋತ್ತರ ಬಿಳಿನೆಲೆ ಎಂಬ ಗ್ರಾಮದಲ್ಲಿ

ಒಂದು ಕೋಟೆಯೂ ಮತ್ತು ಸುಬ್ರಮಣ್ಯದಿಂದ ಪೂರ್ವೋತ್ತರದಲ್ಲಿ ಮೈಸೂರು ಸೀಮೆಯಿಂದ ಇಳಿದು ಬರುವ ಬಿಸಲೆ ಘಟ್ಟದ ಬೂದಿಚಾವಡಿ ಎಂಬಲ್ಲಿ ಒಂದು ಕೋಟೆಯೂ ದೈವಸ್ಥಾನವೂ ಇರುತ್ತವೆ. ಸುಬ್ರ ಮಣ್ಯ ಗ್ರಾಮದಲ್ಲಿ ಈಗ ಇರುವ ಸುಬ್ರಮಣ್ಯ ದೇವಸ್ಥಾನದಿಂದ ಸುಮಾರು ಉತ್ತರಕ್ಕೆ ಎರಡು ಮೈಲು ದೂರದಲ್ಲಿರುವ ಕುಲ್ಕುಂದ ಎಂಬಲ್ಲಿ ಒಂದು ಬೀಡು ಅಥವಾ ಅರಮನೆ ಇದ್ದ ಸ್ಥಳವು ಮತ್ತು ಬೀಡಿನಗದ್ದೆ ಎಂತ ಪ್ರಸಿದ್ಧ ಗದ್ದೆಗಳು ಇರುತ್ತವೆ. ಅರಮನೆಯ ಪಂಚಾಂಗದ ಕುರುಹುಗಳು ಸಹ ಕಂಡುಬರುತ್ತವೆ. ಸುಬ್ರಮಣ್ಯ ದಲ್ಲಿ ಬಹು ಪುರಾತನಕಾಲದಲ್ಲಿ ಶ್ರೀ ಪರಶುರಾಮನು (ಈಗ ಸುಬ್ರ ಮಣ್ಯ ಮತ್ತು ಸಂಪುಟ ನರಸಿಂಹ ದೇವರುಗಳ ದೇವಸ್ಥಾನ ಇರುವ ಸ್ಥಳದಲ್ಲಿ) ಒಂದು ಶಿವಲಿಂಗವನ್ನು ಪ್ರತಿಷ್ಠಿಸಿದನು. ಆ ಕಾಲದಲ್ಲಿ ಈ ಗ್ರಾಮವು ಹೆಚ್ಚಿನ ಅಭಿವೃದ್ಧಿ ಸ್ಥಿತಿಯಲ್ಲಿ ಇರದೆ ನಿರ್ಜನ ಪ್ರದೇಶವಾಗಿತ್ತು. ಈ ಶಿವಲಿಂಗದ ಸುತ್ತಲೂ ಪೌಳಿ, ಗುಂಡ ವಗೈರೆ ಕಟ್ಟೋಣಗಳು ಇಲ್ಲದೆ ಆ ಲಿಂಗದ ಸುತ್ತಲೂ ಸುವರ್ಣಕೇದಕಿ ಹೂವಿನ ವನವು ಆವರಿಸಿಕೊಂಡಿತ್ತು. ಇದರ ಅರ್ಚಕನು ಒಂದು ಸಣ್ಣ ದಾರಿಮಾಡಿಕೊಂಡು ದಿವಸಕ್ಕೊಮ್ಮೆ ಪೂಜೆಮಾಡಿಕೊಂಡಿದ್ದನು. ಪೂಜೆಮಾಡಿ ಲಿಂಗದ ಮೇಲೆ ಕಾಗೆ ವಗೈರೆ ಪಕ್ಷಿಗಳು, ನಾಯಿ ಮುಂತಾದ ಮೃಗಗಳು ಮುಟ್ಟದಂತೆ ಒಂದು ಕುಕ್ಕೆಯನ್ನು ಆ ಲಿಂಗದ ಮೇಲೆ ಕವಚಿ ಹಾಕಿಕೊಂಡಿದ್ದನು. ಈ ಕುಕ್ಕೆಗೆ ಪಂಚಕುಕ್ಕೆ ಎಂದು ಹೆಸರು. ಇದು ಲಿಂಗದ ಆಕೃತಿಯಲ್ಲಿಯೇ ಇದೆ. ಈ ಕಾರಣದಿಂದ ಆ ಲಿಂಗಕ್ಕೆ ಕುಕ್ಕೆಲಿಂಗ ಎಂದು ಹೆಸರು ಬಂತು. ಆ ಗ್ರಾಮಕ್ಕೂ ಕುಕ್ಕೆಗ್ರಾಮ ಮತ್ತು ಸಂಕೇತ ಕುಕ್ಕೆಗ್ರಾಮ ಎಂಬ ಹೆಸರು ಬಂದು ಆನಂತರ ಸುಬ್ರಮಣ್ಯ ದೇವಸ್ಥಾನಕ್ಕೂ ಕುಕ್ಕೆ ಶ್ರೀ ಸುಬ್ರಾಯದೇವಳ ಎಂತ ಹೆಸರು ಬಂತು. ಅನಂತರ ಸುತ್ತಮುತ್ತಲೂ ಇರುವ ಜನರು ಬಂದು ದೇವಸ್ಥಾನದ ಸುತ್ತಲೂ ನೆಲೆನಿಂತ ಮೇಲೆ ಊರು ಅಭಿವೃದ್ಧಿಗೆ

ಬಂತು. ಕ್ರಿ. ಶಕದ ಒಂದನೇ ಶತಮಾನದಲ್ಲಿ ಜೈನರು ಈ ಜಿಲ್ಲೆಗೆ ಬಂದು ರಾಜ್ಯಭಾರಮಾಡತೊಡಗಿ ಈ ಸೀಮೆಗೆ ಅರಸನಾಗಿ ಒಬ್ಬ ಬಲ್ಲಾಳನಿಗೆ ಐನಕಿದು ಗ್ರಾಮದ ಇಂಚಾಡಿ ಎಂಬಲ್ಲಿ ಒಂದು ಬೀಡನ್ನು (ಸುಬ್ರಮಣ್ಯದಿಂದ ಸಾಧಾರಣ ನೈರುತ್ಯಕ್ಕೆ) ಕಟ್ಟಿ ಅಲ್ಲಿ ಪಟ್ಟವಾಯಿತು. ಈ ದೇವಸ್ಥಾನವೂ ಆ ಬಲ್ಲಾಳನ ಆಳಿಕೆಯೊಳಗೆ ಬಂದು ಕುಕ್ಕೆ ಸುಬ್ರಮಣ್ಯ ದೇವರಿಗೆ ಒಂದು ದೇವಸ್ಥಾನವನ್ನು ಕಟ್ಟಿಸಿದನು. ಕುಕ್ಕೆ ಹಳ್ಳಿಯು ಕುಕ್ಕೆ ಪಟ್ಟಣವಾಯಿತು. ಅನಂತರ ಈ ವಂಶದವರು ಕುಲ್ಕುಂದದಲ್ಲಿ ಒಂದು ಬೀಡನ್ನು ಕಟ್ಟಿಸಿದರು. ಬಳಿಕ ಮಧ್ವಾಚಾರ್ಯರ ಕಾಲದಲ್ಲಿ ಎಂದರೆ, ಕ್ರಿ. ಶ. 12ನೇ ಶತಮಾನದಲ್ಲಿ ಮಧ್ವಾಚಾರ್ಯರು ಸುಬ್ರಮಣ್ಯಕ್ಕೆ ಬಂದು ಈ ಬಲ್ಲಾಳರಿಂದ ಸನ್ಮಾನಿಸಲ್ಪಡುತ್ತಿದ್ದರು. ಮಧ್ವಾಚಾರ್ಯರು ಕಣ್ವತೀರ್ಥದಲ್ಲಿ ತಮ್ಮ ತಮ್ಮನಾದ ವಿಷ್ಣು ತೀರ್ಥಾಚಾರ್ಯರಿಗೆ ಆಶ್ರಮಕೊಟ್ಟು ಈ ಬಲ್ಲಾಳರ ಸಹಾಯದಿಂದ ದೇವಸ್ಥಾನದ ಹತ್ತರವೇ ಒಂದು ಮಠವನ್ನು ಕಟ್ಟಿಸಿ ಅಲ್ಲಿ ಸುಬ್ರಮಣ್ಯ ಮಠ ಎಂಬ ಸಂಸ್ಥಾನವನ್ನು ಸ್ಥಾಪಿಸಿದರು. ಇವರ ಪೂಜೆಗಾಗಿ ಸುಬ್ರಮಣ್ಯ ದೇವಸ್ಥಾನದಲ್ಲಿ ಒಂದು ನರಸಿಂಹ ವಿಗ್ರಹವನ್ನೂ, ದಿಗ್ವಿಜಯ ಪಾಂಡುರಂಗ ವಿಠಲ ಮತ್ತು ವ್ಯಾಸ ಸಾಲಿಗ್ರಾಮಗಳನ್ನೂ ಪ್ರತಿಷ್ಠಿಸಿದರು. ವಿಷ್ಣುತೀರ್ಥಾಚಾರ್ಯರು ಅನಿರುದ್ಧ ತೀರ್ಥರಿಗೆ ಆಶ್ರಮವನ್ನು ಕೊಟ್ಟರು. ಮಧ್ವಾಚಾರ್ಯರು ವಿಷ್ಣು ತೀರ್ಥಾಚಾರ್ಯರಿಗೆ 5 ವ್ಯಾಸ ಸಾಲಿಗ್ರಾಮಗಳಿಂದ ತುಂಬಲ್ಪಟ್ಟ ಒಂದು ಸಂಪುಟವನ್ನು ಕೊಟ್ಟರು. ಅವರು ಸಿದ್ಧಪರ್ವತಕ್ಕೆ ತಪಸ್ಸಿಗೆ ಹೋಗುವಾಗ ಆ ಸಂಪುಟವನ್ನು ತೆಗೆದುಕೊಂಡು ಹೋಗಿದ್ದರು. ಆ ಸಂಪುಟವು ಶ್ರೀ ಸಂಸ್ಥಾನದಲ್ಲಿರುವದು. ಹೆಚ್ಚಿನ ಶ್ರೇಯೋಭಿವೃದ್ಧಿಗೆ ಕಾರಣವೆಂದು ಅನಿರುದ್ಧ ತೀರ್ಥರಿಗೆ ತೋರಿತು; ಒಂದು ರಾತ್ರೆ ವಿಷ್ಣುತೀರ್ಥಾಚಾರ್ಯರು ಅನಿರುದ್ಧ ತೀರ್ಥರಿಗೆ ಸ್ವಪ್ನದಲ್ಲಿ ಬಂದು "ನಾಳೆ ಪ್ರಾತಃಕಾಲ ಸ್ನಾನಾದಿ ಅನುಷ್ಠಾನವನ್ನು ತೀರಿಸಿ ಕುಮಾರಧಾರಾ

ನದಿಯ ದಡದಲ್ಲಿ ಶ್ರೀ ಹರಿಧ್ಯಾನಾಸಕ್ತನಾಗಿ ಇರಬೇಕು. ಆ ಸಮಯದಲ್ಲಿ ನೀನು ಅಪೇಕ್ಷಿಸಿದ ಸಂಪುಟವು ಆ ಕುಮಾರಧಾರಾ ಹೊಳೆಯಲ್ಲಿ ತೇಲಿಕೊಂಡು ಬರುತ್ತದೆ. ಅದನ್ನು ಸಂಸ್ಥಾನದಲ್ಲಿ ಇರಿಸಿಕೊಳ್ಳಬೇಕೆಂತಲೂ, ಇನ್ನೊಂದು ಹೊಳೆಯಲ್ಲಿ ದರ್ಪಣ ಮತ್ತು ಅಕ್ಷಯಪಾತ್ರ ಕಳುಹಿಸುತ್ತೇವೆ. ಅವುಗಳನ್ನು ಸುಬ್ರಾಯ ದೇವಸ್ಥಾನಕ್ಕೆ ಕೊಡಬೇಕು'' ಎಂತ ತಿಳಿಸಲಾಗಿ ಅದೇ ಪ್ರಕಾರ ಅನಿರುದ್ಧ ತೀರ್ಥರು ಸಂಪುಟವನ್ನು ಮಠದಲ್ಲಿಟ್ಟುಕೊಂಡು ದರ್ಪಣ ಮತ್ತು ಅಕ್ಷಯ ಪಾತ್ರವನ್ನು ಸುಬ್ರಮಣ್ಯ ದೇವರಿಗೆ ಸಮರ್ಪಿಸಿದರು. ದರ್ಪಣ ಬಂದ ಹೊಳೆಗೆ ದರ್ಪಣತೀರ್ಥವೆಂದು ಹೆಸರಾಯಿತು. ಗ್ರಾಮಸ್ಥರಲ್ಲಿ ಕೆಲವರು ಒಟ್ಟುಕೂಡಿ ಮಠದ ಸ್ವಾಮಿಯವರಿಗೆ ಸಂಪುಟ ಎಂಬ ಒಂದು ಘನಪದಾರ್ಥವು ಸಿಕ್ಕಿದೆ ಎಂತಲೂ ಅದನ್ನು ಅವರೇ ಇಟ್ಟುಕೊಂಡು ದರ್ಪಣ ಮತ್ತು ಅಕ್ಷಯಪಾತ್ರವನ್ನು ಮಾತ್ರವೇ ಸುಬ್ರಮಣ್ಯ ದೇವರಿಗೆ ಕೊಟ್ಟಿರುತ್ತಾರೆಂತಲೂ ಬಲ್ಲಾಳನಲ್ಲಿ ದೂರು ಹೇಳಿದರು. ಆಗ ಸುಬ್ರಮಣ್ಯ ದೇವಸ್ಥಾನದ ಸರ್ವಾಧಿಕಾರಿಯಾದ ಆ ಬಲ್ಲಾಳನು ಮಠದ ಸ್ವಾಮಿಯವರಲ್ಲಿಗೆ ಬಂದು ಸಂಪುಟವನ್ನು ಕೊಡಬೇಕೆಂದು ಗದರಿಸಿ ಕೇಳಿದನು. ಈ ಸಂಪುಟವನ್ನು ನಮ್ಮ ಗುರುಗಳ ಆಜ್ಞಾಪ್ರಕಾರ ನಾವು ಆರಾಧಿಸುವ ಬಗ್ಗೆ ಇಟ್ಟುಕೊಂಡಿದ್ದೇವೆ. ಅದನ್ನು ಕೊಡಲಿಕ್ಕಾಗುವದಿಲ್ಲವೆಂದು ಎಷ್ಟು ಸಮಾಧಾನ ಹೇಳಿದರೂ ಬಲ್ಲಾಳನು ಕೇಳಲಿಲ್ಲ. ಕಡೆಗೆ ಅನಿರುದ್ಧ ತೀರ್ಥರು ಸಂಪುಟವನ್ನು ಕೊಟ್ಟರು. ಬಲ್ಲಾಳನು ಆ ಸಂಪುಟದ ಬಾಯಿಯ ಮುಚ್ಚಳವನ್ನು ತೆಗಿಸಬೇಕೆಂದು ಪ್ರಯತ್ನಿಸಿದ್ದಲ್ಲಿ ಸಾಧ್ಯವಾಗದೆ ಕೊನೆಗೆ ಕಮ್ಮಾರರನ್ನು ಕರೆಸಿ ಚೇಣಹಾಕಿಸಿದರೂ ಒಡೆಯದಿರುವದನ್ನು ಕಂಡು ಆನೆಯ ಕಾಲಿನಿಂದ ಮೆಟ್ಟಿಸಿದನು. ಕಮ್ಮಾರನು ಸತ್ತನು. ಆನೆಯೂ ವೈಯ್ಯ ಉರಿಯನ್ನು ತಡಿಯಲಾರದೆ ಓಡಿಹೋಗಿ ಹೊಳೆಯಲ್ಲಿ ಮುಳುಗಿ ಸತ್ತಿತು. ಆನೆಯು ಸತ್ತ ಸ್ಥಳಕ್ಕೆ ಆನೆಗುಂಡಿ ಎಂದು ಹೆಸರು ಬಂತು. ಆ ಗುಂಡಿಯು ದರ್ಪಣ ತೀರ್ಥಹೊಳೆಯಲ್ಲಿರುತ್ತದೆ.

ಬಲ್ಲಾಳ ರಾಯನಿಗೂ ಮೈಯ್ಯಲ್ಲಿ ಅತಿಶಯವಾದ ಉರಿಯಾಗಿ ಗುಳ್ಳೆಗಳೆದ್ದು ಸಂಕಟಪಡುವಲ್ಲಿ ಸಂಪುಟವನ್ನು ಸ್ವಾಮಿಗಳಿಗೆ ಕೊಟ್ಟು ಅವನು ಅನ್ನಾಹಾರಬಿಟ್ಟು ಸುಬ್ರಮಣ್ಯ ದೇವರಲ್ಲಿ ಧ್ಯಾನಕ್ಕೆ ಕೂತನು. ಸುಬ್ರಮಣ್ಯ ದೇವರು ಪ್ರಸನ್ನನಾಗಿ "ನೀನು ಕೇವಲ ಗುರುದೇವತಾ ದ್ರೋಹವಮಾಡಿದ್ದಿ, ಆದ್ದರಿಂದ ನಿನ್ನ ತಾಪ ಶಾಂತವಾಗಬೇಕಾದರೆ, ನಿನ್ನ ಪ್ರತಿಬಿಂಬವನ್ನು ಕಲ್ಲಿನಿಂದ ತಯಾರಿಸಿ ನನ್ನ ಸನ್ನಿಧಿಯಲ್ಲಿ ಇರಿಸು. ನನ್ನ ಭಜಕರು ನಿನಗೆ ಕುಂಬಳಕಾಯಿ, ಬೆಣ್ಣೆ, ಹತ್ತಿ, ಸಾಸಿವೆ ಈ ಪದಾರ್ಥಗಳನ್ನು ಒಪ್ಪಿಸುವರು. ಇವನ್ನು ಮಾರಿ ಬಂದ ಹಣವನ್ನು ಶ್ರೀಮಠಕ್ಕೆ ಸಮರ್ಪಿಸತಕ್ಕದ್ದು ಮತ್ತು ದೇವಸ್ಥಾನದ ಅಧಿಕಾರ ವನ್ನು ಸ್ವಾಮಿಯವರಿಗೆ ಒಪ್ಪಿಸತಕ್ಕದ್ದು" ಎಂದು ಸ್ವಪ್ನದಲ್ಲಿ ಹೇಳಿದ ಹಾಗಾಯಿತು. ಅವನು ಮೇಲೆ ಹೇಳಿದ ರೀತಿಯಲ್ಲಿಯೇ ಮಾಡಲು ಮೈಯ ಉರಿಯು ನಿಂತಿತು. ಆ ಸಮಯದಲ್ಲಿ ಮಾಡಿಟ್ಟ ಆ ಬಲ್ಲಾಳ ರಾಯನ ಪ್ರತಿಮೆಯು ಈಗಲೂ ಇದೆ. ಆ ಪದ್ಧತಿಯು ಈಗಲೂ ನಡೆದುಬರುತ್ತದೆ. ಅನಂತರ ಕ್ರಮೇಣ ಈ ವಂಶವು ನಾಶವಾಯಿತು. ದೇವಸ್ಥಾನದ ಅಧಿಕಾರವು ಸುಬ್ರಮಣ್ಯ ಮಠದ ಸ್ವಾಮಿಗಳ ಕೈಗೆ ಸಿಕ್ಕಿತು. ಗೋವೆಯ ಮಹಾದೇವ ಒಡೆಯನು ಮಂಗಳೂರು ರಾಜ್ಯವಾಳುವಾಗ ಈ ದೇವಸ್ಥಾನಕ್ಕೆ ಶಾ. ಶ. 1301ನೇ ಸಿದ್ಧಾರ್ಥಿ ಸಂ|ರದ ಮಾರ್ಗಶಿರ ಬ| ೧೦ರಲ್ಲಿ ಭೂಮಿ ಉಂಬಳಿ ಬಿಟ್ಟಿರುತ್ತಾನೆಂದು ಈ ದೇವಸ್ಥಾನದಲ್ಲಿರುವ ಒಂದು ಶಾಸನದಿಂದಲೂ ಮೈಸೂರು ಸಂಸ್ಥಾನಕ್ಕೆ ಸೇರಿದ ಬೇಲೂರಿನಲ್ಲಿ ಆಳುತ್ತಿದ್ದ ಅತ್ರೇಯಗೋತ್ರ ಆಪಸ್ತಂಭಸೂತ್ರ ಯಜುಶಾಖಾಧ್ಯಾಯ ಭಾಮವಂಶೋದ್ಭವನಾದ ಆದಿವಿಟರಂಗ ರಾಜಯ್ಯನ ಪೌತ್ರ ಗೋಪಾಲಯ್ಯನ ಪುತ್ರ ಶ್ರೀಮದ್ ರಾಜಾಧಿರಾಜ ಪರಮೇಶ್ವರ ಶ್ರೀವೀರ ವೀರಪ್ರತಾಪವೀರ ಶ್ರೀ ರಂಗರಾಯ ದೇವ ಮಹಾರಾಯನು ಮೈಸೂರ ಸೀಮೆಯ ಮಾಗಿನಾಡು ಒಳಗಣ ಹಲಸೂರು ಗ್ರಾಮವನ್ನು ಶಾ. ಶ. 1581ನೇ ವಿಕಾರಿ ಸಂ|ರದ ಜ್ಯೇಷ್ಠ ಶು| ೧೫ರಲ್ಲಿ

ಸುಬ್ರಮಣ್ಯ ಸಂಪುಟ ನರಸಿಂಹ ದೇವರ ದೇವಸ್ಥಾನದಲ್ಲಿ ದೀಪಾರಾಧನೆ ಮತ್ತು ಸಂತರ್ಪಣೆ ಬಗ್ಗೆ ಉಂಬಳಿಬಿಟ್ಟಿರುತ್ತಾನೆಂದು ಒಂದು ಶಾಸನ ದಿಂದಲೂ, ಅದೇ ಬೇಲೂರಿನ ಶ್ರೀರಂಗ ದೇವರಾಯನು ಶ್ರೀ ವರದರಾಜ ತೀರ್ಥಸ್ವಾಮಿಗಳವರ ಕಾಲದಲ್ಲಿ ಶಾ. ಶ. 1588ನೇ ವಿಶ್ವಾವಸು ಸಂ|ರದ ಚೈತ್ರ ಶುದ್ಧ ಪಾಡ್ಯದ ದಿವಸ, ಸುಬ್ರಮಣ್ಯ ದೇವಸ್ಥಾನದಲ್ಲಿ ಚಂಪಾಷಷ್ಠಿಯ ದಿವಸ 6000 ಬ್ರಾಹ್ಮಣ ಸಂತರ್ಪಣೆಯೂ ಮಠದಲ್ಲಿ 6000 ಬ್ರಾಹ್ಮಣ ಸಂತರ್ಪಣೆಯೂ ನಡಿಯುವ ಹಾಗೆಯೂ ದೇವಸ್ಥಾನ ಮತ್ತು ಮಠದ ಉಪಯೋಗಕ್ಕೆ 1 ವರ್ಷಕ್ಕೆ ಬೇಕಾಗುವ 5 ಮಣ ಗಂಧವನ್ನು ವರ್ಷಂಪ್ರತಿ ಒದಗಿಸುವದಕ್ಕಾಗಿಯೂ ಬೇಲೂರು ಸೀಮೆಗೆ ಸೇರಿದ ಹೆಗ್ಗಾವೆ ಗ್ರಾಮವನ್ನು ಉಂಬಳಿಬಿಟ್ಟಿರುತ್ತಾನೆಂದು ಇನ್ನೆರಡು ಶಾಸನಗಳಿಂದಲೂ ತಿಳಿದುಬರುತ್ತದೆ. ಶಾ. ಶ. 1603ನೆಯ ದುರ್ಮತಿ ಸಂ|ರದಲ್ಲಿ ಬೇಲೂರಿನ ತಿಪ್ಪಯ ಮತ್ತು ವೆಂಕಟಾದ್ರಿನಾಯಕನು ಭೂಮಿ ಉಂಬಳಿಬಿಟ್ಟಿದ್ದಾನೆಂದು ಇನ್ನೊಂದು ಶಾಸನದಿಂದಲೂ ತಿಳಿಯುತ್ತದೆ. ಕ್ರಿ. ಶ. 1583—1630ರ ವರೆಗೆ ಆಳಿದ ವೆಂಕಟಪ್ಪನಾಯಕನು ಚಂಪಾಷಷ್ಠಿಯ ದಿವಸ ರಥೋತ್ಸವವು ತಪ್ಪದೆ ನಡಿಯುವ ಹಾಗೆ ಬಹಳ ದೊಡ್ಡದಾದ ರಥವನ್ನು ಕಟ್ಟಿಸಿಕೊಟ್ಟು ಶಾಶ್ವತವಾಗಿ ರಥೋತ್ಸವವು ನಡಿಯುವ ಹಾಗೆ ಭೂಮಿಯನ್ನು ಉಂಬಳಿಬಿಟ್ಟಿರುತ್ತಾನೆ. ಸೋಮ ಶೇಖರನಾಯಕನೂ, ಚೆನ್ನಮ್ಮಾಜಿಯೂ, ಬಸವಪ್ಪನಾಯಕನೂ ರಥೋತ್ಸವದ ಖರ್ಚಿಗಾಗಿಯೂ ದೀಪಾರಾಧನೆಯ ಖರ್ಚಿಗಾಗಿಯೂ ಭೂಮಿ ಉಂಬಳಿಬಿಟ್ಟಿರುತ್ತಾರೆ. ಈಗ ಎಲ್ಲಾ ಉಂಬಳಿಗಳಿಂದಲೂ ದಕ್ಷಿಣ ಕನ್ನಡ ಜಿಲ್ಲೆಯಿಂದ ಸುಬ್ರಮಣ್ಯ ದೇವರಿಗೆ 4400 ರೂಪಾಯಿ ತಸದೀಕು, ಮೈಸೂರು ಸಂಸ್ಥಾನದಿಂದ 600 ಚಿಲ್ಲರೆ ತಸದೀಕು ಸಿಕ್ಕುತ್ತದೆ. ಸುಬ್ರಮಣ್ಯ ಮಠಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಿಂದ 560 ರೂಪಾಯಿ ತಸದೀಕು ಸಿಕ್ಕುತ್ತದೆ.

**9. ಕೊಂಬಾರು ಬಲ್ಲಾಳ:—**ಈ ವಂಶದವರು (1) ಕೊಂಬಾರು, (2) ಶಿರಿವಾಗಲು ಈ ಎರಡು ಗ್ರಾಮಗಳನ್ನು ಆಳುತ್ತಿದ್ದರು. ಇವರ ಬೀಡು ಕೊಂಬಾರಿನಲ್ಲಿತ್ತು. ಪಾರ್ಶ್ವನಾಥ ಬಸದಿಯೂ ಕೊಂಬಾರಿನಲ್ಲಿದೆ.

**10. ರೆಂಜಲಾಡಿ ಬಲ್ಲಾಳ:—**ಈ ವಂಶದವರು (1) ಕೊಣಾಜೆ, (2) ನೂಜಿ ಬಾಳ್ತಿಲ, (3) ರೆಂಜಲಾಡಿ ಈ ಮೂರು ಗ್ರಾಮಗಳನ್ನು ಆಳುತ್ತಿದ್ದರು. ಇವರ ಬೀಡು ರೆಂಜಲಾಡಿಯಲ್ಲಿತ್ತು.

**11. ನೆಲ್ಯಾಡಿ ಬಲ್ಲಾಳ:—**ಈ ವಂಶದವರು (1) ನೆಲ್ಯಾಡಿ, (2) ಬಳಿಲ, (3) ಕುಂತೂರು, (4) ಇಚಲಂಪಾಡಿ ಈ ಗ್ರಾಮಗಳನ್ನು ಆಳುತ್ತಿದ್ದರು. ಬೀಡು ನೆಲ್ಯಾಡಿಯಲ್ಲಿದೆ. ಅನಂತನಾಥ ಬಸದಿಯು ಇಚಲಂಪಾಡಿಯಲ್ಲಿದೆ.

**12 ನೇರಂಕಿ ಚಾವಡಿ ಹೆಗ್ಗಡೆ:—**ಈ ವಂಶದವರು (1) ಹಳೆನೇರಂಕಿ, (2) ಆಲಂಗಾರು, (3) ರಾಮಕುಂಜ, (4) ಆಲಂತಾಯ, (5) ಕೊಣಾಲು, (6) ಗೋಳಿತಟ್ಟು, (7) ಬಜತ್ತೂರು ಈ ಏಳು ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡು ನೇರಂಕಿಯಲ್ಲಿದೆ. ಚಂದ್ರನಾಥ ಬಸದಿಯೂ ನೇರಂಕಿಯಲ್ಲಿದೆ. ನೇರಂಕಿಯು ಬಹಳ ದೊಡ್ಡ ಪಟ್ಟಣವಾಗಿತ್ತು. ಹಾಳುಬಿದ್ದಿರುವ ಈ ಪಟ್ಟಣವನ್ನು ಈಗಲೂ ನೋಡಬಹುದು. ನೇರಂಕಿಯಲ್ಲಿ ಎರ್ಕೆಮಠ ಎಂಬ ಒಂದು ಮಠ ಇದೆ. ಇಲ್ಲಿ ನೂರಿತ್ತಾಯವೆಂಬ ಮಾಧ್ವಬ್ರಾಹ್ಮಣರ ಮನೆತನಕ್ಕೆ ಮಧ್ವಾಚಾರ್ಯರು ಕೇಶವ ಮೂರ್ತಿಯನ್ನು ಕೊಟ್ಟಿರುತ್ತಾರೆ. ಮಧ್ವಾಚಾರ್ಯರು ಈ ಬಲ್ಲಾಳರ ಸಹಾಯದಿಂದ ಈ ಮಠದ ಹತ್ತರ ದಂಡ ತೀರ್ಥವೆಂಬ ಒಂದು ಕೆರೆಯನ್ನು ಮಾಡಿಸಿದ್ದಾರೆ. ಪೆರೋಡಿ ಬಲ್ಲಾಳರು ಇವರ ಕುಟುಂಬದವರಾಗಿರುತ್ತಾರೆ.

13 **ಪುತ್ತೂರು ಹೆಗ್ಗಡೆ:**—ಈ ವಂಶದವರು (1) ಪುತ್ತೂರು, (2) ಬಲ್ನಾಡು, (3) ಆರ್ಯಾಪು, (4) ಒಳಮೊಗರು, (5) ಕೆಮ್ಮಿಂಜೆ, (6) ಕುರಿಯ, (7) ಅಜ್ಜಾವರ, (8) ಚಿಕ್ಕ ಮುಡ್ನೂರು, (9) ಕೆಡಿಪಾಡಿ, (10) ಶಾಂತಿಗೋಡು, (11) ನರಿಮೊಗರು ಈ ಹನ್ನೊಂದು ಗ್ರಾಮಗಳನ್ನು ಆಳಿಕೊಂಡಿದ್ದರು. ಒಂದು ಬೀಡು ಪುತ್ತೂರಿನಲ್ಲಿತ್ತು. ಇನ್ನೊಂದು ಬೀಡು ಆರ್ಯಾಪು ಗ್ರಾಮದಲ್ಲಿತ್ತು. ಎರಡೂ ಬಿದ್ದು ಹೋಗಿವೆ. ಆರ್ಯಾಪು ಬೀಡು ಮುಸಲ್ಮಾನರ ಸ್ವಾಧೀನ ಇದೆ. ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಶಾಂತೀಶ್ವರ ಬಸದಿಯು ಪುತ್ತೂರಿನಲ್ಲಿದೆ. ಇನ್ನೊಂದು ಆದೀಶ್ವರ ಬಸದಿಯು ಬಲ್ನಾಡಿನಲ್ಲಿದೆ.

14. **ಮುದಗ ಹೆಗ್ಗಡೆ:**—ಈ ವಂಶದವರು (1) ಕಬಕ, (2) ಪಡ್ನೂರು, (3) ಕಲ್ಲೆ, (4) ಬಣ್ಣೂರು, (5) ಕೆದಿಲ ಈ ಐದು ಗ್ರಾಮಗಳನ್ನು ಆಳಿಕೊಂಡಿದ್ದರು. ಇವರ ಬೀಡು ಕಬಕದ ಹತ್ತರ ಕಲ್ಲೇ ಎಂಬಲ್ಲಿತ್ತು. ಬೀಡೂ ಅದರ ಸುತ್ತಲೂ ಇದ್ದ ಕೋಟೆಯೂ ಹಾಳುಬಿದ್ದಿರುವದನ್ನು ಈಗಲೂ ನೋಡಬಹುದು.

15. **ಬಂಡಾಡಿ ಬಲ್ಲಾಳ:**—ಈ ವಂಶದವರು (1) ಹಿರೇ ಬಂಡಾಡಿ, (2) ಬೆಳ್ಳಿಪಾಡಿ, (3) ಕೊಡಂಬಾಡಿ, (4) ಪರವೆ, (5) ನೆಕ್ಕಿಲಾಡಿ, (6) ಉಪ್ಪಿನಂಗಡಿ, (7) ಇಲ್ಲಂತಿಲ, (8) ಉರುವಾಲು, (9) ಕರೆಯ, (10) ಬಳಿಯೂರು ಈ ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡು ಬಂಡಾಡಿಯಲ್ಲಿತ್ತು.

16. **ಉಳಿಯ ಬಲ್ಲಾಳ:**—ಈ ವಂಶದವರು (1) ಪಟ್ರಮೆ, (2) ನಿಡ್ಲೆ, (3) ಕೌಕ್ರಾಡಿ, (4) ಕೊಕ್ಕಡ ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡು ಪಟ್ರಮೆಯಲ್ಲಿದೆ.

17. **ಧರ್ಮಸ್ಥಳ ಹೆಗ್ಗಡೆ:**—ಇವರ ಕೈಕೆಳಗೆ ಧರ್ಮಸ್ಥಳ ಗ್ರಾಮವಿದೆ. ಮಂಜುನಾಥ ದೇವಸ್ಥಾನವೂ, ಬೀಡೂ, ಚಂದ್ರನಾಥ ಬಸದಿಯೂ ಧರ್ಮಸ್ಥಳದಲ್ಲಿವೆ.

18. **ಕಳಿಯ ಬಲ್ಲಾಳ:**—ಇವರು (1) ಕಳಿಯ, (2) ನ್ಯಾಯತರ್ಪು, (3) ಕೊಯ್ಯೂರು, (4) ವಡಿಲುನಾಳ, (5) ಬೆಳತಂಗಡಿ ಈ ಗ್ರಾಮಗಳನ್ನು ಆಳುತ್ತಿದ್ದರು. ಬೀಡು ಕಳಿಯದಲ್ಲಿದೆ.

19. **ಪಾಡ್ಯಾರು ಬಲ್ಲಾಳ:**—ಈ ವಂಶದವರು (1) ಕುವೆಟ್ಟು, (2) ಪಡಂಗಾಡಿ, (3) ಗರಡಾಡಿ, (4) ಸೋಣಂದೂರು, (5) ಮಾಲಾಡಿ ಈ ಗ್ರಾಮಗಳನ್ನು ಆಳುತ್ತಿದ್ದರು. ಬೀಡು ಕುವೆಟ್ಟು ಗ್ರಾಮದಲ್ಲಿ (ಗುರುವಾಯನ ಕೆರೆ) ಇದೆ.

20. **ಬಳ್ಳಮಂಜ ಬಲ್ಲಾಳ:**—ಇವರ ಕೈಕೆಳಗೆ (1) ತಣ್ಣೀರುಪಂತ, (2) ಪುತ್ತಿಲ, (3) ಮಚ್ಚಿನ, (4) ಪಾರಂಕಿ, (5) ಕುಕ್ಕಳ ಈ ಐದು ಗ್ರಾಮಗಳು ಇದ್ದವು ಬೀಡು ಬಿದ್ದುಹೋಗಿಯದೆ. ಪಾರ್ಶ್ವನಾಥ ಬಸದಿ ಇದೆ. ಬಳ್ಳಮಂಜ ಸುಬ್ರಾಯ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ.

21. **ವಳಲು ಬಲ್ಲಾಳ:**—ಇವರು (1) ವಳಲು, (2) ಬಂಡಾರ, (3) ಮೊಗರು, (4) ಕಣಿಯೂರು ಈ ನಾಲ್ಕು ಗ್ರಾಮಗಳನ್ನು ಆಳುತ್ತಿದ್ದರು. ವಳಲು ಜೈನರ ದೊಡ್ಡ ಪೇಟೆಯಾಗಿತ್ತು. ಈಗ ಪೂರ್ಣ ಹಾಳಾಗಿಯದೆ. ಬೀಡು, ಬಸದಿಗಳು ಎಲ್ಲವೂ ಹಾಳಾಗಿವೆ.

22. **ಮಲವಂತಿಗೆ ಬಲ್ಲಾಳ:**—ಇವರು (1) ಮಲವಂತಿಗೆ, (2) ನಾವೂರು, (3) ನಡ, (4) ಕನ್ಯಾಡಿ, (5) ಇಂದಬೆಟ್ಟು, (6) ಕಡಿರುದ್ಯಾವರ, (7) ಮಿತ್ತಬಾಗಿಲು ಗ್ರಾಮಗಳನ್ನು ಆಳುತ್ತಿದ್ದರು. ಬೀಡು ಮಲವಂತಿಗೆಯಲ್ಲಿ ಈಗಲೂ ಇದೆ. ನಡದಗುತ್ತು ಬಂಗರ ಸೀಮೆಯ ಒಂದನೇ ರಾಜಗುತ್ತಾಗಿರುತ್ತದೆ.

## ಕಾರ್ಕಳ ತಾಲೂಕಿನ ಬಲ್ಲಾಳರು.

**1. ಏಳುನಾಡು ಹೆಗ್ಗಡೆ:**—ಈ ಹೆಗ್ಗಡೆಯ ವಂಶದವರು ಈಗಿನ ಕಾರ್ಕಳ ತಾಲೂಕಿನ (1) ನಿಟ್ಟೆ, (2) ಕಳಿಯ, (3) ಮರಣೆ, (4) ಅಂಡಾರ, (5) ಎರ್ಲಪ್ಪಾಡಿ, (6) ನೀರೆ, (7) ಕವಡೂರು, (8) ಬೈಲೂರು, (9) ಕುಕ್ಕುಂದೂರು, (10) ಹಿರಗಾನ, (11) ಹೆಮ್ಮರ್ಗಂಡೆ, (12) ಕೆವರ್ಾಶೆ, (13) ದುರ್ಗ, (14) ಮೂಡಾರ, (15) ಮಾಳ, (16) ನಲ್ಲೂರು, (17) ರೆಂಜಾಳ, (18) ಮಿಯಾರ, (19) ಕಾರ್ಕಳ, (20) ಸಾಣೂರು ಈ ಸೀಮೆಗಳನ್ನು ಒಳಕೊಂಡಿರುವ ಏಳುನಾಡುಗಳನ್ನು ಆಳುತ್ತಿದ್ದರು. ಈ ಹೆಗ್ಗಡೆಯ ಅರಮನೆಯು ಹಿರಿಯಂಗಡಿ ಬಸದಿಯ ಈಶಾನ್ಯಕ್ಕೆ ಅರಂತಲಾಯಿ ಎಂಬಲ್ಲಿತ್ತು. ಇವನಿಗೆ ಪ್ರಜೆಗಳ ಸಂಗಡ ವೈಮನಸ್ಸುಂಟಾಗಿ ರಾಜ್ಯವು ಕಳಸದ ಭೈರವರಾಯನ ವಶವಾಯಿತು. ಕುಟುಂಬದವರಲ್ಲಿ ಯಾರೊ ಒಬ್ಬರು ಮಾಳ ಗ್ರಾಮದಲ್ಲಿದ್ದಾರಂತೆ.

**2 ಮುದ್ರಾಡಿ ಹೆಗ್ಗಡೆ:**—ಇವರ ಕೈಕೆಳಗೆ ಒಂದು (1) ಶಿವಪುರ, (2) ಮುದ್ರಾಡಿ, (3) ಕಬ್ಬಿನಾಲೆ, (4) ವಾರಂಗ, (5) ಪಡುಕುದುರು ಈ ಗ್ರಾಮಗಳು ಇದ್ದವು. ಬೀಡು ಮುದ್ರಾಡಿಯಲ್ಲಿದೆ. ವಾರಂಗದಲ್ಲಿ ಎರಡು ಬಸದಿಗಳಿವೆ. (1) ಹಿರಿ ನೇಮಿಶ್ವರ, (2) ಕೆರೆ ಚತುರ್ಮುಖ, (ಆದೀಶ್ವರ, ವರ್ಧಮಾನ, ಪಾರ್ಶ್ವನಾಥ, ಅನಂತನಾಥ.)

**3 ಹೆಬ್ರಿ ಬಲ್ಲಾಳ:**—ಇವರ ಕೈಕೆಳಗೆ (1) ಹೆಬ್ರಿ, (2) ಬಳಿಂಜ, (3) ಕಚ್ಚೂರು, (4) ಚಾರ, (5) ಕೆರೆಬೆಟ್ಟು ಈ ಐದು ಗ್ರಾಮಗಳು ಇದ್ದವು. ಇವರ ಬೀಡು ಹೆಬ್ರಿಯಲ್ಲಿದೆ. ಹೆಬ್ರಿ ಬಲ್ಲಾಳನು ಕಾಪು ಬಲ್ಲಾಳನ ಚಾಕಮೆ ಎಂಬ ಮಗಳನ್ನು ಮದುವೆಯಾಗಿದ್ದನೆಂದೂ ಅನಂತರ ಈ ಹೆಬ್ರಿ ಬಲ್ಲಾಳನು ಚಾಕಮೆಯ

ತಂಗಿಯಾದ ಪದ್ಮನೆ ಎಂಬ ಸುಂದರಿಯಾದ ಅವಳ ತಂಗಿಯನ್ನು ಮದುವೆಮಾಡಿಕೊಂಡನು. ಈ ಇಬ್ಬರು ಹೆಂಡಂದಿಯರಿಗೂ ಜಗಳ ಬಂದು ಚಾಕಮೆಯು ಕಾಪು ಪಂಜುರ್ಲಿಗೆ ಬಂಡಿ ಕಟ್ಟಿಸಿ ಕೊಡುತ್ತೇನೆಂದು ಹರಕೆ ಹೇಳಿಕೊಂಡಳು. ಆದರೆ ಇಬ್ಬರೂ ಅಕ್ಕತಂಗಿಯಂದಿರು ಸತ್ತುಹೋದರು. ಹೆಬ್ರಿ ಬಲ್ಲಾಳನು ಬಂಡಿ ಕಟ್ಟಿಸಿಕೊಟ್ಟನು.

4. **ತಿಂಗಳೆ ಚಾವಡಿ ಹೆಗ್ಗಡೆ:**—ಈ ವಂಶದವರು ನಾಡ ಪಾಲ ಗ್ರಾಮವನ್ನು ಆಳಿಕೊಂಡಿದ್ದರು. ಬೀಡು ತಿಂಗಳೆ ಎಂಬಲ್ಲಿದೆ. ದುರ್ಗಾ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ.

5. **ನಂದಳಿಕೆ ಹೆಗ್ಗಡೆ:**—ಇವರು (1) ಸೂಡ, (2) ಬೆಳ್ಮಣ್ಣು, (3) ನಂದಳಿಕೆ, (4) ಕೆದಿಂಜ, (5) ಬೋಳ ಈ ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡು ನಂದಳಿಕೆಯಲ್ಲಿದೆ. ನಂದ ಳಿಕೆ ಜನಾರ್ಧನ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಅರ್ಬಕ, ದಾರಕ ಎಂಬ ಮಾಗಣೆ ದೈವಸ್ಥಾನವೂ ನಂದಳಿಕೆಯಲ್ಲಿದೆ.

6. **ಕಾಂತಾವರ ಹೆಗ್ಗಡೆ:**—ಇವರು (1) ಕಾಂತಾವರ, (2) ಪಾಲಡ್ಕ, (3) ಕಡಂದಳೆ ಈ ಮೂರು ಗ್ರಾಮಗಳನ್ನು ಆಳುತ್ತಿದ್ದರು. ಬೀಡು ಕಾಂತಾವರದಲ್ಲಿದೆ. ಕಾಂತಾವರ ಕಾಂತೇಶ್ವರ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಈ ದೇವಸ್ಥಾನವನ್ನು ಶಾ. ಶ. 1731ನೇ ವಿಭವ ಸಂ| (1809)ದಲ್ಲಿ ಕಂಪೆನಿ ಸರಕಾರ ದವರು ಜೀರ್ಣೋದ್ಧಾರಮಾಡಿಸಿದರೆಂದು ಅಲ್ಲಿರುವ ಒಂದು ಶಾಸನ ದಿಂದ ತಿಳಿಯುತ್ತದೆ.

7. **ಪುತ್ತಿಗೆ ಬಲ್ಲಾಳ:**—ಇವರು (1) ಕಲ್ಲಮುಂಡ್ಕೂರು, (2) ಪುತ್ತಿಗೆ, (3) ನಿಡ್ಡೋಡಿ, (4) ಬೆಳುವಾಯಿ ಗ್ರಾಮಗಳನ್ನು

ಆಳುತ್ತಿದ್ದರು. ನಿಡ್ಡೋಡಿ ನೆಲ್ಲಿತೀರ್ಥದೇವಸ್ಥಾನವು ಸೀಮೆ ದೇವಸ್ಥಾನವಾಗಿತ್ತು. .ಸರಳಿ ಮಂಚದ ತಿಮ್ಮಪ್ಪಯ್ಯ ಬಲ್ಲಾಳನು ಆಳುವಾಗ ಇದು ಚೌಟರ ಸೀಮೆಗೆ ಸೇರಿತು.

8. **ಮುಂಡುಕೂರು ಬಲ್ಲಾಳ:**—ಇವರು (1) ಇನ್ನ, (2) ಮುಂಡುಕೂರು, (3) ಮುಲ್ಲಡ್ಕ ಗ್ರಾಮಗಳನ್ನು ಆಳುತ್ತಿದ್ದರು.

9. **ಮಿಜಾರು ಬಲ್ಲಾಳ:**—ಇವರು (1) ಬಡಗ ಮಿಜಾರು, (2) ತೆಂಕ ಮಿಜಾರು, (3) ಇರುವೈಲ, (4) ಮುಚ್ಚೂರು ಗ್ರಾಮಗಳನ್ನು ಆಳುತ್ತಿದ್ದರು. ಚನ್ನಪ್ಪರಸನ ಕಾಲದಲ್ಲಿ ಇದು ಚೌಟರ ಸೀಮೆಗೆ ಸೇರಿತು.

10. **ಪೆರಾಡಿ ಬಲ್ಲಾಳ:**—ಇವರು ಪೆರಾಡಿ, ಕಾಶಿಪಟ್ಣ, ಪಡುಕೋಡಿ, ಮರೋಡಿ, ಸಾವ್ಯ, ಅಂಡಿಂಜೆ ಗ್ರಾಮಗಳನ್ನು ಆಳುತ್ತಿದ್ದರು. ಬೀಡೂ, ಪಾರ್ಶ್ವನಾಥ ಬಸದಿಯೂ ಪೆರಾಡಿಯಲ್ಲಿವೆ.

11. **ಇರ್ವತ್ತೂರು ಬಲ್ಲಾಳ:**—ಇವರ ಕೈಕೆಳಗೆ (1) ಬೈರಂಪಳ್ಳಿ, (2) ಶಿರೂರು, (3) ಕಡತಿಲ, (4) ಕುಕ್ಕರಜೆ, (5) ಎಳ್ಳಾರೆ ಗ್ರಾಮಗಳು ಇದ್ದವು. ಬೀಡೂ ಚಂದ್ರನಾಥ ಬಸದಿಯೂ ಇರ್ವತ್ತೂರಿನಲ್ಲಿವೆ.

## ಉಡುಪಿ ತಾಲೂಕಿನ ಬಲ್ಲಾಳರು.

1. **ಪಡುಬಿದರೆ ಕಿನ್ಯಕ್ಕ ಬಲ್ಲಾಳ:**—ಇವರು (1) ಪಾದೆಬೆಟ್ಟು, (2) ನಡ್ಸಾಲ, (3) ಪಲ್ಮಾರ ಈ ಮೂರು ಗ್ರಾಮಗಳನ್ನು ಆಳುತ್ತಿದ್ದರು. ಬೀಡೂ, ಸೀಮೆ ದೇವಸ್ಥಾನವಾದ ಮಹಾಲಿಂಗೇಶ್ವರ ದೇವಸ್ಥಾನವೂ, ಮುನಿಸುವ್ರತ ಬಸದಿಯೂ ಪಡುಬಿದರೆಯಲ್ಲಿವೆ. ನಡಿಸಾಲು, ಅವರಾಲು, ಬಳಂಜೆ, ದಾರಡು ಗುತ್ತಿನವರು ಮಾಗಣೆ ಗುರಿಕಾರರು. ಮುರಡಿಮನೆ ಅಂಬುಳಿತ್ತಾಯರು ಪ್ರಧಾನಿಗಳು. ಈ ಬಲ್ಲಾಳರು ಪಲ್ಮಾರು, ಶಿರೂರು, ಪುತ್ತಿಗೆ, ಕಾಣ್ಯೂರು, ಸೋದೆ,

ಕೃಷ್ಣಾಪುರ ಮಠಗಳಿಗೆ ಉಂಬಳಿಬಿಟ್ಟಿರುತ್ತಾರೆಂದು ಇವರಲ್ಲಿದ್ದ 16 ಶಾಸನಗಳಿಂದ ತಿಳಿಯುತ್ತದೆ. ಇವುಗಳ ಪ್ರಕಾರ ಕ್ರಿ. ಶ. 1543 ರಲ್ಲಿ ಚಂದಲದೇವಿಯೂ ಕ್ರಿ. ಶ. 1586ರಲ್ಲಿ ಉಮಾಲುದೇವಿಯೂ ಕ್ರಿ. ಶ. 1665ರಲ್ಲಿ ಬ್ರಹ್ಮಯ್ಯ ಬಲ್ಲಾಳನೂ ಕ್ರಿ. ಶ. 1690ರಲ್ಲಿ ಚನ್ನಮ್ಮದೇವಿಯೂ ಕ್ರಿ. ಶ. 1723ರಲ್ಲಿ ಗಣಪಣ್ಣಬಲ್ಲಾಳನೂ ಕ್ರಿ. ಶ. 1770ರಲ್ಲಿ ದುಗ್ಗಪ್ಪಬಲ್ಲಾಳನೂ ಕ್ರಿ. ಶ. 1774ರಲ್ಲಿ ಗುಮ್ಮಪ್ಪಬಲ್ಲಾಳನೂ ಆಳುತ್ತಿದ್ದರೆಂದು ತಿಳಿಯಬಹುದು. ಇನ್ನು ಶಕವರ್ಷವಿಲ್ಲದೆ ಸಂವತ್ಸರ ಮಾತ್ರವೇ ಇರುವ ಶಾಸನಗಳಿಂದ ಪಾಂಡ್ಯಪ್ಪರಸನೂ, ಶಂಕರರಸನೂ, ತಿರುಮಲರಸನೂ, ಮಾಲಿಂಗ ರಸನೂ ಆಳುತ್ತಿದ್ದರೆಂದು ತಿಳಿಯಬಹುದು.

**2. ಎರ್ಮಾಳ ಮಾರಂಹೆಗ್ಗಡೆ:**—ಇವರ ಕೈಕೆಳಗೆ ಬಡ ಮತ್ತು ತೆಂಕ ಗ್ರಾಮಗಳಿದ್ದವು. ಬೀಡು ಎರ್ಮಾಳದಲ್ಲಿದೆ. ಎರ್ಮಾಳ ಜನಾರ್ಧನ ದೇವಸ್ಥಾನವು ಸೀಮೆ ದೇವಸ್ಥಾನವಾಗಿರುತ್ತದೆ. ಈ ದೇವಸ್ಥಾನದಲ್ಲಿರುವ ಪಿಂಗಳ ಸಂ|ರದ ಒಂದು ಶಾಸನದಲ್ಲಿ ತಿರುಮಲರಸ ಮಾರಂ ಹೆಗ್ಗಡೆಯು ಅದೇ ದೇವಸ್ಥಾನಕ್ಕೆ ಭತ್ತ ದಾನಬಿಟ್ಟನೆಂದು ಇದೆ. ಈ ಹೆಗ್ಗಡೆಯ ಹತ್ತರ 5000 ಸೈನ್ಯ ಇತ್ತು. ಚಂದ್ರನಾಥ ಬಸದಿಯೂ ಎರ್ಮಾಳದಲ್ಲಿಯೇ ಇದೆ.

**3. ಕಾಪು ಮರ್ದ ಹೆಗ್ಗಡೆ:**—ಈ ವಂಶದವರು ಪಡು, ಮಲ್ಲಾರು, ಮೂಲುರು, ಪಾದೂರು, ಹೆರೂರು, ಮೂಜೂರು, ಮತ್ತು ಇನ್ನಂಜೆ ಗ್ರಾಮಗಳನ್ನು ಆಳಿಕೊಂಡಿದ್ದರು. ಬೀಡೂ, ಧರ್ಮನಾಥ ಬಸದಿಯೂ ಸೀಮೆ ದೇವಸ್ಥಾನವಾದ ಜನಾರ್ಧನ ದೇವಸ್ಥಾನವೂ ಪಡು ಗ್ರಾಮಕ್ಕೆ ಸೇರಿದ ಕಾಪುವಿನಲ್ಲಿವೆ. ಶಾ. ಶ. 1421ನೇ ಸಿದ್ಧಾರ್ಥಿ ಸಂ|ದಲ್ಲಿ ತಿರುಮಲರಸ ಮರ್ದ ಹೆಗ್ಗಡೆಯು ಜನಾರ್ಧನ ದೇವಸ್ಥಾನಕ್ಕೆ ಭೂದಾನ ಕೊಟ್ಟನೆಂದು ಅದೇ ದೇವಸ್ಥಾನದಲ್ಲಿರುವ ಶಾಸನದಲ್ಲಿದೆ.

ಬಸವಪ್ಪ ನಾಯಕನು ಶಾ. ಶ. 1665ನೇ ರುಧಿರೋದ್ಗಾರಿ ಸಂ|ದಲ್ಲಿ ಕಾಪುವಿನ ಹತ್ತರ ಸಮುದ್ರತೀರದಲ್ಲಿ ಮನೋಹರಗಡ ಎಂಬ ಕೋಟೆಯನ್ನೂ ಮಲ್ಲಾರಿನಲ್ಲಿ ಸೈನ್ಯ ನಿಲ್ಲುವದಕ್ಕಾಗಿ ಇನ್ನೊಂದು ಕೋಟೆಯನ್ನೂ ಕಟ್ಟಿಸಿದನು.

4. **ಕಟ್ಟುಪಾಡಿ ದೊರೆ ಬಲ್ಲಾಳ:**—ಈ ವಂಶದವರು (1) ಮೂಡಬೆಟ್ಟು, (2) ಕೋಟೆ, (3) ಮಟ್ಟು, (4) ಉಳಿಯಾರಗೋಳಿ, (5) ಪಾಂಗಾಳ, (6) ಬೆಳ್ಳೆ, (7) ಎಣಗುಡ್ಡೆ, (8) ಕುರ್ಕಾಳ, (9) ಮಣಿಪುರ, (10) ಅಲೆವೂರು ಈ ಹತ್ತು ಗ್ರಾಮಗಳನ್ನು ಒಳಕೊಂಡಿರುವ ಕಟ್ಟುಪಾಡಿ ಸಾವಿರ ಸೀಮೆಯನ್ನು ಆಳಿಕೊಂಡಿದ್ದರು. ಇವರ ಬೀಡು ಮೂಡುಬೆಟ್ಟು ಗ್ರಾಮಕ್ಕೆ ಸೇರಿದ ಕಟ್ಟುಪಾಡಿಯಲ್ಲಿದೆ. ಮೂಡಬೆಟ್ಟು ಮಹಾಲಿಂಗೇಶ್ವರ ದೇವಸ್ಥಾನವು ಸೀಮೆ ದೇವಸ್ಥಾನವಾಗಿದೆ. ಅನಂತನಾಥ ಬಸದಿಯೂ ಕಟ್ಟುಪಾಡಿಯಲ್ಲಿದೆ. ಇವರಿಗೆ ಪಟ್ಟದ ಮಂಚದ ಮೇಲೆ ಕುಳ್ಳಿರಿಸಿ ಉಂಗುರ ಕೈಗೆ ಹಾಕಿ ಪಟ್ಟದ ಹೆಸರನ್ನು ಕರಿಯುವದು ಮೂಡಬೆಟ್ಟು ಗುತ್ತಿನವರು. ಈಗಿನ ಎಣಗುಡ್ಡೆ ಗ್ರಾಮಕ್ಕೆ ಸೇರಿದ ಮುಂಚಿನ ಅಚ್ಚಡಿ ಗ್ರಾಮದ ಶಿವಳ್ಳಿ ಬ್ರಾಹ್ಮಣ ನರಸಿಂಹ ಭಟ್ಟರ ಮನೆಯವರು ರಾಜಪುರೋಹಿತರಾಗಿರುತ್ತಾರೆ.

5. **ಉದ್ಯಾವರ ಮೂನ್ನುರಾಳರು:**—ಇವರ ಕೈಕೆಳಗೆ (1) ಉದ್ಯಾವರ, (2) ಕುತ್ತುಪಾಡಿ, (3) ಕೊರಂಗ್ರಪಾಡಿ, (4) ಬಡಗಬೆಟ್ಟು ಗ್ರಾಮಗಳು ಇದ್ದವು. ಇವರ ಬೀಡು ಉದ್ಯಾವರದಲ್ಲಿತ್ತು. ಉದ್ಯಾವರ ವಿನಾಯಕ ದೇವಸ್ಥಾನವು ಇವರ ಸೀಮೆ ದೇವಸ್ಥಾನವಾಗಿತ್ತು. ಅಲೂಪ ಅರಸರು ತುಳು ರಾಜ್ಯಕ್ಕೆ ಬಂದು ಉದ್ಯಾವರದಲ್ಲಿ ರಾಜಧಾನಿಯನ್ನು ಕಟ್ಟಿದ ಬಳಿಕ ಚೆಂಬುಕಲ್ಲು ಭೈರವದೇವಸ್ಥಾನವು ಊರ್ಜಿತಸ್ಥಿತಿಗೆ ಬಂತು.

6. **ಚಿಟ್ಟ್ಪಾಡಿ ಬಲ್ಲಾಳ:**—ಇವರ ಕೈಕೆಳಗೆ (1) ಹೆರಗ, (2) ಬಡಗಬೆಟ್ಟು, (3) ಹಿರೆಬೆಟ್ಟು, (4) ಕುದಿ, (5) ಪೆರ್ಣಂಕಿಲ, (6) ಮರಣೆ ಈ ಗ್ರಾಮಗಳು ಇದ್ದವು. ಬೀಡು ಬಡಗಬೆಟ್ಟಿನಲ್ಲಿ ಚಿಟ್ಟ್ಪಾಡಿ ಎಂಬಲ್ಲಿತ್ತು. ಚಿಟ್ಟ್ಪಾಡಿ ಊರು ದೊಡ್ಡ ಪಟ್ಟಣವಾಗಿತ್ತು. ಅನೇಕ ಬಸದಿಗಳು ಇದ್ದುವು. ಹಾಳುಬಿದ್ದ ಈ ಪಟ್ಟಣದ ಕುರುಹುಗಳನ್ನು ಈಗಲೂ ನೋಡಬಹುದು. ಇಲ್ಲಿಯ ಹಲ್ಲರಬಸದಿಗೆ ಶಾ. ಶ. 1412 ಮತ್ತು 1416ರಲ್ಲಿ ವಿಜಯನಗರದ 2ನೇ ನರಸಿಂಹನು ಭೂಮಿ ಉಂಬಳಿಬಿಟ್ಟ ಎರಡು ಶಿಲಾಶಾಸನಗಳು ಈಗಲೂ ಚಿಟ್ಟ್ಪಾಡಿ ಬಲ್ಲಾಳರ ಮನೆಯಲ್ಲಿವೆ. ಇದರಿಂದ ಚಿಟ್ಟ್ಪಾಡಿ ಪಟ್ಟಣವು ಕ್ರಿ. ಶ. 1494ರ ವರೆಗೆ ಇತ್ತೆಂದು ಹೇಳಬಹುದು. ಶಂಕರಾಚಾರ್ಯರ ಕಾಲದಲ್ಲಿ, ಎಂದರೆ, ಎಂಟನೆ ಶತಮಾನದಲ್ಲಿ ಈ ಬಲ್ಲಾಳಿಕೆಯು ಜೈನರ ಕೈಯಿಂದ ತಪ್ಪಿ ಬ್ರಾಹ್ಮಣರ ವಶಕ್ಕೆ ಬಂದಿರಬೇಕು. ಕ್ರಿ. ಶ. 12ನೇ ಶತಮಾನದಲ್ಲಿ ಮಧ್ವಾಚಾರ್ಯರು ಮತಬೋಧನೆ ಮಾಡುವಾಗ ಈ ಬಲ್ಲಾಳಿಕೆಯು ಬ್ರಾಹ್ಮಣರ ವಶದಲ್ಲಿತ್ತೆಂದು ಹೇಳಬಹುದು. ಮಧ್ವಾಚಾರ್ಯರು ಈ ಬೀಡಿನ ಮನೆಗೆ ಪೂರ್ವಾಲಯವೆಂದು ಕರೆಯುತ್ತಿದ್ದರು. ಈ ಮನೆಯವರಿಗೆ ಮಧ್ವಾಚಾರ್ಯರು ಬದರಿಕಾಶ್ರಮದಿಂದ ತಂದ ಅಷ್ಟವ್ಯಾಸಮೂರ್ತಿಗಳಲ್ಲಿ ದಶಾವತಾರಯುಕ್ತವಾದ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಕೊಟ್ಟಿರುತ್ತಾರೆ. ಈಗಲೂ ಪರ್ಯಾಯ ಶ್ರೀಪಾದಂಗಳವರು ಈ ಪೂರ್ವಾಲಯ (ಮೂಡುಮನೆ)ಕ್ಕೆ ಹೋಗಿ ಆಮಂತ್ರಣಕೊಟ್ಟು ಬರುವ ಸಂಪ್ರದಾಯವಿದೆ.

7. **ನಿಡಂಬೂರು ಬಲ್ಲಾಳ:**—ಈ ಬಲ್ಲಾಳರ ಕೈಕೆಳಗೆ (1) ಶಿವಳ್ಳಿ, (2) ಕಡೆಕಾರ, (3) ಕಿದಿಯೂರು, (4) ಅಂಬಲಪಾಡಿ, (5) ಮೂಡನಿಡಂಬೂರು, (6) ಪುತ್ತೂರು, (7) ಕೊಡವೂರು, (8) ಬಡಗನಿಡಿಯೂರು, (9) ತೆಂಕನಿಡಿಯೂರು, (10) ಕೆಲರಕಳ್ಬೆಟ್ಟು,

(11) ತೊನಸೆ ಇಷ್ಟು ಗ್ರಾಮಗಳು ಇದ್ದವು. ಇವರ ಬೀಡು ಮೂಡ ನಿಡಂಬೂರಿನಲ್ಲಿ ಈಗಲೂ ಇದೆ. ಬೀಡು ಜೈನರ ಕೈತಪ್ಪಿ ಬ್ರಾಹ್ಮಣರ ವಶ ವಾಗಿದೆ. ಇವರ ಸೀಮೆಬಸದಿಯಾದ ಅನಂತನಾಥ ಬಸದಿಯು ಶಂಕರಾ ಚಾರ್ಯರ ಕಾಲದಲ್ಲಿ ಇವರ ಕೈಯಿಂದ ತಪ್ಪಿ ಅನಂತೇಶ್ವರ ದೇವಸ್ಥಾನ ವಾಯಿತು. ಬಸದಿಯ ಮುಂದುಗಡೆ ಇರುವ ಮಾನಸ್ಥಂಭವು ಈಗಲೂ ಇದೆ. ಕುಡಾರ (ಮಲಪೆ) ಶಂಕರನಾರಾಯಣ ದೇವಸ್ಥಾನವೂ, ಬಿಲ್ಲುಗುಡ್ಡೆ ನಂದನೇಶ್ವರ ದೇವಸ್ಥಾನವೂ ಸೀಮೆದೇವಸ್ಥಾನಗಳಾಗಿದ್ದವು. ಅನಂತೇಶ್ವರ ದೇವಸ್ಥಾನವಾದ ಮೇಲೆ ಈ 2 ದೇವಸ್ಥಾನಗಳು ದೀನಸ್ಥಿತಿಗೆ ಬಂದವು. ವಾದಿರಾಜ ಸ್ವಾಮಿಗಳು ಈ ಮನೆಯವರಿಗೆ ಮುಖ್ಯ ಪ್ರಾಣ ಮೂರ್ತಿಯನ್ನು ಕೊಟ್ಟಿರುತ್ತಾರೆ. ಪರ್ಯಾಯದ ಆರಂಭಕಾಲ ದಲ್ಲಿ ಪರ್ಯಾಯ ಶ್ರೀಪಾದಂಗಳವರು ಈ ಪಶ್ಚಿಮಾಲಯಕ್ಕೆ ಬಂದು ಆಮಂತ್ರಣ ಕೊಡುವ ಪದ್ಧತಿ ಇದೆ.

8. **ವಂಡಾರು ಐನಾಡು ಹೆಗ್ಗಡೆ:**—ಇವರು (1) ವಂಡಾರ, (2) ಆವರ್ಸೆ, (3) ಹಳಿಯಾನ, (4) ಕಡೂರು, (5) ಹೆಗ್ಗುಂಜೆ, (6) ಶಿರೂರು, (7) ಹಾಲಾಡಿ, (8) ಬಿಲ್ಲಾಡಿ, (9) ಕಕ್ಕುಂಜೆ, (10) ಕಾವಡಿ, (11) ಶಿರಿಯಾರ, (12) ಎಡಶ್ತಾಡಿ, (13) ನಡೂರು, (14) ನಂಚಾರ ಗ್ರಾಮಗಳನ್ನು ಒಳಕೊಂಡಿರುವ ಈ ಕೆಳನಾಡು ಮಾಗಣೆಯನ್ನು ಆಳಿಕೊಂಡಿದ್ದರು. ಬೀಡು ವಂಡಾರನಲ್ಲಿತ್ತು.

9. **ಬಳಿಸಾವಿರ ಹೆಗ್ಗಡೆ:**—ಇವರು (1) ಶಿರ್ವ, (2) ಕಟ್ಟಂಗಿರಿ, (3) ಪಳ್ಳಿ ಈ ಗ್ರಾಮಗಳನ್ನು ಆಳಿಕೊಂಡಿದ್ದರು. ಇವರ ಬೀಡು ಹಿರಿಯಬೆಟ್ಟಿನಲ್ಲಿ ಇತ್ತು. ಕಟ್ಟಂಗಿರಿ ಬ್ರಹ್ಮಸ್ಥಾನವು ಸೀಮೆಯ ನ್ಯಾಯಗಳನ್ನು ತೀರಿಸುವ ಸ್ಥಳ. ಕುಕಾರ್ಳ ಮತ್ತು ಪಳ್ಳಿ ದೊಡ್ಡಮನೆ ಇವು ಎರಡು ದೊಡ್ಡ ಗುತ್ತಿನ ಮನೆಗಳು.

10. **ಎರ್ಡನಾಡು ಬಲ್ಲಾಳರು:**—ಇವರಲ್ಲಿ ಪಡ್ಡಮ ಹೆಗ್ಗಡೆ, ಅಂಜಾರು (ಹಿರಿಯಡ್ಕ) ಕುರ್ಲಹೆಗ್ಗಡೆ, ಕಣಂಜಾರು ಹೆಗ್ಗಡೆ, ಬೊಮ್ಮಾರ

ಬೆಟ್ಟು ಹೆಗ್ಗಡೆ, ಅತ್ರಾಡಿ ಹೆಗ್ಗಡೆ. ಇವರಲ್ಲಿ ಪ್ರತಿಯೊಬ್ಬರು ಒಂದೊಂದು ಗ್ರಾಮದ ಹೆಗ್ಗಡೆಯುವರು. ಇವರ ಬೀಡು, ಗ್ರಾಮ ದೇವಸ್ಥಾನ, ಬಸದಿ ಇವು ಆಯಾ ಗ್ರಾಮಗಳಲ್ಲಿವೆ. ಈ ಮನೆತನಗಳೆಲ್ಲವೂ ಜೈನರ ಕೈಯಿಂದ ತಪ್ಪಿಯವೆ. ಎರ್ಡನಾಡು ಹಿರಿಯಡ್ಕ ಮತ್ತು ಕಣಂಜಾರು, ದೊಡ್ಡ ದೇವಸ್ಥಾನಗಳಾಗಿರುತ್ತವೆ.

II. ಎಲ್ಲೂರು ಕುಂದ ಹೆಗ್ಗಡೆ:—ಈ ವಂಶದವರು (1) ಪಿಲಾರ, (2) ಸಾಂತೂರು, (3) ಕುತ್ಯಾರು, (4) ಕಳತ್ತೂರು, (5) ಎಲ್ಲೂರು, (6) ನಂದಿಕೂರು (7) ಬೆಳ್ಪ, (8) ಪಾದೂರು ಈ ಗ್ರಾಮಗಳನ್ನು ಒಳಕೊಂಡಿರುವ ಎಲ್ಲೂರು ಸೀಮೆಯನ್ನು ಆಳಿಕೊಂಡಿದ್ದರು. ಇವರ ಅರಮನೆಯು ಕುತ್ಯಾರಿನಲ್ಲಿದೆ. ಸೀಮೆ ದೇವಸ್ಥಾನವಾದ ವಿಶ್ವನಾಥ ದೇವಸ್ಥಾನವು ಎಲ್ಲೂರಿನಲ್ಲಿದೆ. ಈ ದೇವಸ್ಥಾನಕ್ಕೆ ಶಾ. ಶ. 1407ನೇ ಕ್ರೋಧಿ ಸಂ|ದಲ್ಲಿಯೂ ಶಾ. ಶ 1410ನೇ ಕೀಲಕ ಸಂ|ದಲ್ಲಿಯೂ ಶಾ. ಶ. 1421ನೇ ಸಿದ್ಧಾರ್ಥಿ ಸಂ|ದಲ್ಲಿಯೂ ಕುಂದ ಹೆಗ್ಗಡೆಯು ಉಂಬಳಿ ಬಿಟ್ಟಿದ್ದಾನೆಂದೂ ಶಾ. ಶ. 1408ನೇ ವಿಶ್ವಾವಸು ಸಂ|ರದಲ್ಲಿ 140 ವರಹ ಉತ್ಪತ್ತಿಯ ಭೂಮಿ ಉಂಬಳಿಬಿಟ್ಟಿದ್ದಾನೆಂದೂ ದೇವಸ್ಥಾನದಲ್ಲಿರುವ 4 ಶಾಸನಗಳಿಂದ ತಿಳಿಯಬಹುದು. ಚಂದ್ರನಾಥ ಬಸದಿಯು ನಂದಿಕೂರಿನಲ್ಲಿದೆ. ಶಾ. ಶ. 1666ನೇ ಕ್ರೋಧನ ಸಂ|ರದಲ್ಲಿ ಅದಮಾರು ಮಠಕ್ಕೆ ಒಂದು ಗ್ರಾಮ ಉತ್ತಾರ ಬಿಟ್ಟಿರುತ್ತಾನೆ.

## ನಗರಾಧೀಶ್ವರರು.

ಈ ಜಿಲ್ಲೆಗೆ ಜೈನರು ಬಂದು ನೆಲೆನಿಂತು ರಾಜ್ಯಸ್ಥಾಪನೆ ಮಾಡಿದ ಮೇಲೆ ಎಂದರೆ, ಕ್ರಿ. ಶ. ಒಂದನೇ ಶತಮಾನದಲ್ಲಿ ಮಾಗಣೆ, ನಾಡು, ಸೀಮೆಗಳನ್ನು ಆಳಲಿಕ್ಕೆ ಬಲ್ಲಾಳರನ್ನೂ ಹೆಗ್ಗಡೆಯರನ್ನೂ ನೇಮಿಸಿದ ಮೇಲೆ ಈಗಿನ ಮುನಿಸಿಪಾಲಿಟಿ, ಯೂನಿಯನ್ ಇವುಗಳ ಹಾಗೆ

ನಗರ ಸಂಸ್ಥೆಗಳನ್ನು ಏರ್ಪಡಿಸಿದರು. ಈ ಸಂಸ್ಥೆಗಳಿಗಾಗಿ, ಕೇರಿಗಳು ಇಲ್ಲದೆ ಬರಿ ಪೇಟೆಯಾದರೆ ಅದಕ್ಕೆ ಪೇಟೆಯೆಂದೂ, ಕೇರಿಗಳಿದ್ದರೆ ಪಟ್ಟಣವೆಂದೂ, ಪಟ್ಟಣದಲ್ಲಿ ಸುತ್ತಲೂ ಗಂಡಿ, ಮಧ್ಯಕೋಟೆ ಗಡಿಗಡಿಗಳಲ್ಲಿ ಗಂಡಿ ಇದ್ದರೆ ಪುರವೆಂದೂ, ಲಕ್ಷ ಗುಡಿಕಟ್ಟು ಇದ್ದರೆ ನಗರವೆಂದೂ, ನಾಲ್ಕು ಲಕ್ಷ ಗುಡಿಗಳಿಗಿಂತ ಮೇಲೆ ಇದ್ದರೆ ಆ ನಗರಕ್ಕೆ ಜಯಂತೀ ಎಂದೂ ಪಟ್ಟಣಗಳನ್ನು ವಿಂಗಡಿಸಿದರು. ಅನಂತರ ಅವುಗಳ ರಾಜ್ಯಭಾರದ ಕೆಲಸಗಳನ್ನು ನಿರ್ವಹಿಸುವದಕ್ಕಾಗಿ ಪೇಟೆಯಲ್ಲಿ ನಾಲ್ಕು ಮಂದಿಯನ್ನೂ, ಪಟ್ಟಣದಲ್ಲಿ ಎಂಟು ಮಂದಿಯನ್ನೂ, ಪುರದಲ್ಲಿ ಹನ್ನೆರಡು ಮಂದಿಯನ್ನೂ, ನಗರದಲ್ಲಿ ಹದಿನಾರು ಮಂದಿಯನ್ನೂ ಜಯಂತಿಯಲ್ಲಿ ಇಪ್ಪತ್ತು ಮಂದಿಯನ್ನೂ ನೇಮಿಸಿದರು. ಈ ನಗರಾಧಿಕಾರಿಗಳಿಗೆ ಹಲ್ಲರು ಎಂದು ಹೆಸರನ್ನು ಕೊಟ್ಟರು. ಈ ಹಲ್ಲರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣದವರೂ ಇದ್ದದರಿಂದ ಇವರಿಗೆ ಚತುಸ್ಥಾನದವರು ಎಂದು ಹೆಸರಾಯಿತು. ಈ ಹಲ್ಲರ ಮೇಲಾಧಿಕಾರಿಯಾಗಿ ಒಬ್ಬ ಪಟ್ಟಣಸೆಟ್ಟಿಯನ್ನೂ ನೇಮಿಸಿದರು. ಎಲ್ಲವೂ ಸಂತಾನಪಾರಂಪರ್ಯ ಹಕ್ಕುಗಳಾಗಿ ಮಾಡಿದರು. ಒಂದನೇ ಶತಮಾನದಲ್ಲಿ ಭೂತಾಳಪಾಂಡ್ಯನು ಆಳುವ ಕಾಲದಲ್ಲಿ ಗಂಗೋಳಿ ಹೊಳೆಯಿಂದ ಪಯಸ್ವಿನಿ ನದಿಯ ವರೆಗೆ 32 ನಗರಗಳು ಇದ್ದವು. ಇವುಗಳನ್ನು ಎರಡು ವಿಭಾಗಗಳಾಗಿ ಮಾಡಿ ಅವುಗಳ ಮೇಲಾಧಿಕಾರವನ್ನು ನೋಡಲಿಕ್ಕೆ ಕೇಶವಣ್ಣ ಎಂಬವನನ್ನು ಬಾರಕೂರಿನಲ್ಲಿಯೂ, ಬಸವಣ್ಣ ಎಂಬವನನ್ನು ಮಂಗಳೂರಿನಲ್ಲಿಯೂ ನಗರಾಧಿಕಾರಿಗಳಾಗಿ ನೇಮಿಸಿದರು. ಬಾರಕೂರು ನಗರಾಧಿಪತಿಯಾದ ಕೇಶವಣ್ಣನ ಕೈಕೆಳಗೆ ನಾಲ್ಕು ಲಕ್ಷ ಗುಡಿಕಟ್ಟುಗಳಿರುವ (1) ಬಾರಕೂರು, (2) ಬಸರೂರು, (3) ಮುದ್ರಾಡಿ, (4) ಸುರಾಲು, (5) ಉಡುಪಿ, (6) ಕಾರ್ಕಳ, (7) ಮೂಡಬಿದರೆ, (8) ಪಡುಬಿದರೆ, (9) ಕಾಪು, (10) ನಾರಾವಿ, (11) ನೆಲ್ಲಿಕಾರ, (12) ಬಂಗಾಡಿ,

(13) ವೇಣೂರು, (14) ಎರಮಾಳ, (15) ಮುಂಡಕೂರು, (16) ಬೈಲಂಗಡಿ ಈ ಹದಿನಾರು ಪೇಟೆ, ಪಟ್ಟಣ, ಪುರ, ನಗರ, ಜಯಂತಿ ಯನ್ನು ಒಪ್ಪಿಸಿಕೊಟ್ಟರು. ಮಂಗಳೂರು ನಗರಾಧಿಪತಿಯಾದ ಬಸವಣ್ಣನ ಕೈಕೆಳಗೆ 3 ಲಕ್ಷ ಗುಡಿಕಟ್ಟು ಇರುವ (1) ಮೂಲ್ಕಿ, (2) ವಳಲಂಕೆ, (3) ಪಣಂಬೂರು, (4) ಮಣೇಲ, (5) ಅಳಪೆ, (6) ಮಂಗಳೂರು, (7) ಬಂಟವಾಳ, (8) ಪಾಣೆಮಂಗಳೂರು, (9) ವಿಟ್ಲ, (10) ನೇರಂಕಿ, (11) ಮರದಾಳ, (12) ಕಡಬ, (13) ಸುಳ್ಯ, (14) ಮಂಜೇಶ್ವರ, (15) ಕಾಸರಗೋಡು, (16) ಉಳ್ಳಾಲ ಈ ಹದಿನಾರು ಪೇಟೆ, ಪಟ್ಟಣ, ಪುರ, ನಗರ, ಮುಂತಾದ್ದನ್ನು ಒಪ್ಪಿಸಿಕೊಟ್ಟರು.

ಒಂದನೇ ಶತಮಾನದನಂತರ ಮೇಲೆ ಹೇಳಿದ 32 ನಗರ ಸಂಸ್ಥೆಗಳಲ್ಲದೆ ಜನಸಂಖ್ಯೆಯು ಪಟ್ಟಣದಲ್ಲಿ ಹೆಚ್ಚಚ್ಚಾಗುತ್ತಾ ಬಂದ ಹಾಗೆ ಕೋಟೇಶ್ವರ, ಬ್ರಹ್ಮಾವರ, ಶಂಕರನಾರಾಯಣ, ಚಿಟ್ಟುಪಾಡಿ, ಕಟ್ಟುಪಾಡಿ, ಅಳದಂಗಡಿ, ಬೆಳತಂಗಡಿ, ವಳಲು, ಕುಕ್ಕೆಪಟ್ಟಣ, (ಸುಬ್ರಹ್ಮಣ್ಯ) ಪಂಜ, ಬೆಳ್ಳಾರೆ, ಪುತ್ತೂರು, ಉಪ್ಪಿನಂಗಡಿ, ಕಬಕ, ನಂದಾವರ, ಕುಂಬಳೆ ಮುಂತಾದವು ಪಟ್ಟಣಗಳಾದವು.

ಈ ಸಂಸ್ಥೆಗಳು ವಿಜಯನಗರ ರಾಜ್ಯಭಾರದ ಅಂತ್ಯದ ವರೆಗೆ ಒಳ್ಳೇ ರೀತಿಯಲ್ಲಿ ಇದ್ದವು. ಅನಂತರ ಕಾಲಗತಿಯಿಂದ ಜೈನರ ಜನಸಂಖ್ಯೆಯು ಕಡಿಮೆಯಾಗುತ್ತಾ ಬಂದು, ಅನೇಕ ಪಟ್ಟಣಗಳು ನಾಶವಾದವು. ಮುಂಡಕೂರು, ಬಂಗಾಡಿ, ಬೈಲಂಗಡಿ, ವಳಲು, ಕಡಬ, ಮರದಾಳ, ಕುಕ್ಕೆಪಟ್ಟಣ, ಪಂಜ, ಬೆಳ್ಳಾರೆ, ಸುಳ್ಯ, ವಳಲಂಕೆ, ಚಿಟ್ಟುಪಾಡಿ, ಅಳದಂಗಡಿ, ಮುಂತಾದವು ಈಗ ಹೆಸರಿಗೆ ಮಾತ್ರವೇ ಇವೆ. ಪಟ್ಣಶೆಟ್ರ ಮನೆತನಗಳು ಕೆಲವು ಕಡೆಗಳಲ್ಲಿ ಈಗಲೂ ಇವೆ.

# ಪುರವಣಿ (೧)
# ಪ್ರಸಿದ್ಧಪಟ್ಟ ಕೆಲವು ಕರಾರುಗಳು.

A. 1736/7ನೇ ಫೆಬ್ರವರಿ 9-20ನೇ ತಾರೀಕಿನಲ್ಲಿ ಬಿದನೂರು ಅರಸನಾದ 2ನೇ ಸೋಮಶೇಖರ ನಾಯಕರಿಗೂ ಇಂಗ್ಲಿಷ್ ಈಸ್ಟ ಇಂಡಿಯಾ ಕಂಪೆನಿಯ ತಲಚೇರಿಯ ಆಫೀಸಿನ ಮುಖ್ಯ ಅಧಿಕಾರಿಯಾದ ಸ್ಟೀಫನ್ ಲೊ ಎಂಬವರಿಗೂ ಆದ ಕರಾರು.

1736ನೇ ಫೆಬ್ರವರಿ 9ನೇ ತಾರೀಕಿಗೆ ಮಂಗಳೂರು ಗವರ್ನರ ಸೂರಪ್ಪಯ್ಯನಾದ ನಾನು, ಬಿದನೂರಿನ ಅರಸನಿಗೂ ಇಂಗ್ಲಿಷ್ ಕಂಪೆನಿಯವರಿಗೂ ಎಲ್ಲಾ ವಿಷಯಗಳಲ್ಲಿಯೂ ಸ್ನೇಹಾಚಾರದಿಂದ ಇರುವ ಹಾಗೆ ಬರಕೊಟ್ಟ ಕರಾರು. ಇದಕ್ಕೆ ಸರಿಯಾಗಿ ಎರಡೂ ಕಡೆಯವರು ನಡಕೊಳ್ಳತಕ್ಕದ್ದು

1. ಈ ಮೊದಲು ಬಿದನೂರು ಅರಸನಿಗೂ ಇಂಗ್ಲಿಷ್ ಕಂಪೆನಿಯವರಿಗೂ ಆದ ಕರಾರುಗಳಿಗೆ ಸರಿಯಾಗಿ ನಡಕೊಳ್ಳತಕ್ಕದ್ದು.

2. ಕಂಪೆನಿಯವರು ಹೊನ್ನಾವರದಲ್ಲಿರುವ ಭಂಡಸಾಲೆಯನ್ನು ದುರುಸ್ತಿ ಪಡಿಸಿ, ವ್ಯಾಪಾರ ನಡಿಸಬಹುದು. ಆದರೆ ಆದರ ಮೇಲೆ ಕಂಪೆನಿಯವರಿಗೆ ಬಿದನೂರಿನವರು ಹೆಚ್ಚಿಗೆ ಸುಂಕವನ್ನು ಹೊರಿಸಲಿಕ್ಕಿಲ್ಲ.

3. ಕನ್ನಡ ಜಿಲ್ಲೆಯ ತೀರದ ಮೇಲೆ ಬಂದು ಬೀಳಬಹುದಾದ ಇಂಗ್ಲಿಷ್ ಹಾಯಿಹಡಗಗಳೂ ಬೇರೆ ಹಡಗಗಳೂ ಪೂರ್ವದ ಪದ್ಧತಿ ಪ್ರಕಾರ ಕಂಪೆನಿಯವರಿಗೆ ಕೊಡಲ್ಪಡುವವು

4. ಬಿದನೂರಿನ ಸೈನ್ಯದವರು ಕೊಲತ್ತಿರಿರಾಜನ ರಾಜ್ಯವನ್ನು ಜಯಿಸಿದರೆ, ಅಲ್ಲಿಂದ ಒಳ್ಳೇಮೆಣಸನ್ನೂ ಏಲಕ್ಕಿಯನ್ನೂ ಕೊಂಡುಹೋಗುವ ಹಕ್ಕು ಪೂರ್ಣವಾಗಿ ಕಂಪೆನಿಯವರಿಗೆ ಇರುವುದು. ಇದರ ಮುಂಚೆ ಕೊಲತ್ತಿರಿ ಅರಸನಿಗೂ ಇಂಗ್ಲಿಷ್ ಕಂಪೆನಿಗೂ ಆದ ಕರಾರುಗಳು ಸಿಂಧುವಾಗಿರುತ್ತವೆ. ಕಂಪೆನಿಯವರು ಕೊಲತ್ತಿರಿ ಅರಸನಿಗೆ ಇಷ್ಟರವರೆಗೆ ಕೊಡುತ್ತಿದ್ದ ಸುಂಕವನ್ನು ಬಿದನೂರಿನ ಅರಸನಿಗೆ ಕೊಡತಕ್ಕದ್ದು

5. ಕಂಪೆನಿಯವರ ಅಥವಾ ಮುಂಬಯಿ ಗವರ್ನರ ಅಥವಾ ತಲಚೇರಿಯ ಅಧಿಕಾರಿಯ ಹಡಗಗಳ ಮೇಲೂ ಅಥವಾ ಕಂಪೆನಿಯವರ ಮಚ್ವೆಗಳ ಮೇಲೂ ಕನ್ನಡ ದೇಶದ ಎಲ್ಲಾ ಬಂದರುಗಳಿಂದಲೂ ತಮಗೆ ಬೇಕಾದಷ್ಟು ಅಕ್ಕಿಯನ್ನಾಗಲಿ,

ಅಥವಾ ಇತರ ವಸ್ತುಗಳನ್ನಾಗಲಿ " ಅದಲಾವಿ" ಎಂಬ ಸುಂಕವಿಲ್ಲದೆ ಕೊಂಡು ಹೋಗಬಹುದು. ಆದರೆ ಇಂಗ್ಲಿಷ್ ಬಾವಟೆಯನ್ನು ಹತ್ತಿಸಿಕೊಂಡು ಬರುವ ಪ್ರತಿಯೊಂದು ಇತರ ಹಡಗಗಳ ಮೇಲೆ ದೇಶದಲ್ಲಿ ವಾಡಿಕೆಯಲ್ಲಿರುವ ಸುಂಕ ವನ್ನು ಹೊರಿಸಲಾದೀತು

6 ಕಣ್ಣಾನೂರಿನಿಂದ 5 ಮೈಲು ಉತ್ತರಕ್ಕಿರುವ ಬಲಿಯಾಪಟ್ಟಣ ಹೊಳೆಯ ದ್ವಾರದ ಹತ್ತಿರ ಮದಕರ ಎಂಬಲ್ಲಿಂದ ½ ಲೀಗು ಉತ್ತರಕ್ಕೆ ಬಿದನೂರು ಅರಸನು ಕೋಟೆಯನ್ನು ಕಟ್ಟಿ ಸೈನ್ಯವನ್ನು ತರಬಾರದು. ಬಲಿಯಾ ಪಟ್ಟಣ ಕೋಟೆಗೂ ತಳಿಪರಂಬಾ ಕೋಟೆಗೂ ಮಧ್ಯದಲ್ಲಿರುವ ಸ್ಥಳದಲ್ಲಿ ಬಿದನೂರಿನವರು ಕೋಟೆಗಳನ್ನು ಕಟ್ಟಬಹುದು. ಆದರೆ ಅಲ್ಲಿಂದ ಪಶ್ಚಿಮಕ್ಕೆ ಕಟ್ಟಕೂಡದು. ಬಲಿಯಾಪಟ್ಟಣದಿಂದ ದಕ್ಷಿಣಕ್ಕೆ ಪುತ್ತಿನಾ ಮತ್ತು ಪುನೆಲ್ಲಾ ಮಲೆಗಳ ವರೆಗೆ ಕಂಪೆನಿಯವರ ಹಕ್ಕಿನ ಸ್ಥಳವಾಗಿರುತ್ತದೆ. ಈ ಪ್ರದೇಶದಲ್ಲಿ ಬಿದನೂರಿನವರು ಯಾವ ವಿಧದಲ್ಲಿಯೂ ಮುಂದರಿಸಿ ಬರಕೂಡದು.

7. ಮೇಲೆ ಹೇಳಿದ ಜಿಲ್ಲೆಗಳನ್ನು ಬಿಟ್ಟು ಬಿದನೂರಿನ ಅರಸರು ಕೋಟೆ ಗಳನ್ನು ಕಟ್ಟಬಹುದು. ಸೈನ್ಯವನ್ನು ತರಬಹುದು. ಇದಕ್ಕೆ ಇಂಗ್ಲಿಷ್ ಕಂಪೆನಿಯವರು ಯಾವ ತರದಲ್ಲಿಯೂ ಅಡ್ಡಿಮಾಡಬಾರದು ಈ ಕೋಟೆ ಗಳಿಗೆ ಬೇಕಾದ ಸಾಹಿತ್ಯ ತರುವ ಹಡಗಗಳಿಗೂ ಯಾವ ತರದ ಉಪದ್ರ ಪಡಿಸಬಾರದು.

8. ಇಂಗ್ಲಿಷರು ಬಿದನೂರಿನ ಅರಸರ ಶತ್ರುಗಳಿಗೆ ಯಾವ ವಿಧದ ಸಹಾಯವನ್ನೂ ಮಾಡಕೂಡದು

9. ಕೊಲತ್ತಿರಿರಾಜ್ಯದಿಂದ ಮೆಣಸನ್ನೂ, ಏಲಕ್ಕಿಯನ್ನೂ ಮಾತ್ರವೇ ಕೊಂಡುಹೋಗುವ ಅಧಿಕಾರವು ಇಂಗ್ಲಿಷ್ ಕಂಪೆನಿಗಿರುವದು. ಬೇರೆ ಎಲ್ಲಾ ವಸ್ತುಗಳನ್ನು ಇತರರು ಯಾರೂ ಕೊಂಡುಹೋಗಿ ವ್ಯಾಪಾರಮಾಡುವಲ್ಲಿ ಇಂಗ್ಲಿಷರು ಅವರಿಗೆ ಯಾವ ವಿಧದ ಅಡ್ಡಿಮಾಡಬಾರದು.

ನನ್ನ ಯಜಮಾನರಾದ ಬಿದನೂರಿನ ಅರಸರು ನನಗೆ ಕೊಟ್ಟ ಅಧಿಕಾರದ ಪ್ರಕಾರದ ಇಂಗ್ಲಿಷ್ ಕಂಪೆನಿಯವರೊಡನೆ ಈ ಕರಾರನ್ನು ಮಾಡಿದ್ದೇನೆ. ಇದಕ್ಕೆ ನನ್ನ ಅರಸರ ಅಪ್ಪಣೆಯನ್ನು ಪಡೆದು, 40 ದಿವಸಗಳಲ್ಲಿ ತಲಚೇರಿಯ ಅಧಿಕಾರಿಗೆ ಒಪ್ಪಿಸುತ್ತೇನೆ. ಅದನ್ನು ಒಪ್ಪಿಸಿದ ಕೂಡಲೆ ಇದನ್ನು ನನಗೆ ಹಿಂತಿರುಗಿ ಕೊಡತಕ್ಕದ್ದು. (ದಸ್ಕತು) **ಸೂರಪ್ಪಯ್ಯ.**

ಈ ಕರಾರಿಗೆ ಬಿದನೂರು ಅರಸು ಸೋಮಶೇಖರನ ದಸ್ಕತು ಮೋಹ ರಾಗಿ ತಲಚೇರಿಯಲ್ಲಿರುವ ಇಂಗ್ಲಿಷ್ ಅಧಿಕಾರಿಗಳಲ್ಲಿ ಒಪ್ಪಿನಾದ

ವಿಲಿಯಮ್‌ಜೇಸನ ಹತ್ತಿರ 1739-40ನೇ ಇಸವಿ ಫೆಬ್ರವರಿ 26ನೇ ತಾರೀಕಿಗೆ ಕೊಡಲ್ಪಟ್ಟಿತು.

B. 1737ನೇ ಇಸವಿ ಅಗೋಸ್ತು 26ನೇ ತಾರೀಕಿಗೆ (ಮಲಬಾರ 912) ಕೊಲತ್ತಿರಿ ಅರಸನಿಗೂ ಬಿದನೂರು ಅರಸನ ಮಂಗಳೂರಿನ ಗವರ್ನರ ಮತ್ತು ಬಿದನೂರು ಸೈನ್ಯದ ಜನರಲ್ ಆದ ಸೂರಪ್ಪಯ್ಯನಿಗೂ ಆದ ಒಪ್ಪಂದ

ನನ್ನ ಸೈನ್ಯವು, ಕೊಲತ್ತರಸನ ಮತ್ತು ಪಳ್ಳಿಕೋವಿಲಗತ್ತು ಅರಸನ ರಾಜ್ಯಗಳಲ್ಲಿ ಹೋಗಿ ಅವರಿಗೆ ಬಹಳ ನಷ್ಟವಾದ್ದರಿಂದಲೂ ಇನ್ನು ಮುಂದೆ ಮೇಲಿನ ಇಬ್ಬರು ಅರಸರಿಗೂ ಸಮಾಧಾನವಿರುವ ಹಾಗೆ ನಮ್ಮಿಬ್ಬರೊಳಗೆ ಈ ಕೆಳಗಿನ ಶರ್ತಗಳ ಪ್ರಕಾರ ಆದ ಒಪ್ಪಂದ.

ಮಾಡಾಯಿ ಕೋಟೆಯಿಂದ ಪಶ್ಚಿಮಕ್ಕೆ, ಊರಬಳ್ಳಿ ವರೆಗೆ ದಕ್ಷಿಣಕ್ಕೆ, ಪೂರ್ವಕ್ಕೆ ತಳಿಪರಂಬಾ ನದಿಯು ಹೇಗೆ ಗುಡ್ಡದಿಂದ ಹರಿದು ಬಂದದೊ ಅಲ್ಲಿ ವರೆಗೆ ಇರುವ ರಾಜ್ಯವು ಬಿದನೂರಿಗೆ ಸೇರತಕ್ಕದ್ದು ಇದರ ದಕ್ಷಿಣಕ್ಕೆ ಬಾಕಿ ಉಳಿದ ರಾಜ್ಯವು ಕೊಲತ್ತರಸನಿಗೆ ಇರತಕ್ಕದ್ದು. ಇಬ್ಬರಲ್ಲಿ ಯಾವ ನೊಬ್ಬನು, ಒಬ್ಬನ ರಾಜ್ಯದಲ್ಲಿ, ಇನ್ನೊಬ್ಬನು ಪ್ರವೇಶಿಸಕೂಡದು. ಇದಕ್ಕೆ ಆಧಾರವಾಗಿ ನಾನು ತಲಚೇರಿಯ ಇಂಗ್ಲಿಷ್ ಅಧಿಕಾರಿ ಮತ್ತು ಕೌನ್ಸಿಲಿನ ಮುಂದೆ ಈ ಕರಾರನ್ನು ಒಪ್ಪಿಸಿದ್ದೇನೆ. (ದಸ್ಕತು) **ಸೂರಪ್ಪಯ್ಯ,**

ಮಂಗಳೂರಿನ ಗವರ್ನರ ಮತ್ತು ಕನ್ನಡ ಸೈನ್ಯದ ಜನರಲ್.

C. 1739-40ನೇ ಇಸವಿಯ ಫೆಬ್ರವರಿ 26ನೇ ತಾರೀಕಿಗೆ ಮಂಗಳೂರು ಗವರ್ನರ ಸೂರಪ್ಪಯ್ಯನು ಬಿದನೂರು ಅರಸು 2ನೇ ಸೋಮಶೇಖರ ಅರಸನ ದಸ್ಕತು ಸಹಿತ ಬಂದ ಕರಾರನ್ನು ತಲಚೇರಿಯಲ್ಲಿರುವ ಇಂಗ್ಲಿಷ್ ಕಂಪೆನಿಯ ಮುಖ್ಯಾಧಿಕಾರಿಯಾದ ವಿಲ್ಯಮ್‌ವೇಕ ಮತ್ತು 2ನೇ ಅಧಿಕಾರಿ ವಿಲ್ಯಮು ಜೇಸನ್ ಇವರಿಗೆ ಒಪ್ಪಿಸಿದನು.

ತಲಚೇರಿಯ ಮುಖ್ಯ ಮೇಯೋರನಾದ ಸ್ಟೀಫನ್ ಲೋ ಎಂಬವನು ತನ್ನ ಪ್ರತಿನಿಧಿಗಳಾದ ಲಿಂಚ, ಮಂಗಳೂರಲ್ಲಿರುವ ಇಂಗ್ಲಿಷರ ಕನ್ನಡ ಭಾಷಾಜ್ಞಾನಿಯಾದ ಪೇದ್ರು ರಂಗೆಲ್ ಎಂಬವರ ಮುಖಾಂತರ ತಿಳಿಸಿದ ಕರಾರು

ಇಂಗ್ಲಿಷರು ನಮ್ಮ ಸೈನ್ಯಕ್ಕೆ ಕೊಲತ್ತಿರಿರಾಜ್ಯವನ್ನೂ ಜಯಿಸಲಿಕ್ಕೆ ಎಲ್ಲಾ ವಿಧದಲ್ಲಿಯೂ ಸಹಾಯಮಾಡುವುದಕ್ಕೆ ಒಪ್ಪಿದ್ದರಿಂದ ಹೊನ್ನಾವರದಲ್ಲಿ ವ್ಯಾಪಾರಮಾಡುವುದಕ್ಕೆ ನಾವು ಇಂಗ್ಲಿಷರಿಗೆ ಹಕ್ಕನ್ನು ಕೊಟ್ಟಿದ್ದೇವೆ ಆದರೆ ಕೆಲವು ಸಂಗತಿಗಳಲ್ಲಿ ಮುಂಚಿನ ಶರ್ತಗಳ ಪ್ರಕಾರ ನಡಕೊಳ್ಳುವುದರಲ್ಲಿ

ವ್ಯತ್ಯಾಸಗಳು ಕಂಡುಬಂದರೂ ಇನ್ನು ಮುಂದೆ ನಾವು ಕೋಲತ್ತಿರಿ ರಾಜ್ಯಕ್ಕೆ ದಂಡೆತ್ತಿಕೊಂಡು ಹೋಗುವಾಗ ಇಂಗ್ಲಿಷರು ಒಪ್ಪಿದ್ದಾರೆಂದು ವೀರ ಭದ್ರಯ್ಯನೂ ಸೂರಣ್ಣನೂ ನಮಗೆ ತಿಳಿಸಿದ್ದರಿಂದಲೂ ಮದಿವಪುರದ ದೇವಪ್ಪಯ್ಯನು, ನಾವು, ಸಹ ಮುಂದಿನ ಶಾಂತತೆಗೋಸ್ಕರ ಒಪ್ಪಿಗೆಕೊಡಬೇಕೆಂದು ತಿಳಿಸಿರುವುದರಿಂದಲೂ ನಾವು ಈ ಕೆಳಗಿನ ಕರಾರಿಗೆ ಒಪ್ಪಿಗೆಕೊಟ್ಟಿದ್ದೇವೆ

1. ಇಂಗ್ಲಿಷರ ಸಂಗಡ ನಾವು ಮಾಡಿದ ಎಲ್ಲಾ ಪೂರ್ವದ ಕರಾರುಗಳ ಪ್ರಕಾರ ನಡೆಯುವೆವು.

2. ಹೊನ್ನಾವರದ ಭಂಡಸಾಲೆಯಲ್ಲಿ ವ್ಯಾಪಾರನಡಿಸುವದಾದರೆ ಮುಂಚಿನ ಕರಾರುಗಳ ಪ್ರಕಾರ ನಡೆಯತಕ್ಕದ್ದು. ಸ್ವಲ್ಪವಾದರೂ ವ್ಯತ್ಯಾಸ ಬರಕೂಡದು

3. ನಮ್ಮ ಕರಾವಳಿಯಲ್ಲಿ ಇಂಗ್ಲಿಷರ ಸಣ್ಣ ದೊಡ್ಡ ಹಡಗಗಳು ತುಫಾನಿನಿಂದ ಬಂದು ಬಿದ್ದರೆ, ನಾವು ಅವುಗಳನ್ನು ಪೂರ್ವ ಪದ್ಧತಿ ಪ್ರಕಾರ ಕೂಡಲೆ ಬಿಟ್ಟುಕೊಡುವೆವು ಈ ವಿಷಯದಲ್ಲಿ ಏನೂ ಸಂಶಯವಿಲ್ಲ

4. ನಾವು ಕೋಲತ್ತರಸನಿಂದ ಇನ್ನು ಮುಂದೆ ಜಯಿಸುವ ರಾಜ್ಯದ ಭಾಗದಿಂದ ಮೆಣಸನ್ನೂ ಏಲಕ್ಕಿಯನ್ನೂ ಇಂಗ್ಲಿಷರಲ್ಲದೆ ಬೇರೆ ಯಾರೂ ಕೊಂಡು ಹೋಗಕೂಡದು. ಕೋಲತ್ತಿರಿರಾಜನಿಗೆ ಅವರು ಕೊಡುತ್ತಿದ್ದ **ಅದಲಾವಿ** ಎಂಬ ಸುಂಕವನ್ನು ನಮಗೂ ಕೊಡತಕ್ಕದ್ದು.

5. ಮೆಣಸು ಮತ್ತು ಏಲಕ್ಕಿ ಈ ಎರಡು ವಸ್ತುಗಳ ವ್ಯಾಪಾರದ ಕರಾರಿನ ಹೊರತು ಬೇರೆ ವಸ್ತುಗಳ ವಿಷಯ ಬೇರೆಯವರ ಸಂಗಡ ಕರಾರು ಮಾಡುವ ಹಕ್ಕು ನಮಗಿದೆ. ಇಂಗ್ಲಿಷರು ಈ ವಿಷಯದಲ್ಲಿ ನಮಗೆ ಅಡ್ಡಿ ಮಾಡಕೂಡದು.

6. ಕಂಪೆನಿಯ ಅಥವಾ ಮುಂಬಯಿಯ ಜನರಲ್, ತಲಚೇರಿಯ ಮೆಯೋರ್ ಮತ್ತು ಕಂಪೆನಿ ಉದ್ಯೋಗಸ್ಥರ ಮಚ್ವೆಗಳ ಮೇಲೂ ನಮ್ಮ ರಾಜ್ಯದ ಬಂದರುಗಳಿಂದ 300 ಕೋರ್ಜಿ ಅಕ್ಕಿಯನ್ನು ಕೊಂಡುಹೋಗುವಾಗ ಪೂರ್ವದಲ್ಲಿ ಆದ ಕರಾರಿನ ಪ್ರಕಾರ "**ಕೊಡ್ಡಿ ವೀಸ**" ಎಂಬ ಸುಂಕವನ್ನು ಕೊಡತಕ್ಕದ್ದು. ಆದರೆ ಇತ್ತಲಾಗಿ ವಸೂಲುಮಾಡುತ್ತಿದ್ದ **ಅದಲಾವಿ** ಎಂಬ ಸುಂಕವನ್ನು ಇನ್ನು ಮುಂದೆ ವಸೂಲುಮಾಡೋಣಾಗಲಿಕ್ಕಿಲ್ಲ. ಆದರೆ ಇಂಗ್ಲಿಷರ ಬಾವಟೆಯನ್ನು ಹತ್ತಿಸಿಕೊಂಡು ಬರುವ ಎಲ್ಲಾ ಸಾಹುಕಾರರ ಹಡಗಗಳಿಂದ **ಅದಲಾವಿ** ಎಂಬ ಸುಂಕವನ್ನು ವಸೂಲುಮಾಡಲಾಗುವದು.

7. ಮುದಕರ್ಶ್ರೆ ಕೋಟೆಯನ್ನು ನಾವು ಇಂಗ್ಲಿಷರ ಕಂಪೆನಿಗೆ ಬಿಟ್ಟು ಕೊಟ್ಟಿದ್ದೇವೆ. ಅವರು ಇದನ್ನು ವಶಮಾಡಿಕೊಂಡು ವ್ಯಾಪಾರಮಾಡಬಹುದು.

8. ಬಲಿಯಾಪಟ್ಟಣದ ದಕ್ಷಿಣಕ್ಕಿರುವ ಕಂಪೆನಿಯವರಿಗಿರುವ ಪೂತನಿ, ಪುನೋಲಮುಲಾ ಊರುಗಳನಂತರ ಮುಂದರಿಸಲಿಕ್ಕೆ ನಮಗೆ ಆಲೋಚನೆ ಇಲ್ಲ.

9. ಬಲಿಯಾಪಟ್ಟಣದ ದಕ್ಷಿಣಕ್ಕಿರುವ **"ಮೊನಬೊತೊ"** ಎಂಬ ಗುಡ್ಡದ ಮೇಲಿರುವ ಕೋಟೆಯನ್ನು ಇಂಗ್ಲಿಷರು ವಶಮಾಡಿಕೊಳ್ಳಕೂಡದು ಅಥವಾ ಇನ್ನು ಮುಂದೆ ನಾವು ಕಟ್ಟಿಕೊಳ್ಳಬಹುದಾದ ಕೋಟೆಯನ್ನು ವಶಮಾಡಿಕೊಳ್ಳಕೂಡದು

10. ಇಂಗ್ಲಿಷ್ ಕಂಪೆನಿಯವರು ಯಾವ ವಿಧದಲ್ಲಿಯಾದರೂ ನಮ್ಮ ಶತ್ರುಗಳಿಗೆ ಸಹಾಯಮಾಡಲೂ ಪ್ರೀತಿಸಲೂ ಕೂಡದು.

11. ಇಂಗ್ಲಿಷ್ ಕಂಪೆನಿಯವರು ನಮ್ಮ ಸೈನ್ಯಕ್ಕೆ ಬೇಕಾದ ಮದ್ದು ಗುಂಡುಗಳನ್ನು ಕ್ರಯಕ್ಕೆ ಕೊಡತಕ್ಕದ್ದು. ನಮ್ಮ ಸೈನ್ಯಕ್ಕೆ ನಾವು ಕಳುಹಿಸುವ ಸರಬರಾಯಿಯನ್ನು ಅಪಹಾಯಿಸಕೂಡದು. ಹೀಗೆ ಅವರು ನಮಗೆ ಸಹಾಯ ಮಾಡತಕ್ಕದ್ದು. ಎಂದೆಂದಿಗೂ ಈ ಕರಾರು ಜಾರಿಯಲ್ಲಿರತಕ್ಕದ್ದು.

D ಬಿದನೂರು ಅರಸು, ಬೂದಿ ಬಸವಪ್ಪ ನಾಯಕನಿಗೂ, ಪ್ರಧಾನಿ ಮಹಾದೇವಪ್ಪಯ್ಯ ನಾಯಕನಿಗೂ, ಮತ್ತು ಇಂಗ್ಲಿಷ್ ಕಂಪೆನಿಗೂ 1751ನೇ ಇಸವಿ ಒಕ್ಟೋಬರ ತಿಂಗಳ ತಾರೀಕು 25ರಲ್ಲಿ ಆದ ಪ್ರಸಿದ್ಧಪಟ್ಟ ಕರಾರು:

1. ಇಂಗ್ಲಿಷ್ ಕಂಪೆನಿಯವರು ಹೊನ್ನಾವರದಲ್ಲೆ ತಮಗೆ ಸಂತೋಷವಿದ್ದ ಸ್ಥಳದಲ್ಲಿ ಒಂದು ಭಂಡಸಾಲೆಯನ್ನು ಒಂದುವರೆ ವರುಷದಲ್ಲಿ ಕಟ್ಟಲಿಕ್ಕೆ ನಾನು ಪೂರ್ಣ ಹಕ್ಕನ್ನು ಕೊಡುತ್ತೇನೆ.

2. ಇಂಗ್ಲಿಷ್ ಕಂಪೆನಿಯವರು ಮಾಡಬಹುದಾದ ಎಲ್ಲಾ ವ್ಯಾಪಾರದ ಮೇಲೂ ಪೂರ್ವ ಪದ್ಧತಿ ಪ್ರಕಾರ ಸುಂಕವನ್ನು ಕೊಡತಕ್ಕದ್ದು.

3. ಕಂಪೆನಿಯವರ, ಅಥವಾ ಭಾಷಾಜ್ಞಾನಿಯ ಹಡಗಗಳಾಗಲಿ, ಮಂಜಿ ಗಳಾಗಲಿ ನಮ್ಮ ರಾಜ್ಯದ ಸಮುದ್ರಕರಾವಳಿಯ ಯಾವ ಭಾಗದಲ್ಲಿಯಾದರೂ ಒಡೆದುಬಿದ್ದರೆ, ಅದರಲ್ಲಿರುವ ವಸ್ತುಗಳನ್ನಾಗಲೀ ಹಡಗಗಳ ತುಂಡುಗಳನ್ನಾ ಗಲಿ 18 ತಿಂಗಳುಗಳೊಳಗೆ ಕಂಪೆನಿಯವರು ಕೊಂಡುಹೋಗಲಿಕ್ಕೆ ಸಮಯವನ್ನು ಕೊಡುತ್ತೇವೆ ನಮ್ಮ ಪ್ರಧಾನಿಗಳು ನಿಮಗೆ ಯಾವ ತರದ ಅಡ್ಡಿಯನ್ನಾದರೂ ಮಾಡದ ಹಾಗೆ ಅಪ್ಪಣೆ ಕೊಟ್ಟಿದ್ದೇನೆ. ಆದರೆ 18 ತಿಂಗಳು ಕಳೆದ ಮೇಲೆ ಕಂಪೆನಿಯವರಿಗೆ ಆ ಸೊತ್ತುಗಳ ಮೇಲೆ ಯಾವ ತರದ ಹಕ್ಕೂ ಇರಲಿಕ್ಕಿಲ್ಲ.

4. ಆದರೆ ಕಂಪೆನಿಯವರಲ್ಲದ ಇತರ ಸಾಹುಕಾರರ ಹಡಗಗಳು ಒಡೆದು ತೀರದ ಮೇಲೆ ಬಿದ್ದರೆ ಅಂಥಾ ಹಡಗಗಳ ತುಂಡುಗಳನ್ನು ಕೊಂಡು ಹೋಗುವರೆ ಅವರಿಗೆ ಹಕ್ಕಿರುವದಿಲ್ಲ.

5. ನಾವು ಇನ್ನು ಮುಂದೆ ಮೂಡಾಯಿ, ಏಳಿಮಲ, ರಾಮತಳಿ ಕೋಟೆಗಳನ್ನು ಹಿಡಿದರೆ, ಆ ಪ್ರದೇಶದ ಗಂಧ, ಮೆಣಲು, ಏಲಕ್ಕಿ ಇವುಗಳ ವ್ಯಾಪಾರದ ಹಕ್ಕನ್ನು ಪೂರ್ಣವಾಗಿ ಕಂಪೆನಿಯರಿಗೆ ಕೊಡುತ್ತೇವೆ. ಇತರ ಯಾವ ಸಾಹುಕಾರನಿಗಾದರೂ ವಾಡಿಕೆ ಇರುವ ಸುಂಕವನ್ನು ಕೊಟ್ಟರೂ ವ್ಯಾಪಾರದ ಹಕ್ಕನ್ನು ಕೊಡಲಿಕ್ಕಿಲ್ಲ. ಆದರೆ ಕಂಪೆನಿಯವರು ಪೂರ್ವಕಾಲದಿಂದ ಕೊಡುತ್ತಿದ್ದ ಸುಂಕವನ್ನು ಕೊಡತಕ್ಕದು.

6. ನಾವು ಮಲಬಾರು ದೇಶವನ್ನು ಹಿಡಿದ ಮೇಲೆ ಕಂಪೆನಿಯವರಿಗೆ ಆ ದೇಶದಿಂದ ಸಲ್ಲತಕ್ಕ ಎಲ್ಲಾ ತರದ ಸಾಲವು ಪುನಹ ಸಿಕ್ಕುವ ಹಾಗೆ ಎಲ್ಲಾ ತರದ ಪ್ರಯತ್ನಗಳನ್ನು ನಾವು ಮಾಡುತ್ತೇವೆಂದು ವಾಗ್ದತ್ತ ಮಾಡುತ್ತೇವೆ.

7. ಕೊಲತ್ತಿರಿರಾಜ್ಯವನ್ನು ಜಯಿಸುವುದಕ್ಕೆ ಬೇಕಾದ ಮದ್ದು, ಗುಂಡು ಮುಂತಾದ ಯುದ್ಧಸಾಮುಗ್ರಿಗಳನ್ನು ಕ್ರಯಕ್ಕೆ ನಮಗೆ ಕೊಡತಕ್ಕದ್ದು. ಒಂದು ವೇಳೆ ಕೊಲತ್ತರಸನು ಒಪ್ಪಂದಮಾಡುವದಾದರೆ ಕಂಪೆನಿಯವರು ಮಧ್ಯಸ್ಥರಾಗಬೇಕು.

E. 1751ನೇ ಇಸವಿ ಒಕ್ಟೋಬರ ತಿಂಗಳ ತಾರೀಕು 30ರಲ್ಲು ಇಂಗ್ಲಿಷರ ಕಂಪೆನಿಯ ಪರವಾಗಿ ಬಿದನೂರು ಅರಸನಿಗೆ, ಇಂಗ್ಲಿಷ ಕಂಪೆನಿಯ ಕನ್ನಡ ಭಾಷಾಜ್ಞಾನಿಯಾದ ಅಂತೋನಿಯೊಪಿಯರ್ಸ ಎಂಬವನು ಬರಕೊಟ್ಟ ಕರಾರು:

ಬಿದನೂರಿನ ಅರಸನು ತನ್ನ ಶತ್ರುಗಳಾದ ನಾಯರರ ಸಂಗಡ ಯುದ್ಧ ಮಾಡುವಾಗ ಎಲ್ಲಾ ತರದ ಯುದ್ಧದ ಸಾಮುಗ್ರಿಗಳನ್ನು ಕೊಡಲಿಕ್ಕೆ ಕಂಪೆನಿಯವರು ಒಪ್ಪಿರುತ್ತಾರೆ. ಅಂದರೆ, ಮದ್ದು ಗುಂಡುಗಳನ್ನು ಚಲಾವಣೆಯ ಕ್ರಯಕ್ಕೆ ಬಿದನೂರು ಅರಸರಿಗೆ ಕೊಡಲಿಕ್ಕೂ ಸಣ್ಣ ದೊಡ್ಡ ಫಿರಂಗಿಗಳನ್ನು ಯುದ್ಧದನಂತರ ತಿರುಗಿಕೊಡುವ ಶರ್ತದ ಮೇಲೆ ಕೊಡುವುದಕ್ಕೂ, ಚೆನ್ನಾಗಿ ತರಬೇತಾದ ಫಿರಂಗಿ ಹಾರಿಸುವವರನ್ನು ಕೊಡಲಿಕ್ಕೂ ಕಂಪೆನಿಯವರು ಒಪ್ಪಿರುತ್ತಾರೆ. ಬಿದನೂರಿನ ವೈರಿಗಳಾದ ನಾಯರರಿಗೆ ಯಾವ ತರದ ಸೈನ್ಯ ಸರಂಜಾಮುಗಳು ಸಮುದ್ರ ದಾರಿಯಾಗಿ ಹೋಗದ ಹಾಗೆ ಕಂಪೆನಿಯವರು ಜಾಗ್ರತೆ ತೆಗೆದುಕೊಳ್ಳಲಿಕ್ಕೆ ಒಪ್ಪಿರುತ್ತಾರೆ ಮಂಗಳೂರಿನಿಂದ ಯುದ್ಧದ ಸಾಮುಗ್ರಿಗಳು ಯುದ್ಧದ ಸ್ಥಳಕ್ಕೆ ಒಯ್ಯುವಾಗ ಹಡಗಗಳು ಹಾಳಾದರೆ,

ವೈರಿಗಳು ಹಿಡಿದರೆ ಕಂಪೆನಿಯವರೇ ನಷ್ಟ ಸಹಿಸಿಕೊಳ್ಳತಕ್ಕದ್ದು; ಬಿದನೂರಿನ ಅರಸರು ನಷ್ಟಕೊಡಲಿಕ್ಕೆ ಬಾಧ್ಯರಲ್ಲ. ಬಿದನೂರು ಅರಸರು ಇಂಗ್ಲಿಷ್ ಕಂಪೆನಿಯವರಿಗೆ ಬೇಕಾದ ಅಕ್ಕಿ ಮುಂತಾದ ಎಲ್ಲಾ ಸಾಮುಗ್ರಿಗಳನ್ನು ತಮ್ಮ ಪ್ರತಿಯೊಂದು ಬಂದರದಿಂದಲೂ ಕ್ರಯಕ್ಕೆ ಕೊಡತಕ್ಕದ್ದು. ಅಂತೊನಿಯೊ ಪಿಯರ್ಸನಾದ ನಾನು ಬಿದನೂರಿನ ಅರಸರ ಅಪ್ಪಣೆ ಪ್ರಕಾರ ಯುದ್ಧರಂಗಕ್ಕೆ ಹೋಗಿ ಜನರಲ್ ಆದ ಸೂರಪ್ಪಯ್ಯನಿಗೆ ಸಹಾಯಮಾಡುತ್ತೇನಾಗಿ ವಾಗ್ದತ್ತ ಮಾಡುತ್ತೇನೆ (ದಸ್ಕತು) **ಅಂತೊನಿಯೊ ಪಿಯರ್ಸ**.

F. 1763ನೇ ಇಸವಿ ಮೇ 27ನೇ ತಾರೀಕಿನ ದಿವಸ ಹೈದರಲ್ಲಿ ಖಾನಬಹದೂರರು ಇಂಗ್ಲಿಷ್ ಕಂಪೆನಿ ಬಹದ್ದೂರರಿಗೆ ಬಿದನೂರಲ್ಲಿ ಕೊಟ್ಟ ಪರವಾನಾ ಶರ್ತಗಳು:

ಇಂಗ್ಲಿಷ್ ಕಂಪೆನಿಯವರು ಪ್ರತಿ ವರ್ಷವೂ ತಮಗೆ ಬೇಕಾದ 300 ಕೋರ್ಜಿ ಅಕ್ಕಿಯನ್ನು ಮಂಗಳೂರಿಂದ ತಲಚೇರಿಗೆ ಅಥವಾ ಮುಂಬಯಿಗೆ ಒಯ್ಯುವದಾದರೆ ಅವರು **ಅದಲಾಮಿ** ಎಂಬ ಸುಂಕವನ್ನು ಕೊಡುವ ಅವಶ್ಯವಿಲ್ಲ. ಆದರೆ ಇತರ ಇಂಗ್ಲಿಷ್ ಸಾಹುಕಾರರು ಕೊಂಡುಹೋಗುವದಾದರೆ **ಅದಲಾಮಿಯನ್ನು** ಕೊಡತಕ್ಕದ್ದು

ಇಂಗ್ಲಿಷರು ನವಾಬರ ಶತ್ರುಗಳಿಗೆ ಸಹಾಯಮಾಡಕೂಡದು, ನವಾಬರು ಇಂಗ್ಲಿಷರ ಶತ್ರುಗಳಿಗೆ ಸಹಾಯಮಾಡಕೂಡದು. (ದಸ್ಕತು) **ಜೊನಸ್ವಾಸಿ.**

ಹೊನ್ನಾವರದ ರೆಸಿಡೆಂಟ್.

G ಮುಂಬಯಿ ಗವರ್ನರರಿಗೂ ನವಾಬ ಹೈದರಲ್ಲಿಖಾನಬಹದ್ದೂರರಿಗೂ ಆದ ಕರಾರು

1 ಮದ್ರಾಸ್ ಗವರ್ನರರಿಗೂ ಹೈದರಲ್ಲಿ ಖಾನಬಹದ್ದೂರರಿಗೂ ಮೊದಲು ಆದ ಕರಾರಿನ 3ನೇ ಶರ್ತದ ಪ್ರಕಾರ ಇಂದಿನಿಂದ ಮೇಲೆ ಹೇಳಿದ ಈಸ್ಟ್ ಇಂಡಿಯಾ ಕಂಪೆನಿ ಬಹದ್ದೂರರಿಗೂ ನವಾಬರಿಗೂ ಅವರ ಉತ್ತರಾಧಿಕಾರಿಗಳಿಗೂ ಪೂರ್ಣ ಸ್ನೇಹಾಚಾರವೂ ಸಮಾಧಾನವೂ ಇರಬೇಕು

2 ಮಂಗಳೂರು ಅಥವಾ ನವಾಬರ ಇತರ ಬಂದರಗಳಿಂದ ಮುಂಬಯಿಗೂ, ತಲಚೇರಿಗೂ ಬೇಕಾದ ಅಕ್ಕಿಯನ್ನು ಕೊಂಡುಹೋಗಲಿಕ್ಕೆ ಇಂಗ್ಲಿಷರಿಗೆ ಪೂರ್ಣ ಸ್ವತಂತ್ರವಿರಬೇಕು. 300 ಕೋರ್ಜಿ ಅಕ್ಕಿಯ ಮೇಲೆ ಮಾತ್ರ ರಿವಾಜು ಪ್ರಕಾರ "**ಅದಲಾಮಿ**" ಎಂಬ ಸುಂಕವನ್ನು ಕೊಡಲಿಕ್ಕಿಲ್ಲ.

3. ಇಂಗ್ಲಿಷರು ನವಾಬರ ಮಲಬಾರು ಕರಾವಳಿಯ ಎಲ್ಲಾ ಬಂದರುಗಳಿಂದಲೂ ವ್ಯಾಪಾರಮಾಡುವ ಪೂರ್ಣ ಸ್ವತಂತ್ರವು ಕಂಪೆನಿಯವರಿಗಿದೆ. ಆದರೆ ಸೇಕಡಾ 1½ ಪ್ರಕಾರ ಮಾತ್ರವೇ ಸುಂಕ ಕೊಡತಕ್ಕದ್ದು ಮಾರಿಹೋಗದ ಎಲ್ಲಾ ವಸ್ತುಗಳನ್ನು ಬಂದರುಗಳ ಯಜಮಾನರಿಗೆ ತಿಳಿಸಿ, ಹಿಂತಿರುಗಿ ತೆಗೆದುಕೊಂಡು ಹೋಗುವಾಗ ಸುಂಕ ತೆರಲಿಕ್ಕಿಲ್ಲ ಇಂಗ್ಲಿಷ್ ಕಂಪೆನಿಯವರ ಉದ್ಯೋಗಸ್ಥರಿಗಾಗಲಿ ಅವರ ಒಳ ನೌಕರರಿಗಾಗಲಿ ತತ್ಕಾಲ ಉಪಯೋಗಕ್ಕೆ ಬೇಕಾದ ಬಂಗಾರ, ಬೆಳ್ಳಿ ಮುಂತಾದ ವಸ್ತುಗಳ ಮೇಲೆ ಸುಂಕಕೊಡುವ ಅಗತ್ಯವಿಲ್ಲ

4. ನವಾಬರು 1766ನೇ ಇಸವಿ, ಫೆಬ್ರವರಿ ತಿಂಗಳಲ್ಲಿ ಕರಾರಾಗಿ ಸ್ಪಾರ್ಕ್ಸ್ ಮತ್ತು ಟೌನಸೆಂಡರ ವಶಕೊಟ್ಟ ಕರಾರಿನ ಪ್ರಕಾರ ನವಾಬರು ಜಯಿಸಿದ ರಾಜ್ಯಗಳಲ್ಲಿ ಇಂಗ್ಲಿಷ್ ಕಂಪೆನಿಯವರಿಗೆ ಮೊದಲಿದ್ದ ಹಕ್ಕು ಸ್ವಾತಂತ್ರ್ಯಗಳನ್ನು ಇನ್ನು ಮೇಲೆಯೂ ಕೊಡತಕ್ಕದ್ದು. ಆ ರಾಜ್ಯದ ಭಾಗಗಳು ಬೇರೆಯವರ ಸ್ವಾಧೀನವಿದ್ದಲ್ಲಿ ಕಂಪೆನಿಯವರಿಗೆ ಬೇಕಾದ ವಸ್ತುಗಳು ಅಲ್ಲಿ ಸಿಕ್ಕುವ ಹಾಗೆ ಅಡ್ಡಿಯಾಗಬಾರದು.

ಇದಕ್ಕೆ ಮುಂಬಯಿ ಕೆಸ್ಸಲ್‌ನಲ್ಲಿರುವ ಮುಂಬಯಿ ಕೌನ್ಸಿಲಿನ ಅಧ್ಯಕ್ಷರೂ, ಗವರ್ನರರೂ ಆದ ಸರ್ ತೋಮಸ್ ಎಸ್‌ಕ್ವಾಯರ್ 1770ನೇ ಅಗೋಸ್ತು ತಾ. 8ರಲ್ಲಿ ಹಾಕಿದ ದಸ್ಕತು ಇದೆ ನವಾಬ ಹೈದರಲ್ಲಿ ಖಾನ ಬಹದ್ದೂರರ 1770ನೇ ಇಸವಿ ಸೆಪ್ಟಂಬರ 27ರಲ್ಲಿ ಹಾಕಿದ ದಸ್ಕತು ಇದೆ

N. B. ಈ ಕರಾರಿಗೆ ಮುಂಬಯಿಯಲ್ಲಿ ದಸ್ಕತು ಆದ ಮೇಲೆ ತಲಚೇರಿಯ ಫೆಕ್ಟರರ ಮುಖಾಂತರ ಶ್ರೀರಂಗಪಟ್ಟಣದಲ್ಲಿ ಇಂಗ್ಲಿಷ್ ಕಮಿಶನರಾಗಿದ್ದ ರಿಚಾರ್ಡ ಚರ್ಚ ಮತ್ತು ಜೇಮ್ಸ್ ಸಿ. ಬಾಲ್ಡಿರಿಗೆ ನವಾಬರ ದಸ್ಕತಿನ ಬಗ್ಗೆ ಕಳುಹಿಸಲಾಯಿತು. ನವಾಬರ ದಸ್ಕತು ಆದ ಮೇಲೆ ತಿರಿಗಿ ಮೇಲಿನ ರೀತಿಯಲ್ಲಿಯೇ ಮುಂಬಯಿಗೆ ಕಳುಹಿಸಲ್ಪಟ್ಟಿತು.

H. ಕುಂಬಳೆ ರಾಜನಾದ ರಾಮಂತರಸರಿಗೆ ಕೊಟ್ಟ ಸರ್ಟಿಫಿಕೇಟು:-

ಮುಂಬಯಿ ಗವರ್ನರ, ಮೇಜರ್ ಜನರಲ್ ರೋಬರ್ಟ ಎಬರಕ್ರೊಂಬಿಯವರಿಗೂ ರಾಮಂತರಸರಿಗೂ ಭೇಟಿ ಆಗಿ ತೀರ್ಮಾನಿಸಿದ ಪ್ರಕಾರ ಯುನೈಟೆಡ್ ಈಸ್ಟ ಇಂಡಿಯಾ ಕಂಪೆನಿಯವರು ಒಪ್ಪಿಗೆ ಕೊಟ್ಟ ಪ್ರಕಾರ ಕೆಳಗಿನ ಶರ್ತಗಳು ಮಂಜೂರಾದವು

ಶ್ರೀರಂಗಪಟ್ಟಣದಲ್ಲಿ ಟೀಪು ಸುಲ್ತಾನರಿಗೂ ಇಂಗ್ಲಿಷರಿಗೂ, ಆದ ಒಪ್ಪಂದದಲ್ಲಿ ಕುಂಬಳೆ ರಾಜ್ಯವನ್ನು ಕರಾರಿನಲ್ಲಿ ಸೇರಿಸದೆ ಬಿಟ್ಟಿರುವುದರಿಂದ ಆ ರಾಜ್ಯವು

ಟೀಪು ಸುಲ್ತಾನನ ರಾಜ್ಯದಲ್ಲಿಯೇ ಉಳಿಯಿತು. ಆದ್ದರಿಂದ ಮೇಲೆ ಹೇಳಿದ ರಾಮಂತರಸರಿಗೂ ಅವರ ಕುಟುಂಬಕ್ಕೂ, ಅವರು ಹೆಚ್ಚು ಸಮಯದಿಂದ ಇಂಗ್ಲಿಷ್ ಜನಾಂಗದವರ ಮೇಲೆಯೇ ಆಧರಿಸಿಕೊಂಡಿರುವದರಿಂದ ಸುಲ್ತಾನರ ರಾಜ್ಯದಲ್ಲಿ ಉಳುಕೊಳ್ಳುವದು ಅಸಾಧ್ಯವಾಯಿತು. ಆದ್ದರಿಂದ ಆ ರಾಮಂತರಸರು ತಲಚೇರಿಗೆ ಬಂದು ಅಲ್ಲಿಯೇ ವಾಸಮಾಡತಕ್ಕದ್ದು. ಅಲ್ಲಿಯ ಇಂಗ್ಲಿಷ್ ಫೆಕ್ಟರಿಯ ಮುಖ್ಯಾಧಿಕಾರಿಯಿಂದ ಅವರ ಮತ್ತು ಅವರ ಕುಟುಂಬದ ಪೋಷಣೆಗೆ ತಿಂಗಳಿಗೆ ರೂ. ೨೦೦ ಪಡಿಯತಕ್ಕದ್ದು. ಅರಸರ ಕಡೆಯ ಜನರು ಮಲಬಾರು ತೀರದ ಸಂತೋಷವಿದ್ದ ಸ್ಥಳದಲ್ಲಿ ವಾಸಮಾಡಬಹುದು. ಮೆಜರ್ ಜನರಲ್ ಎಬರಕ್ರೊಂಬಿಯವರಿಗೂ ರಾಮಂತರಸರಿಗೂ ಭೇಟಿಯಾದ ಕೂಡಲೇ ಎಬರಕ್ರೊಂಬಿಯವರು ಹೊರಟುಹೋದ್ದರಿಂದ ನಾವು ತಲಚೇರಿಗೆ ಮುಟ್ಟಿದ ಕೂಡಲೇ ಈ ಸರ್ಟಿಫಿಕೇಟನ್ನು ಅರಸರಿಗೆ ಕೊಡಬೇಕೆಂದೂ, ತಾನು ಮಳೆಗಾಲ ಕಳೆದ ಮೇಲೆ ಕಣ್ಣಾನೂರಿಗೆ ಬಂದು ಆ ಸರ್ಟಿಫಿಕೇಟನ್ನು ದೃಢಪಡಿಸುತ್ತೇನೆಂದೂ ಎಬರಕ್ರೊಂಬಿಯವರು ನಮಗೆ ಅಪ್ಪಣೆಕೊಟ್ಟಿರುತ್ತಾರೆ.

ಈ ಕರಾರನ್ನು ನಮ್ಮ ಸ್ವಹಸ್ತದಿಂದ ಕಂಪೆನಿಯವರ ಮೋಹರು ಸಹಿತ ತಲಚೇರಿಯಲ್ಲಿ 1792ನೇ ಇಸವಿ ಏಪ್ರಿಲ್ ತಿಂಗಳ ೨೪ನೇ ದಿವಸ ರಾಮಂತರಸರಿಗೆ ಕೊಟ್ಟದ್ದೇವೆ. ಎಲೆಕ್ಸ ಡೌ. (ದಸ್ಕತು) **ಡಬ್ಲ್ಯೂ. ಎಫ್. ಫಾರ್ಮರ.**

H. ಮುಂಬಯಿಯ ಇಬ್ಬರು ಕಮಿಶನರರ 1792ನೇ ಇಸವಿ ಏಪ್ರಿಲ್ 24ನೇ ತಾರೀಕಿನ ಡೈರಿಯಿಂದ.

ಕುಂಬಳೆ ಅರಸನೂ ವಿಟ್ಲದ ಅಚ್ಯುತ ಹೆಗ್ಗಡೆಯೂ 1768 ಮತ್ತು 1780ನೇ ವರುಷಗಳಲ್ಲಿ ನಡೆದ ಯುದ್ಧಗಳಲ್ಲಿ ಇಂಗ್ಲಿಷರ ಕಡೆ ಸೇರಿದ್ದರಿಂದ ಕಂಪೆನಿಯವರು ಇವರಿಬ್ಬರಿಗೆ ಪೆನ್ಶನ್ ಕೊಟ್ಟಿರುತ್ತಾರೆ. ಇವರಿಬ್ಬರೂ ಇಂಗ್ಲಿಷರ ಮಿತ್ರರಾಗಿದ್ದಾಗ್ಯೂ ಇವರ ರಾಜ್ಯಗಳು ಒಪ್ಪಂದದ ಸಮಯದಲ್ಲಿ ಬಿದನೂರು ಕಚೇರಿಗೆ ಸೇರಿಹೋದ್ದರಿಂದಲೂ ಮುಂಬಯಿ ಸರಕಾರವು ಇವರಿಗೆ ತಿಂಗಳಿಗೆ ಪ್ರತಿಯೊಬ್ಬನಿಗೆ ರೂ. 200ರ ಪ್ರಕಾರ ಪೆನ್ಶನ್ ಕೊಡಬೇಕೆಂದು ತೀರ್ಮಾನಿಸಿದರು. ಕುಂಬಳೆ ಅರಸನು ಟೀಪುವಿನ ರಾಜ್ಯದಲ್ಲಿ ಸುಲಿಗೆಮಾಡಿದ್ದರಿಂದ ಅವನ ಪೆನ್ಶನ್ ತೆಗೆದುಹಾಕಲ್ಪಟ್ಟಿತು. ಆದರೆ ಕಮಿಶನರರು ಮದ್ರಾಸು ಸರಕಾರಕ್ಕೆ ಕುಂಬಳೆ ಅರಸನ ರಾಜ್ಯವನ್ನೂ ವಿಟ್ಲ ಹೆಗ್ಗಡೆಯ ರಾಜ್ಯವನ್ನೂ 1972 ನೇ ಇಸವಿಯಲ್ಲಿ ಶ್ರೀರಂಗಪಟ್ಟಣದಲ್ಲಿ ಆದ ಒಪ್ಪಂದದ ಪ್ರಕಾರ ಹಿಂತಿರುಗಿ ಕೊಡಬೇಕೆಂದು ಸಿಫಾರಸು ಮಾಡಿದರು. 1793ನೇ ಒಕ್ಟೋಬರ 11ನೇ ತಾರೀಕಿಗೆ ಬರೆದ ಮಲಬಾರ ಜೋಯಿಂಟ್ ಕಮಿಶನರರ ರಿಪೋರ್ಟು ಪ್ರಕಾರ

ಕುಂಬಳೆ ರಾಜನಿಗೆ ಅವನ ಪೆನ್ಶನು ಸುಮಾರು ಒಂದು ವರ್ಷದ ವರೆಗೆ ಸಿಕ್ಕಿತು. ಆ ಮೇಲೆ ನಿಲ್ಲಿಸಲ್ಪಟ್ಟಿತು. (1794ನೇ ಇಸವಿ ಸೆಪ್ಟಂಬರ 23ನೇ ಮತ್ತು 1793ನೇ ಒಕ್ಟೋಬರ 27ನೇ ತಾರೀಕಿನ ಮಲಬಾರು ಸುಪರವೈಜರರ ಡೈರಿಯ ಪ್ರಕಾರ.)

ಟೀಪುವಿನ ಸಂಗಡ ಯುದ್ಧವು ಸುರುವಾದೊಡನೆಯೇ ಕುಂಬಳೆ ರಾಜನು ಬಹಳ ಧೈರ್ಯದಿಂದಲೂ ಶೌರ್ಯದಿಂದಲೂ ಯುದ್ಧಮಾಡಿದ್ದರಿಂದ ಅವನ ರಾಜ್ಯವನ್ನು ಅವನಿಗೆ ತಿರಿಗಿ ಬಿಟ್ಟುಕೊಡಬೇಕೆಂದು ಕಮಿಶನರರು ಸಿಫಾರಸು ಮಾಡಿದರು. (1799ನೇ ಇಸವಿ ಜೂನ್ 7ನೇ ತಾರೀಕಿನ ಮಲಬಾರು 2ನೇ ಕಮಿಶನಿನ ಡೈರಿಯ ಪ್ರಕಾರ) ಕುಂಬಳೆ ರಾಜನೂ, ಅವನ ಅಳಿಯ ವೆಂಕಟೇಶನೂ, ಮತ್ತು ರಾಜಕುಟುಂಬದ ಪ್ರತಿಯೊಬ್ಬನೂ ತಲಚೇರಿಯಲ್ಲಿ ಬಂದು ನಿಲ್ಲುವದಾದರೆ, ತಿಂಳಿಗೆ 400 ರೂಪಾಯಿ ಪೆನ್ಶನು ಕೊಡುವದೆಂದು ನಿಶ್ಚಯಿಸಲಾಯಿತು

ಮೇಲಿನ ಸಂಗತಿಗಳು 1801ನೇ ಇಸವಿ ಫೆಬ್ರುವರಿ ತಿಂಗಳ 4ನೇ ತಾರೀಕಿನಲ್ಲಿ ಕನ್ನಡ ಜಿಲ್ಲೆಯ ಕಲ್ಟೆಕ್ಟರರು ಬರೆದ ಪತ್ರದಲ್ಲಿದೆ.

I. ತಲಚೇರಿ 4ನೇ ಜೂನ್, 1792. ವಿಟ್ಲ ಹೆಗ್ಗಡೆಯು ಅನೇಕ ವರುಷಗಳಿಂದ ಕಂಪೆನಿಯವರಿಗೆ ಅನೇಕ ತರದ ಸಹಾಯಮಾಡಿದ್ದರಿಂದ ಕುಂಬಳೆ ರಾಜನ ಹಾಗೆಯೇ ಇವನಿಗೂ 100 ರೂಪಾಯಿ ಪೆನ್ಶನು ಕೊಡಲಾಯಿತು. ಆದರೆ ಕುಂಬಳೆ ರಾಜನ ಹಾಗೆಯೇ ಇವನೂ ಟೀಪುಸುಲ್ತಾನನ ಸಂಗಡ ಯುದ್ಧದಲ್ಲಿ ಸಹಾಯಮಾಡಿದನು. ಮೇಜರ ಜನರಲ್ ಎಬರಕ್ರೋಂಬಿಯವರು ತಾನು ಮುಂಬಯಿಗೆ ಹೋಗುವ ಮೊದಲು ಕುಂಬಳೆ ರಾಜನಿಗೆ 200 ರೂಪಾಯಿ ಪೆನ್ಶನ್ ಕೊಡಬೇಕೆಂದು ಅಪ್ಪಣೆಕೊಟ್ಟರು. ವಿಟ್ಲ ಹೆಗ್ಗಡೆಯು ಆ ಸಮಯದಲ್ಲಿ ತನ್ನ ಸ್ವಂತ ಕೆಲಸದ ನಿಮಿತ್ಯ ವಿಟ್ಲಕ್ಕೆ ಹೋದ್ದರಿಂದ ಜನರಲ್ ಎಬರಕ್ರೋಂಬಿಯವರೊಡನೆ ತನ್ನ ಪೆನ್ಶನ್ ಹೆಚ್ಚಿಸಬೇಕೆಂದು ಹೇಳಿಲಿಕ್ಕೆ ಸಾಧ್ಯವಾಗಲಿಲ್ಲ. ಆದರೆ ಅದರನಂತರ ತಲಚೇರಿಗೆ ಬಂದು, ಆ ವಿಟ್ಲ ಹೆಗ್ಗಡೆಯು ತಲಚೇರಿಯ ಮುಖ್ಯಸ್ಥರಾದ ನಮಗೆ ತಿಳಿಸಿದ್ದರಿಂದಲೂ ಮತ್ತು ಪೆನ್ಶನ್ ಹೆಚ್ಚಿಸುವುದು ನ್ಯಾಯವೆಂದು ನಮಗೆ ಕಂಡುಬಂದದರಿಂದಲೂ, ಅವನಿಗೆ ನಾವು ಎಲ್ಲ ವಿಷಯಗಳಲ್ಲಿಯೂ ಸಹಾಯಮಾಡಬೇಕಾದ್ದರಿಂದಲೂ, ನಾವು ಈ ಸಂಗತಿಯನ್ನು ಕಂಪೆನಿಯವರ ಪಾಲಿಗೆ ಬಂದ ರಾಜ್ಯಗಳ ತನಖಿಗೋಸ್ಕರ ನೇಮಿಸಲ್ಪಟ್ಟ ಕಮಿಶನರರಾದ ವಿಲಿಯಮ್ ಗಾಮರ್ ಫಾರ್ಮರ್, ಎಸ್‌ಕ್ವಾಯರ್, ಮತ್ತು ಮೇಜರ್ ಎಲೆಕ್ಸಾಂಡರ ಡೌ ಎಂಬವರ ಮುಂದೆ ಈ ಸಂಗತಿಯನ್ನು ಇಟ್ಟು ಕುಂಬಳೆ ರಾಜನ ಹಾಗೆಯೇ ವಿಟ್ಲದ ಹೆಗ್ಗಡೆಗೂ ರೂಪಾಯಿ 200 ಪೆನ್ಶನು ಕೊಡಬೇಕೆಂದು ಸಿಫಾರಸು ಮಾಡಿದೆವು. ಇದರ ಪ್ರಕಾರ ರಾಜಾ ವಿಟ್ಲ

ಹೆಗ್ಗಡೆಗೆ ತಿಂಗಳಿಗೆ ರೂಪಾಯಿ 200ರ ಪ್ರಕಾರ ಕಂಪೆನಿಯವರು 1792ನೇ ಇಸವಿ ಮೇ 1ನೇ ತಾರೀಕಿನಿಂದ ಕೊಡಬೇಕೆಂದು ನಿಶ್ಚಯಿಸಲಾಯಿತು. ಮೇಲಿನ ತಾರೀಕಿಗೆ ನಾವು ಇದಕ್ಕೆ ದಸ್ಕತುಮಾಡಿ ಮೊಹರು ಒತ್ತಿದ್ದೇವೆ.

**ರೋಬರ್ಟ ಟ್ಯಾಲರ್ ಮತ್ತು ಫೆಕ್ಟರ್ಸ್,**

**ಉತ್ತರ ಜಿಲ್ಲೆಗಳ ಕಲ್ಲೆಕ್ಟರ್ಸ ಜನರಲ್.**

J. 1799ನೇ ಇಸವಿಯಲ್ಲಿ ಕಮಿಶನರರು ಉತ್ತರ ಭಾಗದ ಸುಪರಿಂಟೆಂಡೆಂಟರಿಗೆ ಹೀಗೆ ಅಪ್ಪಣೆ ಕೊಟ್ಟರು: ವಿಟ್ಲದ ಹೆಗ್ಗಡೆ ರಾಜನಿಗೆ (ಇಟ್ಟುಲ್ ಎಗ್ರಾ ರಾಜಾ) ಪೆನ್ಶನ ಕೊಡಬೇಕು. ಸರಕಾರದವರು ವಿಟ್ಲದ ಹೆಗ್ಗಡೆಗೂ ಕುಂಬಳೆ ರಾಜನಿಗೂ ಕಂಪೆನಿಯವರು ಅವರ ಸ್ಥಿತಿಯ ವಿಷಯ ಆಲೋಚಿಸುವ ವರೆಗೆ ಇದೇ ರೀತಿ ನಡಿಸಬೇಕು. ಈ ಸಂಗತಿಯು 1799ನೇ ಇಸವಿ ಜುಲಾಯಿ 9ನೇ ತಾರೀಕಿನ ಮಲಬಾರು 2ನೇ ಕಮಿಶನಿನ ಡೈರಿಯಲ್ಲಿದೆ ವಿಟ್ಲದ ಅರಸನು 1800ರ ಅಂತ್ಯದಲ್ಲಿ ಕಾಲವಾದನು. ಈ ಎಲ್ಲಾ ಸಂಗತಿಗಳು 1801ನೇ ಇಸವಿ ಫೆಬ್ರವರಿ 4ನೇ ತಾರೀಕಿನಲ್ಲಿ ಕನ್ನಡ ಜಿಲ್ಲೆಯ ಕಲೆಕ್ಟರರು ಬರೆದ ಪತ್ರದಲ್ಲಿದೆ.

K. 1798ನೇ ಇಸವಿ ಏಪ್ರಿಲ್ ತಾರೀಕು 20ರಲ್ಲಿ ಕುಂಬಳೆ ಅರಸನು ದಸ್ಕತು ಮೊಹರು ಸಹಿತ ಕಂಪೆನಿಯ ಪರ್ಶಿಯನ್ ಟ್ರಾನ್ಸ್‌ಲೇಟರ್‌ರಾದ ಕೆಪ್ಟನ್ ಸಾಮುವೇಲ್ ವಿಲ್ಸನರಿಗೆ ಕೊಟ್ಟ ಕರಾರು:

ನನ್ನ ಅನುಭವಕ್ಕಾಗಿ ಕಂಪೆನಿಯ ಗವರ್ನರರ ಪರವಾಗಿ ಬರೆದ ಕಾಗದವು ಬಂದು ತಲಪಿತು. ಅದರಲ್ಲಿ ಬರೆದ ಎಲ್ಲಾ ಸಂಗತಿಗಳು ತಿಳಿಯಲಾದವು. ಈಗ ಇಂಗ್ಲಿಷ ಜನಾಂಗಕ್ಕೂ ಟೀಪುಸುಲ್ತಾನನಿಗೂ ಒಪ್ಪಂದವಾದ್ದರಿಂದ ನಾನು ನನ್ನ ಕುಂಬಳೆ ರಾಜ್ಯಕ್ಕೆ ಎಷ್ಟು ಮಾತ್ರಕ್ಕೂ ಹೋಗಲಿಕ್ಕಿಲ್ಲ. ಅಥವಾ ಅಲ್ಲಿ ಸ್ವತಃ ದಂಗೆ ಎಬ್ಬಿಸಲಿಕ್ಕೂ ಅಥವಾ ದಂಗೆ ಎಬ್ಬಿಸಲು ಉತ್ತೇಜನ ಕೊಡಲಿಕ್ಕೂ ಇಲ್ಲ. ನಾನು ಇದಕ್ಕೆ ವಿರೋಧವಾಗಿ ನಡಕೊಂಡರೆ ಕಂಪೆನಿಯವರು ನನಗೆ ಕೊಡುವ ತಿಂಗಳು ಗಟ್ಲೆ ಪೆನ್ಶನನ್ನು ನಿಲ್ಲಿಸಬಹುದು.

(ಯಥಾ ನಕಲು)

ತಾ 20–4–1798, **ಸಾಮುವೇಲ್ ವಿಲ್‌ಸನ್‌ರ ದಸ್ಕತು ಇದೆ.**

**ಪರ್ಶಿಯನ್ ಟ್ರಾನ್ಸಲೇಟರ್.**

ಮೇಲಿನ ಸಂಗತಿಯು 1798ನೇ ಇಸವಿ ಮೇ ತಿಂಗಳ 4ನೇ ತಾರೀಕಿನ ಮಲಬಾರ 2ನೇ ಕಮಿಶನರ್ ಡೈರಿಯಲ್ಲಿದೆ

L. ಕೆಳದಿ ವೀರಭದ್ರಪ್ಪ ನಾಯಕನಿಗೂ ವೀರನರಸಿಂಹ ಶಂಕರದೇವಿ ಬಂಗರಾಜರಿಗೂ ಆದ ಕರಾರಿನ ಪಟ್ಟಿ ಪ್ರತಿ:

ಶಾ ಶ. 1563ನೇ ವಿಶು ಸಂ।ದ ಫಾಲ್ಗುಣ ಶು। ೧೦ಲ್ಲು ಶ್ರೀಮತ್ ಕೆಳದಿ ವೀರಭದ್ರಪ್ಪನಾಯಕರು, ವೀರನರಸಿಂಹ ಶಂಕರದೇವಿಯರಾದ ಬಂಗರಿಗೆ ಸ್ನೇಹಾನುಸಂಪ್ರೀತಿಯಿಂದ ಕಾರ್ಯ್ಯಕಳುಹಿದಲ್ಲಿ ಸ್ನೇಯಾತ್ತ್ಯ್ರ್ಯ: ನಾವು ಪರಿಣಾಮದಲ್ಲು ಇದ್ದೇವೆ. ನಿಮ್ಮ ಪರಿಣಾಮ ಸ್ಥಿತಿಗಳಿಗೆ ನೀವು ಎದ್ದು ಹೋಗಿದಲ್ಲಿ ನಿಮ್ಮ ಸ್ಥಳಕ್ಕೆ ಬಂದು ಅರಮನೆಯ ಸೇವೆಯೇ ಗತಿಯಾಗಿ ಬಿನ್ನಬುದ್ಧಿ ಇಲ್ಲದೆ ನಡೆದೆವು. ನಿಮ್ಮ ಸೀಮೆಯ ಸಂಬಂಧ ಬಿಟ್ಟು ಪಾಲಿಸಿ ಕೊಡಬೇಕೆಂದು ನೀವು ಕಳುಸಿದ ಉತ್ತರದಿಂದ ಕೊಲಂತರು ಬಹು ಬಗೆಯಲ್ಲಿ ಹೇಳಿಕೊಂಡದ್ದರಿಂದಲೂ ಎಲ್ಲಾ ವಿವರವನ್ನು ಮನಸ್ಸಿಗೆ ತಂದೆವು. ಆ ರೀತಿ ನಿಮ್ಮ ಕರಸಿ ವಿಕ್ರಮ ಸಂವತ್ಸರದಲ್ಲು ವಿಂಗಡಿಸಿಕೊಟ್ಟದ್ದು: ಪ್ರಾಕು ಉಂಬಳಿ **ಸೀಮೆ, ಬಂಗಾಡಿಯಿಂದಲು:** 1. ಕಡಿರುದ್ಯಾವರ, 2 ಬೆಳ್ಳುರು 3. ಕಣಪಾಡಿ 4. ಬಂಗ್ಹಾಡಿ 5. ಸಾಗೂರು 6. ಒಳಂಜೆ, 7. ಮೂಡಬೆಟ್ಟು 8. ಮಿತ್ತಬಾಗಲು 9. ಪಿಜತ್ತಮನೆ, 10. ಕಜಿಕೆಮನೆ, 11. ಪುತ್ತೂರುಮನೆ, 12 ಬಳಿವೆಮನೆ, 13. ನೆತ್ತರಗೂಡು, 14. ಆನಡ್ಕ, 15 ಪನ್ನಂದೂರು 16. ಪಿಲಿಚಾರು, 17. ಕಳಿಯಾವೆಮನೆ, ಸಹಾಪ್ರಾಕು ರೇಖೆ, ಗ೨೪೦೧೯೨ಗೆ ಉತ್ತಾರ: ಕೊಡಗಿ ಶಂಕರನಾರಾಯಣ ದೇವರಿಗೆ ಬಳಿವೆಮನೆಯಿಂದ ಗ೪೧॥ ಐನಿಚಾರು ಮನೆಯಿಂದ ಗ೧೦, ಕಳಿಯಾವೆ ಮನೆಯಿಂದ ಗ೧೪।, ಅಂತೂ ಗ೬೫॥, ಶುದ್ಧ ರೇಖೆ ಗ೨೩೩೫॥. ೨: **ನಡಶಿಸ ಸೀಮೆಯ** ನಡಶಿನ ಗೆಲ್ಲು ಬಡಗ ಭಾಗ, ಕುರಿಯಾಡಿ, ಸಹಾ ರೇಖೆ ಗ೮೦೫॥ ೧: ಬೆಳಲುವಾಯ ಸಹಾ ರೇಖೆ ಗ೬೦೧೯೨, ಕೊಯ್ಯುರು ಗ್ರಾಮ ಗ೬೦೦, ಉಭಯಂ ಗ೧೨೦,೧೯೨: **ನಡೆನಾಡ ಒಳಗಣ ಗ್ರಾಮ:** 1 ಇಂದಬೆಟ್ಟು, 2. ಕನ್ಯಾಡಿ, 3 ಸುರೆಯ, 4. ಕಳಂಜ, 5. ಮಾವೆಬೆಟ್ಟು, 6. ಬರೆಯ, 7. ಕೊಡಿಕಾರು ಸಹ ಗ್ರಾಮ ೭ರ ರೇಖೆ ಗ೫೦೧॥. **ಕುಂಜೂರು ಗ್ರಾಮದ ಒಳಗಣ ಸೀಮೆ:** 1 ಪುದುಬೆಟ್ಟು, 2. ಪುತ್ತಿಲ, 3. ಮೊಗರು 4. ಕಂಚುನಡ್ಕ 5. ಕರ ಪಾಡಿ, 6. ಬಿಳಿಯ, 7. ಬಳಂತಿಲ, 8. ಉಪ್ಪಂಗಡಿ, 9. ಕಜೆಕಾರು, 17. ಕುತ್ಯಾರು, 11. ಕಳಿಯ, 12. ಪೆರಳ ಅಂತು ಗ್ರಾಮ ೧೨ರ ರೇಖೆ ಗ೧೪೩,೫೯೪: ರೇಖೆ ಗ೪೩೪: **ಸಜೀಪದ ಸೀಮೆ:** 1. ಸಜೀಪ, 2. ಆಲಂಪಾಡಿ 3. ಅಂದಂಪಾಡಿ ಸಹಾ ಗ೬೬,೨೯೨॥: **ಮಂಜೇಶರದಿಂದಲು:** ರೇಖೆ ಗ೧೪೮೪೯೨ರ ಆಲಿರಾಜ ಉತ್ತಾರ ಗ೨೦೯೪. **ಪುದು** ರೇಖೆ ಗ೪೬೩॥ ೩: **ಹರೇಕಳದ ಒಳಗಣ ಅಂಬಲಮೊಗರು** ಗ೧೨೯೪: **ಮಣಿ ನಾಲ್ಕೂರುಯಿಂದಲು:** 1. ನಾವೂರು, 2. ಮಣಿ, 3. ನಾಲೂರು ಸಹ ರೇಖೆ

ಗ೫೪೭೯॥।, ಕೂಳೂರು ಕರಣಂತಾಯನ ಹುಟ್ಟುವಳಿಯಿಂದ ಗ೨೧೦, ಅಂತೂ ಉಂಬಳಿ ರೇಖೆ ಗ೮೮೮೩॥, ಮತ್ತಂ ಹೇಳಿಕೊಳ್ಳಲಾಗಿ ಕೊಟ್ಟದ್ದು. ಮರನಯನದಿಂದ ಸಜೀಪಕ್ಕೆ ಕೂಡಿಪ ರೇಖೆ ಗ೩೩೯೩, ಮೊಗರನಾಡು ಒಳಗಣ ನಂದಾವರ ಗ೪೫॥ ೩॥, ಪುದುಬೆಟ್ಟು ಗ್ರಾಮದ ಒಳಗಣ ಬಂಟವಾಳ ಪೇಟೆಯಿಂದ ಗ೪೯, ಹರೆಕಳದ ಒಳಗಣ ಪಟ್ಟಣಮೊಗರುಯಿಂದ ಗ೧೨೦॥೯೧, ತುಂಬೆ ಮಾರ್ಗದ ಒಳಗಣ ಬೈಪಾಡಿಯಿಂದ ೨೪॥ ೧॥।, ಅಂತು ರೇಖೆ ಗ೨೪೩೯೪। ಉಭಯಂ ವಿಕ್ರಮ ಸಂವತ್ಸರದಲ್ಲು ಬಿಟ್ಟದ್ದು. ಗ೯೧೫೬॥ ೪। ಯಥಾ ವಿಧಿಯಲ್ಲು ನೀವು ಹೇಳಿಕೊಂಡದ್ದು ಕೊಡೆಯಾಲದಲ್ಲಿ ನಿಮ್ಮ ಸುರುಬೆಯಲ್ಲಿ ನಮ್ಮ ಸುರಾಬೆಯಿಂದ ಒಡಂಬಟ್ಟು ಕೊಡೆಯಾಳದ ಹೋಬಳಿ ಸುಂಕ, ಪೇಟೆಯನ್ನು ಅರಮನೆಗೆ ಒಪ್ಪಿಸಿಕೊಂಡು ಕುಟುಂಬಕ್ಕೆ ಸಾಲದು ಎಂತ ಹೇಳಿಕೊಳ್ಳಲಾಗಿ ಕೊಟ್ಟ ಸೀಮೆ: 1. ಪುದುಗ್ರಾಮ, 2. ಅ ಎಟಾಡಿ ಸಹಾ ಗ್ರಾಮ ೨ರ ಗ೭೪೭॥ ೨॥ ಹರೆಕಳದಿಂದ ಗ೭೦೪॥ಗೆ ಅರಮನೆಗೆ ಬಂದದ್ದು. ಮುನ್ನೂರು ಭಟ್ಟನಿಂದ ಗ೨೦ ಶುದ್ಧ ಗ೬೮೪॥ಗೆ ಪ್ರಾಕು ಕೊಟ್ಟದ್ದು, ಗ೩೦೦ ಶುದ್ಧ ಗ೩೮೪॥ ಕೊಡೆಯಾಳದ ಒಳಗಣ ಅಡ್ಯಾರುಯಿಂದ ಗ೨೨೦೯೪॥।. **ಬೆಳತಂಗಡಿ ಒಳಗಣ**, ಮೂಲರ ಹೋಬಳಿಯಿಂದಲು 1. ಪಡುಬಂಗಾಡಿ, 2. ಪುತ್ಯೆ, 3. ಮುಂಡಾಡಿ, 4 ಪಟಿತರ್ಕ, 5. ಗರುಡಾಡಿ, 6 ಸೊಣಂದೂರು, ಸಹಾ ಗ್ರಾಮ ೬ರ ರೇಖೆ ಗ೫೪೯॥. ಶಿಶಿಲದ ಹೋಬಳಿ ಈಚೆ ನಿಡುಗಲದಿಂದ ಬಂಗರ ಸಮುದಾಯ ಗ೨೦, ಕೊರೆಕ ಗ೧೦೭ ಕೊಳನಾಡು ಒಳಗಣ ಮುಂಚಿ ಗ್ರಾಮದಿಂದಲೂ, ಗ್ರಾಮದ ದರ, ತೆರಿಗೆ, ದೇವಸ್ವ ಸಹ ಹೊರತಾಗಿ ಬಂಟರ ಬೈಲುವಾಸು ರೇಖೆ ಗ೧೫,೭೯೩॥। ಕುಂಞಮಾರ್ಗದ ಒಳಗಣ ಕಣಿಯೂರುಯಿಂದ ಗ೫೯॥ ೩॥, ಕಾವಳದ ಮಾಗಣೆ ಮೊಗರುಯಿಂದ ರೇಖೆ ಗ೫೨॥ ೩॥। ನಡೆನಾಡ ಒಳಗಣ ಸುರೇಖೆಯಿಂದ ಗ೭೬॥, ಪೆರಣಾಡ ಒಳಗಣ ಗುತ್ತು, ವಾಗಮುಂಜೂರು ಗುತ್ತು, ಹೊಲ ಗ೧೩೮, ಕಣಿಲದ ಗುತ್ತು, ಹೊಲ ೨೪೩೭ ಉಭಯಗುತ್ತು, ಹೊಲ ೩೮೨೪ರ ಗ೪೦॥ ೯॥ ಅಂತು ಗ೨೪೩೬೯೪। ಮೂಲರ ರಾಯಿಗ್ರಾಮದ ಉಂಬಳಿ ಬದಲಿಗೆ, ಇನವಳ್ಳಿ ಸೀಮೆ ಒಳಗಣ ಕಿಲ್ಲೂರು ಗ೧೨೦, ಪಾವೂರು ಗ೧೨೦ ಉಭಯಂ ಗ೨೪೦ರ ಹುಟ್ಟುವಳಿ ರೇಖೆ ಗ೨೭೨೯೧ ಉಭಯಂ ಗ೨೭೦೮॥ ೧॥। ಉಭಯಂ ಸೀಮೆಯಿಂದಲೂ, ರೇಖೆ ಪ್ರಮಾಣ ಗ೧೧೮೬೫॥ **ಸುಂಕದಿಂದಲು:** ಮಂಜೇಶ್ವರ ಗ೬೦೦; ಉಪ್ರಂಗಡಿ ಗ೩೦೦; ಬೆಳತಂಗಡಿ ಗ೨೪೦; ಸ್ಥಳಬಂಗಾಡಿ (ಬಂಗಾಡಿನಗರ) ೨೦೦; ಅಂತು ೩ರ ಗ೧೩೪೦; ಕೊಡೆಯಾಲದ ಸುಂಕ ಒಪ್ಪಿಸಿದ ಸಂಬಂಧ .ಕೊಟ್ಟ ಸುಂಕ ಇನವಳ್ಳಿ ಸುಂಕದಿಂದ ಒಳತಾಣ್ಮ ಸಹಾ

ಪ್ರಾಕು ಅರಮನೆಯವರು ಯಪ್ಪವ ಪ್ರಮಾಣ ರೇಖೆ ೧೯೫೦, ಬಂಟವಾಳ ಸುಂಕದಿಂದ ಪಾಣೆಮಂಗಳೂರಲ್ಲು ಎತ್ತಹೇಳಿ ಕಟ್ಟುಮಾಡಿದ ಸಾಲು ಸುಂಕ ಹೊರತಾಗಿ, ಕರೆಸುಂಕ ಪೇಟೆ ಸಹಾ ೧೧೯೪॥; ಅಂತೂ ಸುಂಕ ರೇಖೆ ೧೨೪೮೪॥ ಉಭಯಂ ಸುಂಕ ಸಹಾ ರೇಖೆ ೧೪೩೫೦. ಹದಿನಾಲ್ಕು ಸಾವಿರದ ಮುನ್ನೂರೈವತ್ತು ವರಹ ಹಾಗ ಸೀಮೆ ಸುಂಕ ಸಹಾ ಕೊಟ್ಟೆವು. ಅದನ್ನು ಅನುಭವಿಸಿಕೊಂಡು ಈ ಸೀಮೆಯಲ್ಲಿ ಬಿಡುವ ಪಿಚಾರಕ್ಕೆ ನಮ್ಮ ಮುಖಾಂತರ ದಿವಾಣಕ್ಕೆ ಮುಗುಮುಕೊಂಡಮು, ೧೦,೦೦೦ ಹತ್ತುಸಾವಿರ ಹೊನ್ನು ನಿಮ್ಮ ತಿಮ್ಮತಿಕಾರಿ ಬರಕೊಟ್ಟ ವಾಕೆ ಪ್ರಮಾಣ ಗಡುವಿಗೆ ನಲಿಸಿಕೊಟ್ಟು, ದೇವಾದಾಯ, ಬಹ್ಮಾದಾಯ, ಮುಂತಾದ ಉತ್ತಾರಗಳನ್ನು ಪ್ರಾಕು ಪ್ರಮಾಣನಲ್ಲು ನಡೆಸಬಹುದು. ಇಂದಿನ ವರೆಗೆ ನಿಮ್ಮಿಂದ ಏನೊಂದು ದೊಸ ದ್ರೋಹ ಇದ್ದರೂ, ತಪ್ಪು ವಪ್ಪು ಬಂದಿದ್ದರೂ ಅದನ್ನೆಲ್ಲವನ್ನೂ ಮಾಫಿಸಿಕೊಂಡೆವು. ಮುಂದೆ ನಿಮಗೆ ಕೊಟ್ಟ ಸೀಮೆ ಒಳಗೆ ನಿಮ್ಮ ಅರಮನೆಯವರು ಹಾಕಿದ ಕೋಟೆ ಮಂಜೇಶ್ವರ ದಲ್ಲಿ (ಬಂಗರಮಂಜೇಶ್ವರ ಉಪ್ಪಳ ಹೊಳೆಯಿಂದ ಮಂಜೇಶ್ವರ ಹೊಳೆ ವರೆಗೆ ಇರುವ) ಉಪ್ಪಿಂಗಡಿಯಲ್ಲಿ; ಬೆಳತಂಗಡಿಯಲ್ಲಿ; ನಂದಾವರದಲ್ಲಿ, ಕೆಳಬಂಗಾಡಿ ಯಲ್ಲಿ (ಅರಮನೆ ಹತ್ತಿರ) ಕೋಟೆಗಳ ನೆಲ ಸಮೂತಮಾಡಿ ಕೆಡಪಿ ಅರಮನೆ ಕಾರ್ಯಕ್ಕೆ ವಿರರಹಿತರಾದವರಿಗೆ ಆಸ್ಪದ ಕೊಡದೆ ಮಳೆಯಾಳದವರಿಂದ ಏನಾದರೂ ಕುರುಹುಗಳು ಬಂದರೂ ನಮ್ಮ ಅರಮನೆ ಮುದ್ರೆ ಒಳಗಾಗಿ ಇದ್ದು ನಿಮ್ಮ ಆದ್ಯಂತ ಮಂದಿಯು ಕೂಡಿಕೊಂಡು ಅವರಿಗೆ ತಕ್ಕ ಬುದ್ಧಿ ಹೇಳಿ ಅರಮನೆ ಕಾರ್ಯದ ಒಳಗೆ ಹಿತವಿಶ್ವಾಸಿಗಳು ಎಂತ ಅರಮನೆ ರೇಖೆ ಒಪ್ಪ ಬರದು ಬಂದ ಪಟ್ಟಿ ಪ್ರತಿ (ಬಂಗಾಡಿ ಅರಮನೆಯಿಂದ ಸಿಕ್ಕಿದ್ದು.)

ಪುತ್ತಿಗೆ ಚೌಟರಿಗೂ, ಬಂಗರಿಂದ ಸ್ವಾಧೀನಪಡಿಸಿಕೊಂಡ ಮಹೇಲ ಪೇಜಾವರ ಸೀಮೆಯವರಿಗೂ ಆದ ಕರಾರು.

ಸ್ವಸ್ತಿ! ಶ್ರೀ ಜಯ ಯುದಯ ಶಾಲಿವಾಹನ ಶಕ ವರುಷ ೧೩೩೨ನೆಯ ವರ್ತಮಾನ! ವಿಕೃತಿ ಸಂವತ್ಸರದ ಸಿಂಹಮಾಸ ದಿನ ೧೫ಯಲ್ಲು ಶ್ರೀಮನ್ ಮಹಾರಾಜಾಧಿರಾಜ ಪರಮೇಶ್ವರ ಶ್ರೀವೀರ ಪ್ರತಾಪ ಪ್ರೌಢವೀರಶೇಖರ ದೇವರಾಯ (1ನೇ ದೇವರಾಯ) ಮಹಾರಾಯರು ವಿಜಯನಗರಿಯಲ್ಲು ಸ್ಥಿರ ಸಿಂಹಾಸನಾ ರೂಢರಾಗಿ ಚತುಸಮುದ್ರ ಮಧ್ಯ ರಾಜ್ಯ ಪರಿಪಾಲಿಸುವಲ್ಲಿ ಅವರ ಮುದ್ರೆ ಉಂಗುರವ ಧರಿಸಿ ಶ್ರೀಮನ್ ಮಹಾಪ್ರಧಾನ ರಾಮಚಂದ್ರಪ್ಪ ಧಣಾಯಕರು ಸಮಸ್ತ ರಾಜ್ಯಪಾರುಪತ್ಯವನ್ನು ಚಿತ್ತಯಿಸಿಯಲ್ಲು ಅವರ ನಿರೂಪದಿಂದ ವಿಡರ ಸರು ಮಂಗಳೂರು ರಾಜ್ಯವನ್ನಾಳುವ ಕಾಲದಲ್ಲು ಶ್ರೀಮತ್ತು ಪುತ್ತಿಗೆಯ ಜನನ ದಲ್ಲು ಬಾಳುವ ಅಲ್ಲಪ್ಪಶೇಖರಾದ (ಚೆನ್ನರಾಯ) ಚೌಟರು.ಅವರ ತಮ್ಮ, ದೇವರ

ಶೇಖರು, ಬಿರ್ಮಣ ಶೇಖರು, ಅಮುಣ್ಣಶೇಖರು, ಸಹವಾಗಿ ಅಮ್ಮನೂರು ಗುತ್ತಿನಲ್ಲಿ (ಅಮುಣಜೆ) ಬಾಳಿಹ ಕರ್ಮರಂಬಳಿಯ ಬಂಗಮುಂಜನ ಅಳಿಯ ಮಂಜಣ ಬಂಗಗೆ, ಪೊರಲಚೇರದಲ್ಲಿ ಬಾಳಿಹ ನಟ್ಟೋಜಸ್ತಾನಿಕ ವೆಂಕಟನ ಸಂತತಿಯಲ್ಲಿ, ದೇವಣ್ಣಗೆ, ಚತುಸಾನದವರಿಗೆ ಸಹವಾಗಿ ಬರೆಸಿಕೊಟ್ಟ ಶಿಲಾಶಾಸನ ಕ್ರಮವೆಂತೆಂದರೆ, ನಮಗೆ ಪೂರ್ವದಲ್ಲಿ ನಂದರದ ಉಮ್ಮಣ ಬಂಗರು (ಲಕ್ಷ್ಮಪ್ಪರಸ ಬಂಗರಾಜ) ನಮ್ಮಕೂಡೆ ದೂರುವಕ್ಕಗೆ ಬರಸಿಕೊಡಲು ನಾವು ನಮ್ಮ ರಾಜ್ಯದ ಆಳು ಕುದುರೆ ಸಹವಾಗಿ ಕಾಳಗಕ್ಕೆ ಹೋಗಿ, ಆ ಸೀಲೇಶ್ವರದ ಮೂತರನ ಸಂಗಡ ಕಾಳಗ ಮಾಡಿ, ಸೋಲಿಸಿ ಬಂಗರಿಗೆ ಸಲಿಸಲು ಆಗ ಬಂಗರು ನಮಗೆ ಬಿಟ್ಟುಕೊಟ್ಟ ಮಣೇಲ, ಪೇಜಾರ, ಮುಡುಕೂರು ನಗರಗಳನ್ನು ನಾವು ಸಗತಮಾಡಿಕೊಳ್ಳಲು ಈ ಶಾಸನದ ನಿರೂಪದಿಂದ ಮಣೇಲ ಸಾರಸೀಮೆಯ ಪೊರಲದೇವಿಯ ಆಯದಾಯಕೊಡಿ ಚಂಡು ಬಡಿಸಿದ್ದಾಯ, ಹೊನ್ನುಬುತ್ತ, ನಂದದೀಪ, ಅಮೃತಪಡಿ ನಡಿಸಿಕೊಂಡು ನಾವು ಬಹಾಗ ಆರ್ಕುಳ ನಾನೂರಾಳರು (400) (ಸೈನ್ಯದ ಸೇನಾಧಿಪತಿ) ಅಮ್ಮಣಜೆ ಆರ್ನೂರಾಳರು (600 ಸೈನ್ಯದ ಸೇನಾಧಿಪತಿ) ಕೂಡಿ ಪಟ್ಟಣ ಸೆಟ್ಟಿ (ಮಣೇಲ ಪಟ್ಟಣಸೆಟ್ಟಿ) ಸಹವಾಗಿ ಬಿಜಾರಗಡಿಗೆ ಮಾನಮರ್ಯಾದಿ ಮೆರ್ವೆತೋರಣಗಳಿಂದ ಬರಲಹುದು, ನೀವು ಆ ಪೊರಲದೇವಿಯ ಆಯದಾಯಕ್ಕೆ ಬದ್ಧರಾಗಿ ಬಾಳಿ ಅನುಭವಿಸುವದು, ನಾವು ಬಾರದೆ ನಮ್ಮ ನಿರೂಪವಿಲ್ಲದೆ ಕೋಡಿಚಂಡು ಮಾಡಲು ಕೂಡದು ನಮ್ಮ ನಿರೂಪದಿಂದ ನಾವು ಇಲ್ಲದ ಸ್ಥಾನಮಾನದಲ್ಲಿ ನಮ್ಮ ರಾಜ್ಯದಲ್ಲಿ, ನಮ್ಮ ಮಾನಮರ್ಯಾದಿಗಳು ನಮ್ಮ ಪಕ್ಷದಿಂದ ನೀವೂ ಚತುಸಾನದ ಗುತ್ತಿನವರು ನಡಿಸಿಕೊಂಡು ಬಾಳಬಹುದು ನಮ್ಮ ರಾಜ್ಯದ ನಾವು ಬಾಳುಗಳಿಗೆ ನಮ್ಮನಗರಗಳಿಗೆ ಅನ್ಯ ಮತಸ್ಥರಲು ಕೂಡಾ ಪುತ್ತಿಗೆ ಸೋಮನಾಥ ಬೆಟ್ಟನಲ್ಲಿ ಬಾಳಿಹ ಬುನ್ನಂಬಳಿಯ ಕಾಳುಸೆಟ್ಟಿ ಸಂತತಿಯಲು ಮಾಸಾದಿಕ ಜಯಿನ ಕಾಳಸೆಟ್ಟಿಯನ್ನು ಪೊರಲ ಅಮ್ಮನೂರು ಗುತ್ತಿನಲ್ಲಿ ಬಾಳಿಹ ಕರ್ಮರಂಬಳಿಯ ಬಂಗಮುಂಜನ ಸಂತತಿಯಲು ಮಾಸಾದಿಕ ಜಯಿನ ಮಂಜನಬಂಗನನ್ನು ಮುಡುಕೂರು ನಗರದ ಚಿನ್ನದ (ಇನ್ನ) ಗುತ್ತಿನಲ್ಲಿ ಬಾಳಿಹ ನಾವರಂಬಳಿಯ ಪಾರಕಾಂತಸೆಟ್ಟಿ ಸಂತತಿಯಲು ಮಾಸಾದಿಕ ಜಯಿನ ಮೋನಪ್ಪಸೆಟ್ಟಿಯನ್ನು ಪೇಜಾರ ಸೀಮೆಯ ತೋಕುರ ಗುತ್ತಿನಲ್ಲಿ ಬಾಳಿಹ ಮಾರಂಶೇಖಿನ ಸಂತತಿಯಲು ಮಾಸಾದಿಕ ಜೈನ ಕಿಟ್ಟುಸೆಟ್ಟಿಯನ್ನು ಸಹವಾಗಿ ನಮ್ಮ ರಾಜ್ಯದ ಉರಿಸಿರಿಗಳಿಗೆ ಬಾಧ್ಯರಾಗಿ ನಿಲಲಹುದು ನಮಗೆ ಬಂಗರು ಒಡಂಬಡಿಕೆಮಾಡಿಕೊಟ್ಟ ಪತ್ರದ ವಿವರದಲ್ಲಿ ವಿರೋಧವಾಗಿ ನಡೆದರೆ ನಾವು ಚಿತ್ತವ ತಿಳುಹಿಕೊಂಬೆವು. ನೀವು ಚತುಸಾನದವರು ಐಕಮತದಿಂದ ನಡಕೊಳ್ಳಬಹುದು. ನಮ್ಮ ಮೇಲೆ ಅರಸು ಅನುಸರಿಗಳ ಕೂಡಿಕೊಂಡು ಮೋಹರಿಸಿ ಬಹಾಗ ನಿಮ್ಮ ಆಳುಕುದುರೆ ಅರ್ಥ ಪ್ರಾಣ

ವನ್ನು ವೆಚ್ಚಿಸಿ ಕಾದುವುದಕ್ಕೆ ತಪ್ಪಲಾಗದು ಎಂದು ಉಭಯ ದಿನದಲ್ಲು ಬರಸಿ ಕೊಟ್ಟ ಉಭಯ ಶಿಲಾಶಾಸನಕ್ಕೆ ನಾವು ತಪ್ಪಿದರೆ ಪುತ್ತಿಗೆ ಸೋಮನಾಥನ ಕೆಡದ ಪಾಪಕ್ಕೆ ಹೊಹೆವು ಪೊರಲ ದೇವಿಗೆ ತಪ್ಪಿದ . . ಕಾಶಿಯಲ್ಲಿ ಸಾವಿರ ಮಂದಿ ಯತೀಶ್ವರರ ಕೊಂದ ಪಾಪಕ್ಕೆ ಹೋಹೆವು. ನೀವು ಉಭಯತರು ಚತುಸಾನ ದವರು ತಪ್ಪಿದರೆ ನಿಮ್ಮ ಸಂತಾನದ ಮೇಲೆ ಪುತ್ತಿಗೆ ಸೋಮನಾಥ ದೇವರು ಪೊರಲ ದೇವಿಯವರು ವಿಚಾರಿಸಿಕೊಂಬರು ಶ್ರೀ ಜಿನನಾಥ ಶ್ರೀ ಶ್ರೀ

ಅಲ್ಲಪ್ಪ ಚೌಟ ವೊಪ್ಪ ಶ್ರೀ.

## ನಂದಳಿಕೆ ಹೆಗ್ಗಡೆಯರಿಗೂ ಚೌಟರಿಗೂ ಆದ ಕರಾರು.

ನಮಸ್ತುಂಗ ಶಿರಶುಂಭ ಚಂದ್ರಚಾಮರ ಚಾರವೆ ತ್ರಯಿಂಲೋಕ್ಯ ನಗರಾಂಭ ಮೂಲಸ್ತಂಭಾಯ ಶಂಭವೆ'' ಸ್ವಸ್ತಿ! ಶ್ರೀಜಯಾದ ಸದೆಯ ಶಾಲಿವಾಹನ ಶಕ ವರುಷ ೧೪೫೦ನೇ ವರ್ತಮಾನ ಸರ್ವಧಾರಿ ಸಂವತ್ಸರದ ವೃಷಭಮಾಸ ೧೪ನೇ ಸೋಮವಾರದಲ್ಲು ಶ್ರೀಮತ್ತು ಕೃಷ್ಣಾನಂದವೊಡೆಯರ ಮಧ್ಯಸ್ಥದಲ್ಲಿ ಶ್ರೀಮತು ತುಳವರ್ಸರಾದ ತಿರುಮಲರಸ ಚೌಟರಿಗೂ ನಾಡಿನವರಿಗೂ ಸಹಾ ತಿರುಮಲರಸರಾದ ನಂದಳಿಕೆ ಕಿನ್ಯಕ್ಕೆ ಹೆಗ್ಗಡೆಯರು ಕಿನ್ಯಕ್ಕ ನಿಮಿತ್ತರಾದ ನಾಡಿನವರು ಸಹಾ ಬರಸಿಕೊಟ್ಟ ತಾಮ್ರ ಶಾಸನದ ಕ್ರಮವೆಂತೆಂದರೆ, ತೆಂಕ ಬಡಗು ಬಂಗರುಭಯರರಸರು ಎಲ್ಲೂರು ಕುಂದ ಹೆಗ್ಗಡೆಯರು ನಿಮ್ಮ ಮೇಲೆ ಅರಸು ಅನುಸರಿಗಳ ಕೂಡಿಕೊಂಡು ಬಹಾಗ ನಾವು ನಮ್ಮ ಮಂದಿ ವಾರ್ಗಣವನ್ನು ಕೂಡಿಕೊಂಡು ನಮ್ಮ ಅರ್ಥ ಪ್ರಾಣವನ್ನು ವೆಚ್ಚಿಸಿ ನಿಮ್ಮ ಕೂಡೆ ಒದಗಿ ನಿಲ್ಲುವದಕ್ಕೆ ತಪ್ಪೆವು. ಭಯರರಸರು ವೊಳಸಂಧಾನವನಿಕ್ಕಿ ನಮ್ಮನ್ನು ಕಾಣಿಸಿಕೊಳ್ಳಲೇಕೆಂಬಾಗ ನಾವು ನಿಮ್ಮ ಬಿಟ್ಟು ಕಾಣೆವು. ಕಂಡರೂ ಇಕ್ಕರ್ತರಿಗೂ ಒಂದಾಗಿ ಕಾಣುವದಲ್ಲದೆ ಒಬ್ಬರ ಬಿಟ್ಟು ಒಬ್ಬರು ಕಾಣ ಸಲ್ಲದು. ಅರಸುಗಳು ತುಳುರಾಜ್ಯಕ್ಕೆ ಬಹಾಗ ಕೇಡು ಬಾಳಿಕೆ ಇಕ್ಕರ್ತರಿಗೂ ಒಂದೆ. ಪಡುಬಿದರೆ ಕಾರ್ಯಕ್ಕೆ ನಂದರರಸರು ನಿಮಗೆ ಒಡಂಬಡಿಕೆ ಮಾಡಿ ಕೊಟ್ಟ ಪತ್ರದ ವಿವರದಲ್ಲಿ ಅವರು ಅಳಿಯ ಮಾವಂದಿರು ಮೂವರೊಳಗೊಬ್ಬರು ನಿಮ್ಮ ಚಿತ್ತವ ತಿಳುಹಿ ಬಾಳುವರು. ಬಾಳಲರಿಯದಿದ್ದರೆ ಅವರ ಕುಟುಂಬ ದೊಳಗೊಬ್ಬನು ನಿಮ್ಮ ಚಿತ್ತಕ್ಕೆ ಬಹವನ ಹಿಡಿದು ಬಾಳಿಸುವಲ್ಲಿಗೆ ನಾವು ನಿಮ್ಮ ಸಂಗಡ ಒದಗಿ ನಿಲ್ಲುವದಕ್ಕೆ ತಪ್ಪೆವು ಅದಾ ವಿವರ ನಮ್ಮ ಮೇಲೆ ಕಾರೆಕಳದ ಭಯಿರರಸರು ಭಂಗರು ಕುಂದ ಹೆಗ್ಗಡೆಯರು ಅರಸು ಅನುಸರಿಗಳಕೊಂಡು ನಮ್ಮ ಸೀಮೆಯನ್ನು ಕೆಡಿಸಬೇಕೆಂದು ಏರಿಟ್ಟುಕೊಂಡು ಬಂದಾಗ ನಿಮ್ಮ ಅರ್ಥ ಪ್ರಾಣವನ್ನು ವೆಚ್ಚಿಸಿ ಕಾದುಕೊಡುವದಕ್ಕೆ ತಪ್ಪಬಾರದು ನಿಮಗೂ ಭೈರರಸರಿಗೂ ಸಂಧಾನವಾದರೆ ಒಬ್ಬರ ಬಿಟ್ಟು ಒಬ್ಬರು ನೋಡಸಲ್ಲದು. ನೋಡಿದರೂ ಇಬ್ಬರು

ಒಂದಾಗಿ ನೋಡುವ ಬಂಗರು ನಮ್ಮ ಮೇಲೆ ಅರಸು ಅನುಸರಿಗಳ ಕೂಡಿ ಕೊಂಡು ಮೊಹೆರಿಸಿ ಬಹಾಗ ನಿಮ್ಮ ಮೂರು ಸಾವಿರಾಳು ಪಕ್ಕದಿಕ್ಕು ಸಹಾ ನಿಮ್ಮ ಅರ್ಥ ಪ್ರಾಣವನ್ನು ವೆಚ್ಚಿಸಿ ಕಾದುಕೊಡುವದಕ್ಕೆ ತಪ್ಪಲಾಗದು. ತುಳು ರಾಜ್ಯಕ್ಕೆ ಅರಸು ಬಹಾಗ ಪೂರ್ವ ವರ್ತಕರಲ್ಲಿ ತಿದ್ದಿಸಿ ಕೊಡುವಿರಿ ಅದು ಅಲ್ಲದೆ ನಮ್ಮ ಸೀಮೆಯು ಕೆಡಿಸಬೇಕೆಂದು ಬಹಾಗ ನಿಮ್ಮ ಅರ್ಥ ಪ್ರಾಣವನ್ನು ವೆಚ್ಚಿಸಿ ಕಾದುಕೊಡಬೇಕು. ಕೊಡಲರಿಯದಿದ್ದರೆ ಎರಡು ಭಾಗವು ಒಂದಾಗಿ ಕೆಡುವ. ಬಾಳಿದರೂ ಒಂದಾಗಿ ಬಾಳುವವಲ್ಲದೆ ನಮ್ಮ ನೀವು ಬಿಟ್ಟು ಕಾದಸಲ್ಲದು. ಪಣಂಬೂರ ಮದ್ದಹೆಗ್ಗಡೆಯರಿಗೂ ನಮಗೂ ಎಡೆಕೊಟ್ಟು ಕಾರ್ಯಕ್ಕೆ ಕೊರ್ಲಿಲ್ಲದ ಕಾರ್ಯಕ್ಕೆ ಕಾಪಿನಲ್ಲಿ ನೀವು ನಮಗೆ ಬರೆದುಕೊಟ್ಟು ಕಟ್ಟನಲ್ಲಿ ನಿಲ್ಲಿಸಿಕೊಡುವಿರಿ. ಎಕ್ಕಾರು ಕುತ್ತೆತ್ತೂರು ಸುರತಕಲ್ಲು ಇವರೊಳಗೆ ನಾವು ಕೊಂಡ ಮೂಲ ಹಿಡಿದ ಅರ್ದುವಾರ ಬಂಗರು ಆಜಿಲರು ಕೊಟ್ಟ ಸೀಮೆ ಸಾಮ್ಯ ಮೊದಲಾಗಿ ನ್ಯಾಯಧರ್ಮದಲ್ಲಿ ಉಂಟಾದ ಬಡ್ತಿ ಸಿದ್ಧಾಯ ಮುಂತಾದವನ್ನು ತೆಗಿಸಿಕೊಡು ವಿರಿ ನಮ್ಮನ್ನು ಪೂರ್ವ ಮರ್ಯಾದೆಯ ಬಾಳಿಸಿ ಕೊಡುವಿರಿ. ಇದಕ್ಕೆ ಪಣಂಬೂರು ಮದ್ದಹೆಗ್ಗಡೆಯರು ನಮಗುಂಟಾದ ಬಡ್ತಿ ಸಿದ್ಧಾಯವನ್ನು ಕೊಂಡು ಬಹದಕ್ಕೆ ಬಿಡೆವು ಎಂದು ಅಡ್ಡಲಾಗಿ ಬಂದಾಗ ತೋಕೂರಲ್ಲಿ ನೀವು ನಿಮ್ಮ ಮಂದಿಯ ಕೂಡಿ ಸಕ್ಷಮುಖದಲ್ಲಿ ರಾಜಕಾರ್ಯವ ನೋಡಿ ಅವರ ಸೀಮೆಯನ್ನು ಕೆಡಿಸಿ ಮನೆಗಳನ್ನು ಸುಟ್ಟು ಅವರ ಹದನನುಳುಹಿ ಕೊಡುವಿರಿ. ಮೇಲೆ ಆ ಮದ್ದಹೆಗ್ಗಡಯರು ಒಡಂಬಡಿಕೆಗೆ ಬಹಲಿ ಪರಿಯಂತರ ಪಣಂಬೂರ ಹದ ನನು ಉಳುಹಿ ಬಾಳೊದಕ್ಕೆ ಬಿಡಲಾಗದು, ಒಳಗೆ ಒಂದು ಹೊರಗೆ ಅನ್ಯ ಅರಸು ಅನುಸರಿಗಳಲ್ಲಿ ಎಡೆಕೊಟ್ಟ ಕಾರ್ಯಕ್ಕೆ ಇಕ್ಕರ್ತರಿಗೂ ತಮ್ಮ ತಮ್ಮ ಮಂದಿಗೆ ಪಡಿಯೆನಿಕ್ಕಿ ಇರಿಸುವ ಕೊಪ್ಪರಿಗೆ ನಿಡುವ ಅಂಬಿನ ಕೋಲು ಇವು ಮುಂತಾಗಿ ತಮ್ಮ ತಮ್ಮ ಕೈಯಿಂದ ವೆಚ್ಚಿಸಿ ಜೋಡಿಸಿ ಬಾಳಿ ಬಾಹೆವು ಎಂದು ಕೊಟ್ಟ ತಾಮ್ರಶಾಶನ ಇದಕ್ಕೆ ತಪ್ಪಿದವರು ವಾರಣಾಸಿಯಲ್ಲಿ ಸಾವಿರ ಮಂದಿ ಯತೀಶ್ವರರ ಕೊಂದ ಪಾಪಕ್ಕೆ ಹೊಹೆವು. ಏಳು ಘಟ್ಟದಲ್ಲಿ ಇಳಿದ ಕಪಿಲೆಯ ಕೊಂದ ಪಾಪಕ್ಕೆ ಹೊಹೆವು. ನಂದಳಿಕೆ ದಯಿವಗಳಿಗೆ ತಪ್ಪಿದವರು ಕೃಷ್ಣಾನಂದ ಒಡೆ ಯರ ಪಾದಕ್ಕೆ ತಪ್ಪಿದವರು. ಈ ಬರಹದ ತಾಮ್ರಶಾಸನದ ಒಕ್ಕಣೆಗೆ ನಾವು ತಪ್ಪಿದರೆ ನಮ್ಮ ಸಂತಾನದ ಮೇಲೆ ನಂದಳಿಕೆ ದಯಿವಗಳು ವಿಚಾರಿಸಿಕೊಂಬರು. ನೀವು ತಪ್ಪಿದರೆ ನಿಮ್ಮ ಸಂತಾನದ ಮೇಲೆ ನಂದಳಿಕೆ ದಯಿವಗಳು ವಿಚಾರಿಸಿ ಕೊಂಬರು.

ಶ್ರೀ ಜನಾರ್ಧನ ಶ್ರೀ

## ಚೌಟರಿಗೂ ಕಾರ್ಕಳ ಪಾಂಡ್ಯಪ್ಪರಸರಿಗೂ ಆದ ಕರಾರು.

ನಮಸ್ತುಂಗಶಿರಃ ಚುಂಬಿ ಚಂದ್ರ ಚಾಮರ ಚಾರವೆ ತ್ರಯಿಂಲೋಕ್ಯ ನಗರಾಂಭ ಮೂಲಸ್ತಂಬಾಯ ಶಭವೆ ಸ್ವಸ್ಥಿ! ಶ್ರೀಜಯಾದ ಸದಯ ಶಾಲಿವಾಹನ ಶಕ ವರುಷ ೧೪೬೫ನೆಯ ಶೋಭಕೃತು ಸಂವತ್ಸರದ ಚೈತ್ರ ಶು। ೪ ಶುಕ್ರವಾರದಲ್ಲು ಶ್ರೀಮತು ಜಂದಲ ದೇವಿಯರ ಕೇಮರ ಪಾಂಡ್ಯಪ್ಪರಸರೂ ತಿರುಮಲರಸ ಚೌಟರಿಗೆ ನಾಡ್ರಬಳಿ ಅಯಿಂಸಾವಿರ ಆಳಾ ಎರ್ಮ್ಮಳ ಮರಮ್ಮ ಹೆಗ್ಗಡೆಯರ ಮುಂದಿಟ್ಟು ಕೊಟ್ಟ ತಾಮ್ರಶಾಸನದ ಕ್ರಮವೆಂತೆಂದರೆ, ನಾವು ನೀವು ಏಕೋಭಾವದಲ್ಲಿ ನಡೆವಾಗ ಒಳಗೆ ಒಂದು ಹೊರಗೆ ಅನ್ಯರು ರಾಯರು ದಣಕರು ಮಣಿದು ಬಹಾಗ ನಿಮ್ಮ ಸಂಗಡ ನಮ್ಮ ಮಂದಿ ಕುದುರೆ ಸಹವಾಗಿ ಒದಗಿ ನಿಲ್ಲುವೆವು. ನಮ್ಮ ಮೇಲೆ ಮುನಿದು ಬಹಾಗ ನೀವು ನಿಮ್ಮ ಮಂದಿ ಮಾರ್ಗಣ ಸಹ ಕೂಡಿ ಒದಗಿ ನಿಲ್ಲುವುದು. ನಮ್ಮ ನಿಮ್ಮ ಗಡಿಯಲ್ಲಿ ಸಾವಿರ ಕಾಲಕ್ಕೆ ಕಾಳಗ ಸಲ್ಲದು. ಅಥವಾ ದುರ್ಮ್ಮನುಷ್ಯರು ಮಕ್ಕಳಿಂದ ಕಸ್ತಿ ಕಲಹ ಬಂದರೂ ಮಾತು ಕಥೆಯಿಂದ ತಿದ್ದಿಕೊಂಬ ನಮ್ಮ ನಿಮ್ಮ ಅನುಸರಿಗರಾಗಿ ಹೊರತು ನಮ್ಮ ತೆಗೆದು ನೀವು ಕಾಣಿಸಿಕೊಳ್ಳ ಸಲ್ಲದು. ಕೊಳಲಿಲ್ಲ ನಮ್ಮಲ್ಲಿ ದೋಷ ದ್ರೋಹಗಳ ಮಾಡಿ ಬಂದವರನ್ನು ನಾವು ಇರಿಸಿಕೊಳ್ಳ ಸಲ್ಲದು ನಿಮ್ಮಲ್ಲಿ ದೋಷದ್ರೋಹಗಳ ಮಾಡಿ ಬಂದವರನ್ನು ನಾವು ಇರಿಸಿಕೊಳ್ಳಸಲ್ಲದು. ಈ ಕಬ್ಬಿಗೆ ತಪ್ಪಿದರೆ ಗುಮುಖನಾಥ ನೇಮಿಶ್ವರಗೂ ನಮುಗೂ ಸುಲಲಿತ ಕೀರ್ತಿ ಭಟಾರಕರಿಗೂ ನಂದಳಿಕೆ ನಾಲ್ಕೂ ಸ್ಥಾನದ ದೈವಗಳಿಗೂ ತಪ್ಪಿದವರೆಂದು ಬರಸಿಕೊಟ್ಟ ತಾಮ್ರಶಾಸನ. ಪಾಂಡ್ಯಪ್ಪರಸನ ವೊಪ್ಪ ಶ್ರಿ.

## ಪುರವಣಿ (ii)

## ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಶಾಸನಗಳ ಅಭಿಪ್ರಾಯ.

ಈ ಜಿಲ್ಲೆಯಲ್ಲಿರುವ ದೇವಸ್ಥಾನಗಳಲ್ಲಿಯೂ, ಬಸದಿಗಳಲ್ಲಿಯೂ, ಮಠಗಳಲ್ಲಿಯೂ, ಹೊಲಗದ್ದೆಗಳಲ್ಲಿಯೂ ಈ ಜಿಲ್ಲೆಯನ್ನು ಆಳಿದ ಅರಸರ ಶಾಸನಗಳು ಅನೇಕ ಇರುತ್ತವೆ. ಇವುಗಳಲ್ಲಿ ಬಹಳ ಪುರಾತನ ಕಾಲದವುಗಳು ಉಡುಪಿಯಿಂದ ಮೂರು ಮೈಲು ದಕ್ಷಿಣಕ್ಕೆ ಇರುವ ಉದ್ಯಾವರ ಅಥವಾ ಉದಯಪುರದ ಚಂಬುಕಲ್ಲು ಭೈರವ ದೇವಸ್ಥಾನದಲ್ಲಿಯೂ ಅದರ ಸುತ್ತುಮುತ್ತಲೂ ಇರುತ್ತವೆ. ಇವುಗಳು ಸುಮಾರು 3½ ಅಡಿ ಎತ್ತರವುಳ್ಳ ಅಷ್ಟಪಟ್ಟೆಯ ಕಂಬಗಳಾಗಿರುತ್ತವೆ. ಇವುಗಳಲ್ಲಿರುವ ಬರಹವು ಬಹಳ ಪ್ರಾಚೀನ ಕನ್ನಡ ಅಕ್ಷರದಲ್ಲಿದೆ. ಇವುಗಳೆಲ್ಲ

ಅಲೂಪ ಅರಸರ ಕಾಲದವುಗಳು. ರಾಷ್ಟ್ರಕೂಟರ ಕಾಲದ ಒಂದು ತಾಮ್ರ ಶಾಸನವು ಕಡಬದಲ್ಲಿ ಸಿಕ್ಕಿರುತ್ತದೆ. ಪಶ್ಚಿಮ ಚಾಲುಕ್ಯರ ಕಾಲದ ಒಂದು ಶಾಸನವು ಕಾಸರಗೋಡು ತಾಲೂಕಿನ ಅಡೂರು ದೇವಸ್ಥಾನದಲ್ಲಿದೆ. ಹೊಯ್ಸಳ ಬಲ್ಲಾಳರ ಕಾಲದ ಒಂದು ಶಾಸನವು ಬಾರಕೂರಲ್ಲಿಯೂ, ಇನ್ನೊಂದು ಮೂಡ ಬಿದ್ರೆ ಗುರು ಬಸದಿಯಲ್ಲಿಯೂ ಇದೆ ಇವು ಎರಡೂ ಶಿಲಾಶಾಸನಗಳು ವಿಜಯನಗರದಲ್ಲಿ ಆಳಿದ ಮೊದಲನೇ ಎರಡನೇ ಮೂರನೇ ವಂಶದ ಅರಸರ ಕಾಲದ ಶಿಲಾಶಾಸನಗಳು ಅನೇಕ ಇವೆ ಈ ಶಾಸನಗಳು ಆ ಸಮಯದಲ್ಲಿದ್ದ ಪ್ರತಿಯೊಂದು ಹಳ್ಳಿಯ ದೇವಸ್ಥಾನದಲ್ಲಿಯೂ ಒಂದಾದರೂ ಇದೆ ಬಾರಕೂರು ಮೂಡುಕೇರಿ ಸೋಮೇಶ್ವರ ದೇವಸ್ಥಾನ, ಚೌಳಿಕೆರೆ ಗಣಪತಿ ದೇವಸ್ಥಾನ, ಕೋಟಿ ಕೇರಿ ಸೋಮನಾಥೇಶ್ವರ ದೇವಸ್ಥಾನ, ಬಸರೂರು ಶಾಂತಾರಾಯಸ್ವಾಮಿ ದೇವಸ್ಥಾನ, ಮಹಾಲಿಂಗೇಶ್ವರ ದೇವಸ್ಥಾನ, ಕೋಟೇಶ್ವರ ದೇವಸ್ಥಾನ, ಇವು ಗಳಲ್ಲಿ ಬಹಳ ಹೆಚ್ಚಾಗಿವೆ. ಇಕ್ಕೇರಿ ಅರಸರ ಕಾಲದ ಶಾಸನಗಳು ಹೆಚ್ಚಾಗಿ ಕೊಲ್ಲೂರು ಮೂಕಾಂಬಿಕೆ ದೇವಸ್ಥಾನ, ಬಸರೂರು ಮಹಾಲಿಂಗೇಶ್ವರ, ಕೋಟೇ ಶ್ವರ, ಉಡುಪಿ ಕೃಷ್ಣ ದೇವಸ್ಥಾನಗಳಲ್ಲಿ ಇವೆ. ಇವೆಲ್ಲವೂ ಹೆಚ್ಚಾಗಿ ತಾಮ್ರ ಶಾಸನಗಳಾಗಿರುತ್ತವೆ. ಸುಬ್ರಮಣ್ಯ ದೇವಸ್ಥಾನದಲ್ಲಿ ವೇಲಾಪುರ (ಬೇಲೂರು) ಅರಸರ ಶಾಸನಗಳು ಇರುತ್ತವೆ. ಇವೆಲ್ಲವೂ ತಾಮ್ರಶಾಸನಗಳು. ಇವುಗಳಲ್ಲದೆ ಈ ಜಿಲ್ಲೆಯಲ್ಲಿಯೆ ಆಳಿದ ಜೈನ ರಾಜರ ಶಾಸನಗಳಲ್ಲಿ ಹೆಚ್ಚಿನವು ಶಿಲಾಶಾಸನ ಗಳು. ಉಳಿದವುಗಳು ತಾಮ್ರಶಾಸನಗಳಾಗಿರುತ್ತವೆ.

ಅಲೂಪ ಅರಸರ ಕಾಲದ ಶಾಸನಗಳ ಮೇಲ್ಗಡೆಯಲ್ಲಿ ಮಧ್ಯದಲ್ಲಿ ಸುರುಳಿ ಹಾಕಿ ಕೂತು ಹೆಡೆಯನ್ನು ಬಿಡಿಸಿ ಕೂತ ಸರ್ಪದ ಚಿತ್ರವೂ ಎಡ ಬಲದಲ್ಲಿ ಒಂ ದೊಂದು ಕನ್ನೆಯ ಚಿತ್ರವೂ ಇದೆ. ಚಾಲುಕ್ಯರ ಶಾಸನದಲ್ಲಿ ಮಧ್ಯದಲ್ಲಿ ಈಶ್ವರನ ಲಿಂಗವೂ ಎಡ ಬಲದಲ್ಲಿ ಸೂರ್ಯ ಚಂದ್ರರ ಚಿತ್ರಗಳೂ ಇವೆ. ವಿಜಯ ನಗರ ಮತ್ತು ಇಕ್ಕೇರಿ ಅರಸರ ಶಾಸನಗಳ ಮೇಲ್ಗಡೆ ಮಧ್ಯದಲ್ಲಿ ಈಶ್ವರನ ಲಿಂಗವೂ ಎಡಬಲದಲ್ಲಿ ಸೂರ್ಯ ಚಂದ್ರರ ಚಿತ್ರಗಳೂ ಕೆಲವುಗಳಲ್ಲಿ ಮಧ್ಯದಲ್ಲಿ ಶಿವ ಲಿಂಗವೂ ಲಿಂಗದ ಎಡಬಲದಲ್ಲಿ ಒಂದೊಂದು ದೀಪವೂ ದೀಪದ ಹತ್ತಿರ ಲಿಂಗದ ಕಡೆಗೆ ಮುಖಮಾಡಿಕೊಂಡಿರುವ ಸೋಮನಂದಿಯ ಚಿತ್ರಗಳೂ ಇರುತ್ತವೆ. ಕೆಲವುಗಳಲ್ಲಿ ಮಧ್ಯದಲ್ಲಿ ಲಿಂಗವೂ ಒಂದೇ ದೀಪ, ಒಂದೇ ನಂದಿಯ ಚಿತ್ರವೂ ಇದೆ. ಜೈನರಾಜರ ಶಾಸನಗಳಲ್ಲಿ ಮಧ್ಯದಲ್ಲಿ ಮೂರು ಅಂತಸ್ಥಿನ ಮಾಡವೂ ಎಡ ಬಲದಲ್ಲಿ ಸೂರ್ಯಚಂದ್ರರ ಚಿತ್ರವೂ ಇದೆ. ಬೇಲೂರು ಅರಸರ ಶಾಸನ ಗಳಲ್ಲಿ ಮಧ್ಯದಲ್ಲಿ ರಾಮಾನುಜಾಚಾರ್ಯರ ಶ್ರೀ ವೈಷ್ಣವನಾಮವೂ ಕಸ್ತೂರಿಯೂ

ಎಡ ಬಲದಲ್ಲಿ ಸೂರ್ಯ ಚಂದ್ರರ ಚಿತ್ರಗಳೂ ಇವೆ ಕೆಲವು ಶಾಸನಗಳಲ್ಲಿ ಒಂದು ಕಡೆಯಲ್ಲಿ ಬರಹವೂ, ಇನ್ನೊಂದು ಕಡೆ ಮೂರು ಸಾಲಿನಲ್ಲಿ ಸ್ತ್ರೀಯರ ಚಿತ್ರಗಳೂ ಇವೆ. ಈ ತರದ ಶಾಸನಗಳಲ್ಲಿ ಒಂದು ಮೂಡುಬಿದ್ರೆ ಪಾಂಚಾಲಕೇರಿಯಲ್ಲಿಯೂ ಇನ್ನೊಂದು ಮಂಗಳೂರು ಕರಂಗಲ್‌ಪಾಡಿ ದೇವಸ್ಥಾನದ ಮುಂದುಗಡೆ ಮಾರ್ಗದ ಬದಿಯಲ್ಲೂ ಇದೆ ಇವುಗಳಲ್ಲದೆ ಉಡುಪಿ ತಾಲೂಕಿನ ಬಾರಕೂರು ಮೂಡಕೇರಿ ದೇವಸ್ಥಾನದ ಹತ್ತಿರವೂ, ಶಿರ್ವ ಗ್ರಾಮದಲ್ಲಿಯೂ ವೇಣೂರಿನಲ್ಲಿಯೂ ವೀರಗಳ (ಬಂಟಕಲ್ಲು)ಗಳೆಂಬ ಕಲ್ಲುಗಳು ಇವೆ. ಬಾರಕೂರು ಪಂಚಲಿಂಗೇಶ್ವರ ದೇವಸ್ಥಾನದ ಹೊರಗಡೆ ಮಾರ್ಗದ ಬದಿಯಲ್ಲಿ ಮೂರು ಸತಿಕಲ್ಲುಗಳೂ (ಮಾಸ್ತಿಕಲ್ಲು) ಮೂಡಕೇರಿ ಸೋಮೇಶ್ವರ ದೇವಸ್ಥಾನದ ಹತ್ತಿರವೂ ಇವೆ ಇವುಗಳಲ್ಲಿ ಕಾಟಕೋನಾಕೃತಿಯಲ್ಲಿ ಕೈಯನ್ನು ಹಿಡಿದು ಅಂಗೈ ತೋರಿಸುವ ಕೈಯೂ ಭುಜದ ಮೇಲೆ ಈಶ್ವರ ಲಿಂಗ, ಎಡಬಲದಲ್ಲಿ ಸೂರ್ಯಚಂದ್ರರ ಚಿತ್ರವು ಅದರ ಕೆಳಗಡೆ ಚಿತೆಯ ಮೇಲೆ ಕುಳಿತಿರುವ ಗಂಡ ಹೆಂಡಿರ ಚಿತ್ರಗಳೂ ಇವೆ ಇನ್ನು ಅರ್ಕುಳ ಸಂಕ, ಮಾರಿಪಳ್ಳ ಮುಂತಾಗಿ ಇನ್ನು ಅನೇಕ ಕಡೆಗಳಲ್ಲಿ ಒಂದು ಸ್ತ್ರಿಯ ಇಡೀ ಚಿತ್ರವನ್ನು ಬಿಡಿಸಿದ ಕಲ್ಲುಗಳೂ ಇವೆ. ಸಹಗಮನವಾದ ಸ್ಥಳಗಳಲ್ಲಿಯಾಗಲೀ ಅಥವಾ ಸಹಗಮನವಾದ ಮೇಲೆ ಅದರ ನೆನಪಿಗಾಗಿ ಅವರು ಭಜಿಸಿಬರುವಂಥಾ ದೇವಸ್ಥಾನದ ಬಾಗಲಲ್ಲಿಯಾಗಲಿ ಈ ಕಲ್ಲುಗಳನ್ನು ಹಾಕಿರುತ್ತಾರೆ.

ಉಡುಪಿ ಕೃಷ್ಣದೇವರ ಮಠಕ್ಕೂ, ಅಷ್ಟ ಮಠಗಳಿಗೂ, ಸುಬ್ರಮಣ್ಯ ದೇವಸ್ಥಾನಕ್ಕೂ ಉಂಬಳಿ ಉತ್ತಾರ ಬಿಟ್ಟ ಗ್ರಾಮಗಳಲ್ಲಿ ಕೆಲವು ಈಗಿನ ಮೈಸೂರು ರಾಜ್ಯದಲ್ಲಿರುವುದರಿಂದ, ಮೈಸೂರು ಕೃಷ್ಣರಾಜ ಒಡೆಯರವರ ಕಾಲದಲ್ಲಿ ಪೂರ್ಣಯ್ಯನವರ ಮಂತ್ರಿತ್ವದ ಕಾಲದಲ್ಲಿ ಉಂಬಳಿ, ಉತ್ತಾರಕ್ಕೆ ಕ್ರಯ ಹಿಡಿದು, ತಸದೀಕಿನ ರೂಪದಲ್ಲಿ ಇವುಗಳಿಗೆ ಕೊಡಲಾರಂಭಿಸಿದರು. ಇಂಗ್ಲಿಷ ಸರಕಾರದವರೂ ಈ ಜಿಲ್ಲೆಯಲ್ಲಿರುವ ಉಂಬಳಿ ಉತ್ತಾರಗಳಿಗೆ ಕ್ರಯ ಹಿಡಿದು ತಸದೀಕೆಂದು ಕೊಡುತ್ತಾರೆ. ಉಂಬಳಿ ಎಂದರೆ, ಆ ಗ್ರಾಮ ಅಥವಾ ಆ ವರ್ಗದ ಹುಟ್ಟುವಳ್ಳಿಯು ದೇವಸ್ಥಾನ ಅಥವಾ ಮಠ, ಬಸದಿಗೆ ಕೊಡಬೇಕು, ಈ ಗ್ರಾಮಕ್ಕಾಗಲೀ ವರ್ಗಸ್ಥಳಕ್ಕಾಗಲೀ ಸರಕಾರಕ್ಕೆ ತೀರ್ವೆ ಕೊಡಲಿಕ್ಕಿಲ್ಲ ಉತ್ತಾರವೆಂದರೆ ಆ ಗ್ರಾಮ ಅಥವಾ ವರ್ಗದ ತೀರ್ವೆಯನ್ನು ಸರಕಾರಕ್ಕೆ ಕೊಡುವುದರ ಬದಲಾಗಿ ದೇವಸ್ಥಾನ, ಬಸದಿ ಅಥವಾ ಮಠಕ್ಕೆ ಕೊಡಬೇಕು. ಹುಟ್ಟುವಳ್ಳಿಯನ್ನು ಕೊಡುವ ಅಗತ್ಯವಿಲ್ಲ 300ರಕ್ಕಿಂತ ಹೆಚ್ಚು ಶಾಸನಗಳ ಅಭಿಪ್ರಾಯವನ್ನು ಸಂದರ್ಭಾನುಸಾರ ಆಯಾ ಅರಸರ ಆಳಿಕೆಯಲ್ಲಿ ಕೊಟ್ಟಿರುವದರಿಂದ ಇಲ್ಲಿ ಅವುಗಳನ್ನು ಪ್ರತ್ಯೇಕ ಛಾಪಿಸಲಿಲ್ಲ.



ಬಾರ್ಕೂರು ಪಂಚಲಿಂಗೇಶ್ವರ ದೇವಸ್ಥಾನದ ಬಾಗಲಲ್ಲಿರುವ ಸತಿಗಲ್ಲು.